# ಕರ್ನಾಟಕದ ದೇವಾಲಯಗಳು



ಸಂಪಾದಕರು : ಸು.ರಂಗಸ್ವಾಮಿ

ನಿರೂಪಣೆ

ಕಾಕೋಳು ರಾಘವೇಂದ್ರ

ಬೆ.ಗೋ.ರಮೇಶ್

ಪ್ರಕಾಶಕರು : ಹಂಸಧ್ವನಿ ಪ್ರಕಾಶನ

ಸಂಪಾದಕ : ಸು. ರಂಗಸ್ವಾಮಿ

# ಕರ್ನಾಟಕದ ದೇವಾಲಯಗಳು

ನಿರೂಪಕ :

ಕಾಕೋಳು ರಾಘವೇಂದ್ರ

ಪಿ. ಗೋ. ರಮೇಶ್






KARNATAKADA DEVALAYAGALU

Editor & Publisher

S. RANGASWAMY

No. 30. 'Sujaya, Binny Layout I Main,.
Vijayanagar II Stage, BANGALORE-560 040

Narration : Kakolu Raghavendra & B. G. Ramesh

No. of Copies : 1000

First Edition : 1994



ಮುಖಚಿತ್ರ :
ಶ್ರೀ ರಮೇಶ್ ಸುರ್ವೆ

ರಕ್ಷಾಪುಟದ ಒಳ ಜಲ ವರ್ಣಚಿತ್ರ
ಶ್ರೀ ಪಿ. ಆರ್. ತಿಪ್ಪೇಸ್ವಾಮಿ

ಬೆಲೆ :

ಮುದ್ರಣ :
ಸ್ನೇಹಾ ಪ್ರಿಂಟರ್ಸ್
ನಂ. 22, ಎರಡನೇ ಮುಖ್ಯರಸ್ತೆ, ಅತ್ತಿಗುಪ್ಪೆ
ವಿಜಯನಗರ 2ನೇ ಹಂತ, ಬೆಂಗಳೂರು-40.

# ನುಡಿ ತೋರಣ

"ಕರ್ನಾಟಕದ ದೇವಾಲಯಗಳು"—ನನ್ನ ಬಹು ದಿವಸದ ಕಲ್ಪನೆಯ ಪ್ರಕಟಣೆಗಳಲ್ಲೊಂದು. ಇದು ಸಾಕಾರಗೊಳ್ಳಲು ನೆರವಾದ ಇಬ್ಬರು ಲೇಖಕ ಮಿತ್ರರಿಗೆ ನನ್ನ ವಂದನೆಗಳು. ನನ್ನ ಅನೇಕ ಸಲಹೆ ಸೂಚನೆಗಳನ್ನು ಬರಹದಲ್ಲಿ ಮೂಡಿಸುವುದರೊಂದಿಗೆ ಕರ್ನಾಟಕದ ದೇವಾಲಯಗಳ ಬಗ್ಗೆ ವಿವರಣಾತ್ಮಕ ಗ್ರಂಥವೊಂದು ಹೊರಬರಲು ಸಹಾಯಕವಾಗಿದ್ದಾರೆ. ಬೆಂಗಳೂರು ನಗರ, ಗ್ರಾಮಾಂತರ ಜಿಲ್ಲೆ ದೇವಾಲಯಗಳ ಬಗೆಗೆ ಶ್ರೀ ಕಾಕೋಳು ರಾಘವೇಂದ್ರ ಮತ್ತು ಉಳಿದ ಎಲ್ಲ ಜಿಲ್ಲೆಗಳ ಬಗೆಗೆ ಶ್ರೀ ಬಿ. ಗೋ. ರಮೇಶ್ ಬರೆದಿದ್ದಾರೆ. ದೇವರು, ದೇವಾಲಯಗಳು ನಮ್ಮ ನಿತ್ಯ ಜೀವನದ ಅವಿಭಾಜ್ಯ ಅಂಗವಾಗಿದೆ. ಇವುಗಳ ಮಹತ್ವವನ್ನು ಗ್ರಂಥದ ಹಲವಾರು ಕಡೆ ನನ್ನ ಮಿತ್ರ ಲೇಖಕರೇ ತಿಳಿಸಿರುವುದರಿಂದ ಇಲ್ಲಿ ಪ್ರತ್ಯೇಕವಾಗಿ ಉಲ್ಲೇಖಿಸುವ ಅಗತ್ಯವಿಲ್ಲ. ಕರ್ನಾಟಕದಲ್ಲಿ 43 ಸಾವಿರ ದೇವಾಲಯಗಳಿವೆ ಎಂದು ತಿಳಿದು ಬಂದಿದ್ದರೂ ಅವುಗಳ ಸಮಗ್ರ ಪಟ್ಟಿ ಅಲಭ್ಯ. ಪ್ರಸ್ತುತ ಗ್ರಂಥದಲ್ಲಿ ನಾಡಿನ ದೇವಾಲಯಗಳ ಬಗ್ಗೆ ಲೇಖಕರ ಸಾಮರ್ಥ್ಯಕ್ಕನುಗುಣವಾಗಿ ಸಾಧ್ಯವಾದಷ್ಟು ಸಂಗ್ರಹ ಕಾರ್ಯ ನಡೆದಿದೆ. ಇವಲ್ಲದೆ ಇನ್ನೂ ಸಾವಿರಾರು ದೇವಾಲಯಗಳು ಇರಬಹುದು. ಪ್ರತಿ ಊರಿನ ಬಡಾವಣೆ—ಬಡಾವಣೆಗಳಲ್ಲಿ ನೂರಾರು ದೇವಾಲಯಗಳು ಇರಬಹುದು. ಹೊಸ ಹೊಸ ದೇವಾಲಯಗಳು ಹುಟ್ಟುತ್ತಲೇ ಇರುತ್ತವೆ ಹೀಗಿರುವಾಗ ಪ್ರಸ್ತುತ ಗ್ರಂಥ ಪರಿಪೂರ್ಣ... ಸಮಗ್ರ ಎನ್ನುವಂತಿಲ್ಲ. ಪ್ರಥಮ ಸಂಪುಟ ಎಂದೆನ್ನಬಹುದು. ಆಸಕ್ತರು ಈ ಗ್ರಂಥದಲ್ಲಿ ಉಲ್ಲೇಖಿತ ವಾಗದ ದೇವಾಲಯಗಳ ಬಗೆಗೆ ಮಾಹಿತಿ ದೊರಕಿಸಿ ಕೊಟ್ಟಲ್ಲಿ ಅವೆಲ್ಲವನ್ನೂ ಕ್ರೋಢೀಕರಿಸಿ ದ್ವಿತೀಯ ಸಂಪುಟ ಹೊರತರಬಹುದು.

ಈ ಗ್ರಂಥ ಪ್ರಕಟವಾಗುತ್ತಿರುವ ಸಂದರ್ಭದಲ್ಲಿ ಸರ್ವಶ್ರೀ ಕಾಕೋಳು ರಾಘವೇಂದ್ರ, ಬಿ. ಗೋ. ರಮೇಶ್, ಎಸ್. ವಿದ್ಯಾಶಂಕರ್, ವಿ ಮಹೇಶ್, ರಮೇಶ್ ಸುರ್ವೆ ಮುಂತಾದವರ ಸಹಕಾರವನ್ನು ಮರೆಯಲಾರದೀತೇ.

—ಸು. ರಂಗಸ್ವಾಮಿ

# ಪರಿವಿಡಿ

# ಕರ್ನಾಟಕದ ದೇವಾಲಯಗಳು

ಚಾರಿತ್ರಿಕವಾಗಿಯೂ, ಐತಿಹಾಸಿಕವಾಗಿಯೂ ಪ್ರಸಿದ್ಧಿ ಪಡೆದಿರುವ ಬೆಂಗಳೂರಿಗೆ ಏಳುನೂರ ಐವತ್ತು ವರ್ಷಗಳಿಗೂ ಹಿಂದಿನ ಇತಿಹಾಸವಿದೆ. ಸಂಸ್ಕೃತ ಗ್ರಂಥಗಳಲ್ಲಿ ಇದನ್ನು ಕಲ್ಯಾಣನಗರಿ ಎಂದು ಕರೆದಿದ್ದಾರೆ.

ಹೊಯ್ಸಳರ ನಾಲ್ಕನೇ ವೀರಬಲ್ಲಾಳನಿಂದ ಬೆಂದಕಾಳೂರು ಎಂದು ನಾಮಾಂಕಿತಗೊಂಡು, ಕಾಲಕ್ರಮೇಣ ಬೆಂಗಳೂರು ಎಂದು ಪರಿವರ್ತನೆಗೊಂಡ ಬೆಂದಕಾಳೂರು ಹಿಂದೆ ಈಗಿನ ಕೊಡಿಗೆನಹಳ್ಳಿ ಪ್ರದೇಶದಲ್ಲಿ ಒಂದು ಚಿಕ್ಕ ಹಳ್ಳಿಯಾಗಿದ್ದಿತು.

ಯಲಹಂಕ ನಾಡ ಪ್ರಭುಗಳ ಪರಂಪರೆಯಲ್ಲಿ ಬಂದ ಕೆಂಪೇಗೌಡ ತನಗೆ ಕಂಡ ಕನಸಿನ ಪ್ರಕಾರ ಹೊಸದೊಂದು ನಗರವನ್ನು ಕಟ್ಟಿ ಅದಕ್ಕೆ ತನ್ನ ತಾಯಿಯ ಹಾಗೂ ತನ್ನ ಪತ್ನಿಯ ಊರಾಗಿದ್ದ ಬೆಂಗಳೂರು ಎಂಬ ನಾಮಾಂಕಿತವನ್ನು ಈ ನಗರಕ್ಕೂ ನೀಡಿದನು.

ಬೆಂಗಳೂರು ಒಂದು ಸುಂದರ ನಗರವಾಗಿ ಪರಿವರ್ತಿಸಲಿ ಹಾಗೂ ನಾಲ್ಕು ದಿಕ್ಕುಗಳಲ್ಲಿ ತನ್ನ ಅಪೇಕ್ಷೆಗೆ ತಕ್ಕಂತೆ ಬೆಳೆಯಲಿ ಎಂಬ ಉದ್ದೇಶದಿಂದ ಬೆಂಗಳೂರಿಗೆ ಸಮೀಪದಲ್ಲೇ ಇದ್ದ ಗುಡ್ಡಗಳ ಮೇಲೆ ಅತಿ ಚಿಕ್ಕದಾದರೂ ಸುಂದರವಾದ ಗೋಪುರಗಳನ್ನು ಕಟ್ಟಿಸಿದನು. ಇವು ಕೆಂಪೇಗೌಡರ ಗೋಪುರಗಳೆಂದೇ ಪ್ರಖ್ಯಾತಿಗೊಂಡಿವೆ.

ಕೆಂಪೇಗೌಡರ ಕಾಲದಲ್ಲಿ ಅನೇಕ ದೇವಾಲಗಳು ನಿರ್ಮಾಣಗೊಂಡವು ಹಾಗೂ ಜೀರ್ಣೋದ್ಧಾರ ಕಂಡವು.

ಇಂದು ಬೆಂಗಳೂರು ಕೆಂಪೇಗೌಡರ ಅಪೇಕ್ಷೆಗೂ ಮೀರಿ ಬೆಳೆದಿದ್ದು, ಕೈಗಾರಿಕೆಗಳ ನಗರ, ಉದ್ಯಾನಗಳ ನಗರ ಹಾಗೂ ಉತ್ತಮ ಹವಾಮಾನ ದಿಂದ ಕೂಡಿರುವ ನಗರವೆಂದು ವಿಶ್ವವಿಖ್ಯಾತವಾಗಿದೆ.

ಬೆಂಗಳೂರಿನ ಬಸವನಗುಡಿ ಪ್ರದೇಶದಲ್ಲಿರುವ ದೊಡ್ಡ ಗಣಪತಿ, ಬಸವಣ್ಣ, ಕಾರಂಜಿ ಆಂಜನೇಯ, ಗವಿ ಗಂಗಾಧರೇಶ್ವರ, ಮಲ್ಲೇಶ್ವರದ ಕಾಡು ಮಲ್ಲೇಶ್ವರ, ಧರ್ಮರಾಯಸ್ವಾಮಿ ದೇವಸ್ಥಾನ, ಕೋಟೆ ವೆಂಕಟ ರಮಣಸ್ವಾಮಿ ದೇವಸ್ಥಾನ, ಅಲಸೂರಿನ ಸೋಮೇಶ್ವರ ದೇವಸ್ಥಾನ ಇತ್ಯಾದಿಗಳು ಪುರಾತನ ದೇವಾಲಯಗಳಾಗಿವೆ.

ನಗರ ಬೆಳೆದಂತೆ ಜನಸಂಖ್ಯೆಯೂ ಬೆಳೆದು ಅದಕ್ಕನುಗುಣವಾಗಿ ದೇವಸ್ಥಾನಗಳೂ ಅಧಿಕಗೊಂಡು ಬೆಂಗಳೂರು ದೇಗುಲಗಳ ನಗರವೇ ಆಗಿವೆ ಎಂದು ಹೇಳಿದರೆ ತಪ್ಪಾಗಲಾರದು. ಒಂದು ಸಾವಿರಕ್ಕೂ ಮೀರಿ ದೇವಸ್ಥಾನಗಳು ಇಲ್ಲಿವೆ.

ಈ ಪುರಾತನ ದೇವಸ್ಥಾನಗಳ ಸೂಕ್ಷ್ಮ ಪರಿಚಯ ಮಾಡಿಕೊಡು ವುದೇ ಈ ಗ್ರಂಥದ ಮೂಲ ಉದ್ದೇಶವಾಗಿದೆ. ಬನ್ನಿ ನಗರ ಪ್ರದಕ್ಷಿಣೆ ಮಾಡಿ ಅವುಗಳ ಪರಿಚಯ ಮಾಡಿಕೊಳ್ಳೋಣ.

## ದೊಡ್ಡ ಗಣಪತಿ ದೇವಸ್ಥಾನ

ಬಸವನ ಗುಡಿಯ ದಕ್ಷಿಣ ಭಾಗದಲ್ಲಿರುವ ಬ್ಯೂಗಲ್ ರಾಕ್ (ಕಹಳೆ ಗೋಪುರ) ಗುಡ್ಡದ ಬುಡದಲ್ಲಿರುವ ದೊಡ್ಡಗಣಪತಿ ದೇವಸ್ಥಾನವು ಪಲ್ಲವರ ಕಾಲದ್ದಾಗಿರುತ್ತದೆ.

ಅತ್ಯಂತ ಕಲಾ ಚತುರರಾದ ಪಲ್ಲವ ಶಿಲ್ಪಿಗಳ ಕೈ ಚಳಕದಿಂದ ಬಂಡೆಯ ಮೇಲೆ ಮೂಡಿ ಬಂದಿರುವ ಈ ಗಣಪತಿಯು ಸುಮಾರು ಎಂಟು ಅಡಿ ಎತ್ತರ ಹಾಗೂ ಹನ್ನೆರಡು ಅಡಿ ಅಗಲವುಳ್ಳದ್ದಾಗಿದೆ.

ಬಯಲಿನಲ್ಲಿದ್ದ ಈ ಗಣಪತಿಗೆ ಕೆಂಪೇಗೌಡರು ಗರ್ಭಗುಡಿ ಹಾಗೂ ಮುಖ ಮಂಟಪವನ್ನು ಕಟ್ಟಿಸಿದರು.

ಪಶ್ಚಿಮಾಭಿಮುಖವಾಗಿರುವ ಈ ಗಣಪತಿಯು ಸ್ವಯಂ ವ್ಯಕ್ತವಾದ ದ್ದೆಂದು ಹಾಗೂ ಬೆಳೆಯುತ್ತಿದೆ ಎಂದು ಕೆಲವರ ಅಭಿಪ್ರಾಯವಾಗಿದೆ.

ಮಾಂಡವ್ಯ ಋಷಿಗಳು ಈ ಪ್ರದೇಶದಲ್ಲಿ ಕೆಲವು ಕಾಲ ತಪಸ್ಸ ನ್ನಾಚರಿಸುತ್ತಿದ್ದರೆಂದೂ, ಆ ಕಾರಣದಿಂದ ಈ ಗುಡ್ಡ ಪ್ರದೇಶಕ್ಕೆ ಮಾಂಡವ್ಯ ಕ್ಷೇತ್ರ ಎಂದೂ ಕರೆಯಲಾಗುತ್ತಿದೆ.

ದೇವಸ್ಥಾನದ ಜೀರ್ಣೋದ್ಧಾರ ಕಾರ್ಯ ಇದೀಗ ಮುಗಿದಿದೆ. ತಾ॥ 7-4–73ರಲ್ಲಿ ಶ್ರೀ ಶ್ರೀ ಶ್ರೀ ಶೃಂಗೇರಿ ಜಗದ್ಗುರು ಶ್ರೀ ಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರ ಅಮೃತಹಸ್ತದಿಂದ ದೊಡ್ಡ ಗಣಪತಿ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯದ ಶಂಕುಸ್ಥಾಪನೆ ನೆರವೇರಿ ಸಲ್ಪಟ್ಟಿದೆ.

ನೂತನವಾಗಿ ಕಟ್ಟಿರುವ ರಾಜಗೋಪುರದ ಕುಂಭಾಭಿಷೇಕ ಮಹೋತ್ಸ ವವು ತಾ॥ 29–1-1988ನೇ ಶುಕ್ರವಾರ ಶ್ರೀ ಶಿವಗಂಗಾ ಮಠಾಧೀಶ್ವರ ರಾದ ಜಗದ್ಗುರು ಶ್ರೀ ಶ್ರೀ ಶ್ರೀ ಅಭಿನವ ಸಚ್ಚಿದಾನಂದ ಭಾರತಿ ಮಹಾ ಸ್ವಾಮಿಗಳವರಿಂದ ನೆರವೇರಲ್ಪಟ್ಟಿದೆ.

ಈ ಗಣಪತಿ ಸತ್ಯವಾದದ್ದೆಂದು ಅನೇಕರು ಇಲ್ಲಿಗೆ ಬಂದು ಹರಕೆ ಹೊತ್ತು ಹೋಗುತ್ತಾರೆ. ತಮ್ಮ ಕೆಲಸ ಆದೊಡನೆ ಮತ್ತೆ ಬಂದು ಪೂಜೆ ಮಾಡಿಸಿ ತಮ್ಮ ಹರಕೆಯಂತೆ, ಕಾಣಿಕೆ ಒಪ್ಪಿಸಿ ಹೋಗುತ್ತಾರೆ. ಪರೀಕ್ಷಾ ಸಮಯದಲ್ಲಿ ವಿದ್ಯಾರ್ಥಿಗಳ ಜಾತ್ರೆಯೇ ನೆರೆದಿರುತ್ತದೆ. ಆದ್ದರಿಂದಲೇ ಈ ಗಣಪನನ್ನು ವಿದ್ಯಾಗಣಪತಿ ಎಂದೂ ಕರೆಯುತ್ತಾರೆ.

## ಕಾರಂಜಿ ಆಂಜನೇಯ

ದೊಡ್ಡ ಗಣಪತಿ ದೇವಸ್ಥಾನದ ಬಲಭಾಗಕ್ಕೆ ಅಂದರೆ ಉತ್ತರ ದಿಕ್ಕಿಗೆ ಕೆಲವೇ ಗಜಗಳ ದೂರದಲ್ಲಿ ಕಾರಂಜಿ ಅಂಜನೇಯಸ್ವಾಮಿ ದೇವ ಸ್ಥಾನವಿದೆ.

ಕೆಂಪೇಗೌಡರ ಕಾಲದಲ್ಲಿ ಈ ಪ್ರದೇಶವು ಕೆರೆ ಅಂಗಳವಾಗಿದ್ದು ಇಲ್ಲಿ ನೀರು ಉಕ್ಕಿ ಹರಿಯುತ್ತಿದ್ದುದರಿಂದಲೂ, ಇದೇ ಜಾಗದಲ್ಲಿ ಈ ಆಂಜನೇಯಸ್ವಾಮಿ ಇದ್ದುದರಿಂದ ಇವಕ್ಕೆ ಕಾರಂಜಿ ಆಂಜನೇಯ ಎಂದು ಕರೆಯುವ ವಾಡಿಕೆ ಬಂದಿದೆ.

ಬಂಡೆಯ ಮೇಲೆ ಮೂಡಿ ಬಂದಿರುವ ಈ ಆಂಜನೇಯನನ್ನು ಪಲ್ಲವ ಶಿಲ್ಪಿಗಳೇ ಕೆತ್ತಿದ್ದಾರೆ. ಸಾಮಾನ್ಯವಾಗಿ ಆಂಜನೇಯ ದಕ್ಷಿಣಾಭಿಮುಖವಾಗಿ ಇಲ್ಲವೆ ಪೂರ್ವಾಭಿಮುಖವಾಗಿರುತ್ತದೆ. ಆದರೆ ಈ ಕಾರಂಜಿ ಆಂಜನೇಯ ಉತ್ತರಾಭಿಮುಖವಾಗಿದ್ದು ಅತ್ಯಂತ ಸುಂದರ, ಸೌಮ್ಯ ಮೂರ್ತಿಯಾಗಿದೆ.

ಇಂದ್ರಜಿತ್ತು ಬ್ರಹ್ಮಾಸ್ತ್ರ ಪ್ರಯೋಗ ಮಾಡಿ ಆಂಜನೇಯನನ್ನು ಬಂಧಿಸಿ, ಅವನ ಕೈಗಳಿಗೆ ಬೇಡಿ ತೊಡಿಸಿ ರಾವಣನ ದರ್ಬಾರಿಗೆ ಕೊಂಡೊಯ್ಯುತ್ತಾನೆ. ನಂತರ ಆಂಜನೇಯ ಲಂಕಾದಹನ ಮಾಡಿ ಸಂತೋಷದಿಂದ ಸೀತಾದೇವಿ ಕೊಟ್ಟ ಚೂಡಾಮಣಿಯನ್ನು ಹೊತ್ತು ರಾಮನಲ್ಲಿಗೆ ಬರುತ್ತಾನೆ. ಈ ಘಟನೆಯನ್ನು ತೋರುವಂತೆ ಈ ಆಂಜನೇಯನನ್ನು ಚಿತ್ರಿಸಲಾಗಿದೆ.

ಆಂಜನೇಯನ ಕೈಗಳಲ್ಲಿ ಬೇಡಿಗಳ ಗುರ್ತಿದೆ ; ಹಾಗೂ ಎರಡೂ ಕೈಗಳನ್ನು ಜೋಡಿಸಿಕೊಂಡು ಅವುಗಳಲ್ಲಿ ಚೂಡಾಮಣಿ ಹಿಡಿದಿರುವಂತೆ ಶಿಲ್ಪಿ ಕೆತ್ತಿದ್ದಾನೆ.

ಸುಮಾರು ಹನ್ನೆರಡು ಅಡಿ ಎತ್ತರ ಹಾಗೂ ಅಷ್ಟೇ ಅಗಲವಾಗಿರುವ ಆಂಜನೇಯನಿಗೆ ಪ್ರಭಾವಳಿಯನ್ನೂ ಕೆತ್ತಲಾಗಿದೆ.

ಬಂಡೆಯ ಮೇಲೆ ಮೂಡಿ ಬಂದಿರುವ ಈ ಆಂಜನೇಯಸ್ವಾಮಿ ಸ್ವಯಂ ವ್ಯಕ್ತವೆಂದು ಕೆಲವರ ಅಭಿಪ್ರಾಯವಾದರೂ, ಸತ್ಯಾಂಶ ಅನ್ವೇಷಣೆ ದೃಷ್ಟಿಯಿಂದ ಇದು ಶಿಲ್ಪಿಯೊಬ್ಬ ಬಂಡೆಯ ಮೇಲೆ ಬಿಡಿಸಿರುವ ಮೂರ್ತಿ ಎಂದು ಹೇಳಲೇಬೇಕಾಗುತ್ತದೆ.

ಕೆಂಪೇಗೌಡರ ಕಾಲದಲ್ಲಿ ಬಯಲಿನಲ್ಲಿದ್ದ ಪ್ರಾಣದೇವರಿಗೆ ಗರ್ಭಗುಡಿ ಹಾಗೂ ಒಂಭತ್ತು ಅಂಕಣದ ಮಂಟಪವನ್ನು ಕಟ್ಟಲ್ಪಟ್ಟಿವೆ.

ದೇವಸ್ಥಾನವು ಹಿಂದೆ ಅತಿ ವಿಶಾಲವಾದ ಪ್ರದೇಶವನ್ನು ಒಳಗೊಂಡಿತ್ತು. ಈಗಿನ ಬಿ.ಎಂ.ಎಸ್. ಕಾಲೇಜಿನ ಪ್ರದೇಶವೂ ಈ ದೇವಸ್ಥಾನಕ್ಕೆ ಸೇರಿದ್ದಾಗಿರುತ್ತದೆ. ಕೆಂಪೇಗೌಡರು ಈ ದೇವಸ್ಥಾನಕ್ಕಾಗಿ ಅನೇಕ ದತ್ತಿಗಳನ್ನು ನೀಡಿರುತ್ತಾರೆ.

## ರಾಮದೇವರ ಆಲಯ

ಆಂಜನೇಯ ದೇವಸ್ಥಾನದ ಪ್ರಾಕಾರ ವಿಶಾಲವಾಗಿದ್ದು, ಎಡಭಾಗದ ಪ್ರಾಕಾರದ ಸ್ಥಳದಲ್ಲಿ ರಾಮದೇವರ ಆಲಯವಿದೆ.

ಪ್ರಾಣದೇವರು ಉತ್ತರಾಭಿಮುಖವಾಗಿದ್ದು, ಅವರು ಸದಾ ರಾಮನ ದರ್ಶನ ಪಡೆಯುವ ಉದ್ದೇಶದಿಂದ ಈ ರಾಮದೇವರು ದಕ್ಷಿಣಾಭಿಮುಖವಾಗಿದೆ.

ಈ ರಾಮದೇವರ ದೇವಸ್ಥಾನವನ್ನು ಸಾವಿರದ ಒಂಭೈನೂರ ಹನ್ನೆರಡನೇ ಇಸವಿಯಲ್ಲಿ ಆಗಿನ ಬ್ರಿಟೀಷ್ ಸರ್ಕಾರದಲ್ಲಿ ಪೋಲೀಸ್ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದ ಶ್ರೀಯುತ ಮುತ್ತೋಜಿರಾವ್ ಎಂಬುವರು ಭಗವತ್ ಪ್ರೇರಣೆಯಂತೆ ದೇವಾಲಯವನ್ನು ಕಟ್ಟಿ ರಾಮ ಲಕ್ಷ್ಮಣ ಹಾಗೂ ಸೀತಾ ಅಮ್ಮನವರ ವಿಗ್ರಹಗಳನ್ನು ಪ್ರತಿಷ್ಠಾಪಿಸಿರುತ್ತಾರೆ.

ಸುಮಾರು ನಾಲ್ಕು ಅಡಿ ಎತ್ತರವಿರುವ ರಾಮದೇವರ ಅಕ್ಕ-ಪಕ್ಕಗಳಲ್ಲಿ ಮೂರು ಅಡಿ ಎತ್ತರದ ಸೀತಾದೇವಿ ಹಾಗೂ ಲಕ್ಷ್ಮಣರಿದ್ದಾರೆ. ಸಾಮಾನ್ಯವಾಗಿ ರಾಮದೇವರ ಕೆಳಭಾಗದಲ್ಲಿ ಅಂದರೆ ಕಾಲಿನ ಸಮೀಪ ಹನುಮಂತನಿರುತ್ತಾನೆ. ಆದರೆ ಇಲ್ಲಿ ಪ್ರತ್ಯೇಕವಾದ ಮೂರ್ತಿ ಇರುವುದಿಲ್ಲ. ರಾಮನ ವಿಗ್ರಹದ ಕೆಳಭಾಗದಲ್ಲಿ ಚಿಕ್ಕದಾದ ಆಂಜನೇಯನನ್ನೂ ಬಿಡಿಸಲಾಗಿದೆ.

ರಾಮ ಲಕ್ಷ್ಮಣ, ಸೀತಾ ಹಾಗೂ ಆಂಜನೇಯರ ಉತ್ಸವ ಮೂರ್ತಿಗಳು ಇಲ್ಲಿದ್ದು, ವಿಶೇಷ ಉತ್ಸವಾದಿಗಳು ಹಾಗೂ ಕಲ್ಯಾಣೋತ್ಸವ ಇತ್ಯಾದಿ ದಿನಗಳಂದು ಈ ವಿಗ್ರಹಗಳಿಗೆ ಪೂಜೆ ಅಲಂಕಾರಗಳು ನಡೆಯುತ್ತವೆ.

ಮಾಂಡವ್ಯ ಕ್ಷೇತ್ರವೆಂದು ಹೆಸರಾಗಿರುವ ಈ ಪ್ರದೇಶದಲ್ಲಿ ಜನಮೇಜರಾಯ ಸರ್ಪಯಾಗ ಮಾಡಿ ಆದರ ದೋಷ ಪರಿಹಾರಾರ್ಥವಾಗಿ ಇಲ್ಲಿ ತಪಸ್ಸನ್ನಾಚರಿಸಿದನು. ಒಟ್ಟಿನಲ್ಲಿ ಈ ಕಾರಂಜಿ ಆಂಜನೇಯ ಬೆಂಗಳೂರಿನ ಪುರಾತನ ದೇವಸ್ಥಾನಗಳಲ್ಲಿ ಒಂದಾಗಿದೆ.

## ಬಸವಣ್ಣನ ದೇವಸ್ಥಾನ

ಹಿಂದಿನ ಬಸವನ ಹಳ್ಳಿ ಹಾಗೂ ಸುಂಕೇನ ಹಳ್ಳಿ ಪ್ರದೇಶವೇ ಈಗಿನ ಬಸವನಗುಡಿ ಪ್ರದೇಶವಾಗಿದೆ.

ಕಹಳೆ ಗೋಪುರದ ಸಮೀಪದಲ್ಲಿ ಹಾಗೂ ದೊಡ್ಡ ಗಣಪತಿ ದೇವಸ್ಥಾನದ ದಕ್ಷಿಣ ದಿಕ್ಕಿಗೆ ದೊಡ್ಡ ಬಸವಣ್ಣನಿದ್ದಾನೆ. ಇದರಿಂದಾಗಿ ಹಿಂದೆ ಈ ಪ್ರದೇಶಕ್ಕೆ ಬಸವನಹಳ್ಳಿ ಎಂದು ಕರೆಯುತ್ತಿದ್ದರು. ಈ ದೊಡ್ಡ ಬಸವಣ್ಣನ ಬಗ್ಗೆ ಒಂದು ದಂತಕಥೆ ಇದ್ದು ಅದು ಈ ರೀತಿಯದಾಗಿದೆ :-

ಆರುನೂರು ವರ್ಷಗಳ ಹಿಂದೆ ಈ ಬಸವನಗುಡಿ ಪ್ರದೇಶವು ದಟ್ಟವಾದ ಅರಣ್ಯವಾಗಿದ್ದಿತು. ಈ ಅರಣ್ಯದಲ್ಲಿ ಹದಿನೆಂಟು ಅಡಿ ಎತ್ತರದ, ಬೃಹದಾಕಾರದ ಬಸವನ ವಿಗ್ರಹವಿದ್ದಿತು. ಈ ಬಸವ ರಾತ್ರಿ ವೇಳೆ ನಿಜ ರೂಪ ತಾಳಿ, ಈ ಪ್ರದೇಶದ ಹಳ್ಳಿಯ ರೈತರು ಬೆಳೆದಿದ್ದ ಕಡ್ಲೆಕಾಯನ್ನು ತಿಂದು ಬೆಳಗಾಗುವ ವೇಳೆಗೆ ಶಿಲೆಯಾಗಿ ಕೂಡುತ್ತಿದ್ದನು. ತಾವು ಬೆಳೆದ ಕಡ್ಲೆಕಾಯನ್ನು ರಾತ್ರಿ ವೇಳೆ ಬಂದು ತಿಂದು ಹೋಗುತ್ತಿದ್ದ ಈ ಬಸವ ರೈತರಿಗೆ ಸಮಸ್ಯೆಯಾದ. ಹಿರಿಯರ ಆದೇಶದ ಮೇರೆಗೆ ಬಸವನ ಹಳ್ಳಿಯ ಜನ, ಶಿಲೆಯಾಗಿದ್ದ ಬಸವಣ್ಣನ ಬಳಿ ಬಂದು "ಅಯ್ಯಾ ಬಸವ, ರಾತ್ರಿ ವೇಳೆ ನಮ್ಮ ಹೊಲಗಳಿಗೆ ನುಗ್ಗಿ ಕಡ್ಲೆಕಾಯಿ ತಿಂದು ಬೆಳೆ ನಾಶ ಮಾಡಿದರೆ ನಮ್ಮ ಜೀವನ ಹೇಗೆ ಸಾಗಬೇಕು ? ನಮ್ಮನ್ನು ಕಾಪಾಡು-ನಿನಗೆ ಪ್ರತಿ ವರ್ಷವೂ ಕಾರ್ತೀಕ ಮಾಸದಲ್ಲಿ ಕಡ್ಲೆಕಾಯಿ ನೈವೇದ್ಯ ಮಾಡುತ್ತೇವೆ ಎಂದು ಹರಕೆ ಹೊತ್ತರು. ಅಂದಿನಿಂದ ಬಸವ ಹೊಲಗಳಿಗೆ ನುಗ್ಗಿ ಕಡ್ಲೆಕಾಯಿ ಗಿಡಗಳನ್ನು ನಾಶ ಮಾಡುವುದನ್ನು ನಿಲ್ಲಿಸಿದನೆಂದು ಹೇಳುತ್ತಾರೆ.

ಕೇವಲ ಕಡ್ಲೆಕಾಯಿ ತಂದು ನೈವೇದ್ಯ ಮಾಡುವುದರಿಂದ ಪ್ರಾರಂಭ ವಾದ ಈ ಸಂಪ್ರದಾಯ ಇಂದು ದೊಡ್ಡ ಜಾತ್ರೆಯಾಗಿ ಪರಿಣಮಿಸಿ "ಕಡ್ಲೆ ಕಾಯಿ ಪರಿಷೆ" ಎಂದು ಹೆಸರು ಪಡೆದಿದೆ.

ಪ್ರತಿವರ್ಷವೂ ಕಾರ್ತೀಕ ಮಾಸದ ಕಡೆಯ ಸೋಮವಾರದಂದು ಕಡ್ಲೆಕಾಯಿ ಪರಿಷೆ ನಡೆಯುತ್ತದೆ. ಅಂದು ಬಸವನಿಗೆ ಅಭಿಷೇಕ ಹಾಗೂ ವಿಶೇಷ ಪೂಜಾದಿಗಳು ನಡೆಯುತ್ತವೆ. ಬೆಂಗಳೂರಿನ ಸುತ್ತಮುತ್ತಲಿಂದ ಹಾಗೂ ಅನೇಕ ಕಡೆಗಳಿಂದ ಭಕ್ತಾದಿಗಳು ಸಾವಿರಾರು ಸಂಖ್ಯೆಯಲ್ಲಿ ಸೇರು ತ್ತಾರೆ. ನೂರಾರು ಕಡ್ಲೆಕಾಯಿ ಅಂಗಡಿಗಳು ಅಂದು ಈ ಗುಡ್ಡದ ಮೇಲೆ ಕೆಳಗೆ ಕಂಡು ಬಂದು, ಒಂದೊಂದು ಅಂಗಡಿಯ ಮುಂದೂ ರಾಶಿರಾಶಿ ಯಾಗಿ ಬಿದ್ದಿರುವ ಕಡ್ಲೆಕಾಯಿ ನೋಡುವವರ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತದೆ.

1870ರಲ್ಲಿ ಬೆಂಗಳೂರಿನ ಸ್ಥಾಪಕ ಕೆಂಪೇಗೌಡನು ಈ ಬಸವನಿಗೆ ದೊಡ್ಡದಾದ ದೇವಸ್ಥಾನವನ್ನು ಕಟ್ಟಿಸಿ, ದೇವಸ್ಥಾನದ ಪೂಜಾದಿಗಳು ನಿತ್ಯ ನಡೆಯುವಂತೆ ಅನೇಕ ದತ್ತಿಗಳನ್ನೂ ಬಿಟ್ಟನು.

ದೇವಸ್ಥಾನದ ಮಹಾದ್ವಾರವು ಉತ್ತರಾಭಿಮುಖವಾಗಿದ್ದು, ಗರ್ಭಗುಡಿ ಹಾಗೂ ಮಂಟಪದಿಂದ ಒಳಗೊಂಡಿದೆ. ದೇವಸ್ಥಾನದ ಹಿಂಭಾಗದಲ್ಲಿ ಕಲ್ಯಾಣಿ ಇದೆ.

ಬಸವನ ಪಾದದ ಬಳಿ ಇರುವ ಶಿಲಾಶಾಸನದ ಪ್ರಕಾರ, ಈ ಬಸವನ ಬಲಪಾದದಲ್ಲಿ ವೃಷಭಾವತಿ ನದಿಯು ಹುಟ್ಟಿ, ಗುಪ್ತಗಾಮಿನಿಯಾಗಿ, ಪಶ್ಚಿಮ ದಿಕ್ಕಿನತ್ತ ಹರಿದು ಗವಿಗಂಗಾಧರೇಶ್ವರಸ್ವಾಮಿ ದೇವಸ್ಥಾನದ ಗುಹೆ ಒಳಗೆ ಪ್ರವೇಶಿಸಿ ಅಲ್ಲಿಂದ ಮುಂದೆ ಹರಿದು ಹೋಗುತ್ತದೆ. ಕಾರ್ತೀಕ ಮಾಸದ ಕಡೇ ಸೋಮವಾರದಂದು ವೃಷಭನ ಬಲಪಾದದಲ್ಲಿ ಯಥೇಚ್ಛವಾಗಿ ಗಂಗೆ ಉತ್ಪತ್ತಿಯಾಗುವುದನ್ನು ಈಗಲೂ ಕಾಣಬಹುದಾಗಿದೆ.

ಬೆಂಗಳೂರಿಗೆ ಭೇಟಿ ಕೊಡುವ ವಿದೇಶಿ ಹಾಗೂ ಭಾರತದ ಇತರ ಭಾಗ ಗಳಿಂದ ಬರುವ ಯಾತ್ರಾರ್ಥಿಗಳು ಈ ದೇವಸ್ಥಾನಕ್ಕೆ ತಪ್ಪದೇ ಭೇಟಿ

ನೀಡುವರು. ಭಾರತ ಸರ್ಕಾರದವರೂ ಸಹಾ ಈ ದೇವಸ್ಥಾನವನ್ನು ಪ್ರೇಕ್ಷಣೀಯ ಸ್ಥಳವೆಂದು ಪರಿಗಣಿಸಿದ್ದಾರೆ.

## ಶ್ರೀ ಶಿವಭಕ್ತ ಕಣ್ಣಪ್ಪ ದೇವಸ್ಥಾನ

ದೊಡ್ಡ ಗಣಪತಿ ದೇವಸ್ಥಾನದ ಹಿಂಭಾಗದಲ್ಲಿರುವ ಈ ದೇವಸ್ಥಾನವು ನಾಯಕ (ಬೇಡರು) ಜನಾಂಗದವರ ಆಲಯವಾಗಿದೆ.

ಕೆಂಪೇಗೌಡರ ಕಾಲದಲ್ಲಿ ಶತ್ರುಗಳು ಬರುವುದನ್ನು ಗಮನಿಸಿ, ಕಹಳೆ ಊದಿ ಜನರನ್ನು ಎಚ್ಚರಿಸುವುದಕ್ಕಾಗಿ ಒಂದು ಪಡೆಯನ್ನು ನೇಮಿಸಿದ್ದರು. ಇವರು ಕಹಳೆ ಗೋಪುರದಲ್ಲಿ ನಿಂತು ರಾಜ್ಯದ ನಾಲ್ಕು ದಿಕ್ಕಿನತ್ತ ಕಣ್ ಹಾಯಿಸಿ ಎಚ್ಚರಿಕೆಯಿಂದ ನಗರವನ್ನು ಕಾಯುತ್ತಿದ್ದರು. ಈ ಪಡೆಯ ನಾಯಕರಾದ ಗುಜ್ಜಲ ಓಬನಾಯಕ ಎಂಬುವನು ತಮ್ಮ ಜನಾಂಗದ ಕುಲ ದೇವರಾದ "ಬೇಡರ ಕಣ್ಣಪ್ಪ"ನ ದೇವಾಲಯವೊಂದನ್ನು ಸ್ಥಾಪಿಸಲು ತೀರ್ಮಾನಿಸಿ, ಕೆಂಪೇಗೌಡರ ಅನುಮತಿ ಪಡೆದು, ಬಂಡೆಯೊಂದರ ಮೇಲೆ ಶಿವಲಿಂಗ ಹಾಗೂ ಬೇಡರ ಕಣ್ಣಪ್ಪ ತನ್ನ ಕಣ್ಣನ್ನು ಕಿತ್ತು ಶಿವನಿಗೆ ಅರ್ಪಿಸುತ್ತಿರುವಂತೆಯೂ ಹಾಗೂ ಆಸೆಯೊಂದು ಈ ಶಿವಲಿಂಗಕ್ಕೆ ಹಾರ ಅರ್ಪಿಸುತ್ತಿರುವಂತೆಯೂ ಇರುವ ಕೆತ್ತನೆ ಮಾಡಿಸಿ ದೇವಾಲಯವನ್ನು ನಿರ್ಮಿಸಿದನು.

ಇಂದಿಗೂ ಬೇಡರ ಜನಾಂಗಕ್ಕೆ ಈ ದೇವಸ್ಥಾನವೇ ಪ್ರಧಾನವಾಗಿದೆ.

ಮಹಾಶಿವರಾತ್ರಿಯಂದು ಕರ್ನಾಟಕದ ನಾನಾ ಮೂಲೆಗಳಿಂದ ಈ ಬೇಡರ ಜನಾಂಗದವರು ಈ ಕಣ್ಣಪ್ಪ ದೇವಸ್ಥಾನಕ್ಕೆ ತಮ್ಮ ಕುಟುಂಬ ಸಮೇತ ಆಗಮಿಸಿ ಸ್ವಾಮಿಯ ದರ್ಶನ ಪಡೆದು, ಶಿವಭಕ್ತ ಕಣ್ಣಪ್ಪನ ಜಯಂತಿಯನ್ನು ಅತಿ ವಿಜೃಂಭಣೆಯಿಂದ ಆಚರಿಸುತ್ತಾರೆ.

ಹಿಂದೆ, ಹರಕೆ ಹೊತ್ತವರು ಬಾಯಿಗೆ ಬೀಗ, ಕಳಸ, ಕನ್ನಡಿ, ಆರತಿ, ಮಂಗಳವಾದ್ಯ, ಕೋಲು ಕುಣಿತ, ತಮಟೆ ಇತ್ಯಾದಿ ಮೆರವಣಿಗೆ ಸಮೇತ ಕಣ್ಣಪ್ಪನ ದೇವಸ್ಥಾನಕ್ಕೆ ಆಗಮಿಸಿ ಸ್ವಾಮಿಗೆ ವಿಶೇಷ ಅಭಿಷೇಕ ಪೂಜೆ, ಪರಾವು, ಅರವಟ್ಟಿಗೆ, ಜಾಗರಣೆ ಹಾಗೂ ಇನ್ನೂ ಅನೇಕ ಕಾರ್ಯಕ್ರಮ

ಗಳನ್ನು ನಡೆಸುತ್ತಿದ್ದರು. ತಮ್ಮ ಕೌಟುಂಬಿಕ ವ್ಯವಹಾರ ಇತ್ಯಾದಿಗಳು ಇಲ್ಲೇ ತೀರ್ಮಾನ ಮಾಡುತ್ತಿದ್ದರು.

ಬೇಡ ಜನಾಂಗದ ಏಕೈಕ ದೇಗುಲವಾದ ಈ ಕಣ್ಣಪ್ಪ ದೇವಸ್ಥಾನವನ್ನು ಅಭಿವೃದ್ಧಿ ಪಡಿಸಲು 1981 ರಲ್ಲಿ ಜೀರ್ಣೋದ್ಧಾರ ಸಮಿತಿಯೊಂದನ್ನು ರಚಿಸಲಾಯಿತು. ಈ ಸಮಿತಿಯವರ ದೈವಭಕ್ತಿ ಶ್ರದ್ಧೆಗಳಿಂದಾಗಿ ದೇವಸ್ಥಾನದ ಮುಂಭಾಗದಲ್ಲಿ ನವಗ್ರಹ ವೃಕ್ಷಗಳನ್ನು ನೆಡಲಾಯಿತು. ಹಾಗೂ ಒಂದು ಕಟ್ಟೆಯನ್ನು ಕಟ್ಟಿ ಕಲ್ಲುಚಪ್ಪಡಿಗಳನ್ನು ಹಾಸಲಾಯಿತು.

ದೇವಸ್ಥಾನದ ಎಡಭಾಗದಲ್ಲಿ ಬೇಡ ಜನಾಂಗದ ಮೂಲ ಪುರುಷ ವಾಲ್ಮೀಕಿ ಮುನಿಯ ಚಿತ್ರನೆಯೊಂದನ್ನು ಬಂಡೆಯ ಮೇಲೆ ಚಿತ್ರಿಸಿ ತಾತ್ಕಾಲಿಕ ಮಂಟಪವನ್ನು ನಿರ್ಮಿಸಿದ್ದಾರೆ. ಇದೇ ಸ್ಥಳದಲ್ಲಿ ಪ್ರಾರ್ಥನಾ ಮಂದಿರವನ್ನು ಕಟ್ಟುವ ಉದ್ದೇಶ ಈ ಸಮಿತಿಗಿದೆ.

ಬೇಡ ಜನಾಂಗದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಈ ದೇವಸ್ಥಾನದ ಆಡಳಿತ ಮಂಡಳಿಯವರ ಕಾರ್ಯ ಮೆಚ್ಚುವಂತದ್ದಾಗಿದೆ.

## ನಗರದ ಪ್ರಾಚೀನ ಗುಹಾಂತರ ದೇವಾಲಯ "ಗವಿಗಂಗಾಧರ ಸ್ವಾಮಿ ದೇವಾಲಯ"

ಬೆಂಗಳೂರು ನಗರದ ನೈರುತ್ಯ ಭಾಗದಲ್ಲಿರುವ ಗವೀಪುರವು (ಈಗಿನ ಕೆಂಪೇಗೌಡ ನಗರ) ಗವಿಗಂಗಾಧರೇಶ್ವರ ಸ್ವಾಮಿಯ ಸನ್ನಿಧಾನದಿಂದಾಗಿ ಹೆಸರುವಾಸಿಯಾಗಿದೆ.

ಒಂದೇ ಬಂಡೆಯಲ್ಲಿ ಕೊರೆದಿರುವ ಈ ದೇವಸ್ಥಾನವು ಪುರಾತನವಷ್ಟೇ ಅಲ್ಲದೆ ಭರತ ಖಂಡದ ಸಪ್ತ ಮಹರ್ಷಿಗಳಲ್ಲಿ ಒಬ್ಬರಾದ ಗೌತಮ ಋಷಿಗಳು ಇಲ್ಲಿಯ ಗುಹೆಯಲ್ಲಿ ತಪಸ್ಸನ್ನಾಚರಿಸುತ್ತಿದ್ದರೆಂಬ ಹೆಗ್ಗಳಿಕೆಯನ್ನೂ ಪಡೆದಿದೆ.

ಈ ದೇವಾಲಯವನ್ನು ವೀಕ್ಷಿಸಿದಾಗ ಇದು ಪಲ್ಲವರ ಕಾಲಕ್ಕೂ ಹಿಂದಿನದೆಂದು ಊಹಿಸಬಹುದಾದರೂ ದೇವಾಲಯದ ನಿರ್ಮಾಣ ಕಲೆಯು ಪಲ್ಲವರ ಕಾಲದಲ್ಲಿ ಪರಿಪೂರ್ಣತೆ ಹಾಗೂ ರೂಪವನ್ನು ತಳೆಯಿತು.

ಧಾರ್ಮಿಕ ಭಾವನೆಯನ್ನು ಹೊಂದಿದ್ದ ಪಲ್ಲವರು, ಶಿಲೆಗಳಲ್ಲಿ ತಮ್ಮ ಕಲಾ ಕೌಶಲ್ಯಗಳನ್ನು ತೋರಿಸಿ ಅನೇಕ ದೇವಾಲಯಗಳನ್ನು ನಿರ್ಮಿಸುತ್ತಿರುತ್ತಾರೆ. ಅವುಗಳಲ್ಲಿ ಈ ಗವಿಗಂಗಾಧರೇಶ್ವರ ಸ್ವಾಮಿ ದೇವಸ್ಥಾನವೂ ಒಂದು. ಆ ಕಾಲದ ದೇವಾಲಯಗಳನ್ನು ನೋಡಿದಾಗ ಅವನ್ನು ನಿರ್ಮಿಸಲು ತೋರಿಸಿರುವ ಅಪರಿಮಿತ ಬುದ್ಧಿವಂತಿಕೆ ಮತ್ತು ಭವ್ಯತೆ ಬಗ್ಗೆ ತಲೆದೂಗಲೇ ಬೇಕಾಗುತ್ತದೆ.

ದೇವಾಲಯಗಳನ್ನು ನಿರ್ಮಿಸುವ ಕಲೆಯು ಆ ಮಟ್ಟಕ್ಕೇರಲು ಆಗಿನ ರಾಜರುಗಳು ಕಲಾಭಿವೃದ್ಧಿಗಾಗಿ ತೋರಿಸುತ್ತಿದ್ದ ಪ್ರೋತ್ಸಾಹ ಹಾಗೂ ಶ್ರದ್ಧಾಸಕ್ತಿಗಳೇ ಕಾರಣಗಳಾಗಿವೆ.

ಪಲ್ಲವರ ಕಾಲದ್ದಾದ ಈ ದೇವಾಲಯವು ಪ್ರಸಿದ್ಧಿ ಪಡೆದದ್ದು ಕೆಂಪೇಗೌಡರ ಕಾಲದಲ್ಲಿ. ಕೆಂಪೇಗೌಡರು ೧೬೪೨ ರಲ್ಲಿ ಈ ಜೀರ್ಣೋದ್ಧಾರ ಮಾಡಿರುತ್ತಾರೆ. ದೇವಸ್ಥಾನದ ಗೋಪುರ ಹಾಗೂ ಹೊರಭಾಗದ ಸುತ್ತಲೂ ಕಲ್ಲಿನ ಗೋಡೆಗಳನ್ನು ಕೆಂಪೇಗೌಡರು ಕಟ್ಟಿಸಿರುತ್ತಾರೆ.

ದೇವಸ್ಥಾನದ ಪ್ರವೇಶ ದ್ವಾರವನ್ನು ದಾಟಿ ಒಳ ನಡೆದರೆ ಆಶ್ಚರ್ಯಕರವಾದ ಶಿಲ್ಪಕಲಾ ಕೌಶಲ್ಯದಿಂದ ಕೂಡಿದ ಶಿವಲಾಂಛನಗಳಾದ ತ್ರಿಶೂಲ, ಡಮರು, ಚಂದ್ರಪಾನೆ, ಸೂರ್ಯಪಾನೆಗಳು ಕಾಣಬರುತ್ತವೆ. ಇವೆಲ್ಲವನ್ನೂ ಒಂದೇ ಶಿಲೆಯಲ್ಲಿ ಬಿಡಿಸಲಾಗಿದೆ.

ಈ ಶಿಲ್ಪಕಲಾ ಚಾತುರ್ಯವನ್ನು ವೀಕ್ಷಿಸಿ ಮುಂದೆ ಹೋದರೆ ಮಹಾ ಮಂಟಪವನ್ನು ತಲುಪುತ್ತೇವೆ. ಮಹಾ ಮಂಟಪದ ಬಲಭಾಗಕ್ಕೆ ಇರುವ ಪುಟ್ಟ ಗುಡಿಯಲ್ಲಿ ಶ್ರೀವಲ್ಲಿ ದೇವಯಾನಿ ಸಮೇತನಾದ ಷಣ್ಮುಖಸ್ವಾಮಿ ಹಾಗೂ ಜಲಕಂಠೇಶ್ವರನನ್ನು ಎಡಭಾಗಕ್ಕೆ ನವಗ್ರಹ ಹಾಗೂ ಇತ್ತೀಚೆಗೆ ಪ್ರತಿಷ್ಠಾಪಿಸಿರುವ ಆಂಜನೇಯ ಸ್ವಾಮಿಯನ್ನು ಕಾಣಬಹುದು. ಮುಂದೆ ನಡೆದರೆ ಗುಹೆಯನ್ನು ಪ್ರವೇಶಿಸುತ್ತೇವೆ. ಗಂಗಾಧರೇಶ್ವರ ಹಾಗೂ ಪಾರ್ವತಿ ದೇವಿಯರಿಗೆ ಪ್ರತ್ಯೇಕವಾದ ಗುಡಿಗಳಿವೆ. ಸಾಮಾನ್ಯವಾಗಿ ಈಶ್ವರನ ಎಡಭಾಗಕ್ಕೆ ಪಾರ್ವತಿ ದೇವಿಯನ್ನು ಕಾಣುತ್ತೇವೆ. ಆದರೆ ಈ ಗುಹೆಯಲ್ಲಿ ಪಾರ್ವತಿ ದೇವಿಯ ಗುಡಿಯು ಬಲಭಾಗಕ್ಕೆ ಇವೆ.

ಗರ್ಭಗುಡಿಯ ಎರಡೂ ಪಕ್ಕಗಳಲ್ಲಿ ಗಣೇಶನ ವಿಗ್ರಹಗಳಿವೆ. ಗರ್ಭ ಗುಡಿಯಲ್ಲಿ ಸುಮಾರು ಎತ್ತರದ ಲಿಂಗವಿದ್ದು ಮುಂಭಾಗದಲ್ಲಿ ನಂದಿಯ ವಿಗ್ರಹವಿದೆ. ನಂದಿ ಹಾಗೂ ಲಿಂಗವೂ ಏಕ ಶಿಲೆಯಲ್ಲಿ ಕೆತ್ತಲ್ಪಟ್ಟಿದೆ.

ಗರ್ಭಗುಡಿಗೆ ಮೂರು ಪ್ರಾಕಾರಗಳಿದ್ದು ಒಳಗೆ ಪ್ರವೇಶಿಸಲು ದೀಪ ವೊಂದನ್ನು ಕೊಂಡೊಯ್ಯ ಬೇಕಾಗುತ್ತದೆ.

ಪ್ರಥಮ ಪ್ರಾಕಾರದಲ್ಲಿ ಗೌತಮ ಋಷಿ ಭಾರಧ್ವಾಜ, ಚಂಡಿಕೇಶ್ವರ, ಷಣ್ಮುಖ, ದಕ್ಷಿಣಾ ಮೂರ್ತಿ, ಕಾಲಭೈರವ ಹಾಗೂ ಶಕ್ತಿ ಗಣಪತಿ ವಿಗ್ರಹಗ ಳಿವೆ.

ಎರಡನೇ ಪ್ರಕಾರವು ಪಾರ್ವತಿ ದೇವಸ್ಥಾನದ ಪಕ್ಕದಲ್ಲಿದೆ. ಇಲ್ಲಿ ಗೌತಮ ಮಹರ್ಷಿಗಳು ತಪಸ್ಸು ಮಾಡಿದ ಮಂಟಪದೋಪಾದಿಯ ಗುಹೆ ಯೊಂದಿದೆ.

ಮೂರನೇ ಪ್ರಾಕಾರದಲ್ಲಿ ಕಾಶಿ ಹಾಗೂ ಶಿವಗಂಗಾ ಕ್ಷೇತ್ರಕ್ಕೆ ಹೋಗುವ ದಾರಿ ಎಂದು ಹೇಳಲಾಗುವ ಎರಡು ಮಾರ್ಗಗಳಿವೆ. ಇವುಗಳಲ್ಲಿ ಸ್ವಲ್ಪ ದೂರ ಮಾತ್ರ ಹೋಗಬಹುದಾಗಿದ್ದು ಮುಂದೆ ಹೋದಂತೆ ಕಡಿದಾಗುತ್ತದೆ.

ಎರಡು ಮುಖ, ನಾಲ್ಕು ಕಣ್ಣು, ಮೂರು ಪಾದ, ಏಳು ಕೈಗಳಿರುವ ಅಗ್ನಿ ಮೂರ್ತಿ ವೀರಭದ್ರ ಹಾಗೂ ಸಪ್ತ ಕನ್ಯಕೆಯರಾದ ಬ್ರಾಹ್ಮಿ, ವೈಷ್ಣವಿ, ಮಹೇಶ್ವರಿ, ಕೌಮಾರಿ, ವರಾಹಿ, ಚಾಮುಂಡಿ, ಭವಾನಿ ದೇವಿಯರುಗಳ ವಿಗ್ರಹಗಳನ್ನು ಇದೇ ಪ್ರಕಾರದಲ್ಲೇ ಪ್ರತಿಷ್ಠಾಪಿಸಲಾಗಿದೆ. ಒಂದು ಒರಳು ಕಲ್ಲಿದ್ದು ಇದರಲ್ಲಿ ಯಾವಾಗಲೂ ನೀರು ಇರುತ್ತದೆ. ಇದು ವೃಶಭಾವತಿಯ ನೀರಾಗಿದ್ದು ಈ ದೇವಸ್ಥಾನದ ಮೂಲಕವೇ ಹರಿದು ಹೋಗುತ್ತದೆ.

ಉತ್ತರಾಯಣ ಪುಣ್ಯ ಕಾಲದಂದು ಸೂರ್ಯನ ಬೆಳಕು ಕಿಟಕಿಯ ಮೂಲಕ ಹಾದು ಬಸವನ ಮೂಲಕ ಪ್ರವೇಶಿಸಿ ಲಿಂಗದ ಮೇಲೆ ಬೀಳುತ್ತದೆ. ಇದು ಇಲ್ಲಿನ ಆಶ್ಚರ್ಯಕರವಾದ ಸಂಗತಿಯಾಗಿದೆ.

೧೮೦೦ ರಲ್ಲಿ ನಗರಕ್ಕೆ ಬಂದ ಆಂಗ್ಲ ಚಿತ್ರಕಾರನೊಬ್ಬ ಈ ದೇವಾಲ ಯದ ಚಿತ್ರ ಬರೆದು ಅದಕ್ಕೆ ಮೂವಿಷ್ ಮಾಸ್ಕ್ ಆಫ್ ಬೆಂಗಳೂರು ಎಂದು

ಹೆಸರು ಕೊಟ್ಟಿದ್ದಾನೆ. ಈ ಚಿತ್ರವನ್ನು ಬೆಂಗಳೂರು ಮ್ಯೂಸಿಯಂನಲ್ಲಿ ನೋಡಬಹುದಾಗಿದೆ.

## ಶ್ರೀ ಧರ್ಮರಾಯ ಸ್ವಾಮಿ ದೇವಾಲಯ

ನಗರಸಭೆ ಕಛೇರಿಗೆ ಅತಿ ಸಮೀಪದಲ್ಲಿರುವ ಪುರಾಣ ಪ್ರಸಿದ್ಧವಾದ ಹಾಗೂ ಧಾರ್ಮಿಕ ಹಿನ್ನೆಲೆಯುಳ್ಳ ಶ್ರೀ ಧರ್ಮರಾಯಸ್ವಾಮಿ ದೇವಸ್ಥಾನವು ಪ್ರತಿವರ್ಷವೂ ಅತಿ ವಿಜೃಂಭಣೆಯಿಂದ ನಡೆಯುವ ಬೆಂಗಳೂರು ಕರಗ ಮಹೋತ್ಸವದ ಸ್ಥಾನವಾಗಿದೆ.

ದೇವಸ್ಥಾನದ ರಾಜಗೋಪುರವು ದ್ರಾವಿಡ ಶೈಲಿಯಲ್ಲಿ ನಿರ್ಮಿಸಲಾಗಿದೆ. ಹೆಬ್ಬಾಗಿಲಿನ ಮೇಲ್ ಭಾಗದಲ್ಲಿ ಧರ್ಮರಾಯಾದಿ ಪಂಚ ಪಾಂಡವರ ಹಾಗೂ ದ್ರೌಪದಿ ದೇವಿಯವರ ದರ್ಬಾರಿನ ಚಿತ್ರವಿದೆ. ಬಲಭಾಗಕ್ಕೆ ಮಹಾಗಣಪತಿ ದೇವಸ್ಥಾನವೂ, ಎಡಭಾಗಕ್ಕೆ ಶ್ರೀ ಮುತ್ಯಾಲಮ್ಮ ಎಂಬ ಗ್ರಾಮ ದೇವತೆಯ ದೇವಸ್ಥಾನವೂ ಇದೆ.

ಮಹಾದ್ವಾರದ ಒಳಹೊಕ್ಕಂತೆಯೇ ಬಲಭಾಗಕ್ಕೆ ಎರಡು ಅಡಿ ಎತ್ತರ ವಿರುವ ಪೋತ ರಾಜಸ್ವಾಮಿ ವಿಗ್ರಹವೂ, ಎಡಭಾಗಕ್ಕೆ ಒಂದೂವರೆ ಅಡಿ ಎತ್ತರದ ಆಂಜನೇಯಸ್ವಾಮಿ ವಿಗ್ರಹವೂ ಇದೆ.

ಮಂಟಪದಿಂದ ಮುಂದಕ್ಕೆ ಹೋದರೆ ಶಿಲ್ಪಕಲೆಯಿಂದ ಕೂಡಿದ ನವರಂಗವಿದ್ದು, ಪ್ರವೇಶದ್ವಾರದ ಎರಡೂ ಕಡೆಗಳಲ್ಲಿ ಸುಮಾರು ಮೂರು ಅಡಿ ಎತ್ತರದ ಎರಡು ಆನೆಗಳಿವೆ.

ಹದಿನಾರು ಕಂಬಗಳ ಆಧಾರದಿಂದ ನವರಂಗ ಮಂಟಪವು ನಿರ್ಮಿತವಾಗಿದ್ದು, ಮೇಲ್ ಭಾಗವನ್ನು ಷಟ್ಕೋಣಾಕೃತಿಯ ಕಮಲಗಳಿಂದ ಕಡೆದಿರುವ ಕಲ್ಲಿನಿಂದ ಮುಚ್ಚಲಾಗಿದೆ. ನವರಂಗದ ಕಂಬಗಳಲ್ಲಿ ಅನೇಕ ಸಿದ್ಧಿ ಪುರುಷರ ವಿಗ್ರಹಗಳು ಹಾಗೂ ಗಣೇಶ, ಗರುಡ, ಹನುಮಂತ ಇತ್ಯಾದಿ ವಿಗ್ರಹಗಳನ್ನು ಕಡೆಯಲಾಗಿದೆ. ಪ್ರತಿಕಂಬದ ಮೇಲ್‌ಭಾಗದಲ್ಲೂ ಚಾವಣಿಗೆ ಆಧಾರವಾಗಿರುವ ಕಲ್ಲಿನಲ್ಲಿ ನಾಲ್ಕು ಕಡೆಗೂ ಚಾಚಿರುವ ಕಮಲದ ಮೊಗ್ಗು

ಗಳನ್ನು ಕಡೆಯಲಾಗಿದೆ. ಆದಿಶಕ್ತಿ ಪೀಠ:-ಗರ್ಭಗುಡಿಯ ಪ್ರವೇಶ ದ್ವಾರವನ್ನು ಹಿತ್ತಾಳೆಯ ಕವಚದಿಂದ ಮುಚ್ಚಲ್ಪಟ್ಟಿದ್ದು, ಎರಡೂ ಕಡೆಗಳಲ್ಲಿ ಜಯ-ವಿಜಯರ ವಿಗ್ರಹ. ಮೇಲ್‌ಭಾಗದಲ್ಲಿ ರಂಗನಾಥಸ್ವಾಮಿ ಮತ್ತು ಮಹಾಲಕ್ಷ್ಮಿ ಹಾಗೂ ಅಕ್ಕಪಕ್ಕಗಳಲ್ಲಿ ಗರುಡ ಮತ್ತು ಹನುಮಂತನ ಚಿತ್ರವಿದೆ. ದ್ವಾರದ ಸುತ್ತಲೂ ದಶಾವತಾರವನ್ನು ಕೆತ್ತಲಾಗಿರುವ ಗರ್ಭಗುಡಿಯ ಒಳಭಾಗದಲ್ಲಿ ಬಲಭಾಗಕ್ಕೆ ಎರಡು ಅಡಿ ಎತ್ತರವಿರುವ ವಿಗ್ರಹವೂ, ಎಡಭಾಗಕ್ಕೆ ಒಂದೂವರೆ ಅಡಿ ಎತ್ತರವಿರುವ ಚತುರ್ಭುಜ ಶ್ರೀ ಕೃಷ್ಣನ ವಿಗ್ರಹವೂ ಇದ್ದು ಇವಕ್ಕೆ "ಆದಿಶಕ್ತಿ ಪೀಠ" ಎಂದು ಹೇಳುತ್ತಾರೆ. ಈ ಪೀಠವೇ ಇಲ್ಲಿನ ವೈಶಿಷ್ಟ್ಯಕ್ಕೆ ಹಾಗೂ ಸ್ಥಳ ಮಹಾತ್ಮೆಗೆ ಕೇಂದ್ರೀಕೃತವಾದ ವಸ್ತುವಾಗಿದೆ.

ಗರ್ಭಗುಡಿಯ ಸುತ್ತಲೂ ಭೀಮಾರ್ಜುನಾದಿ ಪಾಂಡವರ ಹಾಗೂ ದ್ರೌಪದಿ ದೇವಿಯವರ ತಾಮ್ರದ ಉತ್ಸವ ಮೂರ್ತಿಗಳಿವೆ. ದೇವಸ್ಥಾನದ ಹಿಂಭಾಗದಲ್ಲಿ ಒಂದು ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.

ಶ್ರೀ ಧರ್ಮರಾಯಸ್ವಾಮಿ ಎಂದು ಕರೆಯಲ್ಪಡುವ ಈ ದೇವಸ್ಥಾನದಲ್ಲಿ ಮುಖ್ಯವಾಗಿ ಪೂಜಿಸಲ್ಪಡುವುದು "ಆದಿಶಕ್ತಿ" ಯಾಗಿದ್ದು ಇದರ ಸ್ಥಳ ಮಹಾತ್ಮೆ ಈ ರೀತಿ ಇದೆ:

ದ್ರೌಪದಿ ದೇವಿಯವರ ಅವತಾರವು ಸಾಕ್ಷಾತ್ ಆದಿಶಕ್ತಿಯ ಅವತಾರವಾಗಿದೆ. ತ್ರೇತಾಯುಗದಲ್ಲಿ ಆದಿಶಕ್ತಿಯು ಸತಿ ನಳಾಯನಿಯಾಗಿ ಅವತಾರ ಮಾಡಿದ್ದಾಗ ಈಕೆಯ ಪಾತಿವ್ರತ್ಯವನ್ನು ಲೋಕ ಕಲ್ಯಾಣಕ್ಕಾಗಿ ಪ್ರಚುರಪಡಿಸಲೆಂದು ಪರಮಾತ್ಮನು ಋಷಿಯ ರೂಪದಲ್ಲಿ ಈಕೆಯನ್ನು ಮದುವೆಯಾಗುತ್ತಾನೆ. "ಶರಭಮಹರ್ಷಿ" ನಾಮಾಂಕಿತನಾದ ಈ ತಪಸ್ವಿಯು ಕಾಲಾನುಕ್ರಮದಲ್ಲಿ ವೇಶ್ಯೆಯ ಸಹವಾಸ ಮಾಡುವ ಅಭಿಲಾಷೆಯುಳ್ಳವನಾಗಿ ಅತಿ ಲೋಲುಪ್ತನಾಗಿ ಹಾಗೂ ಕಾಮುಕನಾಗಿ ಮಾರ್ಪಟ್ಟು ಅವರ ಕಾರಣದಿಂದ ಘೋರವಾದ ಕುಷ್ಠರೋಗ ಪೀಡಿತನಾಗುತ್ತಾನೆ. ಹೀಗಿದ್ದರೂ ಸಹಾ ಮಹಾ ಪತಿವ್ರತೆಯಾದ ಸತಿ ನಳಾಯನಿಯು ತನ್ನ ಪತಿಗೆ ಯಾವ ವಿಷಯದಲ್ಲೂ ಕೊರತೆ ಬಾರದಂತೆ ಆತನ ಶುಶ್ರೂಷೆಯನ್ನು ಮಾಡುತ್ತಾ ಪತಿಭಕ್ತಿ ಪಾರಾಯಣೆಯಾಗಿರುತ್ತಾಳೆ. ಹೀಗಿರುವಲ್ಲಿ ಒಮ್ಮೆ ಅದೇ ಊರಿನ ಅತಿ

ಚೆಲುವೆಯಾದ ವೇಶ್ಯೆಯೊಡನೆ ವಿಹರಿಸಬೇಕೆಂದು ಶರಭ ಮಹರ್ಷಿಯು ತನ್ನ ಪತ್ನಿಗೆ ತಿಳಿಸುತ್ತಾನೆ. ಪತಿಯ ಇಚ್ಛೆಯನ್ನು ನೆರವೇರಿಸಲು ಈಕೆಯು ಆ ವೇಶ್ಯೆಯನ್ನು ಈ ಕಾರ್ಯಕ್ಕೆ ಒಪ್ಪಿಸಲು ನಿತ್ಯವೂ ಬ್ರಾಹ್ಮೀ ಮುಹೂರ್ತದಲ್ಲಿ ಆಕೆಗೆ ತಿಳಿಯದಂತೆಯೇ ಆಕೆಯ ಮನೆಯ ಮುಂದೆ ಸಾರಿಸಿ ಗುಡಿಸಿ ರಂಗೋಲಿ ಹಾಕಿ ಸೇವಾ ಕಾರ್ಯವನ್ನು ನಡೆಸುತ್ತಿರುತ್ತಾಳೆ ನಳಾಯಿನಿ.

ಈ ವೃತ್ತಾಂತವು ಹೇಗೋ ಆ ವೇಶ್ಯೆಯ ಕಿವಿಗೆ ಬಿದ್ದು ಈಕೆಯ ಈ ಸೇವೆಗೆ ಕಾರಣವೇನೆಂದು ನಳಾಯಿನಿಯನ್ನು ಕೇಳುತ್ತಾಳೆ. ತನ್ನ ಪತಿಯ ಇಚ್ಛೆಯನ್ನು ಆ ವೇಶ್ಯೆಯಲ್ಲಿ ತಿಳಿಸುತ್ತಾಳೆ. ಪತ್ನಿಯಾದವಳೇ ತನ್ನ ಪತಿಯ ಸುಖಕ್ಕಾಗಿ ಇಂತಹ ತ್ಯಾಗವನ್ನು ಮಾಡಲು ಸಿದ್ಧಳಿರುವ ಸತಿ ನಳಾಯಿನಿಯ ಸುಗುಣಕ್ಕೆ ಮಾರು ಹೋಗಿ ಒಪ್ಪಿಗೆ ಕೊಡುತ್ತಾಳೆ ಆ ವೇಶ್ಯೆ.

ನಡೆಯಲೂ ಸಾಧ್ಯವಾಗದಂತಹ ಭೀಕರ ರೋಗದಿಂದ ನರಳುತ್ತಿರುವ ತನ್ನ ಪತಿಯನ್ನು ಹೆಡಗೆಯಲ್ಲಿ ಕೂಡಿಸಿ ಪ್ರತಿದಿನ ರಾತ್ರಿ ಅದನ್ನು ಹೊತ್ತುಕೊಂಡು ಆ ವೇಶ್ಯೆಯ ಮನೆಗೆ ತನ್ನ ಪತಿಯನ್ನು ತಲುಪಿಸಿ ಸೂರ್ಯೋದಯಕ್ಕೆ ಮುಂಚಿತವಾಗಿಯೇ ಪುನಃ ತನ್ನ ಪತಿಯನ್ನು ಆಶ್ರಮಕ್ಕೆ ಕರೆತರುತ್ತಿದ್ದು, ಸೇವೆಯನ್ನು ಮಾಡಿಕೊಂಡಿದ್ದಳು.

ಅತ್ತ ಆ ವೇಶ್ಯೆ ಕೇವಲ ಪ್ರಾಚೀನ ಕರ್ಮದಿಂದ ಮಾತ್ರ ವೇಶ್ಯಾ ವೃತ್ತಿಯನ್ನು ಮಾಡುತ್ತಿದ್ದು ತನ್ನ ಸರ್ವಸ್ವವನ್ನೂ ದೇವರಿಗೆ ಅರ್ಪಿಸಿ ದೇವರೇ ತನ್ನ ಪತಿಯಾಗಬೇಕೆಂದು ಬೇಡುತ್ತಿದ್ದುದರಿಂದ ಈಕೆಯ ನಿಷ್ಕಳಂಕ ಕಲ್ಮಶ ರಹಿತ ಹೃದಯಕ್ಕೆ ತೃಪ್ತನಾದ ದೆ ವರು ಈಕೆಯನ್ನು ಉದ್ಧಾರ ಮಾಡಲು ಸತಿ ನಳಾಯಿನಿಯ ಪತಿಯ ರೂಪದಲ್ಲಿ ಪ್ರತಿನಿತ್ಯವೂ ಇಲ್ಲಿಗೆ ಬಂದು ಅವಳ ಅಭಿಲಾಷೆಯನ್ನು ನೆರವೇರಿಸುತ್ತಾನೆ.

ಹೀಗೆಯೇ ಕೆಲವು ದಿನ ನಡೆಯುತ್ತಿರಲು ಒಮ್ಮೆ ನಳಾಯಿನಿಯು ಕತ್ತಲಲ್ಲಿ ಯಥಾ ಪ್ರಕಾರವಾಗಿ ಪತಿಯನ್ನು ಬುಟ್ಟಿಯಲ್ಲಿಟ್ಟುಕೊಂಡು ತಲೆಯ ಮೇಲೆ ಹೊತ್ತು ತರುತ್ತಿರುವಾಗ, ತಲೆ ಕೆಳಗಾಗಿ ಮರದ ಕೊಂಬೆಯೊಂದಕ್ಕೆ ಜೋತಾಡುತ್ತಾ ತಪಸ್ಸು ಮಾಡುತ್ತಿದ್ದ ಮಾಂಡವ್ಯ ಮಹರ್ಷಿಗಳಿಗೆ ಈತನ

ಕ್ಕೆಗಳು ತಾಕಿ, ಮಹರ್ಷಿಯ ತಪಸ್ಸು ಭಂಗವಾಗುತ್ತದೆ. ಕೋಪೋದ್ರಿಕ್ತರಾದ ಮಾಂಡವ್ಯ ಮಹರ್ಷಿ, ತನ್ನ ತಪಸ್ಸಿಗೆ ಭಂಗ ತಂದವನ ತಲೆ ಸುರ್ಯೋದಯವಾದೊಡನೆ ಸಹಸ್ರ ಹೋಳಾಗಲೆಂದು ಶಾಪ ಕೊಡುತ್ತಾನೆ. ಭಯಭೀತಳಾದ ನಳಾಯಿನಿ ಸೂರ್ಯೋದಯವಾದರೆ ತಾನೆ ತನ್ನ ಪತಿಯ ಶಿರಸ್ಸು ಸಾವಿರ ಹೋಳಾಗುವುದು, ಆಗುವುದೇ ಬೇಡವೆಂದು ತನ್ನ ಪಾತಿವ್ರತ್ಯದ ಪ್ರಭಾವದಿಂದ ಸೂರ್ಯನ ಉದಯ ಆಗದಂತೆ ತಡೆಯುತ್ತಾಳೆ. ಇದರಿಂದ ಇಡೀ ಲೋಕ ತಲ್ಲಣಿಸುತ್ತಿರಲು ದೇವತೆಗಳೂ ನಳಾಯಿನಿಯನ್ನು ಪ್ರಾರ್ಥಿಸುತ್ತಾರೆ. ಇವರ ಪ್ರಾರ್ಥನೆಗೆ ಮನ್ನಣೆ ನೀಡಿದ ನಳಾಯಿನಿ ತನ್ನ ಪತಿಯ ಆದೇಶದಂತೆ ತನ್ನ ಶಾಪವನ್ನು ವಾಪಸ್ ಪಡೆದು ಸೂರ್ಯೋದಯವಾಗುವಂತೆ ಆಜ್ಞಾಪಿಸಿ ತನ್ನ ಪತಿಯನ್ನು ಉಳಿಸಿಕೊಳ್ಳಲು ನದಿ ತೀರಕ್ಕೆ ತೆರಳಿ ಮೂರು ಮರಳಿನ ಗಡ್ಡೆಗಳನ್ನು ಮಾಡಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಆವಾಹಿಸಿ ತನ್ನ ಪತಿಯ ಕ್ಷೇಮ ಚಿಂತನೆಗಾಗಿ ತಪಸ್ಸು ಮಾಡಲು ತ್ರಿಮೂರ್ತಿಗಳು ಪ್ರತ್ಯಕ್ಷರಾಗಿ ಇವಳ ಮುಂದೆ ನಿಲ್ಲುತ್ತಾರೆ. ಆಗ ಆಕೆ "ಪತೀನ್ ದೇಹಿ" ಎಂದು ಐದು ಬಾರಿ ಉಚ್ಚರಿಸಿ ಪತಿ ಭಿಕ್ಷೆ ಬೇಡುತ್ತಾಳೆ. ತ್ರಿಮೂರ್ತಿಗಳು ಇವಳ ಈ ಕೋರಿಕೆಯನ್ನು ಮನ್ನಿಸಿ, ತಾಯಿ ನೀನು ಐದು ಬಾರಿ ಪತಿಭಿಕ್ಷೆ ಬೇಡಿದ್ದೀಯ ಆದ್ದರಿಂದ ನಿನಗೆ ಐದು ಜನ ಗಂಡಂದಿರೂ ಈ ಯುಗದಲ್ಲಿ ಸಾಧ್ಯವಿಲ್ಲ. ಮುಂದೆ ದ್ವಾಪರದಲ್ಲಿ ನಿನ್ನ ಕೋರಿಕೆ ನೆರವೇರುತ್ತದೆ ಎಂದು ಹೇಳಿ ಅಂತರ್ಧಾನರಾಗುತ್ತಾರೆ. ಈ ಕಾರಣದಿಂದಲೇ ಆದಿಶಕ್ತಿಯಾದ ಹಾಗೂ ನಳಾಯಿನಿಯಾದ ದ್ರೌಪತಿ ಪಂಚ ಪಾಂಡವರನ್ನು ತನ್ನ ಪತಿಯರಾಗಿ ಪಡೆಯುತ್ತಾಳೆ.

ಕರಗ ಮಹೋತ್ಸವ : ಈ ದೇವಸ್ಥಾನದ ಆದಿಶಕ್ತಿ ಪೀಠದಲ್ಲಿ ಪ್ರತಿ ವರ್ಷ ಚೈತ್ರ ಶುದ್ಧದಲ್ಲಿ ಐದು ದಿನಗಳ ಪರ್ಯಂತ ಆದಿಶಕ್ತಿಯ ಸನ್ನಿಧಾನ ಇಲ್ಲಿದ್ದು ದೇವಸ್ಥಾನಕ್ಕೆ ಸಮೀಪದಲ್ಲೇ ಇರುವ ಸಂಪಂಗಿ ಕೆರೆ (ಈಗಿನ ಸ್ಟೇಡಿಯಂ)ಯ ಒಂದು ಸ್ಥಳದಿಂದ ಮೂರು ಕಳಸಗಳನ್ನು ವಿಧಿಪೂರ್ವಕ (ಹಸಿಕರಗ) ವಾಗಿ ತಂದು ಚೈತ್ರ ಶುದ್ಧ ಪೂರ್ಣಿಮೆಯಂದು ಈ ಕರಗ ಮೆರವಣಿಗೆ ನಗರದ ಮುಖ್ಯ ಬೀದಿಗಳಲ್ಲಿ ಸಂಚರಿಸಿ ಭಕ್ತಾದಿಗಳಿಗೆ ದರ್ಶನ ಕೊಡುತ್ತದೆ.

ಈ ಐದು ದಿನಗಳ ಪರ್ಯಂತವೂ ಅಂದರೆ ಧ್ವಜಾರೋಹಣದಿಂದ ಮೊದಲುಗೊಂಡು ವಸಂತೋತ್ಸವದವರೆಗೆ ಅನೇಕ ಯಜ್ಞ, ಲಕ್ಷಾರ್ಚನೆ ಇತ್ಯಾದಿಗಳು ನಡೆದು ಧ್ವಜದ ನೂರ್ ಒಂದು ಗೆಣ್ಣೆನಲ್ಲಿ; ಪ್ರತಿಯೊಂದು ಗೆಣ್ಣೆನಲ್ಲಿಯೂ ಅನೇಕನೇಕ ದೇವತೆಗಳನ್ನೂ ಆವಾಹನೆ ಮಾಡಿ ಸಮೀಪದಲ್ಲೇ ನಡೆಯುವ ಯಜ್ಞ ಕುಂಡದಲ್ಲಿ ಹವಿಸ್ಸನ್ನು ಅರ್ಪಿಸುತ್ತಾರೆ, ಅನಂತರ ತ್ರಿಮೂರ್ತಿಗಳಿಂದ ಆವಾಹಿತವಾದ ಕರಗಕ್ಕೆ ಪುಷ್ಪಾಲಂಕಾರ ಮಾಡಿ, ನೇಮಿಷ್ಟರಾದ ದೇವಸ್ಥಾನದ ಜನಾಂಗದವರಲ್ಲಿ (ತಿಗಳರು) ಒಬ್ಬರಿಗೆ ಆದಿಶಕ್ತಿಯು ಆವಾಹನೆ ಮಾಡಿ ಈ ಕರಗವನ್ನು ದ್ರೌಪದಿ ವೇಶದಲ್ಲಿರುವ ಅಂದರೆ ಹೆಣ್ಣಿನ ವೇಶದಲ್ಲಿರುವ ವ್ಯಕ್ತಿ ತಮ್ಮ ತಲೆ ಮೇಲೆ ಹೊತ್ತು ನಗರದ ವಿವಿಧ ಭಾಗಗಳಲ್ಲಿ ಸಂಚರಿಸಿ ಭಕ್ತಾಧಿಗಳಿಗೆ ದರ್ಶನ ಕೊಡುತ್ತದೆ. ಕರಗದ ಸುತ್ತಲೂ ಅಲಗು ಸೇವೆ ನಡೆಸುವ ಒಂದು ಪಡೆ ಇದ್ದು ಅವರು ಗೋವಿಂದಾ.....ಗೋವಿಂದ ಎನ್ನುವ ಭಕ್ತಿಭಾವದ ಕೂಗು, ಮೇಲಿರುವ ಗೋವಿಂದನನ್ನು ತುಲಪುತ್ತಿರುವಂತೆ ಭಾಸವಾಗುತ್ತದೆ.

ರಾತ್ರಿ ಹನ್ನೆರಡಕ್ಕೆ ಹೊರಟ ಕರಗ ಸೂರ್ಯೋದಯಕ್ಕೆ ಮುಂಚೆ ದೇವಸ್ಥಾನವನ್ನು ತಲುಪುತ್ತದೆ. ಇದೇ ಸಂದರ್ಭದಲ್ಲಿ ಧರ್ಮರಾಯಸ್ವಾಮಿ ರಥೋತ್ಸವವು ನಡೆಯುತ್ತದೆ. ಅತಿ ವಿಜೃಂಭಣೆಯಿಂದ ನಡೆಯುವ ಈ ಜಾತ್ರೆಯಲ್ಲಿ ಬೆಂಗಳೂರು ನಗರದ ಅನೇಕ ದೇವಸ್ಥಾನಗಳ ಉತ್ಸವವು ಅತ್ಯಂತ ಆಕರ್ಷಕವಾದ ಅಲಂಕಾರಗಳಿಂದಲೂ ಹಾಗೂ ಕರುಣಾನಂದಕರವಾದ ವಾದ್ಯಗಳಿಂದಲೂ ಕೂಡಿ ಒಂದರ ಹಿಂದೆ ಒಂದರಂತೆ ಬರುವ ದೃಶ್ಯ ನೋಡಲು ಎರಡು ಕಣ್ಣುಗಳು ಸಾಲದಾಗುತ್ತದೆ.

**ಹಿಂದೂ ಮುಸ್ಲಿಂ ಭಾವೈಕ್ಯತೆ:-** ಇಂದಿನ ದೇಶದ ಪರಿಸ್ಥಿತಿಯಲ್ಲಿ ಭಾವೈಕ್ಯತೆಯ ಅವಶ್ಯಕತೆಯು ಅತಿ ಗುರುತರವಾಗಿದ್ದು ; ಈ ಕರಗ ಶಕ್ತಿಗೆ ಇಂದಿಗೂ ಸಹ ನಗರದ ಪ್ರಮುಖ ಮಸೀದಿಗಳಲ್ಲಿ ಒಂದಾಗಿದ್ದು ಮಹಮದೀಯ ಸಂತರೊಬ್ಬರಾದ "ಮಸ್ತಾನ್ ಸಾಹೇಬ್"ರ ದರ್ಗಾದಲ್ಲಿ ಈ ಕರಗ ಶಕ್ತಿಗೆ ಪೂಜೆ ನಡೆಯಲ್ಪಡುತ್ತಿದ್ದು, ಹಿಂದೂ - ಮುಸ್ಲಿಮರ ಸ್ನೇಹ ಕೊಂಡಿಯಾಗಿದೆ.

ಕೆಂಪೇಗೌಡರ ಕಾಲದ್ದೆಂದು ಊಹಿಸಬಹುದಾದ ಈ ಧರ್ಮರಾಯ ಸ್ವಾಮಿ ದೇವಸ್ಥಾನವು ಬೆಂಗಳೂರಿನ ಪುರಾತನ ದೇವಸ್ಥಾನಗಳಲ್ಲಿ ಒಂದಾಗಿದ್ದು ಪುರಾಣ ಪ್ರಸಿದ್ಧವೂ ಹಾಗೂ ವೀಕ್ಷಣಾರ್ಹವಾದುದೂ ಆಗಿದೆ.

## ಸಜ್ಜನ್‌ರಾವ್ ಸರ್ಕಲ್‌ನಲ್ಲಿನ ಹಲವು ದೇವಸ್ಥಾನಗಳು : ಶ್ರೀ ಸುಬ್ರಹ್ಮಣ್ಯೇಶ್ವರ ದೇವಸ್ಥಾನ

ಬೆಂಗಳೂರಿನ ಗಣ್ಯವ್ಯಕ್ತಿಗಳಾಗಿದ್ದ ಶ್ರೀ ಸಜ್ಜನ್‌ರಾವ್ ಎಂಬ ಮಹನೀಯರಿಂದ 1934ರ ಸುಮಾರಿನಲ್ಲಿ ವಿಶ್ವೇಶ್ವರಪುರ ಬಡಾವಣೆಯಲ್ಲಿ ಶ್ರೀ ಸುಬ್ರಹ್ಮಣ್ಯೇಶ್ವರ ಸ್ವಾಮಿ ದೇವಸ್ಥಾನವು ಕಟ್ಟಲ್ಪಟ್ಟಿತು.

ದೇವಸ್ಥಾನದ ಎಡಭಾಗದಲ್ಲಿ ಸ್ಥಾಪಿತವಾಗಿರುವ ಒಂದು ಶಿಲಾಶಾಸನದ ಪ್ರಕಾರ ಈ ದೇವಸ್ಥಾನವು ಪ್ರಭವನಾಮ ಸಂವತ್ಸರದ ಜ್ಯೇಷ್ಠ ಶುದ್ಧ ದಶಮಿ ಅಂದರೆ 25-6-1934ರ ಶುಕ್ರವಾರದಂದು ಮಾಣಿಕೋಜಿರಾಯರ ಗೋತ್ರರೂ, ಜೀವಣರಾಯರ ಪುತ್ರರೂ ಆದ ಶ್ರೀ ಸಜ್ಜನ್‌ರಾವ್ ಎಂಬುವರು ತಮ್ಮ ಧರ್ಮಪತ್ನಿ ಶ್ರೀಮತಿ ಲಕ್ಷ್ಮಿಬಾಯಿಯವರ ಜೊತೆಗೂಡಿ ಈ ದೇವಸ್ಥಾನವನ್ನು ಕಟ್ಟಿಸಿದರೆಂದು ತಿಳಿದು ಬರುತ್ತದೆ.

ದೇವಸ್ಥಾನದ ಮಹಾದ್ವಾರ, ನವರಂಗ ಮಂಟಪ ಗರ್ಭಗುಡಿ ಇತ್ಯಾದಿಗಳೆಲ್ಲವನ್ನೂ ನುಣುಪಾದ ಕಲ್ಲಿನಿಂದ ನಾಜೂಕಾಗಿ ಕಲಾತ್ಮಕವಾಗಿ ಕಟ್ಟಿದ್ದು : ದೇವಸ್ಥಾನದ ಮಹಾಪ್ರಾಕಾರದ ಎರಡೂ ಕಡೆಗಳಲ್ಲಿ ಅನೇಕ ದೇವರುಗಳ ಚಿತ್ರಗಳನ್ನು ಕೆತ್ತಲಾಗಿದೆ.

ಮಹಾದ್ವಾರದ ಎರಡೂ ಕಡೆಗಳಲ್ಲಿ ಪುರುಷ ಪ್ರಮಾಣದ ಲಕ್ಷ್ಮಿ ಸರಸ್ವತಿಯವರ ವಿಗ್ರಹಗಳಿವೆ. ಪ್ರಾಕಾರದ ಮೇಲ್‌ಭಾಗದಲ್ಲಿ ಒಂದು ಸುಂದರ ಮಂಟಪವನ್ನು ಕಟ್ಟಲಾಗಿದ್ದು ಅದರಲ್ಲಿ ಶ್ರೀರಾಮ ಪಟ್ಟಾಭಿಷೇಕದ ಮೂರ್ತಿಗಳನ್ನು ಇಡಲಾಗಿದೆ. ರಾಮ, ಲಕ್ಷ್ಮಣ, ಭರತ, ಶತ್ರುಘ್ನ ಮತ್ತು ಹನುಮಂತರ ಸಮೇತನಾಗಿ ಪಟ್ಟಾಭಿಷಿಕ್ತನಾಗಿರುವ ಈ ಚಿತ್ರವು ಮನೋಹರವಾಗಿದೆ. ಅದರ ಪಕ್ಕದಲ್ಲಿ ಶ್ರೀದೇವಿ, ಭೂದೇವಿ ಸಹಿತ ನಾರಾಯಣ

ದೇವರ ವಿಗ್ರಹವಿದೆ. ಬಲಭಾಗಕ್ಕೆ ಶ್ರೀವಲ್ಲಿ ಕಲ್ಯಾಣದ ಇದೇ ರೀತಿಯ ವಿಗ್ರಹಗಳಿದ್ದು ಎರಡೂ ಪಕ್ಕಗಳಲ್ಲಿ ಬ್ರಹ್ಮದೇವರು ಮತ್ತು ನಾರದ ವಿಗ್ರಹಗಳನ್ನು ಕಾಣಬಹುದು. ಅದರ ಪಕ್ಕದ ಮತ್ತೊಂದು ಮಂಟಪ ದಲ್ಲಿ, ಮರದ ಕೆಳಗೆ ಕುಳಿತಿರುವ ಸುಬ್ರಹ್ಮಣ್ಯಸ್ವಾಮಿ ವಿಗ್ರಹವಿದ್ದು ಎರಡೂ ಕಡೆಗಳಲ್ಲಿ ಕ್ರಮವಾಗಿ ವಿಷ್ಣು ಮತ್ತು ರುದ್ರ ದೇವರ ವಿಗ್ರಹಗಳಿವೆ.

ಪ್ರಾಕಾರವನ್ನು ಪ್ರವೇಶಿಸುತ್ತಿದ್ದಂತೆ ಎದುರು ಭಾಗದಲ್ಲಿ ಬಲಿಪೀಠ ಹಾಗೂ ದೀಪ ಸ್ಥಂಭಗಳನ್ನು ಕಾಣಬಹುದು. ಎಡಭಾಗದ ಪ್ರಾಕಾರದ ಒಂದು ಮಂಟಪದಲ್ಲಿ ಸುಮಾರು ಐದು ಅಡಿ ಎತ್ತರದ ಅಮೃತ ಶಿಲೆಯ ಶ್ರೀ ಸಜ್ಜನರಾಯರ ವಿಗ್ರಹವಿದೆ. ದೇವಸ್ಥಾನದ ಹಿಂಭಾಗದ ಬಲಭಾಗಕ್ಕೆ ಪಾಂಡೇಶ್ವರ ಮತ್ತು ಎಡಭಾಗಕ್ಕೆ ಚಂಡಿಕೇಶ್ವರ ದೇವರುಗಳಿವೆ.

ಪ್ರಾಕಾರದ ಬಲಭಾಗಕ್ಕೆ ಬಂದಂತೆ ಸುಮಾರು ಮೂರು ಅಡಿ ಎತ್ತರದ ಕಪ್ಪು ಶಿಲೆಯ ಪ್ರಾಣದೇವರನ್ನು ಕಾಣಬಹುದು. ಮುಂಭಾಗಕ್ಕೆ ಮುಖ ಮಾಡಿಕೊಂಡು ನಿಂತಿರುವ ಈ ಪ್ರಾಣದೇವರು ಒಂದು ಕೈಯಲ್ಲಿ ಸಂಜೀವಿನಿ ಪರ್ವತವನ್ನು, ಮತ್ತೊಂದು ಕೈಯಲ್ಲಿ ಮಾವಿನ ಕಾಯಿಗೊಂಚಲು ಹಿಡಿ ದಂತೆಯೂ ಇದೆ. ಅದರ ಪಕ್ಕದಲ್ಲಿಯೇ ಸುಮಾರು ಒಂದು ಅಡಿ ಎತ್ತರದ ಗರುಡ ದೇವರ ವಿಗ್ರಹವಿದೆ. ಗರುಡ ದೇವರ ಪಕ್ಕದಲ್ಲಿ ಮೂರು ಅಡಿ ಎತ್ತರದ ಕಾಲಭೈರವನ ದರ್ಶನ ಪಡೆದು ಮುಂದೆ ಸಾಗಿದಂತೆ, ಮೂರು ಅಡಿ ಎತ್ತರದ ಕಂಚಿನ ನಟರಾಜ ವಿಗ್ರಹ ಕಾಣುತ್ತೇವೆ. ನಟರಾಜನ ಮುಂಭಾಗದಲ್ಲಿರುವುದೇ ನವಗ್ರಹಗಳು. ಕಪ್ಪು ಶಿಲೆಯ ಈ ವಿಗ್ರಹಗಳು ನೋಡಲು ಸುಂದರವಾಗಿರುವುದಲ್ಲದೆ ಅವುಗಳನ್ನು ಕಡೆದ ಶಿಲ್ಪಿಯ ಕಲಾ ಚಾತುರ್ಯದ ಪ್ರತೀಕವಾಗಿದೆ.

ಮಂಟಪದಿಂದ ಕೂಡಿದ ನವರಂಗದಲ್ಲಿ ಗರ್ಭಗುಡಿಗೆ ಎದುರಾಗಿ ಸುಬ್ರಹ್ಮಣ್ಯಸ್ವಾಮಿಯ ವಾಹನವಾದ ನವಿಲಿದೆ. ಗರ್ಭಗುಡಿಯ ಬಲಭಾಗಕ್ಕೆ ಗಣೇಶನ ಗುಡಿ ಇದೆ. ಗರ್ಭಗುಡಿಯ ಬಲಭಾಗಕ್ಕೆ ರಾಧಾ ರುಕ್ಮಿಣಿ ಸಮೇತ ಶ್ರೀ ಕೃಷ್ಣ ದೇವರ ಗುಡಿ ಇದೆ. ಎರಡೂ ಕೈಗಳಲ್ಲಿ ಕೊಳಲು ಮತ್ತು ಶಂಖವನ್ನು ಹಿಡಿದುಕೊಂಡಿದ್ದು ಸೊಂಟದ ಮೇಲೆ ಕೈ ಇಟ್ಟು

ಕೊಂಡು ನಿಂತಿರುವಂತೆ ಕಡೆಯಲಾಗಿರುವ ಶ್ರೀ ಕೃಷ್ಣನ ವಿಗ್ರಹ ಸುಂದರ ವಾಗಿದೆ.

ಗರ್ಭಗುಡಿಯ ಹೊರಭಾಗಕ್ಕೆ ಬಲಭಾಗದ ಒಂದು ಮಂಟಪದಲ್ಲಿ ಶ್ರೀವಳ್ಳಿ ದೇವ ಸಮೇತ ಸುಬ್ರಹ್ಮಣ್ಯ ಸ್ವಾಮಿಯ ಮೂರು ಅಡಿ ಹಾಗೂ ಒಂದು ಅಡಿ ಎತ್ತರದ ಎರಡು ಉತ್ಸವಮೂರ್ತಿಗಳಿವೆ. ಬಲಭಾಗಕ್ಕೆ ಸುಮಾರು ಮೂರು ಅಡಿ ಎತ್ತರದ ರಾಧಾ ರುಕ್ಮಿಣಿ ಸಮೇತ ಶ್ರೀ ಕೃಷ್ಣ ದೇವರ ಉತ್ಸವ ಮೂರ್ತಿಗಳಿವೆ.

ಗರ್ಭಗುಡಿಯಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ಶ್ರೀ ಸುಬ್ರಹ್ಮಣ್ಯ ದೇವರ ವಿಗ್ರಹ ಹಾಗೂ ಎರಡೂ ಪಕ್ಕಗಳಲ್ಲಿ ಶ್ರೀವಳ್ಳಿ ದೇವಸೇನ ದೇವರುಗಳ ಸುಂದರವಾದ ವಿಗ್ರಹಗಳನ್ನು ಕಾಣಬಹುದು.

ಪೂರ್ವಾಭಿಮುಖವಾಗಿರುವ ಈ ದೇವಸ್ಥಾನದ ಮಹಾದ್ವಾರದ ಮೇಲಿ ರುವ ರಾಜಗೋಪುರವು ಎತ್ತರವಾಗಿದ್ದು ಅತಿ ಸುಂದರವಾದ ಮೂರ್ತಿ ಗಳನ್ನು ಒಳಗೊಂಡಿದ್ದು ಈ ಸಜ್ಜನ್‌ರಾವ್ ವೃತ್ತಕ್ಕೇ ಭೂಷಣವಾಗಿದೆ.

ಪ್ರತಿವರ್ಷ ಮಾರ್ಗಶಿರ ಶುದ್ಧ ಷಷ್ಠಿ ಅಂದರೆ ಸುಬ್ರಾಯನ ಷಷ್ಠಿ ಯಂದು ಇಲ್ಲಿ ಸುಬ್ರಹ್ಮಣ್ಯೇಶ್ವರ ಸ್ವಾಮಿಯ ಬೆಳ್ಳಿಯ ರಥೋತ್ಸವವು ನಡೆಯುತ್ತದೆ. ಈ ರಥೋತ್ಸವವು ಬೆಂಗಳೂರು ಜಿಲ್ಲೆಯಲ್ಲಿ ನಡೆಯುವ ಉತ್ಸವಗಳಲ್ಲಿ ಪ್ರಮುಖವಾಗಿದ್ದು ಆ ಸಮಯದಲ್ಲಿ ಬೆಂಗಳೂರಿನ ಹಾಗೂ ಸುತ್ತಮುತ್ತಲ ಊರುಗಳಿಂದ ಸಾವಿರಾರು ಭಕ್ತಾದಿಗಳು ಆಗಮಿಸಿ ಉತ್ಸವ ವನ್ನು ವಿಜೃಂಭಣೆಯಿಂದ ನಡೆಸುವ ನೋಟ ಎಂತಹ ನಾಸ್ತಿಕರನ್ನೂ ಆಸ್ತಿಕರ ನ್ನಾಗಿ ಮಾಡುವುದರಲ್ಲಿ ಸಂದೇಹವಿಲ್ಲ.

## ಶ್ರೀ ವೆಂಕಟರಮಣಸ್ವಾಮಿ ದೇವಸ್ಥಾನ

1928ರಲ್ಲಿ ಕೋಟೆ ಸುಬ್ಬಯ್ಯನವರಿಂದ ಈ ದೇವಸ್ಥಾನವು ನಿರ್ಮಾಣ ವಾಯಿತು. ಮಹಾದ್ವಾರವನ್ನು ಪ್ರವೇಶಿಸುತ್ತಿದ್ದಂತೆಯೇ ಎದುರಿಗೆ ಗರುಡ ಕಂಬವನ್ನು ಕಾಣಬಹುದು.

ಗರ್ಭಗುಡಿಯಲ್ಲಿ ಸುಮಾರು ಮೂರು ಅಡಿ ಎತ್ತರದ ಶ್ರೀದೇವಿ, ಭೂದೇವಿ ಸಹಿತನಾದ ಶ್ರೀನಿವಾಸ ದೇವರ ವಿಗ್ರಹವಿದೆ. ಎಡಭಾಗಕ್ಕೆ ಶ್ರೀ ವೈಷ್ಣವಮತಾಚಾರ್ಯರಾದ ಆಳ್ವಾರುಗಳಾದ ವಿಗ್ರಹಗಳು ಬಲಭಾಗಕ್ಕೆ ಒಂದೂವರೆ ಅಡಿ ಎತ್ತರದ ಪಂಚಲೋಹದ ಉತ್ಸವಮೂರ್ತಿಗಳೂ ಇವೆ.

## ಶ್ರೀ ಸತ್ಯನಾರಾಯಣ ದೇವಸ್ಥಾನ

ಸಜ್ಜನ್‌ರಾವ್ ದೇವಸ್ಥಾನದ ಬಲಭಾಗಕ್ಕೆ ಆಧುನಿಕ ರೀತಿಯಲ್ಲಿ ನಿರ್ಮಿತವಾಗಿರುವ ಹಾಗೂ ಪುಟ್ಟದಾದರೂ ಚೊಕ್ಕವಾಗಿರುವ ಈ ಸತ್ಯ ನಾರಾಯಣಸ್ವಾಮಿ ದೇವಸ್ಥಾನವು 1950ರಲ್ಲಿ ಶ್ರೀ ಸಜ್ಜನ್ ಸೂರ್ಯ ವಂಶಿ ಎಂಬುವರಿಂದ ಕಟ್ಟಲ್ಪಟ್ಟಿತು.

ಗರ್ಭಗುಡಿಯಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ಶಂಖ ಚಕ್ರ ಗದಾ ಪದ್ಮಧಾರಿಯಾದ ಶ್ರೀ ಸತ್ಯನಾರಾಯಣಸ್ವಾಮಿಯ ಅಮೃತಶಿಲೆಯ ವಿಗ್ರಹವು ಕಣ್ಮನಗಳನ್ನು ತಣಿಸುವಂತಿದ್ದಾಗಿದೆ. ಪೂರ್ಣಿಮೆ ಹಾಗೂ ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆ ಇತ್ಯಾದಿಗಳು ಇಲ್ಲಿ ನಡೆಯುತ್ತವೆ.

## ಶ್ರೀ ಕನ್ಯಕಾ ಪರಮೇಶ್ವರಿ ದೇವಸ್ಥಾನ

ಸಜ್ಜನ್‌ರಾವ್ ವೃತ್ತದ ಅತಿ ಸಮೀಪದಲ್ಲೇ ಅಂದರೆ ಕೆಲವೇ ಗಜ ಗಳ ಅಂತರದಲ್ಲಿರುವ ಶ್ರೀ ಕನ್ಯಕಾ ಪರಮೇಶ್ವರಿ ಅಮ್ಮನವರ ದೇವಸ್ಥಾನದ ಶಂಕುಸ್ಥಾಪನೆಯು ತಾ|| 15-4-1954ರಲ್ಲಿ ಶ್ರೀ ಶ್ರೀ ವಿದ್ಯಾಪ್ರಕಾಶಾನಂದ ಗಿರಿ ಎಂಬ ಮಹಾಸ್ವಾಮಿಗಳವರ ಅಮೃತ ಹಸ್ತದಿಂದ ನೆರವೇರಲ್ಪಟ್ಟಿತು.

ಶೋಭಕೃತ ನಾಮ ಸಂವತ್ಸರದ ವೈಶಾಖ ಬಹುಳ ಬಿದಿಗೆ ಅಂದರೆ 10-5-1963ರಲ್ಲಿ ಇಲ್ಲಿನ ದೇವರಾದ ಶ್ರೀ ಕನ್ಯಕಾಪರಮೇಶ್ವರಿ ಅಮ್ಮನ ವರ ಪ್ರತಿಷ್ಠಾಪನಾ ಮಹೋತ್ಸವವು ನೆರವೇರಿತು.

ಅತ್ಯಂತ ವಿಶಾಲವಾದ ಈ ದೇವಸ್ಥಾನದ ಮಹಾದ್ವಾರ ಹಾಗೂ ಗೋಪುರಗಳು ಅತ್ಯಂತ ಸುಂದರವಾದ ವಿಗ್ರಹಗಳನ್ನು ಒಳಗೊಂಡಿದ್ದು ದೇವಸ್ಥಾನಕ್ಕೆ ಹೆಚ್ಚಿನ ಮೆರಗನ್ನು ನೀಡಿವೆ.

ಪ್ರಾಕಾರದ ಎಡಭಾಗಕ್ಕೆ ಸುಮಾರು ಮೂರು ಅಡಿ ಎತ್ತರವಿರುವ ಶ್ರೀ ವರಸಿದ್ಧಿ ವಿನಾಯಕಸ್ವಾಮಿಯ ವಿಗ್ರಹವಿದೆ. ಅತ್ಯಂತ ನುಣುಪಾದ ಕಪ್ಪು ಶಿಲೆಯಿಂದ ನಿರ್ಮಿಸಲ್ಪಟ್ಟಿರುವ ಈ ವಿಗ್ರಹವು ನಾಲ್ಕು ಕೈಗಳಿಂದ ಕೂಡಿದ್ದು ನಿಂತಿರುವ ಭಂಗಿಯಲ್ಲಿದೆ. ಹೀಗೆ ನಿಂತಿರುವ ಗಣಪತಿ ವಿಗ್ರಹ ಗಳು ಅತಿವಿರಳವಾಗಿದ್ದು ಕರ್ನಾಟಕದಲ್ಲಿ ಗೋಕರ್ಣ ಕ್ಷೇತ್ರವನ್ನು ಬಿಟ್ಟರೆ ಬಹುಶಃ ಬೆಂಗಳೂರಿನ ಕನ್ಯಕಾಪರಮೇಶ್ವರಿ ದೇವಸ್ಥಾನದಲ್ಲಿ ಮಾತ್ರ ಇರ ಬಹುದೆಂದು ತಿಳಿದು ಬರುತ್ತದೆ.

ದೇವಸ್ಥಾನದ ಬಲಭಾಗಕ್ಕೆ ನವಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ. ಇವರ ವೈಶಿಷ್ಟ್ಯವೆಂದರೆ ನವಗ್ರಹಗಳನ್ನು ಆಯಾ ಗ್ರಹಗಳ ಪತ್ನಿಯರ ಸಮೇತ ಪ್ರತಿಷ್ಠಾಪಿಸಲಾಗಿರುವುದು.

ಮಧ್ಯಭಾಗದಲ್ಲಿ ವಿಶಾಲವಾದ ಮಂಟಪವಿದ್ದು ನೂರಾರು ಜನರು ಕೂಡಲು ಅನುಕೂಲಕರವಾಗಿದೆ.

ಗರ್ಭಗುಡಿಯಲ್ಲಿ ಸುಮಾರು ನಾಲ್ಕೂವರೆ ಅಡಿ ಎತ್ತರದ ಪ್ರಭಾವಳಿ ಯಿಂದ ಒಳಗೂಡಿದ ಹಾಗೂ ಕುಸರಿ ಕೆಲಸಗಳಿಂದ ಅತ್ಯಂತ ಮನೋಹರ ವಾಗಿ ಕಡೆಯಲ್ಪಟ್ಟಿರುವ ಶ್ರೀ ಕನ್ಯಕಾ ಪರಮೇಶ್ವರಿ ಅಮ್ಮನವರ ಅಮೃತ ಶಿಲೆಯ ವಿಗ್ರಹವು ಅತ್ಯಂತ ಸುಂದರವಾಗಿದೆ.

ಗರ್ಭಗುಡಿಯ ಎಡಭಾಗಕ್ಕೆ ಅಮೃತ ಶಿಲೆಯ ಲಕ್ಷ್ಮೀನಾರಾಯಣ ವಿಗ್ರಹವೂ, ಬಲ ಭಾಗಕ್ಕೆ ಉಮಾಮಹೇಶ್ವರಿ ವಿಗ್ರಹವೂ ಇದೆ. ಇಲ್ಲಿನ ದೇವತಾ ವಿಗ್ರಹಗಳು ಅತ್ಯಂತ ಸುಂದರವೂ ಹಾಗೂ ಶಿಲ್ಪಶಾಸ್ತ್ರಕ್ಕೆ ಅನು ಗುಣವಾಗಿದ್ದು ಬೆಂಗಳೂರಿನ ದೇವಸ್ಥಾನಗಳಲ್ಲಿ ನೋಡಲೇಬೇಕಾದ ಸಂಸ್ಥಾನವು ಇದಾಗಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು.

ವಾಸವಿ ಜಯಂತಿ ಇಲ್ಲಿನ ಉತ್ಸವಗಳಲ್ಲಿ ಪ್ರಮುಖವಾಗಿದೆ.

ಸಜ್ಜನ್‌ರಾವ್ ಸರ್ಕಲ್ಲಿನ ಪ್ರತೀ ದೇವಸ್ಥಾನಗಳ ಪಕ್ಕದಲ್ಲೂ ಕಲ್ಯಾಣ ಮಂಟಪಗಳಿದ್ದು ವಿವಾಹ ಮಹೋತ್ಸವಾದಿ ಅನೇಕ ಮಂಗಳ ಕಾರ್ಯ ಕ್ರಮಗಳ ಜೊತೆಗೆ ಸತ್ಯಧಾಶ್ರವಣ ಹಾಗೂ ದೇವರ ಉತ್ಸಾವಾದಿಗಳನ್ನು

ಸಹಾ ಕಾಣಬಹುದಾಗಿದೆ. ಈ ಸಜ್ಜನ್‌ರಾವ್ ಸರ್ಕಲ್ಲಿನ ಪ್ರದೇಶವು ನಗರದ ಪ್ರೇಕ್ಷಣೀಯ ಸ್ಥಳಗಳಲ್ಲಿ ಒಂದಾಗಿದೆ.

## ಕಾಶಿ ವಿಶ್ವೇಶ್ವರಸ್ವಾಮಿ ದೇವಸ್ಥಾನ

ಬಳೇಪೇಟೆ ಹಾಗೂ ಚಿಕ್ಕಪೇಟೆಗಳ ಚೌಕದಲ್ಲಿರುವ ಕಾಶಿ ವಿಶ್ವೇಶ್ವರ ಸ್ವಾಮಿ ದೇವಸ್ಥಾನವು ನೂರ ಐವತ್ತು ವರ್ಷಗಳಿಗೂ ಹಿಂದಿನದಾಗಿದೆ.

ಬೆಂಗಳೂರಿನ ಗಣೇಶ ಸಾ ಎಂಬುವರು ಕಾಶಿಯಿಂದ ಶಿವಲಿಂಗವನ್ನು ತಂದು, ತಮ್ಮದೇ ಆದ ಗದ್ದೆ ಪ್ರದೇಶವಲ್ಲಿ ಪ್ರತಿಷ್ಠಾಪಿಸಿ ಸುಂದರವಾದ ಆಲಯುವನ್ನು ನಿರ್ಮಿಸಿರುತ್ತಾರೆ.

ದೇವಸ್ಥಾನದ ಮುಂಭಾಗದಲ್ಲಿ ದೀಪಸ್ತಂಭ ಹಾಗೂ ನಂದಿಯು ವಿಗ್ರಹ ವಿದ್ದು, ಕಲ್ಲಿನ ಮಂಟಪವೊಂದಿದೆ. ನವರಂಗವು ಅನೇಕ ಕೆತ್ತನೆ ಕೆಲಸ ಗಳಿಂದೊಡಗೂಡಿದ ಕಂಬಗಳಿಂದ ನಿರ್ಮಿತವಾಗಿದೆ. ಈ ಕಂಬಗಳ ಒಂದೊಂದ ರಲ್ಲೂ ಶಿವನ ಅನೇಕ ಅವತಾರಗಳನ್ನೂ ಹಾಗೂ ಶಿವಭಕ್ತರ ಅನೇಕ ವಿಗ್ರಹಗಳನ್ನು ಕಡೆಯಲಾಗಿವೆ. ನವರಂಗದಲ್ಲಿ ದೇವರಿಗೆ ಎದುರಾಗಿ ಒಂದು ನಂದಿಯು ವಿಗ್ರಹವಿದೆ.

ಗರ್ಭಗುಡಿಯು ಎರಡೂ ಪಕ್ಕದಲ್ಲಿರುವ ಪುಟ್ಟಗುಡಿಗಳಲ್ಲಿ ಸುಮಾರು ಎರಡು ಅಡಿ ಎತ್ತರದ ಗಣೇಶ ಮತ್ತು ಅನ್ನಪೂರ್ಣಮ್ಮನವರ ವಿಗ್ರಹ ಗಳಿವೆ. ಗರ್ಭಗುಡಿಗೆ ಪ್ರದಕ್ಷಿಣೆ ಹಾಕುವಂತೆ ಸುತ್ತಲೂ ಪ್ರಾಕಾರವನ್ನು ರಚಿಸಲಾಗಿದೆ. ಪ್ರಾಕಾರದ ಎಡ ಬಲಗಳಲ್ಲಿರುವ ಚಿಕ್ಕ-ಚಿಕ್ಕ ಗುಡಿಗಳಲ್ಲಿ ಅನೇಕ ದೇವರುಗಳನ್ನು ಪ್ರತಿಷ್ಠಾಪಿಸಲಾಗಿದೆ.

ಪ್ರದಕ್ಷಿಣಾಕಾರವಾಗಿ ನೋಡಲು ಹೊರಟಾಗ ಮೊದಲಿನ ಗುಡಿಯಲ್ಲಿ ನಾಲ್ಕು ಅಡಿ ಎತ್ತರದ ಲಿಂಗ ಮತ್ತು ಎದುರಿಗೆ ನಂದಿ ಇರುವುದನ್ನು ಕಾಣ ಬಹುದು. ಅವರ ಪಕ್ಕದಲ್ಲಿ ಮೂರು ಅಡಿ ಎತ್ತರದ ಆಂಜನೇಯಸ್ವಾಮಿ ವಿಗ್ರಹವಿದೆ. ಬಾಲದಲ್ಲಿ ಗಂಟೆ, ಶಿಖ ಬಂಧನ ಮತ್ತು ಎಡದ ಹಸ್ತದಲ್ಲಿ ಮಾವಿನಕಾಯಿಯು ಗೊಂಚಲನ್ನು ಹಿಡಿದುಕೊಂಡಿರುವ ಈ ಪ್ರಾಣದೇವರು ಸುಂದರವಾಗಿದೆ. ಇದರ ಪಕ್ಕದಲ್ಲಿ ಚಂದ್ರಮೌಳೀಶ್ವರಸ್ವಾಮಿ ಲಿಂಗವಿದೆ.

ಈ ಚಂದ್ರಮೌಳೀಶ್ವರಸ್ವಾಮಿ ದರ್ಶನ ಮಾಡಿ ಮುಂದೆ ಹೋದಂತೆ ಉಗ್ರಾಣವನ್ನು ಕಾಣಬಹುದು. ಉಗ್ರಾಣದ ಪಕ್ಕದಲ್ಲಿ ಮತ್ತೊಂದು ಲಿಂಗ ಮತ್ತು ನಂದಿ ಇದೆ.

ಬಲಭಾಗದ ಪ್ರಾಕಾರಕ್ಕೆ ಹೋದಂತೆ ಸೋಮೇಶ್ವರಸ್ವಾಮಿ ಹಾಗೂ ವಿಶಾಲಾಕ್ಷಮ್ಮನವರ ದರ್ಶನವನ್ನು ಪಡೆಯಬಹುದು. ಇದರ ಪಕ್ಕದಲ್ಲಿ ಯಾಗ ಮಂಟಪ ಹಾಗೂ ಶ್ರೀವಳ್ಳಿ ದೇವಯಾನಿ, ಸುಬ್ರಹ್ಮಣ್ಯೇಶ್ವರ, ಅಗಸ್ತ್ಯೇಶ್ವರ ಮತ್ತು ಸೂರ್ಯದೇವರ ಪುಟ್ಟ ಗುಡಿಗಳನ್ನು ಕಾಣಬಹುದಾಗಿದೆ.

ಗರ್ಭಗುಡಿಯ ಹೊರಭಾಗಕ್ಕೆ ಬಲಭಾಗದಲ್ಲಿ ಶೇಷ ದೇವರು, ಮಹಿಷಾಸುರ ಮರ್ದಿನಿ ಮತ್ತು ಗಣೇಶನ ವಿಗ್ರಹಗಳಿವೆ. ಗರ್ಭಗುಡಿಯ ಹಿಂಭಾಗದಲ್ಲಿ ಮಹಾ ವಿಷ್ಣುವಿನ ವಿಗ್ರಹವಿದೆ. ಎಡಭಾಗಕ್ಕೆ ಸರಸ್ವತಿ, ಬ್ರಹ್ಮ ಹಾಗೂ ಚಂಡಿಕೇಶ್ವರ ದೇವರುಗಳ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ.

ಇದೇ ದೇವಸ್ಥಾನದ ಪಕ್ಕದಲ್ಲಿ ಮತ್ತೊಂದು ದೇವಸ್ಥಾನವಿದ್ದು ಅದರಲ್ಲಿ ಶ್ರೀ ಕೇದಾರೇಶ್ವರ ಸ್ವಾಮಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ಎರಡೂಭಾಗಗಳಲ್ಲಿ ಪಾರ್ವತಿ ಹಾಗೂ ಗಣೇಶನ ವಿಗ್ರಹಗಳಿವೆ.

ಕಾರ್ತೀಕ ಮಾಸದಲ್ಲಿ ನಡೆಯುವ ಇಲ್ಲಿನ ದೀಪೋತ್ಸವವು ಪ್ರೇಕ್ಷಣೀಯ ಶಾಸ್ತ್ರೋಕ್ತವಾಗಿ ತ್ರಿಕಾಲ ಪೂಜಾದಿಗಳನ್ನು ಪ್ರತಿ ನಿತ್ಯವೂ ನಡೆಸುತ್ತಿದ್ದು, ಇಲ್ಲಿಯ ಪಂಚಲಿಂಗ ದರ್ಶನದಿಂದ ಕಾಶಿ ವಿಶ್ವೇಶ್ವರ ಸ್ವಾಮಿಯ ದರ್ಶನ ಮಾಡಿದಷ್ಟೇ ಪುಣ್ಯ ಲಭಿಸುವುದೆಂಬ ಭಾವನೆ ಇಲ್ಲದ್ದು. ಶಿವರಾತ್ರಿಯಂದು ವಿಶೇಷ ಪೂಜೋತ್ಸವಾದಿಗಳು ನಡೆಯುವುದರ ಜೊತೆಗೆ ಜ್ಯೇಷ್ಠ ಶುದ್ಧ ಪೂರ್ಣಿಮೆಯ ದಿನ ಬ್ರಹ್ಮ ರಥೋತ್ಸವವು ಅತಿ ವಿಜೃಂಭಣೆಯಿಂದ ನಡೆಯುತ್ತದೆ.

## ಗೋಪಾಲಸ್ವಾಮಿ ಗುಡಿ

ಚಿಕ್ಕಪೇಟೆಯ ಉತ್ತರಾದಿ ಮಠದ ಸಮೀಪದಲ್ಲಿರುವ ಗೋಪಾಲ ಸ್ವಾಮಿ ಗುಡಿಯು 1916ರಲ್ಲಿ ಸೋಸಲೆ ಶ್ರೀ ವ್ಯಾಸರಾಯ ಸಂಸ್ಥಾನದ

ವಿದ್ಯಾ ಸಿಂಹಾಸನಾಧೀಶ್ವರರಾಗಿದ್ದ ಶ್ರೀಮದ್ ವಿದ್ಯಾರತ್ನಾಕರ ತೀರ್ಥ ಶ್ರೀ ಪಾದಂಗಳವರಿಂದ ಪ್ರತಿಷ್ಠಾಪನೆಯಾಯಿತು.

ಸುಮಾರು ಎರಡು ಅಡಿ ಎತ್ತರವಿರುವ ವೇಣು ಗೋಪಾಲಸ್ವಾಮಿ ಮೂರ್ತಿಯು ತ್ರಿಭಂಗಿಯಲ್ಲಿ ನಿಂತಿದ್ದು ಎರಡೂ ಕೈಗಳಲ್ಲಿ ಕೊಳಲನ್ನು ಊದುತ್ತಿರುವಂತೆ ಕಡೆಯಲಾಗಿದೆ.

ಸೋಸಲೆ ವ್ಯಾಸರಾಜ ಮಠಕ್ಕೆ ಸೇರಿದ್ದ ಈ ದೇವಸ್ಥಾನವು ಅನೇಕ ಭಕ್ತ ಮಹಾಜನಗಳ ಜ್ಞಾನ ವೃದ್ಧಿಗೆ ಕಾರಣವಾಗಿದೆ.

ದೇವಸ್ಥಾನವನ್ನು ಪ್ರವೇಶಿಸುತ್ತಿದ್ದಂತೆ ಎಡಭಾಗಕ್ಕೆ ಒಂದು ಪುಟ್ಟ ಆಂಜನೇಯನ ಗುಡಿ ಇದೆ. ಸುಮಾರು ಎರಡು ಅಡಿ ಎತ್ತರವಿರುವ ಈ ಪ್ರಾಣ ದೇವರು ಜಗನ್ನಾಥ ತೀರ್ಥರೆಂಬ ಯತಿಗಳಿಂದ ಪ್ರತಿಷ್ಠಾಪಿಸಲಾಗಿದೆ. ಇವರಿಗೆ ಭಾಷ್ಯ ದೀಪಿಕಾಚಾರ್ಯ ಎಂಬ ಹೆಸರು ಇದ್ದಿತೆಂದು ತಿಳಿದು ಬರುತ್ತದೆ. ಇವರ ಬೃಂದಾವನವು ತಮಿಳುನಾಡಿನ ಕುಂಭಕೋಣದಲ್ಲಿದೆ. ಶ್ರೀ ಶ್ರೀಗಳು ಗಾಲವ ಋಷಿಗಳ ಅವತಾರವೆಂದು ಪ್ರತೀತಿ ಇದೆ. ಇವರು ಶ್ರೀ ಮಧ್ವಾಚಾರ್ಯರ ಭಾಷ್ಯಕ್ಕೆ ದೀಪಕವನ್ನು ಬರೆದಿರುವ ಕಾರಣ ಇವರಿಗೆ ಭಾಷ್ಯ ದೀಪಕಾಚಾರ್ಯರು ಎಂದು ಹೆಸರು ಬಂದಿದೆ.

ಪ್ರಾಣದೇವರ ಪಕ್ಕದಲ್ಲಿ ಒಂದು ಅಡಿ ಎತ್ತರದ ಗರುಡ ದೇವರ ವಿಗ್ರಹವಿದೆ. ಈ ದೇವಸ್ಥಾನದಲ್ಲಿ ಸೋಸಲೆ ವ್ಯಾಸರಾಜ ಮಠದ ಪರಂಪರೆಗೆ ಸೇರಿದ ಗುರುಗಳ ಆರಾಧನೆ ಹಾಗೂ ದ್ವೈತ ಸಿದ್ಧಾಂತ. ಪ್ರವರ್ತಕರಾದ ಅನೇಕಾನೇಕ ಯತಿವರಣ್ಯರ ಆರಾಧನೆಯೂ ನಡೆಯುವ ಸಂಪ್ರದಾಯವಿದ್ದು ಕೃಷ್ಣಜಯಂತಿ ಸಂದರ್ಭದಲ್ಲಿ ಸಂಗೀತೋತ್ಸವಗಳು ಇಲ್ಲಿ ನಡೆಯುತ್ತವೆ.

## ಶ್ರೀ ಪೂರ್ಣಪ್ರಸಾದ್ ಆಂಜನೇಯ ದೇವಸ್ಥಾನ

ನಗರದ ರೇಸ್‌ಕೋರ್ಸ್ ಬಳಿ ಇರುವ ಶ್ರೀ ಪೂರ್ಣಪ್ರಸಾದ್ ಆಂಜನೇಯ ದೇವಸ್ಥಾನವು ಆಕಾರದಲ್ಲಿ ಬಹು ಚಿಕ್ಕದಾದರೂ ಕಲಾ ಪೂರ್ಣವಾಗಿದ್ದು, ವಿಷ್ಣುವಿನ ಅನೇಕ ಅವತಾರಗಳು ಹಾಗೂ ರಾಮಾಯಣ,

ಮಹಾಭಾರತದ ಕೆಲವು ರಸಮಯ ಘಟ್ಟಗಳ ಶಿಲ್ಪ ಕಲಾ ಕೃತಿಗಳಿಂದ ಅಲಂಕೃತವಾಗಿ ಪುರಾಣ ಇತಿಹಾಸಗಳ ಸ್ಪಷ್ಟ ಕಲ್ಪನೆಯನ್ನು ಮನಸ್ಸಿಗೆ ತಂದು ಕೊಡುವುದರ ಜೊತೆಗೆ ಭಾರತೀಯ ಕಲಾ ಕೌಶಲ ಹಾಗೂ ಶಿಲ್ಪಕಲಾ ಚಾತುರ್ಯದ ಪ್ರತೀಕವಾಗಿದೆ.

ಗರ್ಭಗುಡಿಯು ಕಮಲದಳದೋಪಾದಿಯಲ್ಲಿದ್ದು ಮೇಲ್ಭಾಗದ ಗೋಪುರವು ಉತ್ತರ ದೇಶದ ದೇವಸ್ಥಾನದ ಮಾದರಿಯಂತೆ ಕಂಡು ಬರುವುದಲ್ಲದೆ, ಗೋಪುರದ ಪ್ರತಿಯೊಂದು ಅಂತಸ್ತಿನಲ್ಲಿಯೂ ಕಪ್ಪು ಶಿಲೆಯಿಂದ ಮಾಡಲ್ಪಟ್ಟ ವಿಷ್ಣುವಿನ ಅನಂತ ಅವತಾರಗಳನ್ನು ಚಿತ್ರಿರುವುದನ್ನು ಕಾಣಬಹುದು. ಇವುಗಳಲ್ಲಿ ಬಹುಮುಖ್ಯವಾದವುಗಳೆಂದರೆ ವಿಷ್ಣುವಿನ ದಶಾವತಾರ ವರ್ಣನೆ, ಶ್ರೀನಿವಾಸ ಕಲ್ಯಾಣ ಹಾಗೂ ಕೃಷ್ಣಲೀಲೆಯ ಕೆಲವು ಅಸಾಧಾರಣ ಕಲಾಕೃತಿಗಳು. ಅತ್ಯಂತ ನಾಜೂಕಿನಿಂದ ಹಾಗೂ ನುಣುಪಾದ ಕಲ್ಲಿನಲ್ಲಿ ಕೌಶಲ್ಯದಿಂದ ತಳಪಾಯದಿಂದ ಹಿಡಿದು ಗೋಪುರದ ತುದಿಯವರೆಗೂ ಜೋಡಿಸಿ ಕಟ್ಟಲಾಗಿರುವ ಕಲ್ಲುಗಳ ಮಧ್ಯದಲ್ಲಿ ಈ ಕಪ್ಪು ಕಲ್ಲಿನ ಕಲಾ ಕೃತಿಗಳನ್ನು ಕೂಡಿಸಿರುವುದು. ಈ ದೇವಸ್ಥಾನವನ್ನು ಕಟ್ಟುವ ಕಾಲದಲ್ಲಿದ್ದ ತಾಂತ್ರಿಕ ಮುನ್ನಡೆಯ ಪ್ರತೀಕವಾಗಿದೆ.

ಏಕ ಶಿಲಾ ಶಿಲ್ಪ :— ಗರ್ಭಗುಡಿಯ ಮೇಲ್ಭಾಗದ ಬಾಗಿಲಿನಲ್ಲಿ ಅಮೃತ ಶಿಲೆಯಿಂದ ಕಡೆಯಲ್ಪಟ್ಟ ಶ್ರೀ ರಾಮ ಪಟ್ಟಾಭಿಷೇಕದ ಶಿಲ್ಪವನ್ನು ಕಾಣಬಹುದು. ಶ್ರೀ ರಾಮ, ಲಕ್ಷ್ಮಣ, ಭರತ, ಶತ್ರುಘ್ನ, ಸೀತಾ ದೇವಿ ಹಾಗೂ ವಶಿಷ್ಠ ಮಹರ್ಷಿಗಳಿಂದ ಕೂಡಿದ ಈ ಶಿಲ್ಪವು ಒಂದೇ ಕಲ್ಲಿನಿಂದ ನಿರ್ಮಿತವಾಗಿದೆ.

ಗರ್ಭಗುಡಿಯ ಒಳಭಾಗದಲ್ಲಿ ಸುಮಾರು ಎರಡು ಅಡಿ ಎತ್ತರದ ಪ್ರಾಣದೇವರ ವಿಗ್ರಹವಿದೆ. ಈಗ್ಗೆ ಸುಮಾರು ನೂರು ವರ್ಷಗಳ ಹಿಂದೆ ಭಗವತ್ ಪ್ರೇರಣೆಯಂತೆ ಶ್ರೀ ಕೃಷ್ಣಮೂರ್ತಿ ಪೂರ್ಣಯ್ಯನವರ ಅವಗಾಹನೆಗೆ ಈ ಪ್ರಾಣದೇವರು ಬರಲಾಗಿ ಅದೇ ಸ್ಥಳದಲ್ಲಿಯೇ ಕಲಾಪೂರ್ಣವಾದ ದೇವಸ್ಥಾನವನ್ನು ನಿರ್ಮಿಸಿದರು. ಶ್ರೀಯುತರು ದಿವಾನ್ ಪೂರ್ಣಯ್ಯನವರ ವಂಶಜರು. ಕಲಾಸಿರಿತನ ದೇವಸ್ಥಾನವು ಪುಟ್ಟದಾದರೂ ಬಹು ಸುಂದರ

ವಾಗಿದೆ. ಗಾಳಿ ಬೆಳಕುಗಳ ವ್ಯವಸ್ಥೆಗಾಗಿ ಮಾಡಲಾಗಿರುವ ಕಿಟಕಿಗಳೂ ಸಹಾ ಕಲಾಪೂರ್ಣವಾಗಿದ್ದು ರಾಮಾಯಣದ ಒಂದೊಂದು ಭಾಗವನ್ನು ಒಂದೊಂದು ಕಿಟಕಿಯು ಸಾರುತ್ತಿದೆ. ಇಲ್ಲಿನ ಪ್ರಾಣದೇವರು ಉದ್ಭವ ಮೂರ್ತಿ ಎಂದು ಪ್ರತೀತಿ.

ಬಲಭಾಗದ ದ್ವಾರದಲ್ಲಿ, ಹೊರಭಾಗಕ್ಕೆ ಬಾಗಿಲಿನ ಮೇಲೆ ದ್ರೌಪದಿ ಸ್ವಯಂವರದ ಶಿಲ್ಪವಿದೆ. ದ್ರುಪದ ರಾಜನ ಆಸ್ಥಾನದಲ್ಲಿ ಗಾಂಢೀವಧಾರಿ ಯಾದ ಅರ್ಜುನನು ಮತ್ಸ್ಯ ಯಂತ್ರವನ್ನೂ ಭೇದಿಸಲು ಉದ್ಯುಕ್ತನಾಗಿರು ವಿಕೆ, ಅದನ್ನು ಕಾತುರತೆಯಿಂದ ಆಗತಾನೆ ಅಂಬಾರಿಯಿಂದ ಇಳಿದು ಬಂದು ಕರದಲ್ಲಿ ಪುಷ್ಪಮಾಲೆಯನ್ನು ಹಿಡಿದುಕೊಂಡು ತನ್ನ ಪರಿವಾರದೊಡಗೂಡಿ ವೀಕ್ಷಿಸುತ್ತಿರುವ ದ್ರೌಪದಿ ದೇವಿಯವರು ಇವುಗಳನ್ನು ಕೆತ್ತಿರುವ ಈ ಶಿಲ್ಪವು ಮಹಾಭಾರತದ ದ್ರೌಪದಿ ಸ್ವಯಂವರದ ರಸಘಟ್ಟವನ್ನು ನೆನಪಿಗೆ ತರುತ್ತದೆ.

ಎಡಭಾಗದ ಕಿಟಕಿಯಲ್ಲಿ ಗೋಪಾಲಕೃಷ್ಣ ಮತ್ತೊಂದರಲ್ಲಿ ಶೇಷಶ ಯನ ವಿಷ್ಣು ಹಾಗೂ ವಿಷ್ಣುವಿನ ನಾಭಿ ಕಮಲದಿಂದ ಉದ್ಭವರಾದ ಬ್ರಹ್ಮದೇವರು ವಿಷ್ಣುವಿಗೆ ಕೈ ಮುಗಿದುಕೊಂಡು ಪ್ರಾರ್ಥನೆ ಮಾಡುತ್ತಿರುವ ಕೆತ್ತನೆಯ ಕೆಲಸವು ಅತಿ ಸೂಕ್ಷ್ಮ ಹಾಗೂ ಗೌಣ.

ಬಲಭಾಗದಲ್ಲಿ ಪ್ರಾಣದೇವರು ಸೀತಾದೇವಿಯವರಿಗೆ ಅಂಗುಲಿ ಪ್ರಧಾನ ಮಾಡುತ್ತಿರುವುದು ಹಾಗೂ ಅವರ ಪಕ್ಕದಲ್ಲಿ ರಾಮದೇವರು ಸೀತಾ ನ್ವೇಷಣೆಗಾಗಿ ಹನುಮಂತನನ್ನು ಕಳುಹಿಸುತ್ತಿರುವ ದೃಶ್ಯಗಳು ರಾಮಾಯಣದ ಅತಿ ಮುಖ್ಯವಾದ ಘಟನೆಯನ್ನು ನೆನಪು ಮಾಡಿಕೊಡುತ್ತದೆ.

ಗರ್ಭಗುಡಿಯ ಹಿಂಭಾಗದಲ್ಲಿ ಭೀಮ ಮತ್ತು ದುರ್ಯೋಧನರ ಕಾಳಗ ಅನೇಕ ರಾಕ್ಷಸಾದಿಗಳನ್ನು ಭೀಮಸೇನರು ಸಂಹರಿಸುತ್ತಿರುವುದು ಹಾಗೂ ಪ್ರಾಣದೇವರು ರಾಕ್ಷಸರನ್ನು ಸಂಹರಿಸುತ್ತಿರುವಿಕೆ,ಭೀಮಸೇನರು ದುರ್ಯೋಧನ ನನ್ನು ಎಷ್ಟೇ ವಿಧವಾಗಿ ಸಂಹರಿಸಲೆತ್ನಿಸಿದರೂ ಪ್ರಾಣ ಹೋಗದ್ದನ್ನು ಕಂಡು ಶ್ರೀಕೃಷ್ಣನ ಮೊರೆಹೋಗುವಿಕೆ, ಕೃಷ್ಣನ ಸೂಚನೆಯಿಂದಾಗಿ

ದುರ್ಯೋಧನನ ತೊಡೆಯನ್ನು ಒಡೆದು ದುರ್ಯೋಧನನ ಸಂಹಾರ ಇವು ಬಹು ಮುಖ್ಯವಾಗಿದೆ.

ಪೂರ್ವಾಭಿಮುಖವಾಗಿ ಹೊರಭಾಗಕ್ಕೆ ಬದರೀಕಾಶ್ರಮದಲ್ಲಿ ಶ್ರೀ ವೇದವ್ಯಾಸ ಮಹರ್ಷಿಗಳು ಶ್ರೀ ಮದಾನಂದಾ ತೀರ್ಥ ಭಗವತ್ ಪಾದರಿಗೆ ದರ್ಶನಾನುಗ್ರಹ ಮಾಡಿರುವುದು. ಅಲ್ಲಿಂದ ಮುಂದೆ ಹೋದಂತೆ ರಾಮಾಯಣದ ಮತ್ತೊಂದು ಘಟನೆಯನ್ನು ರೂಪಿಸುವ ಚಿತ್ರವನ್ನು ಕಾಣಬಹುದು. ಶ್ರೀರಾಮಚಂದ್ರನು ರಾವಣನನ್ನು ಸಂಹಾರ ಮಾಡಿದ ಮೇಲೆ ಸೀತಾ ಪರಿಗ್ರಹವಾಗಿ ಪುಷ್ಪಕ ವಿಮಾನದಲ್ಲಿ ಅತಿ ತ್ವರತೆಯಿಂದ ಅಯೋಧ್ಯೆಗೆ ಬರುತ್ತಿರುವಿಕೆ, ಹನ್ನೆರಡು ವರ್ಷ ಅವಧಿಯು ಮುಗಿದರೂ ಸಹಾ ರಾಮಚಂದ್ರನು ಬಾರದಿದ್ದನ್ನು ಕಂಡು ದುಃಖಿತನಾದ ಭರತನು ಅಗ್ನಿ ಪ್ರತಿಷ್ಠೆ ಮಾಡಿ ದೇಹವನ್ನು ತ್ಯಜಿಸಲು ಸಿದ್ಧನಾಗಿರುವಿಕೆ, ಆಗ ಪ್ರಾಣದೇವರ ಮುಖಾಂತರ ಶ್ರೀರಾಮಚಂದ್ರನು ಬರುತ್ತಿರುವ ಸುದ್ದಿಯನ್ನು ಕೇಳಿ ಹರ್ಷಿತನಾದ ಭರತನು ತನ್ನ ಪರಿವಾರದೊಡಗೂಡಿ ಶ್ರೀರಾಮಚಂದ್ರನ ಆಗಮನವನ್ನೇ ಕಾತುರದಿಂದ ಎದುರು ನೋಡುತ್ತಿರುವಿಕೆ, ಇತ್ಯಾದಿ ವಿಶೇಷಗಳನ್ನೊಳಗೊಂಡ ಈ ಚಿತ್ರವು ಅತಿ ಸೂಕ್ಷ್ಮ ಹಾಗೂ ಶಿಲ್ಪಿಯ ಕಲಾ ಕೌಶಲದ ಪ್ರತೀಕವಾಗಿದೆ.

**ಪುರಾಣಗಳ ನೆನಪು** :— ಅಲ್ಲಿಂದ ಮುಂದೆ ಕ್ರಮವಾಗಿ ರಾಮಾಯಣದ ಕಥಾಭಾಗಗಳಾದ ಸೀತಾದೇವಿಯರ ಅಶೋಕ ವನವಾಸ, ಅಂಗುಲಿ ಪ್ರಧಾನ ಮಾಡಲು ಸಮಯವನ್ನು ಕಾಯುತ್ತಾ ಮರದ ಮೇಲೆ ಕುಳಿತಿರುವ ಹನುಮಂತ, ಲಕ್ಷ್ಮಣ ದೇವರು ಮೂರ್ಛೆಗೊಂಡಾಗ ಸಂಜೀವಿನಿ ಪರ್ವತವನ್ನು ಪ್ರಾಣದೇವರು ತರುತ್ತಿರುವಿಕೆ, ಮಹಾಭಾರತದ ಸೌಗಂಧಿಕಾ ಪುಷ್ಪದ ಪ್ರಕರಣದಲ್ಲಿ ಭೀಮ ಹಾಗೂ ಆಂಜನೇಯರ ಸಮಾಗಮ, ಶ್ರೀರಾಮ ದೇವರನ್ನು ಪ್ರಾಣದೇವರು ಹೆಗಲ ಮೇಲೆ ಕೂಡಿಸಿಕೊಂಡು ಹೋಗುತ್ತಿರುವಿಕೆ, ಅಶೋಕ ವನವಾಸ ಕಾಲದಲ್ಲಿ ಶ್ರೀರಾಮದೇವರ ಅಂಗುಲಿ ಪ್ರಧಾನ ಮಾಡಿ, ರಾವಣನ ಕುಲವನ್ನು ಧ್ವಂಸ ಮಾಡಲು ಕಾರಣರಾದ ಶ್ರೀ ಪ್ರಾಣದೇವರಿಗೆ ಸೀತಾದೇವಿಯರು ಮಾತೃವಾತ್ಸಲ್ಯ ಪೂರ್ಣರಾಗಿ ಶ್ರೀರಾಮ

ಚಂದ್ರ ದೇವರು ತಮಗಾಗಿ ಕೊಟ್ಟಿದ್ದ ವಜ್ರಖಚಿತವಾದ ಹಾರವನ್ನು "ಚಿರಂಜೀವಿಯಾಗಲೋ ಚಿಣ್ಣ ನೀನು" ಎಂದು ಆಶೀರ್ವಾದ ಮಾಡಿ ಸ್ವಹಸ್ತದಿಂದ ತಾವೇ ಪ್ರಾಣದೇವರಿಗೆ ಧಾರಣ ಮಾಡುತ್ತಿರುವುದು ಇತ್ಯಾದಿ ಅನೇಕಾನೇಕ ಸೂಕ್ಷ್ಮ ಹಾಗೂ ಪುರಾಣ ಹಿನ್ನಲೆಯುಳ್ಳ ಪ್ರಮೇಯ ಭಾಗಗಳನ್ನು ಸೂಚಿಬೀಡಿನ ಕಲಾಕೃತಿಗಳಿಗೆ ಸಮನಾಗಿದ್ದ ಬೆಂಗಳೂರು ನಗರದಲ್ಲಿ ಕಾಣಬಹುದಾದಂತಹ ಕೆಲವೇ ಅಸಾಧಾರಣ ಶಿಲ್ಪಕಲಾ ಕೃತಿಗಳಲ್ಲಿ ಮೊಟ್ಟ ಮೊದಲನೆಯದು ಎಂದು ಹೇಳಬಹುದು.

ಹೊರನೋಟಕ್ಕೆ ಜೈನ ದೇವಸ್ಥಾನದಂತೆ ಕಾಣ ಬರುವ ಚಿಕ್ಕದಾದವರೂ ಅತ್ಯಂತ ಚೊಕ್ಕವಾಗಿ ನಿರ್ಮಿತವಾಗಿರುವ ಈ ದೇವಸ್ಥಾನವು ಕಲಾದೃಷ್ಟಿಯಿಂದಲೂ ಹಾಗೂ ಪಾರಮಾರ್ಥಿಕ ದೃಷ್ಟಿಯಿಂದಲೂ ವೀಕ್ಷಣಾರ್ಹವಾಗಿದೆ.

## ತುಳಸೀ ತೋಟದ ಬೆಣ್ಣೆ ಕೃಷ್ಣ

ನಗರದ ಪ್ರಸಿದ್ಧ ಹಾಗೂ ಪುರಾತನ ದೇವಸ್ಥಾನಗಳಲ್ಲಿ ಬಳೆಪೇಟೆ ಸಮೀಪದಲ್ಲಿರುವ ತುಳಸೀ ತೋಟದ ಶ್ರೀ ಕೃಷ್ಣ ದೇವಸ್ಥಾನವೂ ಗಮನಾರ್ಹವಾದುದು.

ಹಿಂದೆ ಈಗಿನ ಚಿಕ್ ಲಾಲ್‌ಬಾಗಿನ ಪ್ರದೇಶ ಗದ್ದೆಗಳಿಂದ ಆವೃತವಾಗಿತ್ತು. ಇದರ ಒಂದು ಭಾಗದಲ್ಲಿ ತುಳಸೀ ವನವನ್ನು ಮಾಡಲಾಗಿತ್ತು. ಈ ಕಾರಣದಿಂದ ಈ ಪ್ರದೇಶಕ್ಕೆ ತುಳಸಿ ತೋಟ ಎಂದು ಕರೆಯುವ ವಾಡಿಕೆ.

ದೇವಸ್ಥಾನವನ್ನು ವಿಶಾಲವಾಗಿ ನಿರ್ಮಾಣ ಮಾಡಿದ್ದು, ಇಲ್ಲಿನ ಮೂಲ ದೇವರಾದ ಶ್ರೀ ವೇಣುಗೋಪಾಲಸ್ವಾಮಿಯ ವಿಗ್ರಹವು ಸುಮಾರು ಎರಡು ಅಡಿ ಎತ್ತರವಿದ್ದು ಅತ್ಯಂತ ಚಿತ್ತಾಕರ್ಷಕವಾಗಿದೆ. ಈ ಕೃಷ್ಣನನ್ನು ಬೆಣ್ಣೆ ತಾಂಡವ ಕೃಷ್ಣ ಎಂದು ಕರೆಯುತ್ತಾರೆ. ಕೈಯಲ್ಲಿ ಬೆಣ್ಣೆಯನ್ನು ಇಟ್ಟುಕೊಂಡು ನೃತ್ಯ ಭಂಗಿಯಲ್ಲಿ ನಿಂತಿರುವ ಕೃಷ್ಣಸ್ವಾಮಿಯ ಮೂರ್ತಿಯನ್ನು ಆಳಿದ ಮೈಸೂರು ಮಹಾ ಪ್ರಭುಗಳಾದ ಶ್ರೀ ಚಾಮರಾಜ ಒಡೆಯರ ಆದೇಶದ ಮೇರೆಗೆ ಒಂದು ಬೆಣ್ಣೆ ಕೃಷ್ಣನನ್ನು ಒಂದು ಅಂಬೆಗಾಲು ಕೃಷ್ಣನನ್ನು ಮತ್ತು ರುಕ್ಮಿಣಿದೇವಿಯವರ ವಿಗ್ರಹವನ್ನು ಮಾಡಿಸಿದರೆಂದೂ,

ಅಂಬೆಗಾಲಿನ ಕೃಷ್ಣನನ್ನು ಮೈಸೂರು ಅರಮನೆಯಲ್ಲಿ ಪ್ರತಿಷ್ಠಾಪಿಸಲಾಗಿ ಬೆಣ್ಣೆಕೃಷ್ಣ ಹಾಗೂ ರುಕ್ಮಿಣಿ ದೇವಿಯರ ವಿಗ್ರಹಗಳನ್ನು ಬೆಂಗಳೂರಿನ ತುಳಸೀ ತೋಟವಲ್ಲಿ ಪ್ರತಿಷ್ಠಾಪಿಸಲಾಯಿತು.

**ಶಾಸನದ ಉಲ್ಲೇಖ:** ಮೈಸೂರು ಅರಮನೆಯಿಂದ ಈ ದೇವರಿಗೆ ವಿಶೇಷ ಆಭರಣಗಳನ್ನು ನೀಡಲಾಗಿದೆ. ಈ ಆಭರಣಗಳನ್ನು ಹೊತ್ತು ತಂದ ಒಂದು ಪಠಾರಿಯನ್ನು ಈ ದೇವಸ್ಥಾನದಲ್ಲಿ ನೋಡಬಹುದಾಗಿದೆ. ಬಲಭಾಗದ ದ್ವಾರವಲ್ಲಿ ಕಂಡು ಬರುವ ಶಾಸನದಂತೆ ತಾ॥ 20-10-1844 ರಲ್ಲೂ ಕೋಧಿಕೃತ ನಾಮಸಂವತ್ಸರದ ಕಾರ್ತೀಕ ಶುದ್ಧ ಬುಧವಾರದಂದು ಕೃಷ್ಣನನ್ನು ಪ್ರತಿಷ್ಠಾಪಿಸಲಾಯಿತೆಂದು ತಿಳಿದು ಬರುತ್ತದೆ

ಕೃಷ್ಣ ದೇವಸ್ಥಾನದ ಬಲ ಭಾಗಕ್ಕೆ ಮತ್ತೊಂದು ಉಪ ದೇವಸ್ಥಾನ ವನ್ನು ನಿರ್ಮಿಸಲಾಗಿದ್ದು ಶ್ರೀರಾಮ, ಲಕ್ಷ್ಮಣ, ಸೀತಾದೇವಿಯರ ಸುಮಾರು ನಾಲ್ಕು ಅಡಿಗಳ ಕಪ್ಪುಶಿಲೆಯ ವಿಗ್ರಹವನ್ನು ಇಲ್ಲಿ ಪ್ರತಿಷ್ಠಾಪಿಸಲಾಗಿದೆ.

ತ್ರಿಭಂಗಿಯಹಾಗಿ, ಕೋದಂಡಪಾಣಿಯಾಗಿ ಪೂರ್ವಾಭಿಮುಖವಾಗಿ ನಿಂತಿರುವ ಈ ವಿಗ್ರಹಗಳು ಅತ್ಯಂತ ಮನೋಹರವಾಗಿವೆ. ಈ ರಾಮದೇವರ ದೇವಸ್ಥಾನವನ್ನು 1908ನೇ ಇಸವಿ ಫೆಬ್ರವರಿ ನಾಲ್ಕರಂದು ನಿರ್ಮಿಸಲಾ ಯಿತು. ಈ ದೇವಸ್ಥಾನದ ನಿರ್ಮಾಣಕ್ಕಾಗಿ ಶ್ರೀಯುತ ರಾವ್ ಬಹದ್ದೂರ್ ಗರುಡಾಚಾರ್ ಎಂಬುವರ ಶ್ರದ್ಧಾ ಭಕ್ತಿಗಳೇ ಕಾರಣವಾಗಿದೆ.

ರಾಮದೇವರ ದೇವಸ್ಥಾನಕ್ಕೆ ಬಲಭಾಗದಲ್ಲಿರುವ ಪೂರ್ವಾಭಿಮುಖ ವಾದ ಗುಡಿಯಲ್ಲಿ ರುಕ್ಮಿಣಿ ದೇವಿಯರ ವಿಗ್ರಹವೂ ಹಾಗೂ ಅದರ ವಿರಡೂ ಪಕ್ಕಗಳಲ್ಲಿ ಆಂಡಾಳ್ ಸನ್ನಿಧಿ ಹಾಗೂ ಶ್ರೀ ವೈಷ್ಣವ ಮಹಾಚಾರ್ಯರ ವಿಗ್ರಹ ಗಳನ್ನು ಕಾಣಬಹುದು.

ರುಕ್ಮಿಣಿ ದೇವಿಯರ ವಿಗ್ರಹವು ಮೂಲ ಗೋಪಾಲಕೃಷ್ಣದೇವರ ವಿಗ್ರಹದಂತೆಯೇ ಸುಂದರವಾಗಿವೆ. ಎಡ ಭಾಗಕ್ಕೆ ದಕ್ಷಿಣಾಭಿಮುಖವಾಗಿ ಇರುವ ಗುಡಿಗಳಲ್ಲಿ ಆಂಜನೇಯ ಮತ್ತು ಆಳ್ವಾರುಗಳ ವಿಗ್ರಹಗಳಿವೆ.

ರಾಮೋತ್ಸವ ಸಂದರ್ಭದಲ್ಲಿ ಇಲ್ಲಿ ವಿಶೇಷ ಪೂಜಾದಿಗಳು ನಡೆಯುತ್ತವೆ.

**ವಿಶೇಷ ಐತಿಹ್ಯ :** ಶ್ರೀರಾಮದೇವರ ದೇವಸ್ಥಾನದಲ್ಲಿರುವ ಉತ್ಸವ ಮೂರ್ತಿಗೆ ವಿಶೇಷ ಐತಿಹ್ಯವಿದೆ.

ತುಳಸೀರಾಮದಾಸ್ ಎಂಬ ಸಂತರೊಬ್ಬರು ಈ ರಾಮದೇವರ ವಿಗ್ರಹ ಗಳನ್ನು ತಮ್ಮ ಸಂಗಡ ಸದಾ ಇಟ್ಟುಕೊಂಡು ಶ್ರೀರಾಮಾಯಣ ಕಥಾಕ್ಷೇಪ ವನ್ನು ಮಾಡುತ್ತಿದ್ದು ಆಸೇತು ಹಿಮಾಚಲಪರ್ಯಂತ ಸಂಚರಿಸಿ ಜನತೆಗೆ ರಾಮಾಯಣ ಕಥಾಶ್ರವಣದ ವಿಶೇಷ ಪರಿಚಯವನ್ನು ಮಾಡಿಕೊಡುತ್ತಿದ್ದರು. ಇವರಿಗೆ ಶ್ರೀರಾಮದೇವರ ದೇವಸ್ಥಾನವನ್ನು ಕಟ್ಟಿಸಬೇಕೆಂಬ ಅಪೇಕ್ಷೆಯಾಗಿ ಧನಸಂಗ್ರಹಣೆಗೋಸ್ಕರ ಈ ರಾಮದೇವರ ವಿಗ್ರಹದ ಸಮೇತ ಮೆರವಣಿಗೆ ಹೋಗಿ ಧನಸಂಗ್ರಹಣೆ ನಡೆಸುತ್ತಿರುವಾಗ, ಮೈಸೂರಿನಲ್ಲಿ ಒಮ್ಮೆ ಇವರ ಪ್ರಯತ್ನವನ್ನು ಕಂಡು ಕರುಬಿದ ಕೆಲವು ವ್ಯಕ್ತಿಗಳು ಇವೆಲ್ಲವೂ ಕೇವಲ ಡಂಭಾ ಚಾರವೆಂದು ಉದರ ನಿರ್ವಹಣೆಗಾಗಿ ದೇವರ ಹೆಸರಿನಲ್ಲಿ ಹಣ ಸಂಪಾದನೆ ಮಾಡುತ್ತಿರುವರೆಂದು ಮೈಸೂರು ಅರಸರಿಗೆ ದೂರು ಕೊಟ್ಟಾಗ, ಅರಸರು ಇವರ ಸತ್ಯಾಂಶಗಳನ್ನು ಗಮನಿಸದೆ ಧನ ಸಂಗ್ರಹಣೆ ಮಾಡಕೂಡದೆಂದು ಕಟ್ಟಪ್ಪಣೆ ಮಾಡಿದರು.

ರಾಮದಾಸರು ಅರಸರ ಈ ಅಡಚಣೆಗೆ ದುಃಖಿತರಾಗದೆ ಅದೇ ಸ್ಥಳದಲ್ಲಿ ಕುಳಿತು ಅನೇಕಾನೇಕ ಶ್ರೀರಾಮದೇವರ ಕೀರ್ತನೆಗಳನ್ನು ರಚಿಸಿ, ಹಾಡುತ್ತಿರು ತ್ತಾರೆ. ಈ ಘಟನೆ ಮೈಸೂರು ಅರಮನೆಯ ಕುಲಗುರುಗಳಾದ ಪರಕಾಲ ಮಠಾಧೀಶ್ವರರಿಗೆ ತಿಳಿದು ಅವರು ಮಹಾರಾಜರಿಗೆ ನಿರೂಪ ಕಳಿಸಿ, ರಾಮ ದಾಸರು ಶ್ರೀರಾಮನ ಭಗವಾನ್ ಭಕ್ತರೆಂದು ಹಾಗೂ ಪರಕಾಲ ಮಠದ ಶಿಷ್ಯರೆಂದೂ, ಉತ್ತಮ ಕಥಾ ಕಾಲಕ್ಷೇಪ ನಡೆಸಿ ಜನರನ್ನು ಭಕ್ತಿ ಮಾರ್ಗದ ಕಡೆಗೆ ಕೊಂಡೊಯ್ಯುವವರೂ ಆಗಿದ್ದು ಅವರ ಕಾರ್ಯಗಳಿಗೆ ಅಡ್ಡಿ ಉಂಟು ಮಾಡಬಾರದೆಂದು ತಿಳಿಸಿದರು. ರಾಜ ಗುರುಗಳ ಈ ಆದೇಶದಂತೆ ಶ್ರೀ ಕೃಷ್ಣ ರಾಜ ಒಡೆಯರ್ ಬಹದ್ದೂರ್ ಅವರು ಶ್ರೀ ರಾಮದಾಸರಿಗೆ ಆದ ಅನಾನು ಕೂಲಕ್ಕೆ ಮರುಗಿ ಅವರಿಗೆ ವಿಶೇಷವಾದ ಮರ್ಯಾದೆಗಳನ್ನು ಸಲ್ಲಿಸಿದುದರ ಜೊತೆಗೆ ಅರಮನೆಯಲ್ಲಿ ಇವರ ಕಥಾಕಾಲಕ್ಷೇಪ ನಡೆಯಬೇಕೆಂದು ಕೇಳಿ ಕೊಂಡರು.

ತುಳಸಿ ರಾಮದಾಸರು ನಡೆಸುತ್ತಿದ್ದ ಕಥಾಕಾಲಕ್ಷೇಪದಲ್ಲಿ ಒಂದು ವಿಶೇಷ ಸಂಪ್ರದಾಯವಿತ್ತು. ಸೂರ್ಯಾಸ್ತವಾದ ನಂತರ ಪ್ರಾರಂಭವಾಗುತ್ತಿದ್ದ ಕಥಾಕಾಲಕ್ಷೇಪವು ಮಾರನೆಯ ದಿನ ಬೆಳಗ್ಗೆ ಸೂರ್ಯೋದಯದ ನಂತರ ಗರುಡದೇವನ ದರ್ಶನ ಮಾಡಿ ಮಂಗಳ ಹಾಡುತ್ತಿದ್ದರು. ಹೀಗಾಗಿ ರಾಮದಾಸರು ಅರಮನೆಯಲ್ಲಿ ಕಥಾಕಾಲಕ್ಷೇಪವನ್ನು ಮಾಡಲು ಒಪ್ಪಲಿಲ್ಲ. ಆದರೆ ಮಹಾಪ್ರಭುಗಳು ಈ ನಿಯಮಕ್ಕೆ ತಾವೂ ಬದ್ಧರೆಂದು ತಿಳಿಸಿದ ಮೇಲೆ, ತಮ್ಮ ಸಂಪ್ರದಾಯದಂತೆಯೇ ರಾಮದಾಸರು ಕಥಾಕಾಲಕ್ಷೇಪ ಮಾಡಿ ಅರಸರ ಮನಸ್ಸು ಸಂತೋಷಪಡಿಸಿದರು.

ತುಳಸಿ ರಾಮದಾಸರು ತಮ್ಮ ಅಂತ್ಯ ಕಾಲದಲ್ಲಿ ಈ ತುಳಸೀ ತೋಟದ ದೇವಸ್ಥಾನದಲ್ಲಿ ಕಳೆದು ತಮ್ಮಲ್ಲಿದ್ದ ವಿಗ್ರಹಗಳನ್ನು ಈ ದೇವಸ್ಥಾನಕ್ಕೆ ನೀಡಿರುತ್ತಾರೆ.

ಉತ್ತರದ ಭದ್ರಾಚಲ ರಾಮದಾಸರಂತೆ ದಕ್ಷಿಣದ ಈ ತುಳಸಿ ರಾಮದಾಸರೂ ಪ್ರಖ್ಯಾತರಾಗಿದ್ದು, ರಾಮೋತ್ಸವ ಪ್ರಾರಂಭಿಸಿದವರಲ್ಲಿ ಮೊದಲಿಗರಾಗಿದ್ದಾರೆ.

## ಸುಗ್ರೀವ ದೇವಸ್ಥಾನ

ಸುಗ್ರೀವನಿಗೆ ದೇವಸ್ಥಾನ ನಿರ್ಮಿಸಿರುವುದು ಭಾರತದ ಯಾವುದೇ ಮೂಲೆಯಲ್ಲಿ ಕಾಣ ಬರುವುದಿಲ್ಲ. ಆದರೆ ಬೆಂಗಳೂರಿನ ಬಳೇಪೇಟೆ ಬಳಿ ಈ ಸುಗ್ರೀವನಿಗಾಗಿ ದೇವಸ್ಥಾನವನ್ನು ನಿರ್ಮಿಸಲಾಗಿದೆ.

ಈ ಸುಗ್ರೀವ ದೇವಸ್ಥಾನದ ಬಗ್ಗೆ ಹೆಚ್ಚಿನ ಮಾಹಿತಿ ಕಾಣಸಿಗದಿದ್ದರೂ, ದೇವಸ್ಥಾನದ ಗರುಡಗಂಬವನ್ನು ಗಮನಿಸಿದಾಗ ಇದು ಪುರಾತನ ದೇವಸ್ಥಾನವೆಂದು ಊಹಿಸಬಹುದಾಗಿದೆ. ಈ ಸುಗ್ರೀವದೇವರ ವಿಗ್ರಹವು ನಗರದ ಕೆಂಪಾಂಬುಧೀ ಕೆರೆಯಲ್ಲಿ ದೊರೆಯಿತೆಂದು ತಿಳಿಯ ಬರುತ್ತದೆ. ಸುಮಾರು ಆರು ಅಡಿ ಎತ್ತರವಿರುವ ಈ ಸುಗ್ರೀವ ವಿಗ್ರಹವು ಪ್ರಾಣದೇವರ ವಿಗ್ರಹದಂತೆಯೇ ಇದೆ. ಆದರೆ ಇಲ್ಲಿನ ಮುಖ್ಯ ವ್ಯತ್ಯಾಸವೆಂದರೆ ಕೋರೆಹಲ್ಲುಗಳು. ಇಲ್ಲಿ ಚೈತ್ರ ಬಹುಳ ಪಂಚಮಿಯಂದು ರಥೋತ್ಸವವು ನಡೆಯುತ್ತದೆ.

ಅತ್ಯಂತ ಅಪೂರ್ವ ಹಾಗೂ ಪೌರಾಣಿಕ ಘಟನೆಯ ಪ್ರತೀಕವಾಗಿರುವ ಈ ಸುಗ್ರೀವ ದೇವಸ್ಥಾನದ ಇತಿಹಾಸದ ಬಗ್ಗೆ ಸಂಶೋಧನೆಯು ಅಗತ್ಯ ಕಂಡುಬರುತ್ತದೆ.

## ಶ್ರೀ ನರಸಿಂಹಸ್ವಾಮಿ ದೇವಸ್ಥಾನ

ನಗರದ ಕೆಂಪೇಗೌಡ ಚೌಕದಿಂದ ಬಳೇಪೇಟೆಗೆ ಹೋಗುವ ಮಾರ್ಗದಲ್ಲಿ, ಬಲ ಭಾಗಕ್ಕೆ ಶ್ರೀ ನರಸಿಂಹಸ್ವಾಮಿ ದೇವಸ್ಥಾನವಿದೆ. ಇನ್ನೂರು ವರ್ಷಗಳಿಗೂ ಹಿಂದಿನದಾದ ಈ ದೇವಸ್ಥಾನದ ಮೂಲ ಮೂರ್ತಿಯ ಬಗ್ಗೆ ಒಂದು ದಂತಕಥೆ ಈ ರೀತಿಯಾಗಿದೆ.

ನಗರಕ್ಕೆ ಸಮೀಪದಲ್ಲಿರುವ ಬನ್ನೇರುಘಟ್ಟದಲ್ಲಿರುವ ಸುವರ್ಣಮುಖಿ ಜನ್ಮಸ್ಥಾನದಲ್ಲಿ ಅಂದರೆ ಸುವರ್ಣಮುಖಿಯಲ್ಲಿ ಈಗ ಕಂಡುಬರುವ ನದಿಯ ಪಾತ್ರವಾದ ಕೊಳವಲ್ಲಿ ಎರಡು ನರಸಿಂಹ ದೇವರ ವಿಗ್ರಹಗಳಿದ್ದವೆಂದು, ದೈವಭಕ್ತ ಮಹನೀಯರೊಬ್ಬರಿಗೆ ಸ್ವಪ್ನ ಮುಖೇನ ಈ ವಿಗ್ರಹಗಳಿರುವಿಕೆಯು ಗೋಚರವಾಗಿ, ಇವುಗಳನ್ನು ತೆಗೆಸಿ, ಒಂದು ವಿಗ್ರಹವನ್ನು ಬನ್ನೇರುಘಟ್ಟದ ಬೆಟ್ಟದ ಮೇಲೆ ಪ್ರತಿಷ್ಠಾಪಿಸಲಾಯಿತು. ಈ ಎರಡೂ ನರಸಿಂಹ ದೇವರ ವಿಗ್ರಹಗಳು ಒಂದೇ ರೀತಿಯ ಶಿಲ್ಪಕಲೆಯಿಂದ ಕೂಡಿದ್ದು ಈ ಮೇಲಿನ ಕಥೆಗೆ ಆಧಾರಪೂರಿತವಾಗಿದೆ.

ದೇವಸ್ಥಾನದ ಕಟ್ಟಡದ ಬಗ್ಗೆ ಅಂತಹ ಹೇಳಿಕೊಳ್ಳುವ ಯಾವುದೇ ಶಿಲ್ಪ ಸೌಂದರ್ಯಗಳಿಲ್ಲದಿದ್ದರೂ ಪ್ರಾಕಾರದಿಂದ ಕೂಡಿರುವ ಈ ದೇವಸ್ಥಾನದಲ್ಲಿ ಗರ್ಭಗುಡಿಯ ಮುಂಭಾಗದಲ್ಲಿ ಕಲ್ಲಿನ ಕಂಬಗಳಿಂದ ಕೂಡಿದ ಮಂಟಪವೊಂದಿದ್ದು ಮುಂಭಾಗವಲ್ಲಿ ಗರುಡಸ್ತಂಭವಿದೆ.

ಗರ್ಭಗುಡಿಯಲ್ಲಿ ಕಪ್ಪುಶಿಲೆಯ ನಾಲ್ಕು ಅಡಿ ಎತ್ತರವಿರುವ ಶ್ರೀ ಲಕ್ಷ್ಮೀ ನರಸಿಂಹಸ್ವಾಮಿಯ ವಿಗ್ರಹವು ಅತ್ಯಂತ ಆಕರ್ಷಕವಾಗಿದ್ದು ದೇವರನಾಮ ಪಾರ್ಶ್ವದ ತೊಡೆಯಮೇಲೆ ಲಕ್ಷ್ಮೀದೇವಿಯವರು ಕುಳಿತಿರುವುದನ್ನು ಕಾಣಬಹುದು.

ತಿರುಪ್ಪಾವಡಿ: ವೈಶಾಖ ಶುದ್ಧದಲ್ಲಿ, ಚಿತ್ತ- ಸ್ವಾತಿನಕ್ಷತ್ರಗಳ ಸಂಧಿಯ ಪರ್ವಕಾಲದಲ್ಲಿ ಶ್ರೀ ನರಸಿಂಹ ಜಯಂತಿಯ ದಿನ ಬ್ರಹ್ಮ ರಥೋತ್ಸವವು ಜರುಗುತ್ತದೆ. ಈ ಸಂದರ್ಭದಲ್ಲಿ ನಡೆಸುವ "ತಿರುಪ್ಪಾವಡಿ" ಎಂಬ ಉತ್ಸವವು ಅತ್ಯಂತ ಮಹತ್ತರವಾದುದು ಹಾಗೂ ವಿಶೇಷವಾದದ್ದಾಗಿದೆ. ಇವರ ವೈಶಿಷ್ಟ್ಯವೇನೆಂದರೆ ದೇವರ ಮುಂಭಾಗದಲ್ಲಿ ಅಂದರೆ ಗರ್ಭಗುಡಿಯ ಮುಂಭಾಗದಲ್ಲಿ ಇರುವ ಮಂಟಪದಲ್ಲಿ "ಪುಳಿಯೋಗರೆ" ಯ ಒಂದು ದೊಡ್ಡ ರಾಶಿಯನ್ನೇ ಹಾಕಿ ದೇವರಿಗೆ ನೈವೇದ್ಯ ಮಾಡಿ, ಪುಳಿಯೋಗರೆಯ ರಾಶಿ ಯಲ್ಲಿಯೂ ದೇವರ ಸನ್ನಿಧಾನವನ್ನು ಆವಾಹನೆ ಮಾಡಿ ಅವಕ್ಕೆ ವಿಶೇಷ ಪೂಜಾದಿಗಳು ನಡೆದ ಮೇಲೆ ನೆರೆದಿರುವ ಭಕ್ತಾದಿಗಳಿಗೆ ಆ ಪ್ರಸಾದವನ್ನು ಹಂಚುವ ಒಂದು ವಿಶೇಷ ಸಂಪ್ರದಾಯವು ಇಲ್ಲಿ ನಡೆದುಕೊಂಡು ಬಂದಿದೆ. ಬಹುಶಃ ಈ ವಿಧವಾದ ತಿರುಪ್ಪಾವಡಿ ಉತ್ಸವವು ಬೆಂಗಳೂರಿನ ಯಾವುದೇ ದೇವಸ್ಥಾನಗಳಲ್ಲಿ ಕಂಡುಬರುವುದಿಲ್ಲ.

ನರಸಿಂಹ ಜಯಂತಿಯಲ್ಲಿ ನಡೆಯುವ ಬ್ರಹ್ಮ ರಥೋತ್ಸವಕ್ಕೆ ಪೂರ್ವ ಭಾವಿಯಾಗಿ ಶಾಸ್ತ್ರೋಕ್ತವಾಗಿ ಧ್ವಜಾರೋಹಣಾದಿಗಳು ನಡೆಯುವುದರ ಜೊತೆಗೆ ಪ್ರತಿದಿನವೂ ದೇವರಿಗೆ ಬ್ರಹ್ಮರಥೋತ್ಸವ ಪರ್ಯಂತ ವಿಶೇಷ ಉತ್ಸ ವಾದಿಗಳು ನಡೆಯುತ್ತವೆ. ಇಲ್ಲಿ ನಡೆಯುವ "ಪೂಲಂಗಿ" ಸೇವೆಯು ಅತ್ಯಂತ ಮನೋಹರವಾದ ಉತ್ಸವಗಳಲ್ಲಿ ಒಂದಾಗಿದೆ. ಶ್ರೀ ಲಕ್ಷ್ಮೀನರಸಿಂಹದೇವರ ಮೂಲ ವಿಗ್ರಹವನ್ನು ಅಪಾದ ಮೌಳಿ ಪರ್ಯಂತ ವಿಧ ವಿಧವಾದ ಹೂವಿ ನಿಂದ ಬಹು ಸುಂದರವಾಗಿ ಅಲಂಕರಿಸುವ ಈ ವಿಶೇಷ ಸೇವೆಯು ತಿರುಪತಿಯ ಶ್ರೀನಿವಾಸ ದೇವರ ಪೂಲಂಗಿ ಸೇವೆಯ ನೆನಪನ್ನು ತಂದು ಕೊಡುವುದಲ್ಲದೆ, ಭಕ್ತಾದಿಗಳ ಮನಸ್ಸು ನಿರ್ಮಲವಾಗಿ ಸಾತ್ವಿಕತೆಯ ಹಾಗೂ ಆಸ್ತಿಕತೆಯು ಮನದಲ್ಲಿ ಉದ್ಭವಿಸಲು ಕಾರಣವಾಗಿದೆ.

## ಕಾಡು ಮಲ್ಲೇಶ್ವರ ಸ್ವಾಮಿ ದೇವಾಲಯ

ಬೆಂಗಳೂರಿನ ಮಲ್ಲೇಶ್ವರದ ಬಡಾವಣೆಯಲ್ಲಿರುವ ಶ್ರೀ ಮಲ್ಲಿಕಾರ್ಜುನ ಸ್ವಾಮಿಯವರ ದೇವಸ್ಥಾನವು ಅತ್ಯಂತ ಪುರಾತನವೂ ಹಾಗೂ ಚಾರಿತ್ರಿಕ ಘಟನೆಗಳಿಗೂ ಸಂಬಂಧ ಪಟ್ಟಂತಿದೆ. ಇಲ್ಲಿನ ದೇವಾಲಯಗಳ ಬಗ್ಗೆ ಪುರಾಣ

ಗಳಲ್ಲಿ ಯಾವ ಆಧಾರ ಕಾಣದಿದ್ದರೂ ಷಹಜಿ ಮಹಾರಾಜರ ಮಕ್ಕಳಾದ ಎಕ್ಕೋಜಿ ಅಥವಾ ವೆಂಕೋಜಿಯವರ ಕಾಲಕ್ಕೆ ಸಂಬಂಧಪಟ್ಟಂತಹ ಕೆಲವು ದಾಖಲೆಗಳು ಹಾಗೂ ಶಾಸನಗಳು ದೊರೆಯಲ್ಪಡುತ್ತವೆ.

ಹಿಂದೆ ಈ ಬೆಂಗಳೂರು ಪ್ರಾಂತ್ಯವು ಬಿಜಾಪುರ ಸುಲ್ತಾನರ ಆಡಳಿತಕ್ಕೆ ಒಳಪಟ್ಟು ಮರಾಠ ಸಂಸ್ಥಾಪಕನಾದ ಶಿವಾಜಿಯವರ ತಂದೆ ಷಹಜಿಯವರ ಜಹಗೀರಿಯಲ್ಲಿತ್ತು. ನಂತರದಲ್ಲಿ ಈ ಸ್ಥಳವು ಅವರ ಮಕ್ಕಳಾದ ಎಕ್ಕೋಜಿ ಯವರ ಪಾಲಿಗೆ ಬಂದು 1669ರ ಸುಮಾರಿಗೆ ಎಕ್ಕೋಜಿ ಮಹಾರಾಜರು ಬೆಂಗಳೂರಿಗೆ ಆಗಮಿಸಿದ್ದಾಗ ಕಾಡು ಮಲ್ಲೇಶ್ವರ ಸ್ವಾಮಿಯ ದರ್ಶನ ಪಡೆದು ಈ ದೇವಸ್ಥಾನದ ಪೂಜಾಕಾರ್ಯಗಳು ಆಚಂದ್ರಾರ್ಕವಾಗಿ ನಡೆಯುವಂತೆ ದೇವಸ್ಥಾನದ ಉತ್ತರಕ್ಕಿದ್ದ ಮೇದರನಿಂಗನಹಳ್ಳಿ ( ಈಗಿನ ತಾತಾ ವಿಜ್ಞಾನ ಮಂದಿರ ) ಗ್ರಾಮವನ್ನು ಕಾಡು ಮಲ್ಲೇಶ್ವರ ಸ್ವಾಮಿಗೆ ಸಮರ್ಪಿಸಿ ಅದಕ್ಕೆ ಸಾಕ್ಷಿಭೂತವಾಗಿ ದೇವಸ್ಥಾನದ ಬಲಭಾಗದ ಬಂಡೆಯ ಮೇಲೆ ಶಿಲಾಶಾಸನ ಬರೆಸಿದನು. ಇಂದಿಗೂ ಈ ಶಾಸನವನ್ನು ಕಾಣಬಹುದಾಗಿದೆ. ಈ ಶಿಲಾ ಶಾಸನವನ್ನು ಶಾಶ್ವತವಾಗಿ ಕಾಪಾಡಿಕೊಂಡು ಬರಲು ಒಂದು ಮಂಟಪವನ್ನು ಬಂಡೆಯ ಮೇಲೆ ಕಟ್ಟಲಾಗಿದೆ. ಈ ಶಿಲಾಶಾಸನದಲ್ಲಿ ಈ ರೀತಿ ಬರೆಯಲಾಗಿದೆ.

> "ಸೌಮ್ಯ ಸಂವತ್ಸರದ ಮಾರ್ಗಶಿರ ಶುದ್ಧ ಶ್ರೀಮತ್ ಮಲ್ಲಪುರದ ಮಲ್ಲಿಕಾರ್ಜುನದೇವರ ದೇವಸ್ಥಾನಕ್ಕೆ. ಮೆಕ್ಕೋಜಿರಾಯನ ಬೆಂಗಳೂರು ಮಹನಾಡು ಕೇಳಲಿಕ್ಕಾಗಿ ಮೇದರ ನಿಂಗನಹಳ್ಳಿಯ ಧರ್ಮಕ್ಕೆ ಕೊಟ್ಟನು. ಕೋಟಿ ಚಂದ್ರ ಸೂರ್ಯರು ಉಳ್ಳ ಕಾಲವು ಧರ್ಮಕ್ಕೆ ಕೊಟ್ಟನು. ಈ ಧರ್ಮಕ್ಕೆ ವಕ್ರ ಮಾಡಿ ದವರು ಕತ್ತೆಯು ಕಾಗೆಯು ಚಂಡಾಲರ ಜನ್ಮದಲ್ಲಿ ಹುಟ್ಟುವರು.
>
> ಮುಸಲ್ಮಾನರಾದವರು ಮೆಕ್ಕೆಯಲ್ಲಿ ಹಂದಿ ತಿಂದ. ಬ್ರಾಹ್ಮಣ, ಚೆತ್ರಿ,ವೈಶ್ಯ, ಶೂದ್ರ, ಕಾಶಿಯಲ್ಲಿ ಗೋವ ಕೊಂದ ಪಾಪಕ್ಕೆ ಹೋಗುವರು"

[ Epigraphic Karnataka Suppliment to Vol. IX Inscription in the Bangalore Dist X 159]

ಈ ರೀತಿಯಲ್ಲಿ ಚಾರಿತ್ರಿಕ ಪ್ರಸಿದ್ಧಿಯನ್ನು ಹೊಂದಿದ ಈ ದೇವಸ್ಥಾನವು ಚಿಕ್ಕ ಮಂಟಪದೋಪಾದಿಯಲ್ಲಿದ್ದಿತು. ನಂತರ ನಗರದ ಗಣ್ಯ ವ್ಯಕ್ತಿಗಳಾಗಿದ್ದ ಎಲೆಮಲ್ಲಪ್ಪ ಶೆಟ್ಟಿ ಎಂಬುವವರು ಈಗ ನಾವು ಕಾಣುವ ದೇವಸ್ಥಾನವನ್ನು ಕಟ್ಟಿ ಪೂಜಾ ವ್ಯವಸ್ಥೆ ಮಾಡಿದರು.

ಈ ದೇವಸ್ಥಾನಕ್ಕೆ ಸಂಬಂಧಪಟ್ಟಂತೆ ಪುರಾಣದಲ್ಲಿ ಸರಿಯಾದ ಆಧಾರ ಕಂಡು ಬರದಿದ್ದರೂ ಪರಂಪರಾನುಗತವಾಗಿ ತಿಳಿದು ಬಂದಿರುವ ಒಂದು ಘಟನೆ ಈ ರೀತಿ ಇದೆ.

ಈಗಿನ ಮಲ್ಲೇಶ್ವರ ಬಡಾವಣೆಯು ಹಿಂದೆ ಅತ್ಯಂತ ದಟ್ಟವಾದ ಅರಣ್ಯ ಪ್ರದೇಶವಾಗಿದ್ದಿತು. ಅದಕ್ಕಾಗಿಯೇ ಈ ಸ್ಥಳವನ್ನು ಕಾಡು ಮಲ್ಲೇಶ್ವರ ಎಂದು ಕರೆಯಲಾಗುತ್ತಿದೆ. ಕುಟುಂಬವೊಂದು ಬೆಂಗಳೂರಿನತ್ತ ಬರುತ್ತಿರಲು ಕತ್ತಲಾಗುತ್ತದೆ. ಎತ್ತರದ ಬಂಡೆಯೊಂದರ ಮೇಲೆ ಬೀಡು ಬಿಡುತ್ತಾರೆ. ಅಡಿಗೆ ಮಾಡುವ ಸಲುವಾಗಿ ಮೊದಲೇ ಇದ್ದ ಒಂದು ಕಲ್ಲಿಗೆ ಮತ್ತೆರಡು ಕಲ್ಲುಗಳನ್ನು ಒಲೆಯೋಪಾದಿಯಲ್ಲಿ ಇಟ್ಟು ಅದರ ಮೇಲೆ ಅನ್ನ ಮಾಡಲು ತಪ್ಪಲೆಯೊಂದನ್ನು ಇಟ್ಟು ಸೌದೆಯನ್ನು ಆರಿಸಿಕೊಂಡು ಬರಲು ಹೋಗುತ್ತಾರೆ. ಸೌದೆ ತಂದು ಒಲೆ ಹಚ್ಚಲು ಹೋದಾಗ ತಪ್ಪಲೆ ಬಿಸಿಯಾಗಿರುತ್ತದೆ. ಬೆಂಕಿ ಹಾಕದೆ ತಪ್ಪಲೆ ಹೇಗೆ ಬಿಸಿಯಾಯಿತು ಎಂದು ತಪ್ಪಲೆ ಒಳಗೆ ನೋಡಿದಾಗ ಅಕ್ಕಿಯು ಪೂರ್ತಿಯಾಗಿ ಅನ್ನವಾಗಿದ್ದನ್ನು ಕಂಡು ಆಶ್ಚರ್ಯಚಕಿತರಾಗುತ್ತಾರೆ.

ಬೆಂಕಿಯೇ ಇಲ್ಲದೆ ಈ ರೀತಿ ಅನ್ನವಾಗಲು ಕಾರಣವೇನೆಂದು ಯೋಚಿಸಿ ಈ ಒಲೆಯನ್ನು ಪರೀಕ್ಷಿಸಿದಾಗ ಈ ಮೂರು ಕಲ್ಲುಗಳ ಪೈಕಿ ಒಂದು ಕಲ್ಲು ಲಿಂಗೋಪಾದಿಯಲ್ಲಿ ಕಂಡುಬಂದು ಅಕ್ಷಣವೇ ಈ ಪವಾಡವು ರುದ್ರ ದೇವರ ಪ್ರಭಾವದಿಂದಲೇ ಆದದ್ದು ಎಂದು ಭಾವಿಸಿ ಆ ಅನ್ನವನ್ನು ದೇವರಿಗೆ ಸಮರ್ಪಣೆ ಮಾಡಿ ಆ ವಿಷಯವನ್ನು ಗುಡ್ಡದ ಕೆಳಭಾಗದಲ್ಲಿದ್ದ ಮಲ್ಲಪುರದ ಜನಕ್ಕೆ ತಿಳಿಸಿ ಮುಂದೆ ಪ್ರಯಾಣ ಬೆಳೆಸಿದರು. ಈ ಮಲ್ಲಪುರದ ಜನ ಈ ಉದ್ಭವ ಲಿಂಗಕ್ಕೆ ಚಿಕ್ಕ ಮಂಟಪ ಕಟ್ಟಿ ಆರಾಧಿಸತೊಡಗಿದರು. ಈ ಲಿಂಗದ

ಪ್ರಭಾವ ಏಕೋಜಿರಾಯರ ಗಮನಕ್ಕೆ ಬಂದು ದೇವಸ್ಥಾನದ ಅಭಿವೃದ್ಧಿಗೆ ನಾಂದಿಯಾಯಿತು.

ದೇವಸ್ಥಾನವು ಪೂರ್ವಾಭಿಮುಖವಾಗಿದ್ದು ದೇವಸ್ಥಾನದ ಕೆಳಭಾಗ ದಲ್ಲಿ ಅಶ್ವತ್ಥವೃಕ್ಷಗಳೂ ಅವುಗಳ ಕೆಳಗೆ ನಾಗರ ಕಲ್ಲುಗಳೂ ಇವೆ. ಇತ್ತೀಚೆಗೆ ದೇವಸ್ಥಾನದ ಒಂದು ಭಾಗದಲ್ಲಿ ಕಲ್ಲಿನ ಕಂಪೌಂಡ್ ಕಟ್ಟಲಾಗಿದೆ.

ಮಲ್ಲೇಶ್ವರ ಸ್ವಾಮಿಯ ದರ್ಶನ ಮಾಡಲು ಅನೇಕ ಮೆಟ್ಟಲುಗಳನ್ನು ಹತ್ತಿ ಹೋಗಬೇಕು. ದೇವಸ್ಥಾನದ ಪಶ್ಚಿಮ ಭಾಗದಲ್ಲೂ (ಸಂಪಿಗೆ ರಸ್ತೆ) ಒಂದು ಬಾಗಿಲಿದ್ದು ಅದರ ಮೂಲಕವೂ ದೇವಸ್ಥಾನವನ್ನು ಪ್ರವೇಶಿಸ ಬಹುದು.

ಪಶ್ಚಿಮಾಭಿಮುಖವಾಗಿ ದೇವಸ್ಥಾನವನ್ನು ಪ್ರವೇಶಿಸಿ ಪ್ರದಕ್ಷಿಣಾಕಾರ ವಾಗಿ ನಡೆದರೆ ಕಾಳಭೈರವ, ವಿಘ್ನೇಶ್ವರ, ಶ್ರೀ ಅರುಣಾಚಲ, ಪಾರ್ವತಿ ದೇವಿ ಹಾಗೂ ನವಗ್ರಹಗಳನ್ನು ಕಾಣಬಹುದು.

ಗರ್ಭಗುಡಿಯ ಎದುರಿಗೆ ನಂದಿಕಂಬ ಹಾಗೂ ಮುಂಭಾಗದ ಮಂಟಪ ದಲ್ಲಿ ನಂದಿಯನ್ನು ಕಾಣಬಹುದು. ಇಪ್ಪತ್ತನಾಲ್ಕು ಕಂಬಗಳ ಆಧಾರದ ಮೇಲೆ ನಿರ್ಮಿಸಿರುವ ಮುಖಮಂಟಪವಿದೆ. ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಉದ್ಭವಮೂರ್ತಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ವಿಗ್ರಹವಿದೆ ಇದರ ಮುಂಭಾಗದಲ್ಲಿ ನಂದಿಯ ವಿಗ್ರಹವಿದೆ. ಗರ್ಭಗುಡಿಯ ಹಿಂಭಾಗಕ್ಕೆ ಚಂಡಿಕೇಶ್ವರ ಮತ್ತು ಶ್ರೀ ಸುಬ್ರಮಣ್ಯಸ್ವಾಮಿಯ ಸನ್ನಿದಿ ಇದೆ.

ಗರ್ಭಗುಡಿಯ ಬಲಭಾಗಕ್ಕೆ ಗಣಪತಿ ಇದ್ದಾನೆ. ಎಡಭಾಗದಲ್ಲಿ ಭ್ರಮರಾಂಬ ಅಮ್ಮನವರ ಗುಡಿ ಇದೆ. ಅಮ್ಮನವರ ಮುಂದೆ ಕಲ್ಲಿನ ಶ್ರೀಚಕ್ರ ವಿದ್ದು ಇದು ಈ ದೇವಸ್ಥಾನದ ವಿಶೇಷಗಳಲ್ಲಿ ಒಂದಾಗಿದೆ.

ನವರಾತ್ರಿಯ ಸಂದರ್ಭದಲ್ಲಿ ಈ ದೇವಸ್ಥಾನದಲ್ಲಿ ವಿಶೇಷ ಮಹೋ ತ್ಸವಗಳು ನಡೆಯುತ್ತವೆ. ಶ್ರೀ ಭ್ರಮರಾಂಭ ದೇವಿಯವರಿಗೆ ಪಾಡ್ಯಮಿ ಯಿಂದ ಹಿಡಿದು ವಿಜಯದಶಮಿಯವರೆಗೆ ಪ್ರತಿದಿನವೂ ವಿಶೇಷ ಪೂಜೆ ಅಲಂಕಾರಗಳು ಸಾಯಂಕಾಲ ಕುಂಕುಮಾರ್ಚನೆಗಳು ನಡೆಯುತ್ತವೆ. ಶ್ರೀಚಕ್ರ

ವಿರುವ ಈ ಭ್ರಮರಾಂಬ ದೇವಿಯವರನ್ನು ಪೂಜಿಸಿದರೆ ನಮ್ಮ ಸಕಲ ಕಾರ್ಯಗಳು ನೆರವೇರುವುವು.

ಬ್ರಹ್ಮ ರಥೋತ್ಸವ : ಶ್ರೀ ಮಲ್ಲಿಕಾರ್ಜುನ ಸ್ವಾಮಿ ಲಗ್ನದಲ್ಲಿ ಬ್ರಹ್ಮ ರಥೋತ್ಸವದ ಅಂಗವಾಗಿ ಧ್ವಜಾರೋಹಣ ನಡೆದು ಅಲ್ಲಿಂದ ಮುಂದೆ ಪ್ರತಿ ದಿನ ವೃಷಭ ವಾಹನ, ನಂದಿ ವಾಹನ, ಹಂಸವಾಹನ, ಸಿಂಹವಾಹನ, ಶೇಷವಾಹನ, ಗಜವಾಹನ ಇತ್ಯಾದಿ ಉತ್ಸವಗಳು ನಡೆಯುತ್ತವೆ.

ಮಾಘ ಬಹುಳ ತ್ರಯೋದಶಿ ಅಂದರೆ ಶಿವರಾತ್ರಿಯಂದು ಕಲ್ಯಾಣೋತ್ಸವ ನಡೆದು ಚತುರ್ದಶಿಯಂದು ಬ್ರಹ್ಮ ರಥೋತ್ಸವವು ನಡೆಯುತ್ತದೆ. ಈ ಸಂದರ್ಭದಲ್ಲಿ ಸಹಸ್ರಾರು ಭಕ್ತಾದಿಗಳು ಸ್ವಾಮಿಯ ಸೇವಾ ದರ್ಶನಾದಿಗಳನ್ನು ಮಾಡಿ ರಥೋತ್ಸವದಲ್ಲಿ ಭಾಗಿಗಳಾಗಿ ಪುನೀತರಾಗುವ ದೃಶ್ಯವು ಮನೋಹರವಾಗಿರುತ್ತದೆ. ಅಲ್ಲಿಂದ ಮುಂದಕ್ಕೆ ಭದ್ರಪೀಠೋತ್ಸವ, ಅಶ್ವರೋಹಣ. ಚೋರ್ಣೋತ್ಸವ. ಪುಷ್ಪ ಮಂಡಲೋತ್ಸವ ಮತ್ತು ಮುತ್ತಿನ ಪಲ್ಲಕ್ಕಿ ಉತ್ಸವಗಳು ನಡೆಯುತ್ತವೆ.

ಭ್ರಮರಾಂಬ ದೇವಿಯವರಿಗೆ ಮೋಹಿನಿ ಅಲಂಕಾರ ಗಜಲಕ್ಷ್ಮಿ ರಾಜರಾಜೇಶ್ವರಿ ಇತ್ಯಾದಿ ಅಲಂಕಾರಗಳನ್ನು ಮಾಡಲಾಗುತ್ತದೆ. ಹಿಂದೆ ದೇವಸ್ಥಾನದ ಎದುರುಭಾಗದಲ್ಲಿದ್ದ (ಇಂದಿನ ದೋಬಿಘಾಟ್) ಚಿಕ್ಕ ಕೆರೆಯಲ್ಲಿ ತೆಪ್ಪೋತ್ಸವ ಕಾರ್ಯಕ್ರಮವು ನಡೆಯುತ್ತಿತ್ತು.

ದೇವಸ್ಥಾನದ ಎಡಭಾಗಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನವೂ ಬಲಭಾಗಕ್ಕೆ ಶ್ರೀ ಲಕ್ಷ್ಮಿನರಸಿಂಹಸ್ವಾಮಿ ದೇವಸ್ಥಾನವು ಮತ್ತು ಶಿರಡಿ ಸಾಯಿಬಾಬ ದೇವಸ್ಥಾನಗಳೂ ಇದ್ದು ಈ ಕಾಡು ಮಲ್ಲೇಶ್ವರನ ದರ್ಶನ ಇಹಕ್ಕೆ ಸುಖವನ್ನು ಪರಕ್ಕೆ ಮೋಕ್ಷವನ್ನು ನೀಡುವಲ್ಲಿ ಸಂದೇಹವಿಲ್ಲ.

## ಬಾಣಸವಾಡಿ ಆಂಜನೇಯಸ್ವಾಮಿ ದೇವಸ್ಥಾನ

ಬಾಣಸವಾಡಿ ಬೆಂಗಳೂರಿನ ಪೂರ್ವಕ್ಕೆ ನಾಲ್ಕು ಕಿಲೋಮೀಟರ್ ದೂರದಲ್ಲಿದೆ (ಈಗಿನ ಮಾರುತಿ ಸೇವಾ ನಗರ)

ಶ್ರೀರಾಮಚಂದ್ರ ದೇವರ ಮತ್ತು ಶ್ರೀ ಪ್ರಾಣದೇವರ ದೇವಸ್ಥಾನಗಳು ಇಲ್ಲಿದ್ದು ಪ್ರಸಿದ್ಧ ಯಾತ್ರಾಸ್ಥಳವಾಗಿದೆ.

ದೇವಸ್ಥಾನದ ನಿರ್ಮಾಣವನ್ನು ಗಮನಿಸಿದಾಗ ಅದು ಇತ್ತೀಚಿನ ದಿನಗಳಲ್ಲಿ ಕಟ್ಟಲ್ಪಟ್ಟದ್ದಾಗಿದ್ದು ಈ ದೇವಸ್ಥಾನದ ಬಗ್ಗೆ ಯಾವುದೇ ಮಾಹಿತಿಯನ್ನು ನೀಡುವ ಶಿಲಾಶಾಸನಗಳು ದೊರೆಯುವುದಿಲ್ಲ.

ಇಲ್ಲಿ ಬಹುಮುಖ್ಯವಾಗಿ ಪೂಜಿಸಲ್ಪಡುವುದು ಆಂಜನೇಯಸ್ವಾಮಿ. ಆಂಜನೇಯಸ್ವಾಮಿ ದೇವಸ್ಥಾನದ ಮಹಾದ್ವಾರವು ಉತ್ತರಾಭಿಮುಖವಾಗಿದ್ದು ರಾಜಗೋಪುರವನ್ನು ಹೊಂದಿದೆ. ಗರ್ಭಗುಡಿಯು ದಕ್ಷಿಣಾಭಿಮುಖವಾಗಿದ್ದು ಆಂಜನೇಯ ಪೂರ್ವಾಭಿಮುಖವಾಗಿ ಮಾಡಿಕೊಂಡಿರುವಂತಿದೆ. ಸುಮಾರು ಐದು ಅಡಿ ಎತ್ತರದ ಈ ವಿಗ್ರಹವು ನೋಡಲು ಸುಂದರವಾಗಿದೆ.

ಗರ್ಭಗುಡಿಯ ಹೊರಭಾಗದ ಗೋಡೆಯಲ್ಲಿ ಗದೆ ಹಿಡಿದು ನಿಂತಿರುವ ಆಂಜನೇಯ ಮೂರ್ತಿಯನ್ನು ಕೆತ್ತಲಾಗಿದೆ. ಗರ್ಭಗುಡಿಯ ಬಲಭಾಗದ ಒಂದು ಪುಟ್ಟ ಗುಡಿಯಲ್ಲಿ ಸುಮಾರು ಒಂದು ಅಡಿ ಎತ್ತರವಿರುವ ವೆಂಕಟರಮಣಸ್ವಾಮಿ, ಶ್ರೀದೇವಿ, ಭೂದೇವಿಯ ವಿಗ್ರಹಗಳಿವೆ. ಇದಕ್ಕೆ ಎದುರಾಗಿ ಗರ್ಭಗುಡಿಯ ಎಡಭಾಗದಲ್ಲಿ ಸುಮಾರು ಒಂದುವರೆ ಅಡಿ ಎತ್ತರವಿರುವ ಲಕ್ಷ್ಮೀದೇವಿಯ ವಿಗ್ರಹವಿದೆ ಹಾಗೂ ಪಂಚಲೋಹದ ಉತ್ಸವ ಮೂರ್ತಿಗಳಿವೆ.

ರಾಮದೇವರ ಗುಡಿಯು ಪೂರ್ವಾಭಿಮುಖವಾಗಿದ್ದು ಇಲ್ಲಿಯ ರಾಮ ಲಕ್ಷ್ಮಣ ಸೀತಾ ದೇವಿಯವರ ವ್ಯಾಸರ ಪ್ರತಿಷ್ಠೆ ಎಂಬ ಪ್ರತೀತಿ ಇದೆ.

**ಅಚ್ಚರಿಯ ಸಂಗತಿ :** ಆಂಜನೇಯ ದೇವಸ್ಥಾನದ ಮೂಲ ಮೂರ್ತಿಯ ಕಣ್ಣಿನಲ್ಲಿ ಹನುಮದ್ ಜಯಂತಿಯಂದು ನೀರು ತೊಟ್ಟಿಕ್ಕುವುದು ಎಂದು ಹೇಳುತ್ತಾರೆ. ಇದು ಆಶ್ಚರ್ಯಕರವಾದ ಸಂಗತಿಯಾಗಿದ್ದು ಹೀಗೆ ನೀರು ಬರಲು ಕಾರಣ ಹಾಗೂ ಇಲ್ಲಿನ ಸ್ಥಳ ಪುರಾಣ ಯಾರಿಗೂ ಗೊತ್ತಿಲ್ಲವಾಗಿ ಹೀಗೆ ನೀರು ತೊಟ್ಟಿಕ್ಕುವುದು "ಆನಂದಬಾಷ್ಪ" ಎಂದು ಕೆಲವರೂ "ದುಃಖಾಷ್ಪ" ಎಂದು ಕೆಲವರೂ ಅವರವರ ಮನೋಧರ್ಮಕ್ಕನುಸಾರವಾಗಿ ಅರ್ಥ ಮಾಡಿಕೊಂಡು ತೃಪ್ತಿ ಪಡುತ್ತಾರೆ.

ಆನು ದಿನವೂ ಅನೇಕರನ್ನು ಆಕರ್ಷಿಸುತ್ತಿರುವ ಈ ದೇವಸ್ಥಾನದ ಬಗ್ಗೆ, ದೇವಸ್ಥಾನದ ವಲಯಗಳಲ್ಲಿ ವಿಚಾರಿಸಿದಾಗ ಯಾವ ಅಂಶವೂ ಸ್ಪಷ್ಟವಾಗದೆ ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳುವುದಾಗಿ ಕೇಳಿದಾಗ ವಿಷಾದವೆನಿಸುತ್ತದೆ. ಬಾಣಸವಾಡಿಯ ಊರಿನ ಪ್ರಮುಖರಲ್ಲಿ ಇಲ್ಲಿನ ಐತಿಹ್ಯದ ಬಗ್ಗೆ ವಿಚಾರ ಮಾಡಲಾಗಿ ಈ ಕೆಳಕಂಡ ಅಂಶಗಳು ತಿಳಿದು ಬಂದಿತು.

**ರೈತರಿಗೆ ದೊರೆತ ಹನುಮ:-** ಒಮ್ಮೆ ಸುತ್ತಮುತ್ತಲಿನ ರೈತಾಪಿ ಜನಗಳು ಧಾನ್ಯಗಳನ್ನು ಮಾರುಕಟ್ಟೆಗೆ ಸಾಗಿಸುವುದಕ್ಕಾಗಿ ಬೆಂಗಳೂರಿನತ್ತ ಬರುತ್ತಿದ್ದಾಗ, ರಾತ್ರಿಯಾದ ಕಾರಣ ಬಾನಸವಾಡಿ ಬಳಿ ಬಿಡಾರ ಮಾಡುತ್ತಾರೆ. ಮುಂಜಾನೆ ತಮ್ಮ ಪ್ರಯಾಣವನ್ನು ಮುಂದುವರೆಸಲು ಗಾಡಿಗಳಿಗೆ ಎತ್ತುಗಳನ್ನು ಕಟ್ಟಿ ಹೊಡೆಯಲು ಉದ್ಯುಕ್ತರಾದಾಗ, ಮುಂಭಾಗದಲ್ಲಿ ಗಾಡಿಯು ಚಲಿಸದೆ ನಿಂತಿತು. ಚಾವಟಿಯಿಂದ ಹೊಡೆದರೂ ಮುಂದೆ ಸಾಗಲಿಲ್ಲ. ಉಳಿದ ಗಾಡಿಯ ರೈತರೂ ಎತ್ತನ್ನು ಮುಂದಕ್ಕೆ ಹೋಗಲು ಮಾಡಿದ ಪ್ರಯತ್ನ ಫಲಕೊಡಲಿಲ್ಲ. ಚಕ್ರಕ್ಕೆ ಏನಾದರೂ ಸಿಕ್ಕಿಕೊಂಡಿರಬೇಕೆಂದು ನೋಡಲಾಗಿ, ಚಕ್ರ ಆಂಜನೇಯನ ವಿಗ್ರಹವೊಂದಕ್ಕೆ ತಾಕಿಕೊಂಡು ನಿಂತಿದೆ. ಗಾಡಿಯನ್ನು ಹಿಂದಕ್ಕೆ ತಳ್ಳಿ, ಆ ಸ್ಥಳವನ್ನು ಶುದ್ಧಿಮಾಡಿ ಆಂಜನೇಯನಿಗೆ ಕಪ್ಪು ಕಾಣಿಕೆ ಸಲ್ಲಿಸಿ, ಪೂಜೆ ಮಾಡಿ ಬಾನಸವಾಡಿಯ ಜನಕ್ಕೆ ವಿಷಯ ತಿಳಿಸಿ ನಂತರ ತಮ್ಮ ಪ್ರಯಾಣವನ್ನು ಮುಂದುವರೆಸಿದರು.

ಬಾನಸವಾಡಿಯ ಜನ ಈ ಆಂಜನೇಯನಿಗೆ ಒಂದು ಚಿಕ್ಕದಾದ ಮಂಟಪವನ್ನು ಕಟ್ಟಿ ಪೂಜಿಸತೊಡಗಿದರು. ಈ ಮಾರ್ಗದಲ್ಲಿ ಬರುವ ಎತ್ತಿನಗಾಡಿ ಮೋಟರ್ ಇತ್ಯಾದಿಗಳು ಇಲ್ಲಿ ನಿಲ್ಲಿಸಿ ಆಂಜನೇಯನಿಗೆ ಕೈ ಮುಗಿದು, ಕಾಣಿಕೆ ನೀಡಿ ಮುಂದಕ್ಕೆ ಹೋಗುವ ಪದ್ಧತಿ ಆಚರಣೆಗೆ ಬಂದು ದೇವಸ್ಥಾನ ಅಭಿವೃದ್ಧಿಗೆ ಬರುತ್ತದೆ.

ಊರಿನ ವಯೋವೃದ್ಧರಾದ ರಾಮರೆಡ್ಡಿಯವರ ಪ್ರಕಾರ ಹಿಂದೆ ರೈತರ ಎತ್ತಿನ ಗಾಡಿಗೆ ಸಿಕ್ಕಿದ ಆಂಜನೇಯನನ್ನು ಯಾರೋ ದಾನ ಮಾಡಿದರೆಂದು ನಂತರ ಈಗ ನಾವು ಕಾಣುವ ಆಂಜನೇಯನನ್ನು ಪ್ರತಿಷ್ಠಾಪಿಸಲಾಗಿದೆ ಎಂದು ತಿಳಿದು ಬರುತ್ತದೆ.

ಹಿಂದೆ ಇದ್ದ ಗರ್ಭಗುಡಿಯನ್ನು ಒಡೆದು ಹಾಕಿ ಮಣಿಅಯ್ಯರ್ ಎಂಬ ಭಕ್ತರೊಬ್ಬರು ನೂತನ ಗರ್ಭಗುಡಿ ಹಾಗೂ ಈಗ ನಾವು ಕಾಣುವ ದೇವಸ್ಥಾನ ವನ್ನು ನಿರ್ಮಿಸಿರುತ್ತಾರೆ.

ಪ್ರತಿ ಗುರುವಾರ, ಶನಿವಾರ ಹಾಗೂ ಭಾನುವಾರಗಳಂದು ವಿಶೇಷ ಪೂಜಾದಿಗಳು ನಡೆಯುತ್ತವೆ. ಆ ಸಮಯದಲ್ಲಿ ನೆರೆದ ಭಕ್ತವೃಂದರಿಂದ ಭಜನೆ ಇತ್ಯಾದಿ ಕಾರ್ಯಕ್ರಮಗಳು ಇರುತ್ತವೆ.

ಹನುಮದ್ ಜಯಂತಿಯಂದು ಸಾವಿರಾರು ಜನ ಇಲ್ಲಿಗೆ ಬರುತ್ತಾರೆ. ಸಾಲುಗಟ್ಟಿ ನಿಂತ ಜನ, ಆಂಜನೇಯನ ದರ್ಶನಕ್ಕೆ ತಮ್ಮ ಸರದಿಯನ್ನು ಕಾಯುತ್ತಾ ಭಜನೆ ಅವನ ಸ್ಮರಣೆ ಮಾಡುತ್ತಾ ನಿಂತಿರುವ ದೃಶ್ಯ ನೋಡಲು ಎರಡು ಕಣ್ಣು ಸಾಲದಾಗಿ, ನಾಸ್ತಿಕನೂ ಆಸ್ತಿಕನಾಗುತ್ತಾನೆ. ಒಟ್ಟಿನಲ್ಲಿ ಬೆಂಗಳೂರಿನಲ್ಲಿ ನೋಡಬೇಕಾದ ದೇವಸ್ಥಾನಗಳಲ್ಲಿ ಇದೂ ಒಂದು.

## ಅಲಸೂರಿನ ಸೋಮೇಶ್ವರ ದೇವಸ್ಥಾನ

ಕೆಂಪೇಗೌಡ ಜೀರ್ಣೋದ್ಧಾರ ಮಾಡಿದ ದೇವಸ್ಥಾನಗಳಲ್ಲಿ, ಬೆಂಗಳೂರಿನ ಪೂರ್ವ ದಿಕ್ಕಿನಲ್ಲಿರುವ ಅಲಸೂರಿನ ಸೋಮೇಶ್ವರ ದೇವಸ್ಥಾನವೂ ಒಂದು.

ಹೊಯ್ಸಳರ ಕಾಲದಲ್ಲಿ ಪ್ರತಿಷ್ಠಾಪನೆಗೊಂಡು, ಚೋಳರ ಕಾಲದಲ್ಲಿ ಗರ್ಭಗುಡಿ ಕಟ್ಟಲ್ಪಟ್ಟು, ಕೆಂಪೇಗೌಡರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿ ರುವ ಈ ದೇವಸ್ಥಾನದ ಮಹಾದ್ವಾರವು ಪೂರ್ವಾಭಿಮುಖವಾಗಿದ್ದು ಬೃಹದಾ ಕಾರವಾದ ರಾಜಗೋಪುರದಿಂದ ಕಂಗೊಳಿಸುತ್ತಿದೆ.

ಮಹಾದ್ವಾರದ ಎಡಭಾಗದಲ್ಲಿ ಬಾಲ ವಿನಾಯಕ ದೇವಸ್ಥಾನ ಹಾಗೂ ಯಾಗ ಶಾಲೆ ಇವೆ. ಬಲಭಾಗಕ್ಕೆ ಭೀಮೇಶ್ವರಸ್ವಾಮಿ ದೇವಸ್ಥಾನವಿದೆ.

ಮಹಾದ್ವಾರವನ್ನು ಪ್ರವೇಶಿಸುತ್ತಿದ್ದಂತೆ ಧ್ವಜಸ್ತಂಭ ಹಾಗೂ ಬಲಿ ಪೀಠಗಳಿವೆ. ಇದರ ಮುಂಭಾಗದಲ್ಲಿ ಕೆಂಪೇಗೌಡನು ಬೆಂಗಳೂರಿನ ನಾಲ್ಕು ದಿಕ್ಕುಗಳಲ್ಲಿ ಕಟ್ಟಿಸಿರುವ ಗೋಪುರಗಳ ಮಾದರಿಯ ಒಂದು ಪುಟ್ಟ ಗೋಪುರ ವಿದ್ದು ಇದರ ಮಧ್ಯಭಾಗದಲ್ಲಿ ಬಸವನ ವಿಗ್ರಹವಿದೆ. ಇಲ್ಲಿಂದ ಮುಂದಕ್ಕೆ

ಮಹಾ ಮಂಟಪವಿದೆ. ಇದನ್ನು ನಲವತ್ತೆಂಟು ಕಲ್ಲಿನ ಕಂಬಗಳ ಆಧಾರದ ಮೇಲೆ ನಿರ್ಮಿಸಲಾಗಿದ್ದು ಒಂದೊಂದು ಕಂಬವೂ ಕಲಾತ್ಮಕವಾಗಿ ಕೆತ್ತಲ್ಪಟ್ಟು ಮಂಟಪಕ್ಕೆ ಮೆರಗನ್ನು ನೀಡುತ್ತಿವೆ. ಈ ಮಂಟಪದ ಮಧ್ಯಭಾಗದಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ನಂದಿಯ ವಿಗ್ರಹವಿದೆ.

ದೇವಸ್ಥಾನವು ಗರ್ಭಗುಡಿ, ಶುಖನಾಸಿ, ನವರಂಗಗಳಿಂದ ಕೂಡಿದ್ದು, ಗರ್ಭಗುಡಿಯಲ್ಲಿ ಸುಮಾರು ಎರಡು ಅಡಿ ಪೀಠದ ಮೇಲೆ ಸೋಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಎದುರಿಗೆ ನಂದಿಯ ವಿಗ್ರಹವಿದೆ.

ದೇವಸ್ಥಾನಕ್ಕೆ ದೊಡ್ಡದಾದ ಪ್ರಾಕಾರವಿದ್ದು ಪ್ರಾಕಾರದ ಸುತ್ತಲೂ ತಿರುಜ್ಞಾನ ಸಂಬಂದರ್, ವಿದ್ಯಾಗಣಪತಿ, ದಕ್ಷಿಣಾಮೂರ್ತಿ, ಅರುಣಾಚಲ, ಮಹಾವಿಷ್ಣು, ನಾಗರಾಜ ನಾಗಕನ್ಯೆ, ಸುಬ್ರಹ್ಮಣ್ಯ, ಚಂಡಿಕೇಶ್ವರ, ದುರ್ಗಾ ದೇವಿ, ಕಾಲಭೈರವ, ಸೂರ್ಯನಾರಾಯಣ ಮುಂತಾದ ದೇವರುಗಳ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದ್ದು, ಪುಟ್ಟದಾದ ಗುಡಿಗಳನ್ನು ಕಟ್ಟಲಾಗಿದೆ.

ಗರ್ಭಗುಡಿಯ ಹಿಂಭಾಗಕ್ಕೆ ಕಾಮಾಕ್ಷಿ ಅಮ್ಮನವರ ದೇವಸ್ಥಾನವಿದೆ.

ನಾಲ್ಕು ಅಡಿ ಎತ್ತರದ ಕಪ್ಪು ಶಿಲೆಯ ಕಾಮಾಕ್ಷಿ ಅಮ್ಮನವರ ಮುಂದೆ ಶ್ರೀ ಚಕ್ರವಿದೆ. ಇದು ಇಲ್ಲಿನ ವಿಶೇಷ.

ಚೈತ್ರ ಶುದ್ಧ ಪೂರ್ಣಿಮೆಯಂದು ಇಲ್ಲಿ ಸೋಮೇಶ್ವರಸ್ವಾಮಿ ಬ್ರಹ್ಮ ರಥೋತ್ಸವವು ನಡೆಯುತ್ತದೆ. ಈ ಸಮಯದಲ್ಲಿ ಅನೇಕ ಉತ್ಸವಗಳು ನಡೆಯುವ ಹೂವಿನ ಪಲ್ಲಕ್ಕಿ ಉತ್ಸವ ಅತ್ಯಂತ ವೈಭವದ ಹಾಗೂ ಪ್ರಮುಖ ಉತ್ಸವವಾಗಿದ್ದು ಈ ಸಮಯದಲ್ಲಿ ಸಾವಿರಾರು ಭಕ್ತಾದಿಗಳು ಸೇರುತ್ತಾರೆ.

ಅಲಸೂರಿನ ಸುತ್ತಮುತ್ತಲ ದೇವಸ್ಥಾನಗಳ ಉತ್ಸವ ಮೂರ್ತಿಗಳು ರಥಾರೂಢವಾಗಿ ಈ ಪಲ್ಲಕ್ಕಿ ಉತ್ಸವದ ಹಿಂದೆ, ಒಂದರ ಹಿಂದೆ ಒಂದರಂತೆ ಆಕರ್ಷಕವಾದ ವಿದ್ಯುತ್ ದೀಪಗಳಿಂದ ಅಲಂಕೃತವಾಗಿ,ವಾದ್ಯಗಳ ಸಮೇತ ಬರುವುದು ಒಂದು ಸುಂದರ ನೋಟವಾಗಿದ್ದು ಬೆಂಗಳೂರುಜಿಲ್ಲೆಯಲ್ಲೇ ಈ ಹೂವಿನ ಪಲ್ಲಕ್ಕಿ ಉತ್ಸವ ಆಕರ್ಷಣೀಯವಾದುದ್ದಾಗಿದ್ದು, ಸೋಮೇಶ್ವರ ಸ್ವಾಮಿಯ ದೇವಸ್ಥಾನವು ಪ್ರಸಿದ್ಧವೂ ವೀಕ್ಷಣಾರ್ಹವಾದುದೂ ಆಗಿದೆ.

## ಗ್ರಾಮದೇವತೆ ಅಣ್ಣಮ್ಮ ದೇವಸ್ಥಾನ

ಬೆಂಗಳೂರಿನ ಗ್ರಾಮದೇವತೆ ಅಣ್ಣಮ್ಮ ದೇವಸ್ಥಾನವು ಕೆಂಪೇಗೌಡ ವೃತ್ತದ ಬಳಿ ಇದ್ದು ಅತಿ ಪುರಾತನವಾದ ಆಲಯವಾಗಿದೆ.

ಅಣ್ಣಮ್ಮದೇವಿಯು ಅಣಿಮಾದಿ ಅಷ್ಟ ಸಿದ್ಧಿಗಳನ್ನು ನೀಡುವ ದೇವತೆಯಾಗಿದ್ದು ಸಾಂಕ್ರಾಮಿಕ ರೋಗಗಳನ್ನು ತಡೆಯುವ ಶಕ್ತಿ ದೇವತೆಯಾಗಿದ್ದಾಳೆ.

ಮೂಲದಲ್ಲಿ ಈ ಅಣ್ಣಮ್ಮ ದೇವಿಗೆ "ಅಣಿಮಾ" ಎಂಬ ಹೆಸರು ಇದ್ದು ನಂತರ ಅಣ್ಣಮ್ಮಗಳಾಗಿ ಪ್ರಸಿದ್ಧಿ ಪಡೆದಿದ್ದಾಳೆ. ಅಣಿಮಾ ಸಪ್ತ ಮಾತೃಕೆಯರಲ್ಲಿ ಒಬ್ಬಳು. ಅಣಿಮಾ, ಮಹಿಮಾ, ಗರಿಮಾ, ಪ್ರಾಪ್ತಿ, ಪ್ರಾಕಮ್ಯ, ಈಶತ್ವ ಎಂಬ ಸಪ್ತಮಾತೃಕೆಯರ ವಿಗ್ರಹಗಳು ಈ ದೇವಸ್ಥಾನವಲ್ಲಿವೆ.

ಶುಕ್ರವಾರ ಮಂಗಳವಾರಗಳಂದು ಇಲ್ಲಿ ವಿಶೇಷ ಪೂಜಾದಿಗಳು ನಡೆಯುತ್ತವೆ.

## ನಗರೇಶ್ವರ ಸ್ವಾಮಿ ದೇವಸ್ಥಾನ

ನಗರ್ತರ ಪೇಟೆಯ ಮುಖ್ಯ ರಸ್ತೆಯಲ್ಲಿರುವ ನಗರೇಶ್ವರ ಸ್ವಾಮಿ ದೇವಸ್ಥಾನವು ಬೆಂಗಳೂರಿನಷ್ಟೇ ಪುರಾತನವಾದದ್ದು.

ಇತ್ತೀಚೆಗೆ ಜೀರ್ಣೋದ್ಧಾರಗೊಂಡು ಅತ್ಯಂತ ಆಕರ್ಷಕವಾಗಿ ಕಂಗೊಳಿಸುತ್ತಿರುವ ಈ ದೇವಸ್ಥಾನದ ರಾಜಗೋಪುರವು ಅತಿ ಸುಂದರವಾಗಿದೆ.

ನುಣುಪಾದ ಕಲ್ಲಿನಿಂದ ಅಲಂಕರಿಸಲ್ಪಟ್ಟಿರುವ ಗರ್ಭಗುಡಿ, ಶುಖನಾಸಿ, ನವರಂಗ, ಕಲಾತ್ಮಕವಾದ ಕಂಬಗಳ ಆಧಾರದಿಂದ ಕೂಡಿದೆ.

ಆಗಮಿಕ ಶಾಸ್ತ್ರಕ್ಕೆ ಅನುಗುಣವಾಗಿ ಕಟ್ಟಲ್ಪಟ್ಟಿರುವುದು ಈ ದೇವಸ್ಥಾನದ ವಿಶೇಷವಾಗಿದೆ.

ಕರ್ನಾಟಕ ಸರ್ಕಾರದ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಪ್ರಧಾನ ಆಗಮಿಕರಾಗಿರುವ ವೇದ ಬ್ರಹ್ಮ ಗುಂಡಪ್ಪ ದೀಕ್ಷಿತರು ಈ ದೇವಸ್ಥಾನದ

ಪ್ರಮುಖರಾಗಿರುವುದು, ಈ ದೇವಸ್ಥಾನ ಶಿಲ್ಪಶಾಸ್ತ್ರಕ್ಕೆ ಅನುಗುಣವಾಗಿರುವುದಕ್ಕೆ ಮುಖ್ಯ ಕಾರಣವಾಗಿದೆ.

ದೇವಸ್ಥಾನದ ಮಹಾದ್ವಾರವು ಉತ್ತರಾಭಿಮುಖವಾಗಿದ್ದು, ಮಹಾದ್ವಾರದ ಮೇಲೆ ಅನೇಕ ದೇವತೆಗಳನ್ನು ಒಳಗೊಂಡ ದೊಡ್ಡದಾದ ರಾಜಗೋಪುರವಿದೆ.

ನಗರೇಶ್ವರ ಸ್ವಾಮಿಯ ಗರ್ಭಗುಡಿಯು ಪೂರ್ವಾಭಿಮುಖವಾಗಿದೆ. ಗರ್ಭಗುಡಿಯಲ್ಲಿ ಸುಮಾರು ಎರಡು ಅಡಿ ಎತ್ತರದ ನಗರೇಶ್ವರಸ್ವಾಮಿ ಲಿಂಗವಿದೆ.

ಗರ್ಭಗುಡಿಯ ಎಡಭಾಗಕ್ಕೆ ಅನ್ನಪೂರ್ಣೇಶ್ವರಿ ಆಲಯವಿದೆ. ಅತಿ ಸುಂದರವಾದ ಈ ದೇವಿಯು ಮೂರು ಅಡಿ ಎತ್ತರವಿದ್ದು ಕಪ್ಪುಶಿಲೆಯಿಂದ ಕೆತ್ತಲ್ಪಟ್ಟಿದೆ.

ಬಲಭಾಗಕ್ಕೆ ಗಣೇಶನಿದ್ದಾನೆ. ದಕ್ಷಿಣ ಭಾಗದ ಮಂಟಪದಲ್ಲಿ ಗಂಗಾ-ಪಾರ್ವತಿ ಸಮೇತನಾದ ಚಂದ್ರಶೇಖರ ಸ್ವಾಮಿಯ ಪಂಚಲೋಹದ ವಿಗ್ರಹವಿದೆ. ಇದರ ಹಿಂಭಾಗಕ್ಕೆ ನಟರಾಜ, ಶಿವಕಾಮಿನಿ ದೇವಿ ಹಾಗೂ ಗಣೇಶನ ವಿಗ್ರಹಗಳಿವೆ. ಈ ಉತ್ಸವ ಮೂರ್ತಿ ಮಂಟಪದ ಬಲಭಾಗಕ್ಕೆ ಆರು ಮುಖಗಳುಳ್ಳ, ನಾಲ್ಕು ಅಡಿ ಎತ್ತರದ ಷಣ್ಮುಗನಿದ್ದಾನೆ.

ಒಂಭತ್ತು ಅಂಕಣಗಳಿಂದ ಕೂಡಿದ ನವರಂಗದ ಪೂರ್ವಭಾಗದಲ್ಲಿ ಅಮೃತಶಿಲೆಯ ಚಿಕ್ಕ-ಚಿಕ್ಕ ಮಂಟಪಗಳಿದ್ದು ಅವುಗಳಲ್ಲಿ ವೆಂಕಟೇಶ್ವರ, ನಾಗದೇವತೆ, ಆಂಜನೇಯ, ದುರ್ಗಾದೇವಿ, ಸೂರ್ಯನಾರಾಯಣ ಹಾಗೂ ಕಾಲಭೈರವನ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ.

ಶಿವರಾತ್ರಿ, ಕಾರ್ತಿಕಮಾಸ, ಉಗಾದಿ ಇತ್ಯಾದಿ ಹಬ್ಬಗಳಲ್ಲಿ ಇಲ್ಲಿ ವಿಶೇಷ ಪೂಜಾದಿಗಳು ನಡೆಯುತ್ತವೆ.

ನಗರ್ತರ ಪೇಟೆ ಸರಹದ್ದಿನಲ್ಲಿ ಅನೇಕ ದೇವಸ್ಥಾನಗಳಿದ್ದು, ಎಲ್ಲಾ ಧರ್ಮೀಯರ ಹಾಗೂ ಜನಾಂಗದವರ ದೇವಸ್ಥಾನಗಳನ್ನು ಇಲ್ಲಿ ಕಾಣಬಹುದಾಗಿದೆ. ಉದಾಹರಣೆಗಾಗಿ ಕೆಲವು ದೇವಸ್ಥಾನ ಹಾಗೂ ಜನಾಂಗದವರ ಹೆಸರುಗಳನ್ನು ಇಲ್ಲಿ ನೀಡಲಾಗಿದೆ.

| | |
|---|---|
| ಆಂಜನೇಯ | ಎಲ್ಲಾ ವರ್ಗದವರಿಗೆ |
| ರಾಮದೇವರು | ಕುಂಚಿಟಿಗೆ ಜನಾಂಗದವರದು |
| ಧರ್ಮರಾಯ | ತಿಗಳ " |
| ವೇಣುಗೋಪಾಲ | ಗೊಲ್ಲ " |
| ನಗರೇಶ್ವರ | ನಗರ್ತ " |
| ಗಂಗಾಪರಮೇಶ್ವರಿ | ಬೆಸ್ತ ಜನಾಂಗದವರು |
| ಲಕ್ಷ್ಮಿನಾರಾಯಣ | ಗಾಣಿಗ " |
| ರಾಮಲಿಂಗೇಶ್ವರ | ದೇವಾಂಗ " |
| ಕಾಳಿಕಾ ಕಮಟೇಶ್ವರ | ಅಕ್ಕಸಾಲಿಗ " |
| ಆದಿನಾರಾಯಣ | ನಾಮಧಾರಿ ನಗರ್ತ " |
| ಚೌಡೇಶ್ವರಿ | ತೆಲುಗು ದೇವಾಂಗ " |
| ಚಾಮುಂಡೇಶ್ವರಿ | ಎಲ್ಲಾ ವರ್ಗದ " |

ಹೀಗೆ ಎಲ್ಲಾ ಜನಾಂಗದವರು ತಮ್ಮ ಜಾತಿಧರ್ಮಕ್ಕೆ ಅನುಗುಣವಾಗಿ ವ್ಯಾಪಾರ ವೃತ್ತಿಗಳಲ್ಲಿ ನಿರತವಾಗಿ ಸಹಬಾಳ್ವೆಯಿಂದ ನಡೆಮಕೊಂಡು ಬರುವ ಉದ್ದೇಶದಿಂದ ಕೆಂಪೇಗೌಡರ ಕಾಲದಲ್ಲಿ ಪ್ರತಿಜಾತಿಯವರ ಬೇರೆ ಬೇರೆ ಪೇಟೆಗಳು ಹಾಗೂ ದೇವಸ್ಥಾನಗಳು ನಿರ್ಮಾಣಗೊಂಡಿದ್ದವು. ಅದೇ ರೀತಿಯಲ್ಲಿ ಈ ನಗರೇಶ್ವರಸ್ವಾಮಿ ದೇವಸ್ಥಾನವೂ ಒಂದಾಗಿದೆ.

## ಕೋಟೆ ಆಂಜನೇಯ ದೇವಸ್ಥಾನ

ಬೆಂಗಳೂರಿನಲ್ಲಿ ಕಾಣಬರುವ ಪುರಾತನ ದೇವಾಲಯಗಳಲ್ಲಿ ಕೋಟೆ ಆಂಜನೇಯಸ್ವಾಮಿ ದೇವಸ್ಥಾನವೂ ಒಂದು. ಮಹಾದ್ವಾರವು ಪಶ್ಚಿಮಾಭಿಮುಖವಾಗಿದ್ದು ಎತ್ತರವಾದ ರಾಜಗೋಪುರವನ್ನು ಹೊಂದಿದೆ.

ಗರ್ಭಗುಡಿಯಲ್ಲಿ ಸುಮಾರು ಒಂದು ಅಡಿ ಎತ್ತರದ ಆಂಜನೇಯಸ್ವಾಮಿ ವಿಗ್ರಹವಿದೆ. ಬಾಲದಲ್ಲಿ ಗಂಟೆ, ಮುಡಿಕಟ್ಟಿರುವುದು ಹಾಗೂ ಕೈಯಲ್ಲಿ ಮಾವಿನಕಾಯಿ ಗೊಂಚಲು ಹಿಡಿದಿರುವುದನ್ನು ಗಮನಿಸಿದಾಗ ಶ್ರೀ ವ್ಯಾಸ

ತೀರ್ಥರಿಂದ ಇದು ಪ್ರತಿಷ್ಠಾಪನೆಗೊಂಡು ಅವರಿಂದ ಪೂಜಿಸಲ್ಪಟ್ಟಿರಬೇಕೆಂದು ಊಹಿಸಬಹುದಾಗಿದೆ.

ಈ ಪುಟ್ಟ ಆಂಜನೇಯನ ಹಿಂಭಾಗದ ಬಲಗಡೆ ಸುಮಾರು ಅಡಿ ಎತ್ತರದ ಆಂಜನೇಯನನ್ನು ಒರಗಿಸಿ ಇಡಲಾಗಿದೆ. ಈ ವಿಗ್ರಹವು ಭಿನ್ನವಾಗಿದ್ದು ಹಿಂದೆ ಇದು ದೇವಸ್ಥಾನದ ಹಿಂದಿದ್ದ ಕಂದಕದಲ್ಲಿತ್ತೆಂದೂ: ವಿಕ್ಟೋರಿಯಾ ಆಸ್ಪತ್ರೆ ಕಟ್ಟಿದ ಕಂಟ್ರಾಕ್ಟರ್ ಒಬ್ಬರು ತಮಗಾದ ಸ್ವಪ್ನದಂತೆ ಈ ಆಂಜನೇಯನನ್ನು ಇಲ್ಲಿ ತಂದು ಇಟ್ಟಿದ್ದಾರೆಂದು ತಿಳಿದು ಬರುತ್ತದೆ. ಹನುಮದ್ ಜಯಂತಿ ಮುಂತಾದ ವಿಶೇಷ ದಿನಗಳಲ್ಲಿ ಇಲ್ಲಿ ವಿಶೇಷ ಪೂಜಾದಿಗಳು ನಡೆಯಲ್ಪಡುತ್ತದೆ.

## ಕೋಟೆ ವೆಂಕಟರಮಣ ಸ್ವಾಮಿ ದೇವಸ್ಥಾನ

ಹಿಂದೆ ಬೆಂಗಳೂರು ಕೋಟೆಯ ಒಳಭಾಗದಲ್ಲಿದ್ದ ದೇವಸ್ಥಾನಗಳಲ್ಲಿ ಕೋಟೆ ವೆಂಕಟರಮಣಸ್ವಾಮಿ ದೇವಸ್ಥಾನವೂ ಒಂದು.

ತಿರುಪತಿಯ ಶ್ರೀನಿವಾಸ ದೇವರ ಮೂಲ ವಿಗ್ರಹ ಹೋಲಿಕೆಯಂತೆ ಕಂಡುಬರುವ ಇಲ್ಲಿನ ವೆಂಕಟರಮಣ ಸ್ವಾಮಿ ವಿಗ್ರಹವು ಸುಮಾರು ಮೂರು ಅಡಿಗಳಲ್ಲಿ ಎರಡು ಅಡಿ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ.

1687 ರಲ್ಲಿ ಈ ದೇವಸ್ಥಾನವನ್ನು ಆಳಿದ ಅರಸರಾದ ಮೈಸೂರಿನ ಚಿಕ್ಕದೇವರಾಜ ಒಡೆಯರು ಕಟ್ಟಿಸಿರುತ್ತಾರೆ.

ನಗರದ ಗತ ವೈಭವವನ್ನು ಸಾರುವ ಅಳಿದುಳಿದ ಕೆಲವೇ ಸ್ಮಾರಕಗಳಲ್ಲಿ ಈ ದೇವಸ್ಥಾನವೂ ಒಂದಾಗಿದ್ದು ಈ ದೇವಸ್ಥಾನಕ್ಕೆ ಸಂಬಂಧಪಟ್ಟ ಶಾಸನವೊಂದು ಕೆಂಗೇರಿ ಹೋಬಳಿ ಕೊತ್ತನೂರು ಗ್ರಾಮದ ಊರ ಬಾಗಿಲ ಬಳಿ ನೆಟ್ಟಿರುವ 6 ಅಡಿ ಉದ್ದ 3 ಅಡಿ ಅಗಲದ ಒಂದು ಶಿಲಾಶಾಸನದಲ್ಲಿ ಈ ರೀತಿ ಇದೆ.

ಶುಭಮಸ್ತು: ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಗಳು 1705ನೇ ವರ್ತಮಾನಕ್ಕೆ ಸಲ್ಲುವ ಪಾರ್ಥಿವ ನಾಮ ಸಂವತ್ಸರದ

ಶ್ರಾವಣ ಬುಧ ಅಂಗಾರಕ ವಾರ ಶುಭ ಮುಹೂರ್ತವಲ್ಲಿ ಶ್ರೀ ರಾಮಧಾಜಾಧಿ ರಾಜ ಪರಮೇಶ್ವ(ರ) ಪಲುಢ ಪ್ರತಾಪನ ಪತಿಯು ನರಪತಿ ಆತ್ರೇಯು ಗೋತ್ರುದ್ಭವರಾದ ಮಹಿಶೂರ ನಗರದ ಶ್ರೀ ದೇವರಾಜ ವಡ್ಯೆರವರ ಪುತ್ರ ರಾದ ಶ್ರೀ ವೀರ ಚಿಕ್ಕದೇವರಾಜ ಒಡೆಯರವರ ಪುತ್ರರಾದ ಶ್ರೀ ಕಂಠೀರವ ನರಸರಾಜ ವಡೇರಯ್ಯನವರು ಶ್ರೀರಂಗ ಪಟ್ಟಣದ ಸಿಂಹಾಸನಾ ರೂಢ ರಾಗಿ ಪೃಥುವೀ ಸಾಮ್ರಾಜ್ಯವಾಳುತ್ತಿದ್ದು ತಮ್ಮ ಆಳ್ವಿಕೆಗೆ ಸಲ್ಲುವ ಬೆಂಗಳೂರು ಕೋಟೆ ಒಳಗೆ ತಮ್ಮ ಅಪ್ಪಾಜಿಯವರು ನೂತನವಾಗಿ ಪ್ರತಿಷ್ಠೆ ಮಾಡಿಸಿದಂತಾ ಶ್ರೀ ವೆಂಕಟೇಶ್ವರಸ್ವಾಮೀಜಿಯುವರ ಪಂಡಿತ್ರರ ದೀಪಾರಾಧನೆಗೆ ವೇಡದ ಹಳ್ಳಿ ಗ್ರಾಮ-ಬಿಲ್ಲಪ್ಪನ ಹಳ್ಳಿ ಗ್ರಾಮವನ್ನು ಧರ್ಮಕ್ಕೆ ಬಿಡ ಲಾಗಿದೆ ಎಂದು ತಿಳಿಸಲಾಗಿದೆ. ದೇವಸ್ಥಾನದ ಹೊರಭಾಗದಲ್ಲಿ ಗರುಡ ಕಂಬವಿದೆ.

ಮಹಾದ್ವಾರ ಹಾಗೂ ನವರಂಗ ಹಾಗೂ ಮುಖ ಮಂಟಪಗಳಿಂದ ಕೂಡಿರುವ ಈ ದೇಗುಲದ ಮುಖ ಮಂಟಪವು ನೋಡಲು ಅಂದವಾಗಿದ್ದು ಹೊಯ್ಸಳ ಶೈಲಿಯ ಶಿಲ್ಪದಂತೆ ಕಂಡುಬರುತ್ತದೆ.

ಕಂಸ ಸಿಂಹಗಳಿಂದ ಅಲಂಕೃತವಾಗಿರುವ ಕಲ್ಲು ಕಂಬಗಳು ಮುಖ ಮಂಟಪಕ್ಕೆ ಮೆರಗುಕೊಟ್ಟಿದೆ. ಕೆಳಗಿನ ಶಿಲಾ ಹಸ್ತಗಳನ್ನು ತುಳಿದು ಮುಂದಿನ ಕಾಲುಗಳನ್ನು ಮೇಲೆತ್ತಿ ನೆಗದಿರುವ ಸಿಂಹಗಳ ಮೇಲೆ ಕಡಿವಾಣ ಹಿಡಿದು ಸವಾರಿ ಮಾಡುತ್ತಿರುವ ಮೂರ್ತಿಗಳನ್ನುಳ್ಳ ಕಂಬಗಳು ಹಾಗೂ ಒಂಭತ್ತು ಅಂಕಣಗಳುಳ್ಳ ಈ ಮುಖಮಂಟಪ ನವರಂಗ ಮಂಟಪದಂತಯೆ ಇದೆ.

ಗರ್ಭಗುಡಿಯಲ್ಲಿ ಒಂದೇ ಕಲ್ಲಿನಲ್ಲಿ ಕೆತ್ತಿರುವ ಪ್ರಭಾವಳಿ ಮತ್ತು ಕಿರೀಟ ಮಂಟಪದಿಂದ ಶೋಭಿಸುವ ವೆಂಕಟರಮಣಸ್ವಾಮಿ, ಶಂಖಚಕ್ರ ಗಾಧಾ ಪದ್ಮಧಾರಿಯಾಗಿದ್ದು ತಿರುಪತಿ ಶ್ರೀನಿವಾಸನ ನೆನಪು ಮಾಡಿಕೊಡು ತ್ತದೆ.

ದೇವಸ್ಥಾನದ ಈಶಾನ್ಯ ಮೂಲೆಯಲ್ಲಿ ಸ್ವರ್ಗದ ಬಾಗಿಲಿವೆ. ಎತ್ತರ ವಾದ ಮಹಾದ್ವಾರವನ್ನು ಹೊಂದಿರುವ ಈ ವೈಕುಂಠದ ಬಾಗಿಲಿನ ಮೇಲ್

ಭಾಗದಲ್ಲಿ ಎತ್ತರವಾದ ಗೋಪುರವಿದೆ. ಉತ್ತರಾಯಣ ಪುಣ್ಯಕಾಲ ವೈಕುಂಠ ಏಕಾದಶಿ, ಮುಕ್ಕೋಟಿ ದ್ವಾದಶಿ, ಶ್ರೀನಿವಾಸನ ದರ್ಶನ ಪಡೆಯುವದು.

ಗರ್ಭಗುಡಿಯ ಮೇಲ್ಭಾಗದಲ್ಲಿರುವ ವಿಮಾನ ಗೋಪುರದ ಶಕ್ತಿ ಸ್ಥಾನಗಳ ಮೂಲೆಯಲ್ಲಿ ಸಿಂಹಲಾಂಛನ ನಿಲ್ಲಿಸಿರುವುದು ಹಾಗೂ ಗರ್ಭ ಗುಡಿಯ ಹೊರ ಪ್ರಾಕಾರದ ಗೋಡೆಯ ಮೇಲೆ ಗಿರಿಜಾ ಕಲ್ಯಾಣಗಳ ದೃಶ್ಯ ಗಳನ್ನು ಗಮನಿಸಿದಾಗ ಶಿವದೇವಾಲಯದ ನೆನಪನ್ನು ಮಾಡಿಕೊಡುತ್ತದೆ. ನಂದಿಬೆಟ್ಟದ ಭೋಗ ನಂದೀಶ್ವರ ದೇವಸ್ಥಾನದಲ್ಲೂ ಇದೇ ರೀತಿಯ ಚಿತ್ರ ಗಳಿವೆ. ಸಾಮಾನ್ಯವಾಗಿ ವೃಷಭ ದೇವಾಲಯಗಳಲ್ಲಿ ಈ ರೀತಿಯ ಚಿತ್ರಗಳು ಕಾಣಬರುವುದಿಲ್ಲ.

ಗರ್ಭಗುಡಿಯ ಎಡಭಾಗದ ಪ್ರಾಕಾರದಲ್ಲಿ ಪ್ರತ್ಯೇಕವಾದ ಪದ್ಮಾವತಿ ಯವರ ಆಲಯವಿದೆ. ಕೂತಿರುವ ಭಂಗಿಯಲ್ಲಿರುವ ಅಮ್ಮನವರ ವಿಗ್ರಹವು ಚಿತ್ತಾಕರ್ಷಕವಾಗಿದೆ.

ಬಲಭಾಗಕ್ಕೆ ಆಂಜನೇಯಸ್ವಾಮಿ ದೇವಸ್ಥಾನವಿದೆ.

ಬೆಂಗಳೂರಿನ ಅತ್ಯಂತ ಪುರಾತನ ದೇವಸ್ಥಾನಗಳಲ್ಲಿ ಒಂದಾಗಿ ಐತಿ ಹಾಸಿಕ ಹಿನ್ನೆಲೆಯನ್ನೊಳಗೊಂಡ ಈ ದೇವಸ್ಥಾನವು ಗತವೈಭವದ ಮೂಕ ಸಾಕ್ಷಿಯಾಗಿ ನಿಂತಿದೆ.

## ಬನಶಂಕರಿ ದೇವಸ್ಥಾನ

1915ರಲ್ಲಿ ಬೆಂಗಳೂರಿನ ಶ್ರೀ ಬಸಪ್ಪಶೆಟ್ಟರು ಎಂಬುವರಿಂದ ನಿರ್ಮಿತ ವಾದ ಶ್ರೀ ಬನಶಂಕರಿ, ಹಾಗೂ ಜಯನಗರ ಬಡಾವಣೆಗಳ ವಿಭಜನೆಯ ರಸ್ತೆಯಾದ ಬೆಂಗಳೂರು ಕನಕಪುರ ರಸ್ತೆಯಲ್ಲಿದೆ.

ತ್ರೇತಾಯುಗದಲ್ಲಿ ದೇವಾಸುರರುಗಳ ಪರಮ ವೈರಿಯಾಗಿ ಅವರಿಗೆ ಕಿರುಕುಳ ಕೊಡುತ್ತಿದ್ದ ಮಹಿಷಾಸುರನನ್ನು ಕೊಂದು ಲೋಕಕ್ಷೇಮವನ್ನುಂಟು ಮಾಡಬೇಕೆಂದು ಸಮಸ್ತ ದೇವತೆಗಳು ತ್ರಿಮೂರ್ತಿಗಳನ್ನು ಕೇಳಿಕೊಳ್ಳು ತ್ತಾರೆ. ಬ್ರಹ್ಮ, ವಿಷ್ಣು, ಮಹೇಶ್ವರರ ಅರಿಕೆಯಂತೆ ಸರ್ವಶಕ್ತಿ ಸಂಪನ್ನಳಾದ

ಆದಿಶಕ್ತಿಯು ಆಶ್ವೀಜ ಶುದ್ಧ ಅಷ್ಟಮಿಯಂದು ಜನ್ಮತಾಳಿ ರಾಕ್ಷಸರುಗಳನ್ನು ನಾಶಮಾಡಿ ಲೋಕ ಕಲ್ಯಾಣವನ್ನುಂಟು ಮಾಡುತ್ತಾಳೆ. ಅದೇ ಆದಿಶಕ್ತಿಯು ಕಲಿಯುಗದಲ್ಲಿ ಬನಶಂಕರಿ ಎಂಬ ನಾಮಧೇಯದಿಂದ ಅವತಾರ ತಾಳು ತ್ತಾಳೆ. ಈಕೆಗೆ ಶಾಕಾಂಬರಿ ಎಂದೂ ಕರೆಯಲಾಗುತ್ತದೆ. ಅಗಸ್ತ್ಯರ ಪ್ರಾರ್ಥನೆಯಂತೆ ತನ್ನ ಶರೀರದಿಂದ ಶಾಖಾಹಾರಗಳನ್ನು ಉತ್ಪತ್ತಿಮಾಡಿ, ಮಳೆ ಬೆಳೆಗಳಿಲ್ಲದೆ ಕಂಗಾಲಾಗಿದ್ದ ಜನಗಳನ್ನು ಮೃಗಪಕ್ಷಿಗಳನ್ನು ಕಾಪಾಡು ತ್ತಾಳೆ. ಈ ಕಾರಣದಿಂದ ಈಕೆಗೆ ಶಾಕಾಂಬರಿ ಎಂಬ ಹೆಸರು ಬಂದಿದೆ.

ಕರ್ನಾಟಕದಲ್ಲಿ ದೇವಿಯ ಅವತಾರಗಳಲ್ಲಿ ಒಂದಾದ ಬನಶಂಕರಮ್ಮನ ವರ ದೇವಸ್ಥಾನಗಳು ಬಹಳ ವಿರಳ, ಬಾಗಲಕೋಟೆ ತಾಲ್ಲೂಕಿನ ಬಾದಾಮಿ ಯಲ್ಲಿ ಒಂದು ದೇವಸ್ಥಾನವನ್ನು ಕಾಣಬಹುದು. ಈ ಸ್ಥಳವೇ ದೇವಿ ಅವತರಿಸಿದ ಮೂಲಸ್ಥಾನವೆಂದು ತಿಳಿದು ಬರುತ್ತದೆ. ಬಾದಾಮಿ ಪ್ರದೇಶ ಹಿಂದೆ, ದಂಡಕಾರಣ್ಯವಾಗಿದ್ದು ಅದರ ಒಂದು ಭಾಗವಾದ ಚಂಪಕಾವನವೇ ದೇವಿಯ ಅವತಾರ ಸ್ಥಳವಾಗಿದೆ.

ಕರ್ನಾಟಕದಿಂದ ನಾನಾ ಮೂಲೆಗಳಿಂದ ಭಕ್ತರುಗಳು ಇಲ್ಲಿಗೆ ಆಗಮಿಸಿ ತಾಯಿಯ ಸೇವೆ ಮಾಡುತ್ತಿದ್ದರು.

ಬೆಂಗಳೂರಿನ ಶ್ರೀ ಬೋಪಣ್ಣನವರ ಬಸಪ್ಪಶೆಟ್ಟರು ಎಂಬುವರ ಮನೆ ದೇವರು ಈ ಬನಶಂಕರಿ ದೇವಿಯಾಗಿದ್ದು ಶ್ರೀಯುತರು ವರ್ಷಕ್ಕೆ ಎರಡು ಬಾರಿಯಾದರೂ ಬಾದಾಮಿಗೆ ರೈಲಿನಲ್ಲಿ ಯಾಗಲಿ ಇಲ್ಲವೇ ಎತ್ತಿನ ಗಾಡಿ ಯಲ್ಲಾಗಲಿ ತೆರಳಿ ಕುಲದೇವತೆಗೆ ಪೂಜೆ ಮಾಡಿ ಹರಕೆಗಳನ್ನು ಒಪ್ಪಿಸಿ ಬರುತ್ತಿದ್ದರು.

ತುಂಬಾ ದೈವಭಕ್ತರಾದ ಶ್ರೀಯುತರು ಹೀಗೆ ಒಮ್ಮೆ ಬಾದಾಮಿಗೆ ತೆರಳಿ ಪೂಜೆ ಮಾಡಿ ದೇವಿಯ ಮುಂದೆ ಕರ ಜೋಡಿಸಿ "ತಾಯಿ, ನಿನ್ನ ಸೇವೆಗೆ ನಾವು ಇಷ್ಟು ದೂರ ಬರಬೇಕೆ ? ನಿನ್ನ ದರ್ಶನ ನಮಗೆ ಸದಾ ದೊರಕುವಂತಾಗಬಾರದೆ" ಎಂದು ಬೇಡಿಕೊಂಡು ಅಂದು ರಾತ್ರಿ ಅಲ್ಲೇ ತಂಗಿದ್ದರು. ಬೆಳಗಿನ ಜಾವ ಸ್ವಪ್ನದಲ್ಲಿ "ನೀವು ನನ್ನ ದರ್ಶನಕ್ಕಾಗಿ ಇಲ್ಲಿಗ ಬರುವ ಶ್ರಮ ಬೇಡ. ನಾನು ನಿಮ್ಮಲ್ಲೇ ಬರುತ್ತೇನೆ. ನಿಮ್ಮ ಊರಿನ

ದಕ್ಷಿಣ ಭಾಗದ ಅರಣ್ಯದಲ್ಲಿ ಜ್ಯೋತಿಯೊಂದು ಬೆಳಗುತ್ತಿವೆ. ಆ ಸ್ಥಳ ನಾನಿರಲು ಯೋಗ್ಯವಾದದ್ದಾಗಿದೆ. ಆ ಸ್ಥಳದಲ್ಲಿ ನನ್ನ ಮೂರ್ತಿ ಪ್ರತಿಷ್ಠಾಪಿಸಿ ದೇವಾಲಯ ನಿರ್ಮಾಣ ಮಾಡು"–ಎಂದು ಬನಶಂಕರಿ ದೇವಿ ಹೇಳಿದಂತೆ ಇವರಿಗೆ ಆಯಿತು.

"ತಾಯಿ ಕರುಣಾಮಯಿ, ನಮ್ಮ ಮೇಲೆ ನಿನಗೆ ದಯೆ ಬಂತೇ, ನಾನು ಕೃತಾರ್ಥನಾದೆ" ಎಂದು ಮತ್ತೊಮ್ಮೆ ದೇವಿಗೆ ವಂದಿಸಿ ಬೆಂಗಳೂರಿಗೆ ಹಿಂತಿರುಗಿ ಬಂದ ತಕ್ಷಣ ತಾಯಿ ತೋರಿಸಿಕೊಟ್ಟ ಕುರುಹುವಿನಂತೆ ದೇವಾಲಯ ನಿರ್ಮಾಣ ಮಾಡಲು ಉದ್ಯುಕ್ತರಾಗಿ ತಮ್ಮ ಕುಟುಂಬ ಹಾಗೂ ಬನಶಂಕರಿದೇವಿಯ ಭಕ್ತ ಸಮೂಹದ ನೆರವಿನಿಂದ ತಾ॥ 15-5-1915 ರಲ್ಲಿ ಬನಶಂಕರಿಯನ್ನು ಪ್ರತಿಷ್ಠಾಪಿಸಿದರು.

ಬಸಪ್ಪಶೆಟ್ಟರ ಕುಟುಂಬದ ಸದಸ್ಯರಾದ ಸೋಮಣ್ಣ ಶೆಟ್ಟರು ಹಾಗೂ ಶಂಕರಪ್ಪ ಶೆಟ್ಟರು ಎಂಬುವರು ದೇವಸ್ಥಾನದ ಅಭಿವೃದ್ಧಿಗೆ ಮೂಲಕಾರಣರಾಗಿದ್ದು, ದೇವಸ್ಥಾನದಲ್ಲಿ ಸೂರ್ಯ ಚಂದ್ರರಿರುವ ತನಕ ಪೂಜಾದಿ ಕಾರ್ಯಗಳು ಸಾಂಗವಾಗಿ ನೆರವೇರಲು ತಮ್ಮದೇ ಆದ ಮೂವತ್ತು ಎಕರೆ ಭೂಮಿಯನ್ನು ಈ ದೇವಸ್ಥಾನಕ್ಕಾಗಿ ದಾನ ಮಾಡಿರುತ್ತಾರೆ. ಈಗ ಅದರಲ್ಲಿ ಇಪ್ಪತ್ತು ಎಕರೆ ಪ್ರದೇಶವನ್ನು ಬೆಂಗಳೂರು ಪ್ರಾಧಿಕಾರವು ನಿವೇಶನಗಳನ್ನು ಮಾಡಿ ಅಭಿವೃದ್ಧಿ ಪಡಿಸಲು ಒತ್ತುವರಿ ಮಾಡಿಕೊಂಡಿರುತ್ತಾರೆ. ಉಳಿದ ಜಾಗದಲ್ಲಿ ಹೊರ ಊರುಗಳಿಂದ ಬಂದ ಜನ ಗುಡಿಸಲುಗಳನ್ನು ನಿರ್ಮಿಸಿಕೊಂಡು, ದೇವಸ್ಥಾನದ ನೈರ್ಮಲ್ಯಕ್ಕೆ ಧಕ್ಕೆ ತಂದಿದ್ದಾರೆ.

ಗರ್ಭಗುಡಿಯಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಕಪ್ಪು ಶಿಲೆಯ ಬನಶಂಕರಿದೇವಿ ಸೌಮ್ಯ ಮುಖದಿಂದ ಕೂಡಿದ್ದು, ಕುಳಿತಿರುವ ಭಂಗಿಯಲ್ಲಿದೆ.

ವಿಶಾಲವಾದ ಮುಖಮಂಟಪವಿದ್ದು ಇಲ್ಲಿ, ಗರ್ಭಗುಡಿಯ ಬಲಭಾಗಕ್ಕೆ ಗಣೇಶನನ್ನು ಎಡಭಾಗಕ್ಕೆ ಈಶ್ವರನನ್ನು ಪ್ರತಿಷ್ಠಾಪಿಸಲಾಗಿದೆ ಗರ್ಭಗುಡಿಯ ಗೋಡೆಗಳನ್ನು ಅಮೃತಶಿಲೆಯಿಂದ ಅಲಂಕರಿಸಲಾಗಿದೆ.

ಚಿಕ್ಕದಾದ ಮಹಾದ್ವಾರವನ್ನು ಪ್ರವೇಶಿಸುತ್ತಿದ್ದಂತೆ, ಎಡಭಾಗದಲ್ಲಿ ಚೌಡೇಶ್ವರಿ, ಶಾಕಾಂಬರಿ ಹಾಗೂ ಶ್ರೀದೇವಿಯವರ ದೇವಸ್ಥಾನವಿದೆ.

ಗರ್ಭಗುಡಿಯ ಮೇಲ್ಭಾಗದಲ್ಲಿ ಗೋಳಾಕಾರವಾದ ಗೋಪುರವಿದೆ. ದೇವಸ್ಥಾನವನ್ನು ಪ್ರವೇಶಿಸುವ ದ್ವಾರದ ಮೇಲ್ಭಾಗದಲ್ಲಿ ಸಿಂಹವಾಹಿನಿ ಬನಶಂಕರಮ್ಮನವರ ವಿಗ್ರಹವಿದೆ.

ಪ್ರತಿವರ್ಷ ಪುಷ್ಯ ಶುದ್ಧ ಪೌರ್ಣಮಿಯಂದು ಇಲ್ಲಿ ರಥೋತ್ಸವ ನಡೆಯುತ್ತದೆ. ಆ ಸಮಯದಲ್ಲಿ ಜಾತ್ರೆ ನಡೆಯುತ್ತದೆ.

**ರಾಹುಕಾಲ ಪೂಜೆ** :— ಮಂಗಳವಾರ, ಶುಕ್ರವಾರ ಹಾಗೂ ಭಾನುವಾರಗಳಂದು ಇಲ್ಲಿ ನಡೆಯುವ ರಾಹುಕಾಲ ಪೂಜೆಯು ಈ ದೇವಸ್ಥಾನದ ಪ್ರಮುಖ ಕಾರ್ಯಕ್ರಮವಾಗಿದ್ದು ಆ ದಿನಗಳಲ್ಲಿ ಸಾವಿರಾರು ಜನ ಭಕ್ತಾದಿಗಳು ರಾಹುಕಾಲವನ್ನು ಎದುರು ನೋಡುತ್ತಾ, ಸಾಲಾಗಿ ನಿಂತು ತಟ್ಟೆಗಳಲ್ಲಿ ನಿಂಬೆಹಣ್ಣಿನ ಸಿಪ್ಪೆಗಳಲ್ಲಿ ತುಪ್ಪದ ಬತ್ತಿಗಳ ದೀಪವನ್ನು ದೇವಿಯ ಮುಂದೆ ಹಚ್ಚಲು ಕಾತುರವಾಗಿ ನಿಂತಿರುವುದನ್ನು ನೋಡಿದಾಗ ಮೈ ರೋಮಾಂಚನಗೊಂಡು ನಮ್ಮನ್ನು ಬೇರೊಂದು ಲೋಕಕ್ಕೆ ಕೊಂಡೊಯ್ಯುತ್ತದೆ.

ರಾಹುಕಾಲದಲ್ಲಿ ದೇವಿಗೆ ಆರತಿ ಬೆಳಗಿದರೆ ಅವರವರ ಅಭೀಷ್ಟಗಳು ನೆರವೇರುವುದೆಂಬ ನಂಬಿಕೆ ಇಲ್ಲಿದೆ. ಮಂತ್ರಿಸಿದ ನಿಂಬೆಹಣ್ಣುಗಳನ್ನು ಇಲ್ಲಿಂದ ಕೊಂಡೊಯ್ದು ತಮ್ಮ ಮನೆಗಳ ದೇವರ ಮನೆಗಳಲ್ಲಿ ಇಟ್ಟು ಅದಕ್ಕೆ ಪ್ರತಿದಿನವೂ ಧೂಪ ಕೊಡುವ ಪದ್ಧತಿ ಭಕ್ತರಲ್ಲಿ ಬಂದಿದ್ದು ಹೀಗೆ ಹದಿನಾರು ವಾರಗಳ ಕಾಲ ಮಾಡಿದರೆ, ಅವರ ಇಷ್ಟಾರ್ಥಗಳನ್ನು ದೇವಿ ನೇರವೇರಿಸುವಳು ಎಂಬ ನಂಬಿಕೆಯೂ ಸಹಾ ಇಲ್ಲಿದೆ.

ಈ ಬನಶಂಕರಿ ದೇವಸ್ಥಾನವು ಕರ್ನಾಟಕದ ಎರಡನೇ ಬನಶಂಕರಿ ಅಮ್ಮನವರ ಆಲಯವಾಗಿದ್ದು ಅನುದಿನವೂ ಅನೇಕ ಭಕ್ತಾದಿಗಳನ್ನು ಆಕರ್ಷಿಸುತ್ತಿರುವ ಶಕ್ತಿ ಸ್ಥಾನವಾಗಿದೆ.

## ಗಾಳಿ ಹನುಮಂತರಾಯ ದೇವಸ್ಥಾನ

ಬೆಂಗಳೂರಿನ ಪಶ್ಚಿಮಕ್ಕೆ ಮೈಸೂರು ರಸ್ತೆಯಲ್ಲಿ ಬ್ಯಾಟರಾಯನ ಪುರದ ಸಮೀಪದಲ್ಲಿರುವ ಗಾಳಿ ಹನುಮಂತರಾಯ ದೇವಸ್ಥಾನವು ಅತಿ ಪುರಾತನವಾದ ದೇವಾಲಯವಾಗಿದೆ.

1852ರ ಸುಮಾರಿನಲ್ಲಿ ಕರ್ನಾಟಕ ಸಿಂಹಾಸನಾಧೀಶ್ವರರೂ ಹಾಗೂ ಶ್ರೀ ಬ್ರಹ್ಮಣ್ಯ ತೀರ್ಥರ ಸಾಕ್ಷಾತ್ ಶಿಷ್ಯರು ಆದ ಶ್ರೀ ಶ್ರೀ ವ್ಯಾಸರಾಜ ಮಹಾಸ್ವಾಮಿಗಳು ಚನ್ನಪಟ್ಟಣದ ಬಳಿ ಇರುವ ಅಬ್ಬೂರಿನಿಂದ, ಮುಳು ಬಾಗಿಲಿಗೆ ಹೋಗುವ ಹಾದಿಯಲ್ಲಿ ವೃಷಭಾವತಿ ನದಿಯ ದಂಡೆಯ ಮೇಲೆ ಬೀಡು ಬಿಡುತ್ತಾರೆ. ರಾತ್ರಿ ಸ್ವಪ್ನದಲ್ಲಿ ಕೋತಿಗಳ ಹಿಂಡೇ ಬಂದು ಇವರನ್ನು ಸುತ್ತುವರಿದಂತೆ ಕಾಣುತ್ತದೆ. ಈ ಘಟನೆಯಿಂದಾಗಿ ಇಲ್ಲಿ ಒಂದು ಪ್ರಾಣ ದೇವರನ್ನು ಪ್ರತಿಷ್ಠಾಪಿಸುವ ಉದ್ದೇಶದಿಂದ ಹತ್ತಿರದ ಬಂಡೆಯ ಮೇಲೆ ಆಂಜನೇಯನನ್ನು ಕೆತ್ತಿಸಿ ಪ್ರತಿಷ್ಠಾಪಿಸಿರುತ್ತಾರೆ.

ಆರು ಅಡಿ ಎತ್ತರದ ಐದು ಅಡಿ ಅಗಲದ ಬೃಹತ್ತಾದ ಬಂಡೆಯ ಮೇಲೆ ಮೂಡಿ ಬಂದಿರುವ ಪ್ರಾಣದೇವರು ಪಶ್ಚಿಮಾಭಿಮುಖವಾಗಿದ್ದು, ಆತನ ಎರಡೂ ನೇತ್ರಗಳ ದರ್ಶನ ಭಾಗ್ಯ ಭಕ್ತರಿಗಾಗಿ ಅವನ ಪೂರ್ಣ ಕಟಾಕ್ಷ ಇವರ ಮೇಲೆ ಆಗುವಂತಿದೆ.

ಪ್ರಾಣದೇವರ ಒಂದು ಕೈ ಸೊಂಟದ ಮೇಲೂ ಮತ್ತೊಂದು ಕೈ ವಿಜಯ ಸಂಕೇತವಾಗಿ ಮೇಲಕ್ಕೆ ಹಿಡಿದಿದ್ದು ಅಭಯ ಹಸ್ತವಾಗಿದೆ.

ಆಂಜನೇಯನ ಪಾದದ ಕೆಳಗೆ ರಾಕ್ಷಸನೊಬ್ಬನ ವಿಗ್ರಹವಿದೆ. ಈತ ರಾವಣನ ಮಗ ಅಕ್ಷಯಕುಮಾರನಾಗಿದ್ದಾನೆ.

ಸೀತಾನ್ವೇಷಣೆಗಾಗಿ ಸಮುದ್ರ ಹಾರಿ ಲಂಕಾ ಪ್ರವೇಶಿಸಿ, ಸೀತೆಯನ್ನು ಕಂಡು ನಂತರ ಲಂಕಾ ರಾಜ್ಯವನ್ನು ಅಲ್ಲೋಲ ಕಲ್ಲೋಲ ಮಾಡಿದಾಗ ಇವನನ್ನು ಬಂಧಿಸಲು ಬರುವ ರಾವಣನ ಮಗ ಅಕ್ಷಯಕುಮಾರನು ಮೊಟ್ಟ ಮೊದಲನೆಯವನಾಗಿ ಆಂಜನೇಯನ ಕಾಲ ತುಳಿತಕ್ಕೆ ಬಲಿಯಾಗುತ್ತಾನೆ. ಈ ಘಟನೆಯುಳ್ಳ ಆಧಾರದ ಮೇಲೆ ಕೆತ್ತಲಾಗಿರುವ ಈ ಪ್ರಾಣದೇವರನ್ನು

ಪ್ರತಿಷ್ಠಾಪಿಸಿ, ನಿನ್ನಲ್ಲಿಗೆ ಬರುವ ಭಕ್ತವೃಂದಕ್ಕೆ ಆಶ್ರಯದಾತನಾಗು, ಅವರ ಆಸೆ ಆಕಾಂಕ್ಷೆಗಳನ್ನು ನೆರವೇರಿಸು, ಬಿಸಲು ಮಳೆ ಗಾಳಿಗಳಿಗೆ ಮೈ ಒಡ್ಡಿ ನಿಂತಿರುವ ನೀನು "ಗಾಳಿ ಹನುಮಂತರಾಯನಾಗಿ" ಭಕ್ತರ ಭಯ ಭೀತಿಗಳನ್ನು ಹೋಗಲಾಡಿಸು ಎಂದು ವ್ಯಾಸರಾಯರು ಈ ಆಂಜನೇಯನನ್ನು ಪ್ರಾರ್ಥಿಸಿರುತ್ತಾರೆ. ಅದರಂತೆಯೇ ಈ ಗಾಳಿ ಹನುಮಂತರಾಯ ಇಂದಿಗೂ ಗಾಳಿ ಸೋಕಿದವರಿಗೆ, ಭಯ ಭೀತರಾದವರಿಗೆ, ಪರಮ ವೈದ್ಯನಾಗಿ, ಕೃಪಾ ಕಟಾಕ್ಷನಾಗಿ ಅವರ ಕಷ್ಟಗಳನ್ನು ನಿವಾರಿಸುತ್ತಿದ್ದಾನೆ.

ಅತಿ ಸುಂದರವೂ ಆಕರ್ಷಣೀಯವೂ ಆಗಿ ಭಕ್ತಿ ಭಾವಗಳನ್ನು ಹುಟ್ಟಿಸುವ ಈ ಗಾಳಿ ಹನುಮಂತರಾಯನ ಬಾಲದಲ್ಲಿ ಗಂಟೆ ಇದ್ದು, ಹಿಂಭಾಗಕ್ಕೆ ಮುಡಿ ಕಟ್ಟಿರುವಂತಿದೆ. ಈ ಚಿಹ್ನೆಗಳನ್ನು ಗಮನಿಸಿದಾಗ ಈ ಪ್ರಾಣದೇವರು ವ್ಯಾಸರಾಯರಿಂದಲೇ ಪ್ರತಿಷ್ಠಾಪಿಸಿದೆಂದು ಹೇಳಬಹುದಾಗಿದೆ.

ಶ್ರೀ ವ್ಯಾಸರಾಯರು ಪ್ರತಿಷ್ಠಾಪಿಸಿರುವ ಎಲ್ಲಾ ಪ್ರಾಣದೇವರುಗಳಲ್ಲೂ ಈ ತರಹದ ಚಿಹ್ನೆಗಳನ್ನು ಕಾಣಬಹುದು.

ಸುಮಾರು ಆರನೂರ ಮವತ್ತೈದು ಪ್ರಾಣ ದೇವರುಗಳನ್ನು ವ್ಯಾಸರಾಯರು ಪ್ರತಿಷ್ಠಾಪಿಸಿದ್ದು ಈ ಗಾಳಿ ಹನುಮಂತರಾಯ ಆರನೆಯವನೆಂಬ ಪ್ರತೀತಿ ಇದೆ.

ವಾರಕ್ಕೆ ಎರಡು ಬಾರಿ ಈ ದೇವರಿಗೆ ಸಿಂಧೂರ ಲೇಪನವಾಗುತ್ತದೆ. ಈ ರೀತಿಯ ಸಿಂಧೂರ ಲೇಪನ ಬೆಂಗಳೂರಿನ ಯಾವುದೇ ದೇವಸ್ಥಾನದಲ್ಲಿ ಕಾಣಬರುವುದಿಲ್ಲ. ಇದು ಇಲ್ಲಿನ ವಿಶೇಷವಾಗಿದೆ.

ಟ್ರಸ್ಟ್ ಒಂದರ ಆಡಳಿತಕ್ಕೆ ಒಳಪಟ್ಟಿರುವ ಈ ದೇವಸ್ಥಾನ ಅದರ ದೈವಭಕ್ತಿ ಕಾರ್ಯದಕ್ಷತೆಗಳಿಂದಾಗಿ ಅಭಿವೃದ್ಧಿ ಹೊಂದುತ್ತಿದ್ದು ದೇವಸ್ಥಾನದ ಮಹಾದ್ವಾರ ಹಾಗೂ ರಾಜಗೋಪುರದ ಕೆಲಸ ಈಗ ನಡೆಯುತ್ತಿದೆ.

ದೇವಸ್ಥಾನವನ್ನು ಪ್ರವೇಶಿಸಿದೊಡನೆ ಎದುರಾಗಿ ರಾಮದೇವರ ದೇವಸ್ಥಾನವಿದೆ. ಗರ್ಭಗುಡಿಯ ಬಲಭಾಗದ ಮುಂಭಾಗಕ್ಕೆ ಶ್ರೀ ಸತ್ಯನಾರಾಯಣ

ಸ್ವಾಮಿ ದೇವಸ್ಥಾನವಿದೆ. ಆರು ಅಡಿ ಎತ್ತರದ ಕಪ್ಪು ಶಿಲೆಯ ಈ ಭವ್ಯ ಮೂರ್ತಿ ನೋಡಲು ಸುಂದರವಾಗಿದ್ದು, ಶಂಖು, ಚಕ್ರ ಗಾದಾ ಪದ್ಮ ಧಾರಿಯಾಗಿದ್ದು ಪೂರ್ವಾಭಿಮುಖವಾಗಿದೆ. ಹಿಂದೆ, ಯೋಗಶಾಲೆ ಇದ್ದ ಜಾಗದಲ್ಲಿ ಶ್ರೀ ಸತ್ಯನಾರಾಯಣ ದೇವರ ಪ್ರತಿಷ್ಠಾಪನೆ ಆಗಿರುವುದರಿಂದ ವಿಶೇಷಸಾನಿಧ್ಯ ಇಲ್ಲಿದ್ದು ಭಕ್ತರ ಅನೇಕ ಕಷ್ಟಗಳನ್ನು ಈ ಸತ್ಯನಾರಾಯಣ ಪರಿಹರಿಸುತ್ತಿದ್ದಾನೆ. ಪ್ರತಿ ಪೌರ್ಣಮಿಯಂದು ಇಲ್ಲಿ ಸತ್ಯನಾರಾಯಣ ಪೂಜೆಗಳು ನಡೆಯುತ್ತವೆ.

ಪ್ರತಿ ಶನಿವಾರ-ಭಾನುವಾರಗಳಂದು ಇಲ್ಲಿ ನೂರಾರು ಭಕ್ತಾದಿಗಳು ನೆರೆದಿರುತ್ತಾರೆ. ಆ ಸಮಯದಲ್ಲಿ ಭೀತರಾದವರಿಗೆ ಯಂತ್ರ ಕಟ್ಟುವ ಹಾಗೂ ಗಾಳಿ ಸೋಕಿದವರಿಗೆ ಗಾಳಿ ಬಿಡಿಸುವ ಕಾರ್ಯ ಇಲ್ಲಿ ನಡೆಯುತ್ತಿದ್ದು ಅನು ದಿನವೂ ಅನೇಕ ಭಕ್ತಾದಿಗಳನ್ನು ಆಕರ್ಷಿಸುತ್ತಿದ್ದಾನೆ, ಈ ಗಾಳಿ ಹನುಮಂತ ರಾಯ.



# ಬೆಂಗಳೂರಿನ ಪ್ರಮುಖ ದೇವಸ್ಥಾನಗಳು

| | | | |
|---|---|---|---|
| 1. | ದೊಡ್ಡ ಗಣಪತಿ | ದೇವಸ್ಥಾನ | ಬಸವನಗುಡಿ |
| 2. | ದೊಡ್ಡ ಬಸವಣ್ಣನ | " | " |
| 3. | ಕಾರಂಜಿ ಆಂಜನೇಯ | " | " |
| 4. | ಬೇಡರ ಕಣ್ಣಪ್ಪ | " | " |
| 5. | ಗವಿ ಗಂಗಾಧರೇಶ್ವರ | " | ಕೆಂಪೇಗೌಡ ನಗರ |
| 6. | ಕೋಟೆ ವೆಂಕಟರಮಣಸ್ವಾಮಿ | " | ಬೆಂಗಳೂರು ಕೋಟೆ |
| 7. | ಕೋಟೆ ಆಂಜನೇಯಸ್ವಾಮಿ | " | " |
| 8. | ಕೋಟೆ ಗಣಪತಿ | " | " |
| 9. | ಸುಬ್ರಹ್ಮಣ್ಯೇಶ್ವರಸ್ವಾಮಿ | " | ಸಜ್ಜನ್‌ರಾವ್ ವೃತ್ತ |
| 10. | ಕನ್ಯಕಾಪರಮೇಶ್ವರಿ | " | " |
| 11. | ಸತ್ಯನಾರಾಯಣ | " | " |
| 12. | ವೆಂಕಟರಮಣಸ್ವಾಮಿ | " | " |
| 13. | ಕಾಶಿ ವಿಶ್ವೇಶ್ವರ | " | ಬಳೇಪೇಟೆ |
| 14. | ಸುಗ್ರೀವ | " | " |
| 15. | ನರಸಿಂಹ ಸ್ವಾಮಿ | " | " |
| 16. | ಶ್ರೀನಿವಾಸ | " | " |
| 17. | ಧರ್ಮರಾಯಸ್ವಾಮಿ | " | ತಿಗಳರಪೇಟೆ |
| 18. | ತುಳಸೀ ತೋಟದ ಬೆಣ್ಣೆ ಕೃಷ್ಣ | " | ತುಳಸೀ ತೋಟ |
| 19. | ರಾಮದೇವರ | " | " |
| 20. | ವೆಂಕಟರಮಣಸ್ವಾಮಿ | " | " |

| | | | |
|---|---|---|---|
| 21. | ಶ್ರೀ ಪೂರ್ಣಪ್ರಸಾದ್ ಆಂಜನೇಯ | ದೇವಸ್ಥಾನ | ರೇಸ್‌ಕೋರ್ಸ್ ರಸ್ತೆ |
| 22. | ಕಾಡು ಮಲ್ಲೇಶ್ವರ | " | ಮಲ್ಲೇಶ್ವರ |
| 23. | ಸುಬ್ರಹ್ಮಣೇಶ್ವರ | " | " |
| 24. | ಶ್ರೀ ನೃಸಿಂಹಸ್ವಾಮಿ | " | " |
| 25. | ಗೋಪಾಲಕೃಷ್ಣ ದೇವರಗುಡಿ | " | " |
| 26. | ಮೌಂಟ್ ಗಣೇಶ | " | " |
| 27. | ಆಂಜನೇಯ | " | " |
| 28. | ಕನ್ಯಕಾಪರಮೇಶ್ವರಿ | " | " |
| 29. | ಅಣ್ಣಮ್ಮದೇವಿ | " | " |
| 30. | ಆಂಜನೇಯ | " | ಮಲ್ಲೇಶ್ವರ ರೈಲ್ವೆ ನಿಲ್ದಾಣ |
| 31. | ಅಣ್ಣಮ್ಮದೇವಿ | " | ಕೆಂಪೇಗೌಡ ವೃತ್ತ |
| 32. | ಗಾಳಿ ಹನುಮಂತರಾಯ | " | ಮೈಸೂರು ರಸ್ತೆ |
| 33. | ಬನಶಂಕರಿ | " | ಬನಶಂಕರಿ ಬಡಾವಣೆ |
| 34. | ಶ್ರೀನಿವಾಸ ದೇವರ | " | " |
| 35. | ಮಂಜುನಾಥೇಶ್ವರ | " | " |
| 36. | ಬಾನಸವಾಡಿ ಆಂಜನೇಯ | " | ಬಾನಸವಾಡಿ |
| 37. | ಸೋಮೇಶ್ವರ | " | " |
| 38. | ಸತ್ಯನಾರಾಯಣ | " | ಅಲಸೂರು |
| 39. | ನಗರೇಶ್ವರಸ್ವಾಮಿ | " | ನಗರ್ತರ ಪೇಟೆ |
| 40. | ಆಂಜನೇಯ | " | " |
| 41. | ಲಕ್ಷ್ಮೀನಾರಾಯಣ | " | " |
| 42. | ಗಂಗಾಪರಮೇಶ್ವರಿ | " | " |
| 43. | ರಾಮಲಿಂಗೇಶ್ವರ | " | " |
| 44. | ಮಹಿಷಾಸುರ ಮರ್ಧಿನಿ | " | " |
| 45. | ಕಾಳಿಕಾ ಕಮಟೇಶ್ವರಿ | " | " |
| 46. | ಆದಿ ನಾರಾಯಣಸ್ವಾಮಿ | " | " |

| | | | |
|---|---|---|---|
| 47. | ಚೌಡೇಶ್ವರಿ | ದೇವಸ್ಥಾನ | ನಗರ್ತರ ಪೇಟೆ |
| 48. | ರಾಮದೇವರ | " | ಕುಂಚಿಟಿಗರ ಪೇಟೆ |
| 49. | ವೇಣುಗೋಪಾಲಸ್ವಾಮಿ | " | ಗೊಲ್ಲರ ಪೇಟೆ |
| 50. | ರಾಗಿ ಗುಡ್ಡದ ಆಂಜನೇಯ | " | ಜಯನಗರ |
| 51. | ರಾಗಿ ಗುಡ್ಡದ ಸತ್ಯನಾರಾಯಣ | " | " |
| 52. | ಪಂಚಮುಖಿ ಗಣಪತಿ | " | ಹನುಮಂತ ನಗರ |
| 53. | ಕುಮಾರಸ್ವಾಮಿ | " | " |
| 54. | ಉದ್ಭವ ಆದಿಶಾಪ | " | " |
| 55. | ಶ್ರೀನಿವಾಸ ದೇವರ | " | ಶ್ರೀನಗರ |
| 56. | ಪ್ರಸನ್ನ ಗಂಗಾಧರೇಶ್ವರ | " | ಅಲಸೂರ ಪೇಟೆ |
| 57. | ರಾಜರಾಜೇಶ್ವರಿ | " | ರಾಜರಾಜೇಶ್ವರಿ ನಗರ |
| 58. | ಪ್ರಸನ್ನ ಗಣಪತಿ | " | ಕಸ್ತೂರಿಬಾ ರಸ್ತೆ |
| 59. | ಸರ್ಕಲ್ ಮಾರಮ್ಮ | " | ತಾತಾ ಜ್ಞಾನಮಂದಿರ ವೃತ್ತ |
| 60. | ಕೋಡಿ ಆಂಜನೇಯ | " | ಲಿಂಕ್ ರಸ್ತೆ |
| 61. | ರಾಮ ದೇವರ | " | ಶೇಷಾದ್ರಿಪುರ |
| 62. | ಈಶ್ವರ ದೇವಾಲಯ | " | " |
| 63. | ಮಾರುತಿ | " | ಪ್ಯಾಲೆಸ್ ಗುಟ್ಟಹಳ್ಳಿ |
| 64. | ವೆಂಕಟರಮಣಸ್ವಾಮಿ | " | " |
| 65. | ಸುಬ್ರಹ್ಮಣ್ಯೇಶ್ವರಸ್ವಾಮಿ | " | " |
| 66. | ಆಂಜನೇಯ | " | ಕಿಲಾರಿ ರಸ್ತೆ |
| 67. | ಗಣಪತಿ | " | ಆನಂದರಾವ್ ವೃತ್ತ |
| 68. | ಗೋಪಾಲಸ್ವಾಮಿ ಗುಡಿ | " | ಚಿಕ್ಕಪೇಟೆ |
| 69. | ವಲ್ಲಭರಾಯಸ್ವಾಮಿ | " | ವಸಂತ ಪುರ |
| 70. | ಸಂಪಂಗಿರಾಮಸ್ವಾಮಿ | " | ಬನ್ನೇರು ಘಟ್ಟ |
| 71. | ಗಾಯಿತ್ರಿ ದೇವಸ್ಥಾನ | " | ಯಶವಂತ ಪುರ |
| 72. | ಗಂಗಾಧರೇಶ್ವರಸ್ವಾಮಿ | " | " |
| 73. | ಈಶ್ವರ | " | ಮತ್ತಿಕೆರೆ ಬಡಾವಣೆ |

| | | | |
|---|---|---|---|
| 74. | ಈಶ್ವರ | ದೇವಸ್ಥಾನ | ಸದಾಶಿವ ನಗರ |
| 75. | ಮಹಾಲಕ್ಷ್ಮಿ | " | ರಾಜಮಹಲ್ ವಿಲಾಸ್ ಬಡಾವಣೆ |
| 76. | ಸುಬ್ರಹ್ಮಣ್ಯೇಶ್ವರ ಸ್ವಾಮಿ | " | ಕುಮಾರ ಪಾರ್ಕ್ |
| 77. | ಬೈಲಾಂಜನೇಯ | " | ಹಳೇ ಮದ್ರಾಸ್ ರಸ್ತೆ |
| 78. | ನರಸಿಂಹ ಸ್ವಾಮಿ | " | ಓಲ್ಡ್ ಪೂರ್‌ಹೌಸ್ ರಸ್ತೆ |
| 79. | ಧರ್ಮರಾಯ ಸ್ವಾಮಿ | " | ಶಿವಾಜಿ ನಗರ |
| 80. | ಮೀನಾಕ್ಷಿ | " | " |
| 81. | ಅಂಗಾಳೇಶ್ವರ | " | " |
| 82. | ಪಾಂಡುರಂಗ | " | ಕ್ಯಾವಲರಿ ರಸ್ತೆ |
| 83. | ಮುತ್ಯಾಲಮ್ಮ | " | ಸ್ಪ್ರಿಂಗ್ಸ್ ರಸ್ತೆ |
| 84. | ರಾಮದೇವರ | " | ವಿಜಯ ನಗರ |
| 85. | ಈಶ್ವರ | " | " |
| 86. | ಗಣಪತಿ | " | " |
| 87. | ಕನ್ಯಕಾಪರಮೇಶ್ವರಿ | " | " |
| 88. | ಶಿವದೇವರ | " | " |
| 89. | ಮಂಜುನಾಥೇಶ್ವರ | " | " |
| 90. | ಕೋಟಿ ಬಂಡೆ ಆಂಜನೇಯ ಸ್ವಾಮಿ | " | " |
| 91. | ರಂಗನಾಥ | " | ವೆಸ್ಟ್ ಆಫ್ ಕಾರ್ಡ್ ರಸ್ತೆ |
| 92. | ಗುಹಾಂತರ ರಾಮಲಿಂಗೇಶ್ವರ | " | ಹುಳಿಮಾವು |
| 93. | ಅಂಬಾ ಭವಾನಿ | " | ಸುಬ್ರಹ್ಮಣ್ಯ ನಗರ |
| 94. | ಸತ್ಯನಾರಾಯಣ | " | " |
| 95. | ಪಂಚಮುಖಿ ಆಂಜನೇಯ | " | " |
| 96. | ವೆಂಕಟರಮಣ ಸ್ವಾಮಿ | " | " |
| 97. | ಚೌಡೇಶ್ವರಿ | " | ಶ್ರೀರಾಂಪುರ |
| 98. | ಚೌಡೇಶ್ವರಿ | " | ಗೋಕುಲ ಬಡಾವಣೆ |

| | | | |
|---|---|---|---|
| 99. | ರಂಗನಾಥ ಸ್ವಾಮಿ | ದೇವಸ್ಥಾನ | ದಾಸಾಶ್ರಮ ರಾಜಾಜಿನಗರ |
| 100. | ಪುರಂದರ ವಿಠಲ | " | " |
| 101. | ವೆಂಕಟರಮಣ ಸ್ವಾಮಿ | " | " |
| 102. | ಈಶ್ವರ | " | " |
| 103. | ಲಕ್ಷ್ಮೀಕಾಂತ | " | ಪದ್ಮನಾಭನಗರ |
| 104. | ಗಣೇಶ | " | " |
| 105. | ಸುಬ್ರಹ್ಮಣ್ಯ ಸ್ವಾಮಿ | " | " |
| 106. | ಶ್ಯಾವಿಗೆ ಮಲ್ಲೇಶ್ವರ ಸ್ವಾಮಿ | " | ಕುಮಾರಸ್ವಾಮಿ ಲೇಔಟ್ |
| 107. | ಗಣೇಶ | " | ತ್ಯಾಗರಾಜ ನಗರ |
| 108. | ರಾಮೇಶ್ವರ ಸ್ವಾಮಿ | " | ಚಾಮರಾಜ ಪೇಟೆ |
| 109. | ಪ್ರಸನ್ನ ವೀರಾಂಜನೇಯ ಸ್ವಾಮಿ | " | ಮಹಾಲಕ್ಷ್ಮೀಪುರ |
| 110. | ಶ್ರೀನಿವಾಸ ದೇವರ | " | " |
| 111. | ಲಕ್ಷ್ಮೀ | " | ಕುಮಾರ ಪಾರ್ಕ್ |
| 112. | ಮಕ್ಕಳ ಬಸವಣ್ಣ | " | ನಗರ್ತರ ಪೇಟೆ |
| 113. | ಆಂಜನೇಯ ಸ್ವಾಮಿ | " | ಮೈಸೂರುಬ್ಯಾಂಕ್ ವೃತ್ತ |
| 114. | ಶ್ರೀ ದತ್ತಾತ್ರೇಯ ಸ್ವಾಮಿ | " | ಹೊಸಕೆರೆ ಹಳ್ಳಿ |
| 115. | ಜಲಕಂಠೇಶ್ವರ | " | ಕಲಾಸಿ ಪಾಳ್ಯ |
| 116. | ರಾಮಲಿಂಗೇಶ್ವರ | " | ಚಾಮರಾಜ ಪೇಟೆ |
| 117. | ನಾಗಲಿಂಗೇಶ್ವರ | " | ನಾಗೇಂದ್ರ ಬ್ಲಾಕ್ ಶ್ರೀನಗರ |
| 118. | ಶ್ರೀ ಶನೇಶ್ವರ ಸ್ವಾಮಿ | " | ಹನುಮಂತ ನಗರ |
| 119. | ಗುಡ್ಡೆ ಆಂಜನೇಯ ಸ್ವಾಮಿ | " | ವಿಲ್ಸನ್ ಗಾರ್ಡನ್ |
| 120. | ಶ್ರೀ ದತ್ತಾತ್ರೇಯ ಸ್ವಾಮಿ | " | ಮಲ್ಲೇಶ್ವರ |
| 121. | ಶ್ರೀ ಆಂಡಾಳ್ | " | ಜಯ ನಗರ |
| 122. | ಕೋಡಿ ಆಂಜನೇಯ | " | ವಯ್ಯಾಲಿ ಕಾವಲ್ |
| 123. | ಶ್ರೀ ಶ್ರೀನಿವಾಸ ದೇವರ | " | ಜಯನಗರ 3ನೇ ಹಂತ |

| | | | |
|---|---|---|---|
| 124. | ರಾಗಿ ಗುಡ್ಡದ ಆಂಜನೇಯ ದೇವಸ್ಥಾನ | | ಜಯನಗರ |
| 125. | ಶ್ರೀ ಗಣಪತಿ | " | ಬನಶಂಕರಿ 2ನೇ ಹಂತ |
| 126. | ಶ್ರೀ ಗಣಪತಿ | " | ಗಿರಿನಗರ |
| 127. | ಶ್ರೀ ವಿದ್ಯಾ ಗಣಪತಿ | " | ಹನುಮಂತನಗರ |
| 128. | ಶ್ರೀ ಗಣಪತಿ | " | ಶ್ರೀನಗರ |
| 129. | ಶ್ರೀ ಆಂಜನೇಯ ಸ್ವಾಮಿ | " | ಆನಂದ ಮಿಲನಾದ್ರಿ ಗುಡ್ಡ |
| 130. | ಶ್ರೀ ಭೋಗ ನಂಜುಂಡೇಶ್ವರ | " | ಮಿನರ್ವ ವೃತ್ತ |
| 131. | ಶ್ರೀ ಮಾರಮ್ಮ | " | ಮಾವಳ್ಳಿ |
| 132. | ಶ್ರೀ ಮಂಗಳ ಕರಿಮಾರಿಯಮ್ಮ | " | ಮಹಾಲಕ್ಷ್ಮೀಪುರ |
| 133. | ಶ್ರೀ ಶ್ರೀನಿವಾಸ | " | ರಾಜಾಜಿನಗರ |
| 134. | ಶ್ರೀ ಕೋದಂಡ ಪಾಣಿ | " | " |
| 135. | ಶ್ರೀ ವಿಠೋಬ | " | " |
| 136. | ಶ್ರೀ ಗಣಪತಿ | " | ಪ್ರಶಾಂತನಗರ |
| 137. | ಶ್ರೀ ಮಾರಿ ಅಮ್ಮ | " | ಶಿವಾಜಿ ವೃತ್ತ |
| 138. | ಶ್ರೀ ಪಂಚಮುಖಿ ಗಣಪತಿ | " | ಮಹಾಲಕ್ಷ್ಮೀಪುರ |
| 139. | ಶ್ರೀ ಶ್ರೀನಿವಾಸ | " | ಗೋವಿಂದರಾಜ ನಗರ |
| 140. | ಶ್ರೀ ಲಕ್ಷ್ಮೀ ಶ್ರೀನಿವಾಸ | " | ಆಸ್ಟಿನ್ ಟೌನ್ |
| 140. | ಶ್ರೀ ದ್ರೌಪದಿ ಅಮ್ಮ | " | " |
| 142. | ಶ್ರೀ ಆಂಡಾಳ್ | " | " |
| 143. | ಶ್ರೀ ರಾಜ ರಾಜೇಶ್ವರಿ | " | " |
| 144. | ಶ್ರೀ ಕಾಶಿ ವಿಶ್ವನಾಥ | " | ವಿವೇಕ ನಗರ |
| 145. | ಶ್ರೀ ರಂಗನಾಥ ಗುಡಿ | " | ಚಿಕ್ಕಪೇಟೆ |
| 146. | ಶ್ರೀ ಸತ್ಯನಾರಾಯಣ | " | ಅರಳೇ ಪೇಟೆ |

# ಕಾಕೋಳು ಗ್ರಾಮದ ಪುರಾತನ ದೇವಸ್ಥಾನಗಳು

ಬೆಂಗಳೂರು ಜಿಲ್ಲೆ ಉತ್ತರ ತಾಲ್ಲೂಕಿನಲ್ಲಿರುವ ಕಾಕೋಳು ಗ್ರಾಮ ಬೆಂಗಳೂರಿಗೆ ಮೂವತ್ತು ಕಿಲೋಮೀಟರ್ ದೂರದಲ್ಲಿದ್ದು ಅತಿ ಪುರಾತನ ಗ್ರಾಮವಾಗಿದೆ.

ಕಾಕೋಳು 1900ಕ್ಕೂ ಮುಂಚೆ ಈಗಿನ ಹೆಸರುಘಟ್ಟ ಫಾರಂನಲ್ಲಿದ್ದಿತ್ತು. ಇಲ್ಲಿದ್ದ ಶಾಸನದ ಪ್ರಕಾರ ಕ್ರಿ. ಶ. 1330ರಲ್ಲಿ ಇದು ಒಂದು ಸಂಸ್ಥಾನವಾಗಿದ್ದು ಕಾಕೋಳು ಸ್ಥಳ ಎಂದು ಕರೆಯಲಾಗುತ್ತಿತ್ತು. ಹೆಸರುಘಟ್ಟಕ್ಕೆ ಸಂಬಂಧಪಟ್ಟ ವಿಷಯಗಳು ಈ ಶಾಸನದಲ್ಲಿದ್ದು ಹೆಸರಘಟ್ಟಕ್ಕೆ ಹಿಂದೆ ಶಿವನ ಸಮುದ್ರನಾಡು ಎಂದು ಕರೆಯಲಾಗುತ್ತಿದ್ದು, ಅದು ಕಾಕೋಳು ಸಂಸ್ಥಾನದ ಆಡಳಿತಕ್ಕೆ ಒಳಪಟ್ಟದ್ದಿತು. ಹೆಸರುಘಟ್ಟದ ಚಂದ್ರಮೌಳೀಶ್ವರ ದೇವಸ್ಥಾನದ ಹಿಂಭಾಗದ ಗೋಡೆಯ ಮೇಲೆ ನಮೂದಿಸಿರುವ ಕನ್ನಡ ಶಾಸನವೂ (1530) ಇದೇ ಹೇಳುತ್ತಿದ್ದು ಕಾಕೋಳು ಸ್ಥಳವು ಚೇಳೂರು ಛಾವಡಿಗೆ ಸೇರಿದ್ದು ವಿಜಯನಗರ ಅರಸರ ಸಾಮಂತನೊಬ್ಬನು ಈ ಕಾಕೋಳು ಸ್ಥಳದ ಅಧಿಪತ್ಯ ನಡೆಸುತ್ತಿದ್ದನೆಂದು ಹೆಸರುಘಟ್ಟದ ಶಾಸನ ತಿಳಿಸುತ್ತದೆ.

ಚೋಳರ ಅಧೀನದಲ್ಲಿದ್ದ ಈ ಸ್ಥಳದಲ್ಲಿ ಅವರ ಕಾಲದಲ್ಲಿ ವೀರಭದ್ರದೇವರ ದೇವಸ್ಥಾನ ನಿರ್ಮಾಣಗೊಂಡಿತು. ಈ ದೇವಸ್ಥಾನವು ಕಾಕೋಳಿನ

ಪ್ರಥಮ ಹಾಗೂ ಪುರಾತನ ದೇವಸ್ಥಾನ. 1480ರಲ್ಲಿ ಕರ್ನಾಟಕ ಸಿಂಹಾಸನಾಧೀಶ್ವರರೂ ಹಾಗೂ ಬ್ರಹ್ಮಣ್ಯ ತೀರ್ಥರ ಸಾಕ್ಷಾತ್ ಶಿಷ್ಯರೂ ಆದ ಶ್ರೀ ವ್ಯಾಸರಾಜರು ಈ ಸ್ಥಳದಲ್ಲಿ ಒಂದು ಕಂಬದ ಆಂಜನೇಯನನ್ನು ಪ್ರತಿಷ್ಠಾಪಿಸಿದರು. ಗ್ರಾಮ ದೇವತೆ ಬೇಕಿ ಮಾರಮ್ಮನ ಗುಡಿಯೂ ಇದೇ ಸುಮಾರಿನಲ್ಲಿ ಸ್ಥಾಪನೆಗೊಂಡಿತು.

ವಿಜಯನಗರ ಕಾಲದಲ್ಲಿ ಸ್ಥಾಪನೆಗೊಂಡ ಮತ್ತೆರಡು ದೇವಸ್ಥಾನವೆಂದರೆ ಬೀರಲಿಂಗೇಶ್ವರ ಹಾಗೂ ಭಕ್ತಿ ಲಿಂಗೇಶ್ವರ ದೇವಸ್ಥಾನಗಳು. ಇವು ಕುರುಬ ಜನಾಂಗದವರ ಕುಲದೈವಗಳಾಗಿವೆ.

ಬೆಂಗಳೂರು ಬೆಳೆದಂತೆಲ್ಲಾ ಕುಡಿಯುವ ನೀರಿನ ಸಮಸ್ಯೆ ಹೆಚ್ಚಾಗಿ, ಬೆಂಗಳೂರಿಗೆ ನೀರು ಸರಬರಾಜು ಮಾಡಲು ಹೆಸರುಘಟ್ಟದ ಬಳಿ ಅರ್ಕಾವತಿ ನದಿಗೆ ಸೇತುವೆ ನಿರ್ಮಾಣ ಮಾಡಿ ದೊಡ್ಡದಾದ ಕೆರೆಯನ್ನು ಕಟ್ಟಲಾಯಿತು. ಅರ್ಕಾವತಿ ನದಿಯ ದಂಡೆಯ ಮೇಲಿದ್ದ ಹಳ್ಳಿಗಳ ಜನ ಈ ನೀರನ್ನು ಅಶುದ್ಧಿಗೊಳಿಸುತ್ತಾರೆಂಬ ಭೀತಿಯಿಂದ ಒಂದಿನ ಬ್ರಿಟೀಷ್ ಸರ್ಕಾರವು ಅವುಗಳನ್ನು ಬೇರೆ ಕಡೆಗೆ ಸ್ಥಳಾಂತರಿಸಲು ತೀರ್ಮಾನಿಸಿತು.

1896ರಲ್ಲಿ ಈಗಿನ ಮದರ್‌ಡೈರಿ ಘಾರಂನ ಮುಂಭಾಗದಲ್ಲಿದ್ದ ಕಾಕೋಳು ಗ್ರಾಮವೂ ಸ್ಥಳಾಂತರಗೊಂಡು ಈಗ ನಾವು ಕಾಣುವಂತೆ ಆಧುನಿಕ ಗ್ರಾಮವಾಗಿ ಪರಿವರ್ತನೆಗೊಂಡಿತು. ಐದು ಪ್ರಧಾನ ರಸ್ತೆ ಹಾಗೂ ಎರಡು ಅಡ್ಡರಸ್ತೆ ಹೊಂದಿರುವ ಈ ಗ್ರಾಮದ ಮನೆಗಳು ಒಂದೇ ಸಾಲಾಗಿ ಇದ್ದು, ಗಾಳಿ ಬೆಳಕುಗಳಿಗೆ ಆದ್ಯತೆ ನೀಡಿವೆ. ಹಳೇ ಕಾಕೋಳಿನಲ್ಲಿದ್ದ ದೇವಸ್ಥಾನಗಳೂ ಹೊಸ ಊರಿಗೆ ವರ್ಗಾಯಿಸಲ್ಪಟ್ಟವು. ಬೀರಲಿಂಗೇಶ್ವರ ದೇವಸ್ಥಾನವು ಮಾತ್ರ ಹಳೇ ಕಾಕೋಳಿನಲ್ಲೇ ಉಳಿದು ಪಾಳುಬಿದ್ದು ಪೂರ್ಣ ನಾಶವಾಗತೊಡಗಿದೆ. ಹಳೇ ಊರಿದ್ದ ಜಾಗದಲ್ಲಿ ಇಂದಿಗೂ ಬೂದಿ ಮಣ್ಣು ಪುರಾತನ ಮಡಿಕೆ ಮುಂತಾದವುಗಳು ದೊರೆಯುತ್ತವೆ.

ಕಾಕೋಳಿಗೆ ಕಾಕಾಸುರ ಪಟ್ಟಣ ಎಂದು ಹೆಸರು ಇದ್ದಿತೆಂದೂ ಹಾಗೂ ಕಾಕಾಸುರ ಎಂಬುವನು ಈ ಸ್ಥಳದಲ್ಲಿದ್ದನೆಂದು ಹೇಳಲಾಗಿದ್ದು

ಅವಕ್ಕೆ ಸಂಬಂಧಪಟ್ಟ ತ್ರೇತಾಯುಗದ ಘಟನೆಯೊಂದು ಈ ರೀತಿ ಇದೆ :–

ಬೆಂಗಳೂರಿನ ಪಶ್ಚಿಮಕ್ಕೆ ರಾಮಗಿರಿ ಬೆಟ್ಟವಿದ್ದು, ಸುಗ್ರೀವನು ಪ್ರತಿಷ್ಠಾಪನೆ ಮಾಡಿದ ರಾಮದೇವರ ದೇವಸ್ಥಾನ ಇಲ್ಲಿದೆ. ವನವಾಸಕ್ಕಾಗಿ ಕಾಮ್ಯಕವನ ಪ್ರವೇಶಿಸಿದ ಶ್ರೀರಾಮ ಲಕ್ಷ್ಮಣ ಸೀತೆ ಈ ಬೆಟ್ಟದ ಮೇಲೆ ತಂಗಿರುತ್ತಾರೆ. ಒಮ್ಮೆ ಆಯಾಸದಿಂದ ಬಳಲಿದ ಶ್ರೀರಾಮ ಸೀತೆಯ ತೊಡೆಯ ಮೇಲೆ ತಲೆ ಇಟ್ಟು ಮಲಗಿರುತ್ತಾನೆ. ಇಂದ್ರನ ಮಗನಾದ ಜಯಂತನು ಸೀತಾದೇವಿಯ ಅಪೂರ್ವ ರೂಪ ರಾಶಿಯನ್ನು ನೋಡಿ ಮಂತ್ರಮುಗ್ಧನಾಗುತ್ತಾನೆ. ಆ ಕ್ಷಣವೇ ಅವನಲ್ಲಿ ಅಸುರೀಭಾವವು ತಲೆದೋರಿ ತಾನು ಇಂದ್ರನ ಮಗನೆಂಬುದನ್ನೂ ಮರೆತು ಜಗನ್ಮಾತೆಯಾದ ಸೀತಾದೇವಿಯಲ್ಲಿ ಮೋಹಗೊಳ್ಳುತ್ತಾನೆ. ಆದರೆ ತನ್ನ ಅವಿವೇಕದಿಂದ ಆಕೆ ಶಾಪ ಕೊಟ್ಟಾಳೆಂದು ಹೆದರಿ, ಯಾವುದೇ ರೂಪದಲ್ಲಾಗಲೀ ಅವಳನ್ನು ಸ್ಪರ್ಶಿಸಬೇಕೆಂದು ಕಾಮಾಂಧನಾಗಿ ಕಾಗೆಯ ರೂಪತಾಳಿ ಕೊಕ್ಕಿನಿಂದ ಕುಕ್ಕಿದನು. ಶ್ರೀರಾಮಚಂದ್ರನ ನಿದ್ರೆಗೆ ಭಂಗತಾರದಂತೆ ಸೀತಾದೇವಿ ನೋವನ್ನು ಅನುಭವಿಸಿಕೊಂಡು ತಾಳ್ಮೆಯಿಂದ ಇರುತ್ತಾಳೆ.

ನಿದ್ರೆಯಿಂದ ಎಚ್ಚರಗೊಂಡ ಶ್ರೀರಾಮನಿಗೆ ಸೀತೆಯ ಪರಿಸ್ಥಿತಿ ಅರಿವಾಗಿ ಕುಪಿತಗೊಂಡು ಆ ದ್ರೋಹಿ ಕಾಕಾಸುರನ ಮೇಲೆ ಬಾಣ ಪ್ರಯೋಗ ಮಾಡುತ್ತಾನೆ. ಪ್ರಾಣ ರಕ್ಷಣೆಗಾಗಿ ಕಾಕಾಸುರ ರೂಪದಲ್ಲಿದ್ದ ಜಯಂತನು ಇಂದ್ರಾದಿ ಸಮಸ್ತ ದೇವತೆಗಳನ್ನೂ ಮೊರೆ ಹೊಕ್ಕು ಅವರಿಂದ ಪರಿತ್ಯಜಿಸಲ್ಪಟ್ಟಾಗ ಬ್ರಹ್ಮದೇವರ ಬಳಿಗೆ ಬರುತ್ತಾನೆ. ಆಗ ಬ್ರಹ್ಮದೇವರು ಜಯಂತನಿಗೆ ಶರಣಾಗತ ವತ್ಸಲನಾದ ರಾಮಚಂದ್ರನ ಬಳಿಗೆ ಹೋಗಿ ಕ್ಷಮೆ ಯಾಚಿಸುವಂತೆ ತಿಳಿಸುತ್ತಾನೆ.

ಶರಣಾಗತನಾಗಿ ಬಂದ ಜಯಂತನನ್ನು ಶ್ರೀರಾಮಚಂದ್ರ ಕೊಲ್ಲದೆ ಜೀವಸಹಿತ ಬಿಟ್ಟರೂ ತಾನು ಬಿಟ್ಟ ಬಾಣವೂ ವ್ಯರ್ಥವಾಗಬಾರದೆಂದು ಕಾಕಾಸುರನಾಗಿದ್ದ ಜಯಂತನ ಒಂದು ಕಣ್ಣನ್ನೂ ಮಾತ್ರ ಕಿತ್ತು ಹಾಕುತ್ತಾನೆ. ಈ ಕಾರಣದಿಂದಲೇ ಕಾಗೆಗಳಿಗೆ ಒಂದು ಕಣ್ಣು ಮಾತ್ರವಿದೆ. ಹೀಗೆ ಕಣ್ಣನ್ನು ಕಳೆದುಕೊಂಡ ಜಯಂತ ದೇವ ಮಾನವನಿಂದ ಅಸುರ ರೂಪ

ಹೊಂದಿ ಮತ್ತೆ ಇಂದ್ರಲೋಕಕ್ಕೆ ಹೋಗಬಯಸದೆ ರಾಮಗಿರಿಯ ಉತ್ತರಕ್ಕೆ ಬಂದು ಅರ್ಕಾವತಿ ತೀರದಲ್ಲಿ ತನ್ನದೇ ಆದ ಪಟ್ಟಣ ನಿರ್ಮಿಸಿಕೊಂಡು ವಾಸಿಸತೊಡಗುತ್ತಾನೆ. ಮುಂದೆ ಇದೇ ಕಾಕಾಸುರ ಪಟ್ಟಣ ಎಂದು ಹೆಸರು ಗಳಿಸಿತು. ಈ ಪಟ್ಟಣವೇ ಇಂದಿನ ಕಾಕೋಳು ಪ್ರದೇಶ.

ಕಾಕೋಳಿಗೆ ಹಿಂದೆ ಕಾಕೋಡು, ಕಾಕಾಪುರ ಪಟ್ಟಣ, ಕಾಕೋಳು ಸ್ಥಳ ಮುಂತಾದ ಹೆಸರುಗಳಿದ್ದವು. ಕಾಕೋಡು ಎಂದರೆ ಸುಖ ಸಮೃದ್ಧಿ ಯಿಂದ ಕೂಡಿದ ಸ್ಥಳ ಎಂದು ಹೇಳಲಾಗುತ್ತದೆ.

ಆಂಧ್ರ ಪ್ರದೇಶದಲ್ಲಿ ಕಾಕೋಳು ಎಂಬ ಗ್ರಾಮವಿದ್ದು ಅಲ್ಲಿಯ ಜನ ತಮ್ಮ ಊರ ದೇವರುಗಳಾದ ಮಧುಸೂದನ ಹಾಗೂ ವೀರಭದ್ರ ದೇವರ ಸಮೇತ ದಕ್ಷಿಣದತ್ತ ವಲಸೆ ಬಂದು ಈಗಿನ ಅರ್ಕಾವತಿ ನದಿಯ ದಂಡೆಯ ಮೇಲೆ ಬೀಡು ಬಿಟ್ಟು ಇಲ್ಲಿ ಒಂದು ಪುಟ್ಟ ಗ್ರಾಮವನ್ನೇ ಸ್ಥಾಪಿಸಿ ಅದಕ್ಕೆ ತಮ್ಮ ಊರಾದ ಕಾಕುಳ ಎಂದೇ ಹೆಸರಿಟ್ಟರೆಂಬ ಪ್ರತೀತಿ ಇದ್ದು ಇದಕ್ಕೆ ಯಾವುದೇ ಆಧಾರವಿರುವುದಿಲ್ಲ.

ನಾಲ್ಕುನೂರ ಐವತ್ತು ವರ್ಷಗಳಿಗೂ ಹಿಂದಿನಿಂದಲೂ "ಕಾಕೋಳು" ಎಂಬ ಹೆಸರೇ ಅನೇಕ ಶಾಸನಗಳಲ್ಲಿ ಹಾಗೂ ದಾಖಲೆಗಳಲ್ಲಿ ದಾಖಲಾಗಿ ದ್ದರೂ ಹಿಂದೆ ಈ ಗ್ರಾಮಕ್ಕೆ "ಕಾಕೊಳ" ಎಂಬ ಹೆಸರಿದ್ದಿತೆಂದು ತಿಳಿದು ಬರುತ್ತದೆ. ಈ ಹೆಸರು ಬರಲು ಕಾರಣವಾದ ದಂತ ಕಥೆಯೊಂದು ಪರಂಪರಾನುಗತವಾಗಿ ಬಂದಿದ್ದು ಅದರ ಸಾರಾಂಶ ಈ ರೀತಿ ಇದೆ.

ಹೆಸರು ಘಟ್ಟದ ಚಂದ್ರಮೌಳೀಶ್ವರ ದೇವಸ್ಥಾನದಲ್ಲಿ ಕಾಣಬಹುದಾದ ಶಾಸನ ಒಂದರ ಪ್ರಕಾರ, ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಕಾಕೋಳು ಒಂದು ಸಂಸ್ಥಾನವಾಗಿದ್ದಿತೆಂದೂ, ಈಗಿನ ಹೆಸರು ಘಟ್ಟಕ್ಕೆ ಶಿವನ ಸಮುದ್ರ ನಾಡು ಅಥವಾ ಅಗ್ರಹಾರವೆಂದು ಹೆಸರಿದ್ದು ಅಂದು ಕಾಕೋಳು ಸಂಸ್ಥಾನಕ್ಕೆ ಒಳಪಟ್ಟಿತೆಂದೂ ತಿಳಿದು ಬರುತ್ತದೆ.

ವಿಜಯನಗರ ಕಾಲದಲ್ಲಿ ಹಾಗೂ ಅದಕ್ಕೂ ಹಿಂದೆ ಈ ಗ್ರಾಮಕ್ಕೆ ಸಂಸ್ಥಾನ ಎಂದು ಕರೆಯುವ ವಾಡಿಕೆ ಇತ್ತು. ಈ ಸಂಸ್ಥಾನದಲ್ಲಿ ಶೋತ್ರಿ ಬ್ರಾಹ್ಮಣರೊಬ್ಬರು ಇದ್ದರೆಂದೂ ಇವರು ಅರ್ಕಾವತಿ ನದಿಯ ಬಯಲಿ

ನಲ್ಲಿರುವ ಕಾಕಾಸುರನ ಕೊಳ ಎಂದು ಕರೆಯಲಾಗುತ್ತಿದ್ದ ಮರಳು ಬಾವಿಗೆ ಹೋಗಿ ಸ್ನಾನ ಜಪಾದಿಗಳನ್ನು ಮುಗಿಸಿ ದೇವರ ಅಭಿಷೇಕಕ್ಕಾಗಿ ನೀರು ತರುವ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದರು. ಹೀಗೆ ಒಮ್ಮೆ ತಮ್ಮ ಸ್ನಾನ ಜಪಾದಿಗಳನ್ನು ಮಾಡಲು ಈ ಕೊಳದ ಕಡೆ ಹೋಗುತ್ತಿದ್ದ ಈ ಬ್ರಾಹ್ಮಣನಿಗೆ ನಾಯಿಯೊಂದು ಅಡ್ಡಬಂದು ಇವರ ನಡಿಗೆಗೆ ಅಡಚಣೆ ತರುತ್ತಿತ್ತು. ಎಷ್ಟೋ ಬಾರಿ ಓಡಿಸಿದರೂ ಈ ನಾಯಿ ಇವರ ಮುಂದೆ ಅಡ್ಡಾದಿಡ್ಡವಾಗಿ ಓಡಾಡುತ್ತಾ ಈ ಬ್ರಾಹ್ಮಣನನ್ನು ಮುಂದೆ ಹೋಗಲು ಬಿಡದೆ ತಡೆಯುತ್ತಿತ್ತು. ಆ ಬ್ರಾಹ್ಮಣನಿಗೆ ಇದು ಒಂದು ಅಶುಭ ಸೂಚನೆ ಎಂದು ತಿಳಿದರೂ, ಆ ನಾಯಿಯನ್ನು ಹೊಡೆದು ಓಡಿಸಿ ಕೊಳದತ್ತ ನಡೆದರು. ಆದರೆ ಇವರಿಗಿಂತ ಮುಂಚೆಯೇ ಹೋಗಿದ್ದ ನಾಯಿ ಆ ಬಾವಿಯಲ್ಲಿ ಬಿದ್ದು, ಅದರಲ್ಲಿದ್ದ ಮೊಸಳೆ ಬಾಯಿಗೆ ತುತ್ತಾಗಿತ್ತು. ತನ್ನನ್ನು ಈ ಮೊಸಳೆ ಬಾಯಿಂದ ಕಾಪಾಡಲು ತನ್ನ ಪ್ರಾಣವನ್ನು ತೆತ್ತ ಈ ನಾಯಿಯ ಬಗ್ಗೆ ಈ ಬ್ರಾಹ್ಮಣನಲ್ಲಿ ಅನುಕಂಪ ಮೂಡಿ ಈ ನಾಯಿಗೆ ಉತ್ತಮ ಸದ್ಗತಿ ದೊರೆಯಲಿ ಎಂದು ಅಲ್ಲಿಯೇ ಅದಕ್ಕೆ ಉತ್ತರಕ್ರಿಯಾದಿಗಳನ್ನು ನಡೆಸಿ ತಾನೂ ಪ್ರಾಯಶ್ಚಿತ್ತ ಮಾಡಿಕೊಂಡನೆಂದೂ ಈ ಘಟನೆಯಿಂದಾಗಿ ಸಂಸ್ಥಾನದ ಜೊತೆಗೆ ಕೊಳದ ಹೆಸರೂ ಸೇರಿಕೊಂಡು "ಕಾಕೋಳ ಸಂಸ್ಥಾನ" (ಕಾಕಾಸುರನ ಕೊಳದ ಅಪಭ್ರಂಶ)ವೆಂದು ಕರೆಯುವ ವಾಡಿಕೆ ಬಂದು ತದನಂತರ "ಕಾಕೋಳು" ಎಂದು ಪರಿವರ್ತನೆಗೊಂಡಿದೆ, ಎಂದು ತಿಳಿದು ಬರುತ್ತದೆ. ಇಂದಿಗೂ ಈ ಕಾಕಾಸುರನ ಕೊಳವನ್ನು ನೋಡಬಹುದಾಗಿದ್ದು ಅದನ್ನು ಈಗ ಮರಳು ಬಾವಿ ಎಂದು ಕರೆಯುತ್ತಾರೆ. ನದಿ ಬತ್ತಿದಾಗಲೂ ಮರಳನ್ನು ಸರಿಸಿದರೆ ನೀರು ದೊರಕುತ್ತದೆ. ಕಾಕೋಳು ಗ್ರಾಮದಲ್ಲಿ ನಡೆಯುವ ಜಾತ್ರೆ ಸಂದರ್ಭದಲ್ಲಿ ಈ ಕೊಳದಿಂದ ನೀರು ತಂದು ಪೂಜಾ ಸ್ಥಳವನ್ನು ಶುದ್ಧಿ ಮಾಡುವ ಹಾಗೂ ಪೂಜಿಸುವ ಸಂಪ್ರದಾಯ ಬಂದಿದೆ.

ಬೆಂಗಳೂರಿನ ಸ್ಥಾಪಕ ಕೆಂಪೇಗೌಡ ತನ್ನ ಬಾಲ್ಯದಲ್ಲಿ ಐವರ ಗಂಡಪುರದಲ್ಲಿ ವಾಸವಾಗಿದ್ದ ಮಾಧವಭಟ್ಟರು ಎಂಬಲ್ಲಿ ವ್ಯಾಸಂಗ ಮಾಡುತ್ತಿರುತ್ತಾನೆ. ಆ ಸಮಯದಲ್ಲಿ ವೀರಣ್ಣ ಎಂಬ ಯುವಕ ಇವನ

ಮಿತ್ರನಾಗಿ ಅವನ ಜೀವನಪರ್ಯಂತ ಅವನ ಜೊತೆಯಲ್ಲೇ ಇದ್ದು ಮಂತ್ರಿ ಪದವಿಯನ್ನೂ ಪಡೆದಿರುತ್ತಾನೆ. ಆ ಧೀಮಂತ ಶೂರ ಯುವಕ ಈ ಕಾಕೋಳು ಗ್ರಾಮದವನೇ ಆಗಿದ್ದು ಆತನ ವಂಶಸ್ಥ ಮನೆತನವಾದ ಪಾಳೆಗಾರರು ಇಂದಿಗೂ ಈ ಊರಿನಲ್ಲಿದ್ದಾರೆ. ಇದಿಷ್ಟು ಕಾಕೋಳು ಗ್ರಾಮದ ಹಿನ್ನೆಲೆಯಹಾಯಿತು. ಇನ್ನೂ ಇಲ್ಲಿನ ಪುರಾತನ ದೇವಸ್ಥಾನ ಗಳ ಪರಿಚಯ ಮಾಡಿಕೊಳ್ಳೋಣ.

ಕಾಕೋಳಿಗೆ ಪ್ರವೇಶಿಸುವ ಹೆಬ್ಬಾಗಿಲ ಬಳಿ ಗುಂಪಿನ ತೋಪಿದ್ದು, ಮಾವು, ಬನ್ನಿ ಮುಂತಾದ ವೃಕ್ಷಗಳು, ದ್ರಾಕ್ಷಿ ತೋಟಗಳಿದ್ದು ಬನ್ನಿ ವೃಕ್ಷದ ಮೇಲ್‌ಭಾಗದಲ್ಲಿ ಕಾಕೋಳಿನ ಮೂಲ ದೇವರುಗಳಾದ ವೇಣು ಗೋಪಾಲ, ವೀರಭದ್ರ ಹಾಗೂ ಗ್ರಾಮದೇವತೆಯ ಭಾವಚಿತ್ರಗಳನ್ನೊಳ ಗೊಂಡ ನಾಮಫಲಕವಿದ್ದು ಕಾಕೋಳು ಕ್ಷೇತ್ರಕ್ಕೆ ಸ್ವಾಗತ ಎಂದು ಕೋರುತ್ತದೆ.

ಗ್ರಾಮವನ್ನು ಪ್ರವೇಶಿಸುತ್ತಿದ್ದಂತೆ, ರಸ್ತೆಯ ಇಕ್ಕೆಲಗಳೆಲ್ಲ ಬೃಹ ದಾಕಾರವಾಗಿ ಬೆಳೆದು ನಿಂತಿರುವ ಅರಳಿ ಹಾಗೂ ನಿಂಬೆ ವೃಕ್ಷಗಳಿದ್ದು ವಿಶಾಲವಾದ ಕಲ್ಲು ಚಪ್ಪಡಿಗಳಿಂದ ಕೂಡಿದ ಕಟ್ಟೆಗಳನ್ನು ನಿರ್ಮಿಸ ಲಾಗಿದೆ. ಈ ಕಟ್ಟೆಯ ಮೇಲ್‌ಭಾಗದಲ್ಲಿ ನಾಗರ ಪ್ರತಿಷ್ಠೆಗಳನ್ನೂ ಮಾಡ ಲಾಗಿದೆ.

ಅರಳಿ ಕಟ್ಟೆಯ ಎಡಭಾಗಕ್ಕೆ ಇರುವುದೇ ಭಕ್ತಿ ಲಿಂಗೇಶ್ವರ ದೇವಸ್ಥಾನ.

## ಭಕ್ತಿ ಲಿಂಗೇಶ್ವರ ದೇವಸ್ಥಾನ

ಹಳೇ ಊರಿನಲ್ಲಿದ್ದ ಭಕ್ತಿ ಲಿಂಗೇಶ್ವರ ಸ್ವಾಮಿಯನ್ನು ಹೊಸ ಊರಿಗೆ ತಂದು ಅದಕ್ಕೆ ಒಂದು ಆಲಯ ಕಟ್ಟಿ ಅದರಲ್ಲಿ ಪ್ರತಿಷ್ಠಾಪಿಸ ಲಾಯಿತು. ಹಳೆಯದಾದ ಈ ದೇವಸ್ಥಾನವನ್ನೂ ಇತ್ತೀಚೆಗೆ ನಿರ್ಮಿಸ

ಲಾಗಿದೆ. ದೇವರ ಸಂಪ್ರೋಕ್ಷಣಾ ಕಾರ್ಯಕ್ರಮಗಳು ನಡೆದು ಆ ಸಮಯದಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಭಕ್ತಾದಿಗಳು ನೆರೆದಿದ್ದರು.

ದೇವಸ್ಥಾನದ ಪ್ರವೇಶ ದ್ವಾರದ ಇಕ್ಕೆಲಗಳಲ್ಲಿ ಗೋಡೆಗೆ ಒರಗಿಸಿಟ್ಟಿರುವ ಬಂಡೆಗಳಲ್ಲಿ ಅನೇಕಾನೇಕ ಭಕ್ತಿ ಲಿಂಗೇಶ್ವರರ ಭಕ್ತರುಗಳು ಕೈಗಳಲ್ಲಿ ಕತ್ತಿ ಹಿಡಿದು ನರ್ತಿಸುತ್ತಿರುವ ಕೆತ್ತನೆಗಳನ್ನು ಮಾಡಲಾಗಿದೆ. ಈ ಶಿಲೆಗಳನ್ನು ಮತ್ತು ಅವುಗಳಲ್ಲಿ ಮೂಡಿ ಬಂದಿರುವ ಚಿತ್ರಗಳನ್ನು ಗಮನಿಸಿದಾಗ ಇವು ವಿಜಯನಗರ ಕಾಲದ ವಾಸ್ತು ಶಿಲ್ಪಗಳಂತೆ ಕಂಡು ಬರುತ್ತವೆ.

ದೇವಸ್ಥಾನದ ಮಹಾದ್ವಾರದ ಮೇಲ್‌ಭಾಗದಲ್ಲಿ ಪಾರ್ವತಿ, ಗಣೇಶ ಹಾಗೂ ಷಣ್ಮುಖ ಸಮೇತನಾದ ಪರಮೇಶ್ವರನ ಸುಂದರವಾದ ವಿಗ್ರಹಗಳನ್ನು ಕಾಣಬಹುದು.

ವಿಶಾಲವಾದ ನವರಂಗ ಹಾಗೂ ಗರ್ಭಗುಡಿಯಿಂದ ಕೂಡಿರುವ ಈ ದೇವಸ್ಥಾನದ ಗರ್ಭಗುಡಿಯು ಎದುರು ಭಾಗದಲ್ಲಿ ಆರು ಅಡಿ ಎತ್ತರ ಮತ್ತು ನಾಲ್ಕು ಅಡಿ ಅಗಲದ ಗೂಡೊಂದನ್ನು ಮಾಡಲಾಗಿದ್ದು, ಗೂಡಿನಲ್ಲಿ ಒಂದೂವರೆ ಅಡಿ ಅಗಲ ಹಾಗೂ ಮೂರು ಅಡಿ ಎತ್ತರದ ನಾಗರ ಕಲ್ಲಿದೆ. ಇದೇ ಇಲ್ಲಿಯ ಮೂಲ ವಿಗ್ರಹವಾಗಿದ್ದು, ಭಕ್ತಿ ಲಿಂಗೇಶ್ವರ ಎಂದು ಕರೆಯುತ್ತಾರೆ. ಈ ಭಕ್ತಿ ಲಿಂಗೇಶ್ವರನ ಎಡಭಾಗದ ಮೂಲೆಯಲ್ಲಿ ಇನ್ನೂ ಮೂರು ಚಿಕ್ಕ ಚಿಕ್ಕ ನಾಗರ ಕಲ್ಲುಗಳಿವೆ. ಕನಕದಾಸರ ಭಾವ ಚಿತ್ರವನ್ನು ಇದೇ ಗೂಡಿನಲ್ಲಿ ಭಕ್ತಿ ಲಿಂಗೇಶ್ವರನ ಬಲಭಾಕ್ಕೆ ಇಡಲಾಗಿದೆ.

ಗರ್ಭಗುಡಿಯು ಮೇಲ್‌ಛಾವಣಿ ಅಷ್ಟ ಕೋಣಾಕೃತಿಯಲ್ಲಿದ್ದು ಹಳೇ ದೇವಸ್ಥಾನದ ಶಿಲೆಗಳನ್ನೇ ಇದರಲ್ಲಿ ಉಪಯೋಗಿಸಲಾಗಿದೆ.

ಭಕ್ತಿ ಲಿಂಗೇಶ್ವರ ಸ್ವಾಮಿಯ ಉತ್ಸವ ಮೂರ್ತಿ ಶಿವಕೋಟೆ ಎಂಬಲ್ಲಿ ಇದ್ದು ವಿಶೇಷ ದಿನಗಳಲ್ಲಿ ಇಲ್ಲಿಗೆ ತಂದು ಪೂಜಾದಿಗಳನ್ನೂ ನಡೆಸಲಾಗುವುದು.

ಬೇಗಳೂರಿನ ಶ್ರೀಯುತರುಗಳಾದ ಕೃಷ್ಣಪ್ಪ ಹಾಗೂ ಕರಿಯಪ್ಪ ಎಂಬುವರು ಈ ದೇವರ ಭಕ್ತರಾಗಿದ್ದು, ಇವರೇ ಈ ನೂತನ ದೇವಸ್ಥಾನದ ಮೂಲ ಕಾರಣಕರ್ತರಾಗಿದ್ದಾರೆ.

ಭಕ್ತಿ ಲಿಂಗೇಶ್ವರ ಸ್ವಾಮಿ ಭಕ್ತರು ಬೆಂಗಳೂರು ಜಿಲ್ಲೆಯಾದ್ಯಂತ ಸಾವಿರಾರು ಕುಟುಂಬ (ಹಾಲು ಒಕ್ಕಲು ಮನೆತನ) ಗಳಿದ್ದು ಅವರೆಲ್ಲರೂ ಒಟ್ಟಾಗಿ ಸೇರಿ ಐದರಿಂದ ಹತ್ತು ವರ್ಷಗಳಿಗೊಮ್ಮೆ ಭಕ್ತಿಲಿಂಗೇಶ್ವರ ಸ್ವಾಮಿ ಜಾತ್ರೆ ನಡೆಸುತ್ತಾರೆ. ಆ ಸಮಯದಲ್ಲಿ ಮಕ್ಕಳಿಗೆ ಕಿವಿ ಚುಚ್ಚುವ ಕಾರ್ಯ ಕ್ರಮ ಜರಗುತ್ತದೆ. ಸಾವಿರಾರು ಸಂಖ್ಯೆಯಲ್ಲಿ ಭಕ್ತಾದಿಗಳು ಈ ಜಾತ್ರೆಯಲ್ಲಿ ನೆರೆದು ಈ ಚಿಕ್ಕ ಗ್ರಾಮ ಕುರುಬ ಜನಾಂಗದವರಿಂದ ತುಂಬಿ ತುಳುಕುತ್ತವೆ. ಕರ್ನಾಟಕದ ನಾನಾ ಮೂಲೆಗಳಿಂದ ಬರುವ ಗೊರವಾಗಳು ಅಧಿಕ ಸಂಖ್ಯೆ ಯಲ್ಲಿ ಸೇರಿ ಹಾಡಿ, ಕುಣಿದು ತಮ್ಮ ಕುಲ ದೇವರನ್ನು ಕೊಂಡಾಡುತ್ತಾರೆ.

ಹಳೇ ಊರಿನಲ್ಲಿರುವ ಬೀರಲಿಂಗೇಶ್ವರನ ದೇವಸ್ಥಾನದಲ್ಲಿ ಮೂಲ ವಿಗ್ರಹವಿರುವುದಿಲ್ಲ ಮತ್ತು ದೇವಸ್ಥಾನ ಪಾಳು ಬಿದ್ದಿದೆ. ಈ ದೇವಸ್ಥಾನದ ಹೊರಭಾಗದಲ್ಲೂ ಅನೇಕ ಶಿಲಾಕೃತಿಗಳು ಅನಾಥವಾಗಿ ಬಿದ್ದಿವೆ. ಗೊರವರ ಕುಣಿತ, ವೀರಗಾಸೆ ಕುಣಿತ ನರ್ತಕಿಯರ ನಾಟ್ಯ ಮುಂತಾದ ಅನೇಕಾನೇಕ ಅಪೂರ್ವ ಕಲಾ ವೈಭವವುಳ್ಳ ಶಿಲಾ ವಿಗ್ರಹಗಳು ಇಲ್ಲಿದ್ದು ಅವೆಲ್ಲವೂ ವಿಜಯ ನಗರ ಸಾಮ್ರಾಜ್ಯದ ಆಡಳಿತ ಕಾಲದ್ದಾಗಿದೆ. ಇವುಗಳನ್ನು ಸಂರಕ್ಷಿಸುವ ಕೆಲಸ ನಡೆಯಬೇಕಾಗಿದೆ.

ಬೀರದೇವರ ಒಕ್ಕಲು ಮನೆತನದವರೂ ಸಾವಿರಾರು ಸಂಖ್ಯೆಯಲ್ಲಿದ್ದಾರೆ. ದೊಡ್ಡಬಳ್ಳಾಪುರ ತಾಲ್ಲೂಕಿನ ಕೊನೆ ಘಟ್ಟ ಎಂಬಲ್ಲಿ ಬೀರದೇವರ ದೇವಸ್ಥಾನ ಇದೆ. ಇಲ್ಲಿ ಬೀರೇದೇವರ ಜಾತ್ರೆ ನಡೆಯುತ್ತಿದ್ದು ಈ ಜಾತ್ರೆ ನಡೆಸುವ ಮೊದಲು ಮೂಲ ದೇವಸ್ಥಾನ ಇರುವ ಕಾಕೋಳು ಗ್ರಾಮಕ್ಕೆ ಆಗಮಿಸಿ ಇಲ್ಲಿ ಮಂಗಳಾರತಿ ಇತ್ಯಾದಿಗಳನ್ನು ನಡೆಸಿದ ನಂತರವೇ ಕೊನೇ ಘಟ್ಟದಲ್ಲಿ ಜಾತ್ರೆ ನಡೆಸುವ ಸಂಪ್ರದಾಯ ಇಂದಿಗೂ ಉಳಿದುಕೊಂಡು ಬಂದಿದೆ.

ಕಾಕೋಳು ದೇವಸ್ಥಾನ ಪಾಳುಬಿದ್ದ ಮೇಲೆ ಬೀರೇದೇವರ ಭಕ್ತರು ಕೊನೆ ಘಟ್ಟದಲ್ಲಿ ಮತ್ತೊಂದು ಆಲಯವನ್ನು ಕಟ್ಟಿ ಪಾಳುಬಿದ್ದ ದೇವಸ್ಥಾನ ದಲ್ಲಿದ್ದ ಮೂಲ ವಿಗ್ರಹವನ್ನು ಅಲ್ಲಿಗೆ ತೆಗೆದುಕೊಂಡು ಹೋಗಿರಬಹುದೆಂದು ಊಹಿಸಬಹುದಾಗಿದೆ.

ಊರಿನ ಮಧ್ಯಭಾಗದಲ್ಲಿ ಅಂದರೆ ಪ್ರಾಣದೇವರ ದೇವಸ್ಥಾನದ ಹಿಂಭಾಗದಲ್ಲಿ ಕರಿಯಮ್ಮ ಹಾಗೂ ಕಾಳೇದಮ್ಮ ಎಂಬ ಗುಡಿಗಳಿದ್ದು, ಇವರಿಬ್ಬರೂ ಭಕ್ತಿ ಲಿಂಗೇಶ್ವರ ಸೋದರಿಯರೆಂದು ಹೇಳುತ್ತಾರೆ.

ವಿಶಾಲವಾಗಿರುವ ಈ ದೇವಸ್ಥಾನವನ್ನು 1971ರಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ. ಪಶ್ಚಿಮಾಭಿಮುಖವಾಗಿರುವ ಈ ಆಲಯದ ವಾಯುವ್ಯ ಮತ್ತು ಈಶಾನ್ಯ ದಿಕ್ಕಿನಲ್ಲಿ ಓಣಿಯಂತೆ ತೋರುವ ಗರ್ಭಗುಡಿಗಳಿವೆ. ಅವುಗಳಲ್ಲಿ ಕರಿಯಮ್ಮ ಮತ್ತು ಕಾಳಮ್ಮನನ್ನು ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ಇಲ್ಲಿ ಯಾವುದೇ ಮೂರ್ತಿ ವಿಗ್ರಹಗಳಿಲ್ಲ. ಅವುಗಳ ಬದಲು ಎರಡೆರಡು ಕಳಶಗಳನ್ನು ಇಡಲಾಗಿದೆ.

ದೇವಸ್ಥಾನದ ಎರಡೂ ಪಕ್ಕಗಳಲ್ಲಿ ಅರವಟ್ಟಿಗೆಗಳ ಮಂಟಪಗಳಿವೆ. ಜಾತ್ರೆ ಸಮಯದಲ್ಲಿ ಭಕ್ತಾದಿಗಳು ಇಲ್ಲಿ ತಂಗಲು ಅನುಕೂಲಕರವಾಗಿದೆ.

ಭಕ್ತಿಲಿಂಗೇಶ್ವರ, ಬೀರೇಲಿಂಗೇಶ್ವರ, ಕರಿಯಮ್ಮ ಹಾಗೂ ಕಾಳಮ್ಮನ ದೇವಸ್ಥಾನಗಳೆಲ್ಲವೂ ಕುರುಬ ಜನಾಂಗದವರಿಗೆ ಸೇರಿದ್ದು, ಕಾಕೋಳು ಆ ಜನಾಂಗದವರ ಪುಣ್ಯ ಕ್ಷೇತ್ರವಾಗಿದೆ.

## ಶ್ರೀ ಆಂಜನೇಯಸ್ವಾಮಿ ದೇವಸ್ಥಾನ

ಕಾಕೋಳಿನ ಮಧ್ಯಭಾಗದಲ್ಲಿರುವ ದೇವಸ್ಥಾನವೇ ಶ್ರೀ ಪ್ರಾಣದೇವರ ಹಾಗೂ ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನ. ವಿಶಾಲವಾದ ಆವರಣ ಹೊಂದಿರುವ ಈ ದೇವಸ್ಥಾನವು ಪೂರ್ವಾಭಿಮುಖವಾಗಿದೆ.

ದೇವಸ್ಥಾನವನ್ನು ಪ್ರವೇಶಿಸಿದೊಡನೆ ಎದುರು ಭಾಗದಲ್ಲಿರುವುದೇ ಪ್ರಾಣದೇವರ ದೇವಸ್ಥಾನವಾಗಿದ್ದು ಪ್ರಥಮವಾಗಿ ಅದರ ದರ್ಶನವಾಗುತ್ತದೆ. ಐದು ಅಡಿ ಎತ್ತರ ಒಂದು ಅಡಿ ವ್ಯಾಸದ ಕಂಬದ ಕೆಳಭಾಗದಲ್ಲಿ ಒಂದು ಅಡಿ ಎತ್ತರದ ಪ್ರಾಣದೇವರನ್ನು ಕೆತ್ತಲಾಗಿದ್ದು ಇದನ್ನು ಕಂಬದ ಆಂಜನೇಯ ಎಂದು ಕರೆಯುತ್ತಾರೆ. ಈ ಆಂಜನೇಯ ಹಳೇ ಊರಿನಿಂದ ತಂದದ್ದಾಗಿದ್ದು ನಾಲ್ಕುನೂರು ವರ್ಷಗಳಿಗೂ ಹಿಂದಿನದೆಂದು ಊಹಿಸಬಹುದಾಗಿದೆ. ಇದೇ

ಕಂಬದ ಹಿಂಭಾಗಕ್ಕೆ ಪಶ್ಚಿಮಾಭಿಮುಖವಾಗಿ ಗರುಡನಿದ್ದಾನೆ. ಉತ್ತರ ದಕ್ಷಿಣ ಭಾಗದಲ್ಲಿ ಶಂಖ-ಚಕ್ರಗಳಿವೆ. ಇದು ಇಲ್ಲಿನ ವಿಶೇಷ. ಇದೇ ರೀತಿಯ ಕಂಬದ ಆಂಜನೇಯ ಹೆಸರಘಟ್ಟ ಘಾರಂನಲ್ಲಿರುವ ಹಾರೋಹಳ್ಳಿಯಲ್ಲಿದ್ದು ಈ ಎರಡೂ ಅಂಜನೇಯರನ್ನೂ ಕರ್ನಾಟಕ ಸಿಂಹಾಸನಾಧೀಶ್ವರರೂ ಶ್ರೀ ಬ್ರಹ್ಮಣ್ಯತೀರ್ಥರ ಸಾಕ್ಷಾತ್ ಶಿಷ್ಯರೂ ಆದ ಶ್ರೀ ವ್ಯಾಸರಾಜರಿಂದ ಪ್ರತಿಷ್ಠಾಪನೆಗೊಂಡಿದೆ.

1908 ರಲ್ಲಿ ಹೊಸ ಊರಿನಲ್ಲಿ (ಈಗಿನ ಕಾಕೋಳು) ಒಂದು ಚಿಕ್ಕದಾದ ಗರ್ಭಗುಡಿಯನ್ನು ಇಟ್ಟಿಗೆಯಲ್ಲಿ ಕಟ್ಟಿ, ಹಳೇ ಕಾಕೋಳಿನಿಂದ ತಂದ ಪ್ರಾಣ ದೇವರನ್ನೂ ಪ್ರತಿಷ್ಠಾಪಿಸಲಾಯಿತು. ಈ ಮುಖ್ಯ ಪ್ರಾಣ ಬಹಳ ಸತ್ಯವಾದ ದೇವರಾಗಿದ್ದು ಈತನನ್ನೂ ಸೇವಿಸಿದವರಿಗೆ ಅದರ ಕಷ್ಟಗಳ ನಿವಾರಣೆ ಮಾಡಿ ಸುಖ-ಸಂಪತನ್ನು ನೀಡುವನು. ಅನೇಕ ವ್ಯವಹಾರಗಳು ಈ ಅಂಜನೇಯನ ಸಮ್ಮುಖದಲ್ಲಿ ಇತ್ಯರ್ಥಗೊಂಡಿದೆ. ತಪ್ಪು ನುಡಿದವರು ಮತ್ತು ತಾವು ಹೇಳಿದಂತೆ ನಡೆದುಕೊಳ್ಳದವರು ಅದರ ಪ್ರತಿಫಲವನ್ನು ಅನುಭವಿಸುತ್ತಾರೆ ಎಂಬ ನಂಬಿಕೆ ಇಲ್ಲಿದೆ.

ಗರ್ಭಗುಡಿಯ ಎರಡೂ ಕಡೆಗಳಲ್ಲಿ ಮೂರು ಅಡಿ ಎತ್ತರದ ಕಲ್ಲಿನ ಕಂಬದ ದೀಪಸ್ತಂಭಗಳಿವೆ.

ಒಂದು ಅಡಿ ಎತ್ತರದ ಉತ್ಸವಮೂರ್ತಿಯನ್ನು ಪ್ರಾಣದೇವರ ಮುಂಭಾಗದಲ್ಲಿ ಇಡಲಾಗಿದೆ. ಪೂನಾದಲ್ಲಿದ್ದು ಇದೇ ಊರಿನವರಾದ ಶ್ರೀ ವರಹಾಮೂರ್ತಿ ಎಂಬುವರು ಈ ಉತ್ಸವಮೂರ್ತಿಯನ್ನು ತಮ್ಮ ಸೇವಾರ್ಥವಾಗಿ ಮಾಡಿಸಿಕೊಟ್ಟಿರುತ್ತಾರೆ. ಹನುಮಾನ್ ಜಯಂತಿಯಂದು ಇಲ್ಲಿ ವಿಶೇಷ ಉತ್ಸವಾದಿಗಳು ನಡೆಯುತ್ತವೆ.

## ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನ

1915 ರಲ್ಲಿ ಊರಿನ ಶ್ಯಾನ್‌ಭೋಗ್ ಶ್ರೀ ವರಸಣ್ಣನವರಿಗೆ ಸ್ವಪ್ನದಲ್ಲಿ ಗೋಪಾಲಕೃಷ್ಣ ಕಂಡಂತೆಯೂ ಹಾಗೂ ತನ್ನನ್ನೂ ಕಾಕೋಳಿಗೆ ಕರೆದು

ಕೊಂಡು ಹೋಗುವಂತೆ ಆದೇಶ ನೀಡಿದಂತೆ ಆಯಿತು. ಗೋಪಾಲಕೃಷ್ಣ ಕೆಡ ಸ್ಥಳ ಅರ್ಕಾವತಿ ನದಿ ಬಯಲಾದರೂ ನಿಖರವಾದ ಸ್ಥಳ ತಿಳಿಯದಾಯಿತು.

ಶ್ರೀಯುತ ನರಸಣ್ಣ ಹಾಗೂ ಇವರ ತಮ್ಮ ಶ್ರೀ ಶೇಷಗಿರಿ (ಚಿಕ್ಕಣ್ಣ) ರಾಯರಿಗೆ ಈ ಕೃಷ್ಣನ ಬಗ್ಗೆಯೇ ಚಿಂತೆ ಹತ್ತತೊಡಗಿತು. ಕೆಲವು ದಿನಗಳು ಕಳೆದ ನಂತರ ಚಿಕ್ಕದಾಪುರದ ಕೆರೆಯಲ್ಲಿ ಶ್ರೀಕೃಷ್ಣನ ಬೃಂದಾವನ ಇರುವ ವಿಷಯ ತಿಳಿದು ಬಂದಿತು. ಆ ಕ್ಷಣವೇ ಸೋದರರಿಬ್ಬರೂ ಚಿಕ್ಕದಾಪುರಕ್ಕೆ ಧಾವಿಸಿ ಕೆರೆಯಲ್ಲಿದ್ದ ಕೃಷ್ಣನ ದರ್ಶನ ಪಡೆದು ಆನಂದಭರಿತರಾದರು. ತಕ್ಷಣವೇ ಈ ತುಳಸೀ ಬೃಂದಾವನವನ್ನೂ ಕಾಕೋಳಿಗೆ ಸಾಗಿಸಲು ಉತ್ಸುಕರಾದರೂ ಸರ್ಕಾರದ ಅನುಮತಿ ಇಲ್ಲದೆ ಸ್ಥಳಾಂತರಿಸಲು ಸಾಧ್ಯವಾಗದು ಎಂಬುದನ್ನು ಅರಿತು ಧಾರ್ಮಿಕ ದತ್ತಿ ಇಲಾಖೆಯವರೊಡನೆ ಪತ್ರ ವ್ಯವಹಾರ ಮಾಡಿ ಮನವಿ ಸಲ್ಲಿಸಿದರು. ಇವರ ಮನವಿಗೆ ಒಪ್ಪಿಗೆ ನೀಡಿದ ಎಂಡೋಸ್ಮೆಂಟ್ ಕಮಿಷನ್‌ರವರು ತಮ್ಮ ಆದೇಶ ನಂ 030 ಆಫ್ 17-18 9-4-1920 ಹಾಗೂ ಸಿ 1239/9-4-20ರ ಪ್ರಕಾರ ಈ ವೇಣುಗೋಪಾಲ ಕೃಷ್ಣ ಬೃಂದಾವನವನ್ನು ಕಾಕೋಳಿಗೆ ಸ್ಥಳಾಂತರಿಸಲು ಒಪ್ಪಿಗೆ ನೀಡಿ ದೇವಸ್ಥಾನವನ್ನು ಗ್ರಾಮಸ್ಥರೇ ಕಟ್ಟತಕ್ಕದೆಂದು ಇದಕ್ಕಾಗಿ ಸರಕಾರದಿಂದ ಯಾವುದೇ ಸಹಾಯ ದೊರೆಯದೆಂದು ಆದೇಶ ನೀಡಿದರು.

ಧಾರ್ಮಿಕ ದತ್ತಿ ಇಲಾಖೆಯವರಿಂದ ಶ್ರೀ ವೇಣುಗೋಪಾಲನನ್ನು ಕಾಕೋಳಿಗೆ ಸ್ಥಳಾಂತರಿಸಲು ಒಪ್ಪಿಗೆ ಪಡೆದ ಮೇಲೆ ಬೆಂಗಳೂರು ಉತ್ತರ ತಾಲ್ಲೂಕಿನ ಅಮಲ್‌ದಾರರಿಗೆ ಮತ್ತೊಂದು ಮನವಿ ಸಲ್ಲಿಸಿ ಈ ವೇಣುಗೋಪಾಲನ ಪೂಜೆ ಆಚಂದ್ರಾರ್ಕವಾಗಿ ನಡೆಯುವಂತಾಗಲು ಸಾಗುವಳಿ ಜಮೀನನ್ನು ಈ ದೇವಸ್ಥಾನಕ್ಕಾಗಿ ನೀಡಬೇಕೆಂದು ಅರಿಕೆ ಮಾಡಿಕೊಂಡರು.

ಶ್ಯಾನುಭೋಗ್ ನರಸಣ್ಣನವರ ಕೋರಿಕೆಯ ಮನ್ನಣೆ ನೀಡಿದ ಅಮಲ್‌ದಾರ್‌ರವರು ಸಾಗುವಳಿ ಜಮೀನನ್ನು ಈ ದೇವಸ್ಥಾನಕ್ಕಾಗಿ ನೀಡಿರುತ್ತಾರೆ. ಅವರ ಆದೇಶ ಪತ್ರದ ವಿವರ ಈ ರೀತಿ ಇದೆ.

## ಅಪೆಂಡಿಕ್ಸ್ ಎ

### ನಮೂನೆ ನಂಬರ್ 2

( x x ನೇ ರೂಲಿನ 28ನೇ ಪ್ಯಾರವನ್ನು ಅನುಸರಿಸಿದ್ದು )

ಬೆಂಗಳೂರು ತಾಲ್ಲೂಕು ಆಫೀಸಿನಿಂದ ಜಮೀನ್ ಹಿಡುವಳಿ ಬಗ್ಗೆ ಕೊಡಲ್ಪಡಬೇಕಾದ ಲಿಖಿತ ಮೂಲಕವಾದ ಮಂಜೂರು ಹುಕುಂ ನಮೂನೆ 58ನೇ ಸೆಕ್ಷನ್ ಮೇರೆಗೆ ಅಮಲ್‌ದಾರರಿಂದ ಕೊಡಲ್ಪಡತಕ್ಕದ್ದು.

ಬೆಂಗಳೂರು ಡಿಸ್ಟ್ರಿಕ್ ಬೆಂಗಳೂರು ತಾಲ್ಲೂಕು ಕಾಕೋಳು ಗ್ರಾಮದ ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನಕ್ಕಾಗಿ ಶ್ಯಾನುಭೋಗ್ ನರಸಣ್ಣನವರಿಗೆ, ಬೆಂಗಳೂರು ತಾಲ್ಲೂಕು ಚೊಕ್ಕನ ಹಳ್ಳಿ ಗ್ರಾಮದಲ್ಲಿರುವ ಸರ್ವೆ ನಂಬರ್ 42ನೇ ಫೋಡು 53ನೇ ನಂಬರ್ 10 ಎಕರೆ 7 ಗುಂಟೆ ಆಕಾರ 16-8-0 ಉಳ್ಳ ಜಮೀನನ್ನೂ ನಿಮಗೆ ಸಾಗುವಳಿ ಮಾಡಿಕೊಳ್ಳಲು ಮಂಜೂರು ಹುಕುಂ ಕೊಡಲ್ಪಟ್ಟಿರುತ್ತದೆ. ತಾ॥ 15ನೇ ನವೆಂಬರ್ ಮಾಹೆ ಅಮಲ್ದಾರ್ ರುಜು ಸನ್ 1921 ನೇ ಇಸವಿ. ಮೊಕ್ಕಾಂ ಬೆಂಗಳೂರು.

ಧಾರ್ಮಿಕ ದತ್ತಿ ಇಲಾಖೆ ಹಾಗೂ ಅಮಲ್‌ದಾರರಿಂದ ಬೃಂದಾವನ ತೆಗೆದುಕೊಂಡು ಹೋಗಲು ಆದೇಶ ಪಡೆದ ಸೋದರರಿಬ್ಬರೂ ಹಾಗೂ ಗ್ರಾಮಸ್ಥರು, ಹಾಲಿ ಅಂಜನೇಯ ದೇವಸ್ಥಾನದ ಮುಂಭಾಗಕ್ಕೆ ಎರಡು ಗರ್ಭಗುಡಿಗಳನ್ನೂ ನವರಂಗ ಹಾಗೂ ಮುಖ ಮಂಟಪಗಳನ್ನು ಉಳ್ಳ ವಿಶಾಲವಾದ ದೇವಸ್ಥಾನವನ್ನು ನಿರ್ಮಿಸಿ, ಪ್ರಮೋದನಾಮ ಸಂವತ್ಸರದ ಜೇಷ್ಠ ಶುದ್ಧ ಪಂಚಮಿ ತಾ॥ 1-6-1930ರ ಭಾನುವಾರದಂದು, ಚಿಕ್ಕದಾಪುರದಿಂದ ತಂದ ಶ್ರೀ ವೇಣುಗೋಪಾಲ ಸ್ವಾಮಿ ಸನ್ನಿಧಾನವಿರುವ ಶಂಕು ಬೃಂದಾವನವನ್ನೂ ಅಂಜನೇಯ ದೇವಸ್ಥಾನದ ಬಲಭಾಗದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಲಾಯಿತು. ಗರ್ಭಗುಡಿ ಉತ್ತರಾಭಿಮುಖವಾಗಿದೆ.

ಐದು ಅಡಿ ಎತ್ತರ, ಮೂರು ಅಡಿ ಅಗಲ ಹಾಗೂ ಮೂರು ಅಡಿ ಉದ್ದದ ವ್ಯಾಸವುಳ್ಳ ಈ ಬೃಂದಾವನವು ನಾಲ್ಕು ಹಂತಗಳಲ್ಲಿದ್ದು, ಮಧ್ಯ ಭಾಗದ ಶಿಲೆಯ ಮುಂಭಾಗದಲ್ಲಿ ಒಂದು ಅಡಿ ಎತ್ತರವುಳ್ಳ ಶ್ರೀ ವೇಣು

ಗೋಪಾಲ ಸ್ವಾಮಿಯ ವಿಗ್ರಹವಿದೆ. ಕೃಷ್ಣನ ವೇಣುವಾದನಕ್ಕೆ ಮನಸೋತ ಎರಡು ಗೋವುಗಳು ಕಿವಿ ನಿಮಿರಿಸಿಕೊಂಡು ಕೃಷ್ಣನತ್ತ ನೋಡುತ್ತಿರುವಂತೆ ಕೆತ್ತಲಾಗಿರುವ ಈ ಸುಂದರ ದೃಶ್ಯ ಎಲ್ಲರ ಮನವನ್ನೂ ಆಕರ್ಷಿಸುವಂತಿದೆ.

ಕೃಷ್ಣನ ಎಡ-ಬಲ ಭಾಗಗಳಲ್ಲಿ ಶಂಖು-ಚಕ್ರಗಳಿವೆ. ಈ ಬೃಂದಾವನದ ಕೆತ್ತನೆಯ ನೈಪುಣ್ಯತೆಗಳನ್ನೂ ಗಮನಿಸಿದಾಗ ಇದು ವಿಜಯನಗರ ಕಾಲಕ್ಕೂ ಹಿಂದಿನದೆಂದು ಊಹಿಸಲಾಗಿದೆ.

ತುಳಸಿ ಬೃಂದಾವನದಲ್ಲಿ ಶ್ರೀ ಕೃಷ್ಣನ ಸನ್ನಿಧಾನ ಇದ್ದೆ ಇರುತ್ತದೆ. ಈ ಸಾಂಕೇತಿಕವಾಗಿಯೇ ಬೃಂದಾವನದ ಮಧ್ಯಭಾಗದಲ್ಲಿ ವೇಣುಗೋಪಾಲ ನನ್ನು ಕೆತ್ತಲಾಗಿದ್ದು, ಅಪೂರ್ವವೂ ಪುರಾತನವೂ ಆಗಿರುತ್ತದೆ, ಈ ಕಾಕೋಳಿನ ಶ್ರೀ ವೇಣುಗೋಪಾಲಸ್ವಾಮಿ ಬೃಂದಾವನ.

ದೊಡ್ಡಬಳ್ಳಾಪುರದ ಆಗಮಿಕ ಶ್ರೀ ಕೃಷ್ಣವಣಾಚಾರ್ಯರಿಂದ ಪ್ರತಿಷ್ಠಾಪನಾ ಕಾರ್ಯಗಳು ನಡೆದ ಈ ವೇಣುಗೋಪಾಲ ಸ್ವಾಮಿಯನ್ನು ಬ್ರಹ್ಮ ರಥದ ಮೇಲೆ ಕೂಡಿಸಿ ಆನಂದ ಪಡುವ ಇಚ್ಛೆ ಶ್ರೀ ನರಸಣ್ಣ ಹಾಗೂ ಶೇಷಗಿರಿ ರಾಯರದಾಗಿ, ಇದಕ್ಕಾಗಿ ನೂತನ ರಥ ಮಾಡುವ ಪ್ರಯತ್ನ ನಡೆಯಿತು. 1933 ರಲ್ಲಿ ನೂತನ ರಥದ ನಿರ್ಮಾಣವಾಗಿ, ಪ್ರಥಮ ಬ್ರಹ್ಮರಥೋತ್ಸವ ವನ್ನು ಅಂಗೀರಸ ನಾಮ ಸಂವತ್ಸರದ ಪಾಲ್ಗುಣ ಶುದ್ಧ ನವಮಿ ಭಾನುವಾರ ತಾ॥ 5-3-1933ರಲ್ಲಿ ವಿಜೃಂಭಣೆಯಿಂದ ನಡೆಸಲಾಯಿತು.

ಎರಡನೇ ವರ್ಷದ ಬ್ರಹ್ಮ ರಥೋತ್ಸವವು 28-3-1934ರ ಚೈತ್ರ ಶುದ್ಧ ಪಂಚಮಿಯಂದು ನಡೆಯಿತು. ಅಲ್ಲಿಂದೀಚೆಗೆ ಚೈತ್ರ ಶುದ್ಧ ಪಂಚಮಿ ಯಂದೇ ಬ್ರಹ್ಮರಥೋತ್ಸವ ನಡೆಸುವ ಸಂಪ್ರದಾಯ ನಡೆದು ಬಂದಿದೆ.

ತದಿಗೆಯಂದು ಅಂಕುರಾರ್ಪಣದೊಂದಿಗೆ ಪ್ರಾರಂಭವಾಗುವ ರಥೋತ್ಸವ ಕಾರ್ಯಕ್ರಮವು ಶ್ರೀರಾಮನವಮಿ ಪರ್ಯಂತ ನಡೆಯುತ್ತದೆ. ಈ ಸಮಯದಲ್ಲಿ ಸಾವಿರಾರು ಭಕ್ತಾದಿಗಳು ನೆರೆಯುತ್ತಾರೆ. ಹರಿದಾಸರುಗಳು ಕಾಲಿಗೆ ಗೆಜ್ಜೆ ಕಟ್ಟಿ ಹಾಡಿ ಕುಣಿಯುವುದು, ನಾದಸ್ವರಗಳ ಮಂಗಳಗಾನ, ತಮಟೆ ನಗಾರಿ, ಕೊಂಬುಗಳ ಭೋರ್ಗರೆಯುವಿಕೆ, ರಥದ ಹಿಂಭಾಗದಲ್ಲಿ ಅಲಂಕೃತ ಎತ್ತಿನ ಗಾಡಿಗಳಲ್ಲಿ ಝಣ ಝಣ ಶಬ್ದ ಮಾಡುತ್ತಾ ಬರುವ ಪಾನಕದ

ಗಾಡಿಗಳು, ರಥದ ಮುಂದೆ ಊರ ಯುವಕರ ಕೋಲಾಟ, ಕುಣಿತ ನಮ್ಮನ್ನು ಬೇರೊಂದು ಲೋಕಕ್ಕೆ ಕೊಂಡೊಯ್ಯುತ್ತದೆ.

ಶ್ರೀ ವೇಣುಗೋಪಾಲ ಬೃಂದಾವನವು ಉತ್ತರಾಭಿಮುಖವಾಗಿದೆ. ಆಂಜನೇಯ ಪೂರ್ವಾಭಿಮುಖನಾಗಿದ್ದಾನೆ. ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನದ ಅಭಿಮುಖವಾಗಿರುವ ಗರ್ಭಗುಡಿಯಲ್ಲಿ ಉತ್ಸವಮೂರ್ತಿಗಳನ್ನು ಇಡಲಾಗಿದೆ. ದೇವಸ್ಥಾನದ ಹೊರಭಾಗದಲ್ಲಿ ಅಂದರೆ ಆಂಜನೇಯ ದೇವಸ್ಥಾನದ ಅಭಿಮುಖವಾಗಿ ಧ್ವಜಸ್ತಂಭ ಹಾಗೂ ಗರುಡ ಕಂಬವಿದೆ. ಗರುಡ ಕಂಬದ ಮುಂಭಾಗದಲ್ಲಿ ಬಲಿಪೀಠದ ಮೇಲೆ ಇಡಲಾಗಿರುವ ಶಾಲಿಯಹಾನವನ್ನು ಸಂತಾನಾಪೇಕ್ಷಿಗಳು ಸೇವಿಸಿದರೆ ಸಂತಾನ ಭಾಗ್ಯ ಪಡೆಯುವರೆಂಬ ನಂಬಿಕೆ ಇಲ್ಲಿದೆ. ಈ ಕಾರಣದಿಂದಾಗಿ ಈ ವೇಣುಗೋಪಾಲನನ್ನು ಸಂತಾನ ವೇಣುಗೋಪಾಲಸ್ವಾಮಿ ಎಂದು ಕರೆಯುತ್ತಾರೆ.

ದೇವಸ್ಥಾನದ ಬಲಭಾಗಕ್ಕಿರುವುದೇ ಯಾಗಮಂಟಪ ಹಾಗೂ ರಥದ ಮನೆ. ದೇವಸ್ಥಾನದ ಮುಂಭಾಗದಲ್ಲಿ ಎರಡು ಸುರುಬನ್ನೆ ಹೂವಿನ ಮರಗಳಿದ್ದು ಅವು ಸದಾ ಸುವಾಸನೆ ಬೀರುತ್ತವೆ.

ಜೀರ್ಣೋದ್ಧಾರ : ಶಿಥಿಲವಾಗಿದ್ದ ಬ್ರಹ್ಮರಥವನ್ನು ವಿಕ್ರಯ ಮಾಡಿದ್ದರಿಂದ ನೂತನ ಬ್ರಹ್ಮರಥ ಮಾಡಿಸುವ ಮೂಲ ಉದ್ದೇಶದಿಂದ "ಶ್ರೀ ವೇಣುಗೋಪಾಲ ಸ್ವಾಮಿ ಸೇವಾ ಸಮಿತಿ" ಎಂಬ ಒಂದು ಭಕ್ತಿ ಮಂಡಳಿ ಸ್ಥಾಪನೆಯಾಗಿ ಇವರ ಶ್ರಮದ ಫಲವಾಗಿ ನೂತನ ಬ್ರಹ್ಮರಥವು ನಿರ್ಮಾಣಗೊಂಡಿತು. 1972ರ ಸುಮಾರಿನಲ್ಲಿ ದೇವಸ್ಥಾನಕ್ಕೆ ವಿದ್ಯುತ್ ದೀಪವೂ ಈ ಸಮಿತಿಯವರಿಂದಲೇ ಹಾಕಿಸಲ್ಪಟ್ಟಿತು.

1985 ರಿಂದೀಚೆಗೆ ದೇವಸ್ಥಾನದ ಸ್ಥಾಪಕರಲ್ಲಿ ಪ್ರಮುಖರಾದ ಶ್ಯಾನುಭೋಗ್ ನರಸಣ್ಣನವರ ಮೊಮ್ಮಗ ಹಾಕೋಳು ಶ್ರೀನಿವಾಸರಾಯರು ಹಂತ ಹಂತವಾಗಿ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯ ಪ್ರಾರಂಭಿಸಿದರು.

ದೇವಸ್ಥಾನದ ಒಳಭಾಗದ ಗೋಡೆಗಳಿಗೆ ಸಿಮೆಂಟ್ ಪ್ಲಾಸ್ಟರಿಂಗ್ ಮಾಡಲಾಯಿತು. ಗರ್ಭಗುಡಿಯನ್ನು ರಿಪೇರಿ ಮಾಡಿ ಸಿಂಗರಿಸಲಾಯಿತು. ಭದ್ರತೆ ದೃಷ್ಟಿಯಿಂದ ಬಾಗಿಲನ್ನು ಬದಲಾಯಿಸಲಾಯಿತು. ಪಾಳುಬಿದ್ದಿದ್ದ ಯಾಗ

ಮಂಟಪವನ್ನು ಸಿಮೆಂಟ್ ಇಟ್ಟಿಗೆಗಳಿಂದ ಮತ್ತೆ ಕಟ್ಟಲಾಯಿತು. ರಥ ನಿಲ್ಲಿಸುವ ಮನೆಗೆ ಕಬ್ಬಿಣದ ಬಾಗಿಲುಗಳನ್ನು ಇಡಲಾಯಿತು. ಮುರಿದು ಹೋಗಿದ್ದ ಉತ್ಸವ ಮೂರ್ತಿ ಕೂಡಿಸುವ ಪೀಠವನ್ನು ಕಬ್ಬಿಣದ ಸಲಾಕೆಗಳಿಂದ ಮಾಡಿಸಿ ಆಧುನಿಕ ರೀತಿಯಲ್ಲಿ ಸಜ್ಜುಗೊಳಿಸಲಾಯಿತು. ದೇವಸ್ಥಾನದ ಮುಖ ಮಂಟಪವನ್ನು ಅಮೃತ ಶಿಲೆಯ ಲೇಪನದಿಂದ ಅಲಂಕರಿಸಿ, ಇದಕ್ಕೆ ಕೊಲಾಪ್ಸಬಲ್‌ಗೇಟ್ ಅನ್ನೂ ಅಳವಡಿಸಲಾಯಿತು. ದೇವಸ್ಥಾನದ ಮುಂಭಾಗದ ಮೇಲ್ ಭಾಗದಲ್ಲಿ ಚಿಕ್ಕ ಗೋಪುರ ನಿರ್ಮಾಣ ಮಾಡಿ ಅಲ್ಲಿ ಗೋಪಿಸ ಮುಂಭಾಗದಲ್ಲಿ ಕೊಳಲನೂದುತ್ತಿರುವ ಕೃಷ್ಣ ಹಾಗೂ ದ್ವೈತಮತ ಸ್ಥಾಪಕರಾದ ಶ್ರೀ ಮಧ್ವಾಚಾರ್ಯರ ಪ್ರತಿಮೆಗಳನ್ನು ಇಡಲಾಗಿದೆ. ದೇವ ಸ್ಥಾನದ ಮೇಲ್‌ಭಾಗದ ಎರಡೂ ಮೂಲೆಗಳಲ್ಲಿ ಆಂಜನೇಯ ಹಾಗೂ ಗರುಡರ ವಿಗ್ರಹಗಳನ್ನಿಟ್ಟು ಸಿಂಗರಿಸಲಾಗಿದೆ. ಭಕ್ತಿಗೀತೆ ಸುಪ್ರಭಾತಗಳನ್ನು ಕೇಳುವ ಸಲುವಾಗಿ (ಸ್ಟಿರಿಯೋ ಸೆಟ್, ಟೇಪ್‌ರೇಕಾರ್ಡರ್, ಅಂಪ್ಲಿಫೇಯರ್ ಅನ್ನೂ ಒದಗಿಸಲಾಗಿದೆ. ಇವೆಲ್ಲವೂ ಕಾಕೋಳು ಶ್ರೀನಿವಾಸರಾಯರ ಸೇವಾ ರ್ಥವಾಗಿದೆ. ಶ್ರೀಯುತರು ವೇಣುಗೋಪಾಲಸ್ವಾಮಿಯ ಪರಮ ಭಕ್ತರಾ ಗಿದ್ದು ಇದೇ ದೇವರ ಹೆಸರಿನಲ್ಲಿ ಒಂದು ಸಣ್ಣ ಪ್ರವರ್ತಣದ ಕಾರ್ಖಾನೆಯನ್ನು (V.C.R. Electric Service) ನಡೆಸುತ್ತಿದ್ದಾರೆ. ದೇವಸ್ಥಾನಕ್ಕೆ ಒಂದು ಹೊಸ ರೂಪ ಬಂದಿರುವುದಕ್ಕೆ ಇವರೇ ಮೂಲ ಕಾರಣರು. ಬೆಂಗ ಳೂರಿನ ಇ. ರಾಘವೇಂದ್ರರಾವ್‌ರವರು ದೇವಸ್ಥಾನದ ಒಳಭಾಗದಲ್ಲಿ ಕಡಪಾ ಹಾಸುಗಳನ್ನು ಹಾಕಿಸಿರುತ್ತಾರೆ. ಡಿ. ಎ. ಕೃಷ್ಣಸ್ವಾಮಿಗಳು ಶ್ರೀ ವೇಣು ಗೋಪಾಲನಿಗೆ ಕವಚ ವಜ್ರಾಂಗಿ ಮಾಡಿಸಿಕೊಟ್ಟಿರುತ್ತಾರೆ. ಇವರಂತೆ ಅನೇಕಾ ನೇಕ ಭಕ್ತ ಮಹನೀಯರುಗಳು ತಮ್ಮ ಕೈಲಾದ ಸೇವೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಬ್ರಹ್ಮರಥೋತ್ಸವದಲ್ಲಿ ಸೇರುವ ಭಕ್ತಾದಿಗಳ ಸಂತರ್ಪಣೆ ಖರ್ಚಿಗಾಗಿ ಶ್ರೀ॥ ನರಸಣ್ಣ ಹಾಗೂ ಇವರ ತಮ್ಮ ಶೇಷಗಿರಿರಾಯರು ತಮ್ಮದೇ ಆದ ಸ್ವಂತ ಹೊಲಗದ್ದೆಗಳನ್ನು ಈ ದೇವಸ್ಥಾನಕ್ಕಾಗಿ ನೀಡಿರುತ್ತಾರೆ.

ಒಟ್ಟಿನಲ್ಲಿ ಶ್ರೀ ವೇಣುಗೋಪಾಲಸ್ವಾಮಿಯ ಹಾಗೂ ಪ್ರಾಣದೇವರ ದರ್ಶನ ಪೂಜೆ ಇಹಕ್ಕೆ ಸುಖವನ್ನೂ ಪರಕ್ಕೆ ಮೋಕ್ಷವನ್ನೂ ಕೊಡುವುದರಲ್ಲಿ ಸಂದೇಹವಿಲ್ಲ.

## ವೀರಭದ್ರಸ್ವಾಮಿ ದೇವಸ್ಥಾನ

ಹಳೇ ಕಾಕೋಳಿನಲ್ಲಿ ಚೋಳರಿಂದ ಪ್ರತಿಷ್ಠಾಪನೆಗೊಂಡು ವಿಜಯನಗರ ಅರಸರ ಕಾಲದಲ್ಲಿ ನವರಂಗಗಳನ್ನು ಕಟ್ಟಲ್ಪಟ್ಟ ಈ ಪುರಾತನ ದೇವಸ್ಥಾನವು ಹೊಸ ಊರಿಗೆ ವರ್ಗಾಯಿಸಲ್ಪಟ್ಟಾಗ ಹಳೇ ದೇವಸ್ಥಾನದ ಸಾಮಾನುಗಳನ್ನೇ ತಂದು ಹೊಸ ಊರಿನಲ್ಲಿ ಮತ್ತೆ ದೇವಸ್ಥಾನ ನಿರ್ಮಾಣ ಮಾಡಲಾಯಿತು. ಈ ದೇವಸ್ಥಾನವು 1905 ರಲ್ಲಿ ಸ್ಥಳಾಂತರಗೊಂಡು ವೀರಭದ್ರಸ್ವಾಮಿಯ ಪುನರ್ ಪ್ರತಿಷ್ಠಾಪನೆ ಕಾರ್ಯ ನೆರವೇರಿಸಲಾಯಿತು.

ಗರ್ಭಗುಡಿ ಶುಕನಾಶಿ, ನವರಂಗ ಹಾಗೂ ಮುಖ ಮಂಟಪಗಳನ್ನು ಹೊಂದಿರುವ ಈ ದೇವಸ್ಥಾನದ ನವರಂಗದಲ್ಲಿರುವ ಕಂಬಗಳು ವಿಜಯನಗರ ಕಾಲದ ಶಿಲಾವಿನ್ಯಾಸ ಹೊಂದಿದ್ದು ಒಂದೊಂದು ಕಂಬದಲ್ಲೂ ಅನೇಕ ಮುನಿಗಳ, ಗಣೇಶನ ಬಸವ ಹಾಗೂ ಇನ್ನೂ ಅನೇಕಾನೇಕ ಚಿತ್ರಗಳನ್ನು ಕೆತ್ತಲಾಗಿದೆ.

ಆರು ಅಡಿ ಉದ್ದ, ಎಂಟು ಅಡಿ ಅಗಲದ ಗರ್ಭಗುಡಿಯಲ್ಲಿ, ಒಂದು ಅಡಿ ಎತ್ತರದ ಪಾಣಿ ಪೀಠದ ಮೇಲೆ ನಾಲ್ಕು ಅಡಿ ಎತ್ತರದ ವೀರಭದ್ರಸ್ವಾಮಿ ವಿಗ್ರಹವಿದೆ. ಈ ವೀರಭದ್ರ ದೇವರ ಕೊರಳಲ್ಲಿ ರುಂಡಗಳ ಸರಮಾಲೆ ಇದೆ. ನಾಲ್ಕು ಕೈಗಳಲ್ಲಿ ಕ್ರಮವಾಗಿ ಕತ್ತಿ, ಗುರಾಣಿ, ಖಡ್ಗ, ಬಿಲ್ಲುಗಳನ್ನು ಹಿಡಿದು ದುಷ್ಟರ ನಿಗ್ರಹನಾಗಿ ಶಿಷ್ಟರ ಸಂರಕ್ಷಕನಾಗಿ ಕಾಕೋಳು ಗ್ರಾಮದಲ್ಲಿ ನೆಲೆ ನಿಂತಿದ್ದಾರೆ.

ಕಪ್ಪು ಶಿಲೆಯ ಈ ವೀರಭದ್ರ ದಕ್ಷಿಣಾಭಿಮುಖವಾಗಿದ್ದಾನೆ. ಸ್ವಾಮಿಯ ಬಲಭಾಗದಲ್ಲಿ ಒಂದು ಪುರುಷಾಕೃತಿ ಇದ್ದು, ಕುರಿ ತಲೆಯನ್ನು ಹೊಂದಿರುವ ಈ ವ್ಯಕ್ತಿ ದಕ್ಷನಾಗಿದ್ದಾನೆ.

ದಕ್ಷನನ್ನು ಸಂಹಾರ ಮಾಡಲೆಂದೇ ವೀರಭದ್ರನ ಅವತಾರ ತಳೆದ ರುದ್ರ ದೇವರು ದಕ್ಷನನ್ನು ಸಂಹರಿಸುತ್ತಾನೆ. ಅವನ ಅಂತಿಮ ಕೋರಿಕೆ ಯಂತೆ ತನ್ನ ಸಾನಿಧ್ಯದಲ್ಲೇ ಉಳಿಸಿಕೊಳ್ಳುತ್ತಾನೆ. ಇದರ ಹಿನ್ನೆಲೆಯಲ್ಲಿ ಕೆತ್ತಲಾಗಿರುವ ಈ ವೀರಭದ್ರ ನಯನ ಮನೋಹರವಾಗಿದೆ.

ವೀರಭದ್ರ ಹಾಗೂ ಮಹದೇಶ್ವರ ಎಂಬ ಎರಡು ಕಂಚಿನ ಉತ್ಸವ ಮೂರ್ತಿಗಳು ಇಲ್ಲಿವೆ. ಈ ಉತ್ಸವ ಮೂರ್ತಿಗಳನ್ನು ಚಿತ್ರಗೋಪುರ ದಲ್ಲಿಟ್ಟು ಉತ್ಸವಗಳನ್ನು ಹಿಂದೆ ನಡೆಸಲಾಗುತ್ತಿತ್ತು. ಭಾರೀ ಪ್ರಮಾಣದಿಂದ ಕೂಡಿದ ಈ ಚಿತ್ರಗೋಪುರವನ್ನು ಹೊರಲು ಕಟ್ಟುಮಸ್ತಾದ ಇಪ್ಪತ್ತಕ್ಕೂ ಹೆಚ್ಚು ಜನ ಬೇಕಾಗುತ್ತದೆ. ಈಗ ಈ ಉತ್ಸವ ನಡೆಯುತ್ತಿಲ್ಲ. ಅದರ ಬದಲಾಗಿ ಚಿಕ್ಕ ಪ್ರಮಾಣದ ಉತ್ಸವ ನಡೆಸಲಾಗುವುದು.

ಅತ್ಯಂತ ವೈಭವ ಕಲಾಪೂರ್ಣತೆಯಿಂದ ಕೂಡಿರುವ ಚಿತ್ರಗೋಪುರವು ಆರು ಅಡಿ ಎತ್ತರ ನಾಲ್ಕು ಅಡಿ ಅಗಲವಿದೆ. ಹನ್ನೆರಡು ಚಿಕ್ಕ ಕಂಬಗಳ ಆಧಾರದ ಮೇಲೆ ಐದು ಗೋಪುರಗಳನ್ನೂ, ಹನ್ನೆರಡು ಕಳಶಗಳನ್ನೂ ಹಾಗೂ ಪ್ರಭಾವಳಿಯನ್ನೂ ಹೊಂದಿರುವ ಈ ಅಪರೂಪದ ಚಿತ್ರಗೋಪುರವು ಬೆಂಗಳೂರು ಜಿಲ್ಲೆಯ ಮತ್ಯಾವುದೇ ದೇವಸ್ಥಾನಗಳಲ್ಲಿಯೂ ಕಾಣಬರುವುದಿಲ್ಲ ಈ ಚಿತ್ರಗೋಪುರವು 1916ರಲ್ಲಿ ನಿರ್ಮಾಣಗೊಂಡಿದ್ದು, ಅದರಲ್ಲಿ ಕೆತ್ತಲಾಗಿ ರುವ ಶಾಸನ ಈ ರೀತಿ ಇದೆ.

"ಶಾಲಿವಾಹನ ಶಕ ವರ್ಷಂಗಳು 1834ಕ್ಕೆ ಸರಿಯಾದ ಶ್ರೀ ನಳನಾಮ ಸಂವತ್ಸರದ ಆಶ್ವೀಜ ಶುದ್ಧ 10 ಶುಕ್ರವಾರದಲ್ಲಿ ಬೆಂಗಳೂರು ತಾಲ್ಲೂಕು, ಕಾಕೋಳು ಶ್ರೀ ವೀರಭದ್ರದೇವರ ಉತ್ಸವಕ್ಕೆ ದೊಡ್ಡೀರಪ್ಪ ಹುಚ್ಚಪ್ಪನವರ ಮಗ, ದೇವಸ್ಥಾನದ ಧರ್ಮಕರ್ತ ರುದ್ರಪ್ಪ ಸಹಾ ಮಾಡಿಸಿಕೊಟ್ಟ ಚಿತ್ರ ಸಂಪೂರ್ಣ ಸೇವಾ 1916ನೇ ಅಕ್ಟೋಬರ್‌ನಲ್ಲಿ ಎಂದು ಹೇಳಲಾಗಿದೆ.

ಸಮಾಜದಲ್ಲಿನ ಬೇಧ ಭಾವಗಳನ್ನು ಹೋಗಲಾಡಿಸಿ 'ಕಾಯಕವೇ ಕೈಲಾಸ', 'ಮನುಕುಲ ಒಂದೇ', 'ಆಡಂಬರದ ಜೀವನ ನಶ್ವರ', 'ಈಶನ ಸೇವೆಯೇ ಶಾಶ್ವತ' ಎಂದು ನುಡಿದ ಸಮಾಜ ಸುಧಾರಕ ಜಗಜ್ಯೋತಿ ಬಸವಣ್ಣನವರ ಅವತಾರ ದಿನವನ್ನು ಬಸವ ಜಯಂತಿ ಎಂದು ಆಚರಿಸ

ಲಾಗುವುದು. ಈ ಬಸವ ಜಯಂತಿ ಹಿಂದೆ ಕಾಕೋಳು ಗ್ರಾಮದಲ್ಲಿ ಅತ್ಯಂತ ವೈಭವಪೂರ್ಣವಾಗಿ ಆಚರಿಸಲಾಗುತ್ತಿತ್ತು. ಇದೇ ಸಮಯದಲ್ಲಿ ವೀರಭದ್ರ ದೇವರ ರಥೋತ್ಸವವೂ ಜರುಗುತ್ತಲಿದ್ದವು. ಆ ಸಮಯದಲ್ಲಿ ಬಾಣ ಬಿರುಸುಗಳ ವೈಭವ, ವೀರಗಾಸೆ ಕುಣಿತ, ನಂದಿಧ್ವಜ ಕುಣಿತ, ಮುಂತಾದವುಗಳು ನಡೆಯುತ್ತಿದ್ದು, ಕಾಕೋಳಿನಲ್ಲಿ ನಡೆಯುವ ಬಸವ ಜಯಂತಿ ಇಡೀ ಜಿಲ್ಲೆಗೇ ಹೆಸರುವಾಸಿಯಾಗಿದ್ದಿತು.

ರಥ ಶಿಥಿಲವಾಗಿರುವುದರಿಂದ ಉತ್ಸವ ಕಾರ್ಯಕ್ರಮಗಳು ಮಾತ್ರ ನಡೆಯುತ್ತಿವೆ. ಊರಿನ ಎಲ್ಲಾ ದನಕರುಗಳಿಗೆ ಎತ್ತುಗಳಿಗೆ ಅಲಂಕಾರ ಮಾಡಿ ಆರತಿಗಳ ಸಮೇತ ಸುಮಂಗಲಿಯರು ವಾದ್ಯ ಮೇಳಗಳೊಂದಿಗೆ ವೀರಭದ್ರ ದೇವರ ದೇವಸ್ಥಾನದ ಮುಂದೆ ಸೇರಿ, ದೇವರಿಗೆ ಆರತಿ ಬೆಳಗಿ ಹೋದನಂತರ ಉತ್ಸವವನ್ನು ಊರ ಪ್ರತಿಯೊಂದು ಬೀದಿಗೂ ಕೊಂಡೊಯ್ಯಲಾಗುತ್ತದೆ.

ಮೂರು ಅಡಿ ಎತ್ತರದ ಇಬ್ಬರು ದೀಪಕನ್ನಿಕೆಯರ ಮಧ್ಯಭಾಗದಲ್ಲಿ ಅಶ್ವವೊಂದಿದೆ. ಈ ಅಶ್ವದ ಮೇಲೆ ಉತ್ಸವಮೂರ್ತಿ ಇಡಲು ಆಸನ, ಇದರ ಹಿಂಭಾಗದಲ್ಲಿ ಪ್ರಭಾವಳಿ ಅದರ ಹಿಂಭಾಗದಲ್ಲಿ ಮತ್ತೊಂದು ದೊಡ್ಡ ಪ್ರಭಾವಳಿ ಇರುವ ಉತ್ಸವಪೀಠ ಇಲ್ಲಿಯ ನವರಂಗದಲ್ಲಿ ಚಿತ್ರಗೋಪುರದ ಎದುರು ಭಾಗದಲ್ಲಿದೆ.

ನವೀನ ರೀತಿಯಲ್ಲಿರುವ ಇಲ್ಲಿನ ಉತ್ಸವ ಪೀಠ ಉಕ್ಕಿನಿಂದ ಮಾಡಿದ್ದು ಮೇಲ್ಭಾಗಕ್ಕೆ ಹಲಗೆ ಹಾಕಲಾಗಿದೆ. ಉತ್ಸವಮೂರ್ತಿ ಅಳ್ಳಾಡದಂತೆ ನಟ್ಟು ಬೋಲ್ಟ್‌ಗಳನ್ನು ಅಳವಡಿಸಲಾಗಿದೆ. ನಾಲ್ಕು ಅಡಿ ಉದ್ದ ಮೂರು ಅಡಿ ಅಗಲವಿರುವ ಇದೇ ಮಾದರಿಯ ಉತ್ಸವ ಪೀಠವು ಶ್ರೀ ವೇಣುಗೋಪಾಲ ಸ್ವಾಮಿ ದೇವಸ್ಥಾನದಲ್ಲೂ ಇದ್ದು ಇವುಗಳನ್ನು ಕಾಕೋಳು ಶ್ರೀನಿವಾಸ ರಾಯರು ತಮ್ಮ ಸೇವಾರ್ಥವಾಗಿ ಮಾಡಿಸಿಕೊಟ್ಟಿರುತ್ತಾರೆ.

ದೇವಸ್ಥಾನದ ಮುಖಮಂಟಪದ ಮೇಲ್‌ಭಾಗದಲ್ಲಿ ಪರಮೇಶ್ವರನ ವಿಗ್ರಹವನ್ನು ಇಡಲಾಗಿದೆ. ವೀರಭದ್ರದೇವರ ಅಭಿಮುಖವಾಗಿ, ದೇವಸ್ಥಾನದ ಹೊರಭಾಗದಲ್ಲಿ ದೀಪಸ್ಥಂಭವಿದೆ. ಇದರ ಕೆಳಭಾಗದಲ್ಲಿ ದಕ್ಷನ

ವಿಗ್ರಹವಿದ್ದು ಈತ ತನ್ನ ಎರಡೂ ಕೈಗಳನ್ನು ಜೋಡಿಸಿಕೊಂಡು ಸದಾ ವೀರಭದ್ರದೇವರ ದರ್ಶನ ಪಡೆಯುತ್ತಿದ್ದಾನೆ.

ಮುಕ್ಕಾಲು ಎಕರೆ ವಿಸ್ತೀರ್ಣದ ಪ್ರದೇಶದಲ್ಲಿರುವ ಈ ದೇವಸ್ಥಾನದ ಮತ್ತೊಂದು ಭಾಗದಲ್ಲಿ ಪ್ರತ್ಯೇಕವಾದ ಬಸವನ ದೇವಸ್ಥಾನವಿದೆ. ವೀರಭದ್ರ ದೇವರ ದೇವಸ್ಥಾನ ದಕ್ಷಿಣಾಭಿಮುಖವಾಗಿದ್ದು, ಬಸವಣ್ಣನ ದೇವಸ್ಥಾನ ಉತ್ತರಾಭಿಮುಖವಾಗಿದೆ. ಗರ್ಭಗುಡಿಯಲ್ಲಿ ಎರಡು ಅಡಿ ಪೀಠದ ಮೇಲೆ ಮೂರು ಅಡಿ ಉದ್ದ, ಅಷ್ಟೇ ಅಗಲ ಹಾಗೂ ಎರಡೂವರೆ ಅಡಿ ಎತ್ತರ ವಿರುವ ವೃಷಭನ ಕೊರಳಲ್ಲಿ ಗೆಜ್ಜೆಗಳಿದ್ದು ಸುಂದರವಾಗಿ ಕಡೆಯಲಾಗಿದೆ.

ಮಕರ ಸಂಕ್ರಾಂತಿ, ಯುಗಾದಿ, ಬಸವ ಜಯಂತಿ, ನವರಾತ್ರಿ ಹಾಗೂ ಕಾರ್ತೀಕಮಾಸಗಳಲ್ಲಿ ಇಲ್ಲಿ ವಿಶೇಷ ಅಭಿಷೇಕ, ಪೂಜೆ ಇತ್ಯಾದಿಗಳು ನಡೆಯುತ್ತವೆ.

ಬೆಂಗಳೂರು ಜಿಲ್ಲೆಯಲ್ಲಿ ನೋಡಲೇಬೇಕಾದ ದೇವಸ್ಥಾನಗಳಲ್ಲಿ ಈ ವೀರಭದ್ರದೇವರ ದೇವಸ್ಥಾನವೂ ಒಂದಾಗಿದೆ.

## ಬೆಂಕಿ ಮಾರಮ್ಮನ ದೇವಸ್ಥಾನ

ಗ್ರಾಮದೇವತೆ ಬೆಂಕಿ ಮಾರಮ್ಮನ ದೇವಸ್ಥಾನವು ಊರ ಉತ್ತರ ಭಾಗ ದಲ್ಲಿದೆ. ಈ ದೇವತೆಯ ಮೂಲ ವಿಗ್ರಹವನ್ನು ಹಳೇ ಕಾಕೋಳಿನಿಂದ ತಂದದ್ದಾಗಿದೆ.

1908ರಲ್ಲಿ ಸ್ಥಾಪನೆಗೊಂಡ ಈ ಗುಡಿಯು 1924ರಲ್ಲಿ ಜೀರ್ಣೋದ್ಧಾರಗೊಂಡಿದೆ.

ಗರ್ಭಗುಡಿ ಹಾಗೂ ನವರಂಗವನ್ನು ಹೊಂದಿರುವ ಈ ದೇವಸ್ಥಾನದ ಗರ್ಭಗುಡಿಯಲ್ಲಿ ಏಕ ಶಿಲೆಯ ಪೀಠ ಹಾಗೂ ವಿಗ್ರಹವನ್ನು ಕೆತ್ತಲಾಗಿದೆ. ನಾಲ್ಕು ಕೈಗಳನ್ನು ಹೊಂದಿರುವ ಮಾತೆ ತನ್ನ ನಾಲ್ಕೂ ಕೈಗಳಲ್ಲಿ ತ್ರಿಶೂಲ, ಡಮರು, ಕತ್ತಿ ಹಾಗೂ ಅಕ್ಷಯಪಾತ್ರೆ ಹಿಡಿದು ರೌದ್ರ ರೂಪ ತಾಳಿರುವ ದೇವಿ ಊರಿಗೆ ತಗುಲಿರುವ ಸಾಂಕ್ರಾಮಿಕ ರೋಗ ಇತ್ಯಾದಿಗಳನ್ನು ತಡೆದು

ಗ್ರಾಮರಕ್ಷಕಳಾಗಿದ್ದಾಳೆ, ಒಂದು ಕೈಲಿ ಅಕ್ಷಯ ಪಾತ್ರೆ ಹಿಡಿದಿರುವ ದೇವಿ ದುರ್ಭಿಕ್ಷ ಹೋಗಲಾಡಿಸಿ ಸುಭಿಕ್ಷ ನೀಡುವ ವರಪ್ರದಾಯಿನಿಯೂ ಆಗಿದ್ದಾಳೆ.

ಚೈತ್ರ ವೈಶಾಖಮಾಸದಲ್ಲಿ ಇಲ್ಲಿ ಜಾತ್ರೆ ಜರಗುತ್ತದೆ. ಆ ಸಮಯ ದಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಊರ ಸುಮಂಗಲೆಯರು ತಂಬಿಟ್ಟು ಆರತಿಗಳನ್ನು ಬೆಳಗುವರು.

## ನವರಾತ್ರಿ ಉತ್ಸವ

ಊರಿನ ಎಲ್ಲಾ ದೇವಾಲಯಗಳಲ್ಲಿ ನವರಾತ್ರಿಯ ಹತ್ತೂ ದಿನಗಳು ದೇವರುಗಳನ್ನು ಪಟ್ಟಕ್ಕೆ ಕೂರಿಸಿ ವಿಶೇಷ ಉತ್ಸವಾದಿಗಳನ್ನು ನಡೆಸಲಾಗು ವುದು.

ವಿಜಯ ದಶಮಿಯಂದು ವೇಣುಗೋಪಾಲ, ವೀರಭದ್ರ ಹಾಗೂ ಬೆಂಕಿಮ್ಮನ ಉತ್ಸವಗಳನ್ನೂ ಊರ–ಮುಂಭಾಗದಲ್ಲಿರುವ ಬನ್ನಿ ಮಂಟಪಕ್ಕೆ ವಿಶೇಷ ಪೂಜೆಗಾಗಿ ಕರೆದೊಯ್ಯಲಾಗುವುದು. ಹಿಂದೆ ಈ ಉತ್ಸವ ಅತ್ಯಂತ ವೈಭವದಿಂದ ನಡೆಯುತ್ತಿತ್ತು. ಅಶ್ವ ಸಮೇತವಾಗಿ ಬನ್ನಿ ಮಂಟಪಕ್ಕೆ ಹೋಗುವ ಪದ್ಧತಿ ಇದ್ದಿತು.

ನಾಗಸ್ವರ, ತಮಟೆ, ನಗಾರಿ ಕೊಂಬು ಕಹಳೆಗಳ ಮಂಗಳ ವಾದ್ಯ ಗಳ ಸಮೇತ ನೂರಾರು ಜನ ಉತ್ಸವದ ಹಿಂದೆ ಬನ್ನಿ ವೃಕ್ಷದತ್ತ ಹೋಗಿ ಪೂಜೆ ಸಲ್ಲಿಸಿ ಊರ ಪ್ರಮುಖರಲ್ಲಿ ಒಬ್ಬರು ಬನ್ನಿ ವೃಕ್ಷದ ಬಳಿ ನೆಡಲ್ಪಟ್ಟ ಬಾಳೆ ಗಿಡಗಳನ್ನು ಕತ್ತಿಯಿಂದ ಕತ್ತರಿಸಿ ಬಲಿ ದಹನ ಮಾಡುವುದು ಹಿಂದಿನಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿರುತ್ತದೆ.

ಕಾಕೋಳು ಕೇವಲ ದೇವಾಲಯಗಳ ಗ್ರಾಮವಾಗಿರದೆ ಕನ್ನಡ ಸಾಹಿತ್ಯ ಸರಸ್ವತಿಯ ಬೀಡೂ ಆಗಿದೆ. ಹೆಸರಾಂತ ಕಾದಂಬರಿಗಾರ್ತಿ ಕಾಕೋಳು ಸರೋಜರಾವ್, ವಿಮಲಾ ರಾಘವೇಂದ್ರ, ಕಾಕೋಳು ರಾಮಯ್ಯ, ಕಾ.ವೀ.ಚಿ ಕಾವ್ಯನಾಮಾಂಕಿತರಾದ ಚಿಕ್ಕ ರುದ್ರಪ್ಪ ಇನ್ನೂ ಅನೇಕಾನೇಕ ಸಾಹಿತಿಗಳೂ ಕಲಾವಿದರೂ ಈ ಗ್ರಾಮದಲ್ಲಿದ್ದಾರೆ. ಅನೇಕ ಪದವೀಧರ ಯುವಕರು

ಈ ಗ್ರಾಮದಲ್ಲಿದ್ದು ಇವರು ನಡೆಸುವ ಗಣೇಶನ ಉತ್ಸವ ವೈಭವ ಪೂರ್ಣವಾಗಿದ್ದು ಇವರ ಧರ್ಮಶ್ರದ್ಧೆ ಹಾಗೂ ಭಕ್ತಿ ಭಾವಗಳ ಪ್ರತೀಕವಾಗಿದೆ.

ಕಾಕೋಳು ಗ್ರಾಮ, ದೇವಾಲಯಗಳ ಕ್ಷೇತ್ರ ಮಾತ್ರವಲ್ಲದೆ ಸಾಹಿತಿಗಳ, ವಿದ್ಯಾವಂತರ ಬೀಡೂ ಆಗಿದ್ದು ಎಲ್ಲರೂ ಒಮ್ಮೆ ಸಂದರ್ಶಿಸಲೇಬೇಕಾದ ಸ್ಥಳವಾಗಿದೆ.

## ಬಾತ್ಯದ ಲಕ್ಷ್ಮೀದೇವಿ ದೇವಸ್ಥಾನ

ಹಿಂದೆ ಹೆಸರುಘಟ್ಟ ಫಾರಂನಲ್ಲಿದ್ದ ಊರುಗಳಲ್ಲಿ ಬಾತ್ಯವೂ ಒಂದು. ಬೆಂಗಳೂರಿನಿಂದ ಮುವತ್ತು ಕಿಲೋಮೀಟರ್ ದೂರದಲ್ಲಿರುವ ಈ ಊರು ಒಂದು ಮಾದರಿ ಗ್ರಾಮವಾಗಿದೆ.

ಹಳೇ ಬಾತ್ಯದಲ್ಲಿದ್ದ ಲಕ್ಷ್ಮೀದೇವಿ ಹಾಗೂ ಪೂಜಮ್ಮ ಎಂಬ ಗ್ರಾಮ ದೇವತೆಯನ್ನು 1900ರಲ್ಲಿ ಹೊಸ ಊರಿಗೆ ಸ್ಥಳಾಂತರಿಸಲಾಯಿತು.

ಲಕ್ಷ್ಮೀದೇವಿ ದೇವಸ್ಥಾನ ಊರಿನ ಪಶ್ಚಿಮಕ್ಕಿದ್ದು ಉತ್ತರಾಭಿಮುಖವಾಗಿದೆ. ಒಂದು ಅಡಿ ಪೀಠದ ಮೇಲೆ ಉಪಸ್ಥಿತಳಾಗಿರುವ ದೇವಿ ಸೌಮ್ಯ ಮೂರ್ತಿಯಾಗಿದ್ದು, ಸತ್ಯವಾದ ದೇವತೆಯಾಗಿದ್ದಾಳೆ.

ವರ್ಷಕ್ಕೊಮ್ಮೆ ಇಲ್ಲಿ ಲಕ್ಷ್ಮೀದೇವಿ ಜಾತ್ರೆ ನಡೆಯುತ್ತದೆ. ಆ ಸಮಯದಲ್ಲಿ ವಿಶೇಷ ಪೂಜೆ, ದೇವಿಗೆ ಆಗ ಸುಮಂಗಲಿಯರಿಂದ ತಂಬಿಟ್ಟಿನ ಆರತಿ ನಡೆದು, ಕೊಂಡ ಹಾಕಲಾಗುವುದು. ಉರಿಯುವ ಬೆಂಕಿಯ ಮೇಲೆ ಭಕ್ತರು ಬರಿಗಾಲಲ್ಲಿ ನಡೆದು ಹೋಗುವುದು ಒಂದು ಪವಾಡವೇ ಆಗಿದೆ.

ಲಕ್ಷ್ಮೀದೇವಿ ದೇವಸ್ಥಾನದ ಸಮೀಪದಲ್ಲೇ ಪೂಜಮ್ಮ ಎಂಬ ಗ್ರಾಮ ದೇವತೆಯ ದೇವಸ್ಥಾನವಿದೆ. ಬಾತ್ಯದ ಪೂಜಮ್ಮ ಹಾಗೂ ಕಾಕೋಳಿನ ಬೆಂಕಿ ಮಾರಮ್ಮ ಅಕ್ಕ-ತಂಗಿಯರೆಂದು ಹೇಳುತ್ತಾರೆ. ಪೂಜಮ್ಮನ ಪರ್ಷೆ ಇಲ್ಲಿ ಪ್ರತಿ ವರ್ಷ ನಡೆಯುತ್ತಿದ್ದು ಆ ಸಮಯದಲ್ಲಿ ಸಾವಿರಾರು ಜನ ಸೇರಿರುತ್ತಾರೆ. ಬಾತ್ಯದ ಲಕ್ಷ್ಮೀದೇವಿ ಅತ್ಯಂತ ಸತ್ಯವಾದ ಮಾತೆಯಾಗಿದ್ದು ಆಕೆಯ ದರ್ಶನ ಸದಾ ನಮ್ಮನ್ನು ಕಾಪಾಡುತ್ತದೆ.

# "ಐವರ ಕಂಡಪುರದ ಪಂಚಲಿಂಗಗಳು"

1100 ವರ್ಷಗಳ ಹಿಂದೆ....ರಾಜ್ಯವಾಳಿದ ಚೋಳರ ರಾಜನಾದ ರಾಜಾಧಿರಾಜ ಚೋಳರ ಅಧೀನದಲ್ಲಿತ್ತೆಂದು ಹೇಳಲಾದ ಐಗಂಡಪುರವು ಬೆಂಗಳೂರಿನ ಉತ್ತರಕ್ಕೆ, ಇಪ್ಪತ್ತೈದು ಕಿಲೋಮೀಟರ್ ಅಂತರದಲ್ಲೂ ಹಾಗೂ ಹೆಸರಘಟ್ಟಕ್ಕೆ ಅತಿ ಸಮೀಪದಲ್ಲೂ ಇದ್ದು, ಪೌರಾಣಿಕ ಹಾಗೂ ಹೆಸರುಘಟ್ಟಕ್ಕೆ ಅತಿ ಸಮೀಪದಲ್ಲೂ ಇದ್ದು, ಪೌರಾಣಿಕ ಹಾಗೂ ಚಾರಿತ್ರಿಕ ಹಿನ್ನಲೆಗಳಿಂದೊಡಗೂಡಿದೆ.

ಹಿಂದೆ ಐವರ ಕಂಡಪುರ ಎಂದು ಇದ್ದ . ಹೆಸರು ಕ್ರಮೇಣ ಐಗಂಡ ಪುರವಾಗಿ ಪರಿವರ್ತನೆಗೊಂಡಿರುವ ಈ ಹಳ್ಳಿ ದ್ವಾಪರಯುಗದ ಪಂಚ ಪಾಂಡವರಿಗೆ ಕೆಲವು ಕಾಲ ಆಶ್ರಯದಾತವಾಗಿತ್ತು.

ಪಂಚ ಪಾಂಡವರು ಅರಗಿನ ಮನೆಯಿಂದ ತಪ್ಪಿಸಿಕೊಂಡು ದಂಡ ಕಾರಣ್ಯ ಪ್ರವೇಶ ಮಾಡಿ ಅರ್ಕಾವತಿ ನದಿ ದಡದಲ್ಲಿ ಕೆಲವು ಕಾಲ ತಂಗು ತ್ತಾರೆ. ಆ ಸಮಯದಲ್ಲಿ ತಮ್ಮ ಜ್ಞಾಪಕಾರ್ಥಕವಾಗಿಯೂ ಹಾಗೂ ತಮಗೆ ಆಶ್ರಯ ನೀಡಿದ ಸ್ಥಳ ಪುಣ್ಯ ಕ್ಷೇತ್ರವಾಗಲೆಂಬ ಬಯಕೆಯಿಂದ ನಾಲ್ಕು ಪಾಂಡವ ಸೋದರ ನಾಮಧೇಯವುಳ್ಳ ಲಿಂಗಗಳು ಹಾಗೂ ಕುಂತಿಲಿಂಗ ಒಂದನ್ನೂ ಇಲ್ಲಿ ಪ್ರತಿಷ್ಠಾಪಿಸಿದರು. ಈ ಲಿಂಗಗಳಿಗೆ ಕ್ರಮವಾಗಿ ಧರ್ಮೇಶ್ವರ, ಭೀಮೇಶ್ವರ, ನಕುಲೇಶ್ವರ, ಸಹದೇಶ್ವರ, ಹಾಗೂ ಕುಂತಿ ಲಿಂಗಗಳೆಂದು ಕರೆಯಲಾಗುತ್ತಿವೆ.

ಈ ಪಂಚಲಿಂಗಗಳ ಜೊತೆಗೆ ಮತ್ತೊಂದು ಲಿಂಗ ಇಲ್ಲಿದ್ದು ಇದನ್ನು ಅರ್ಜುನೇಶ್ವರ ಲಿಂಗ ಎಂದು ಕರೆಯುತ್ತಾರೆ. ಈಗ್ಗೆ ಅರವತ್ತೂ ವರ್ಷ ಗಳ ಹಿಂದೆ ನದಿ ಬತ್ತಿ ಹೋಗಿದ್ದಾಗ (ಈಗಿನ ಹೆಸರುಘಟ್ಟ ಕೆರೆ) ಈ ಲಿಂಗ ಕಂಡು ಬಂದು, ಗ್ರಾಮಸ್ಥರು ಆ ಲಿಂಗವನ್ನು ಅಲ್ಲಿಂದ ತಂದು ಈ ಪಂಚಲಿಂಗಗಳ ಸಮೀಪದಲ್ಲೇ ಪ್ರತಿಷ್ಠಾಪಿಸಿರುತ್ತಾರೆ. ಈ ಲಿಂಗದ

ಮುಂದೆ ವೃಷಭದ ವಿಗ್ರಹವಿಲ್ಲ. ಇತರೆ ಲಿಂಗಗಳ ಮುಂದೆ ವೃಷಭ ನಿದ್ದಾನೆ.

ಅರ್ಜುನ ಪ್ರತಿಷ್ಠಾಪಿಸಿದ ಲಿಂಗವು ಇಲ್ಲಿಗೆ ಆರು ಕಿಲೋಮೀಟರ್ ದೂರದಲ್ಲಿರುವ ತೋಟಗೆರೆಯಲ್ಲಿದೆ.

ಧರ್ಮೇಶ್ವರ ಲಿಂಗಕ್ಕೆ ಮಾತ್ರ ಒಂದು ಸೊಗಸಾದ ದೇವಸ್ಥಾನ ವಿದ್ದು ಇತರೆ ಲಿಂಗಕ್ಕೆ ಚಿಕ್ಕದಾದ ಮಂಟಪದೋಪಾದಿಯ ಆಲಯಗಳಿವೆ. ಇತ್ತೀಚಿಗೆ ಇವುಗಳನ್ನು ಜೀರ್ಣೋದ್ಧಾರ ಮಾಡಿರುತ್ತಾರೆ.

ದಕ್ಷಿಣಾಭಿಮುಖವಾಗಿರುವ ಧರ್ಮೇಶ್ವರ ದೇವಸ್ಥಾನದಲ್ಲಿರುವ ಧರ್ಮೇಶ್ವರ ಲಿಂಗವು ಪೂರ್ವಾಭಿಮುಖವಾಗಿದ್ದು ಲಿಂಗದ ಎದುರಿಗೆ ಒಂದು ಚಿಕ್ಕ ಕಿಂಡಿಯನ್ನು ಮಾಡಲಾಗಿದೆ. ಗರ್ಭಗೃಹವು ಪಲ್ಲವರ ಕಾಲದ ಶಿಲ್ಪ ವನ್ನು ಹೋಲುತ್ತಿದ್ದು ಲಿಂಗದ ಪೀಠದ ಮೇಲೆ ಒಂದು ಶಾಸನವನ್ನು ಕೆತ್ತಲಾಗಿದೆ ಇದರ ಪ್ರಕಾರ ಈ ದೇವಸ್ಥಾನ ಚೋಳರ ಕಾಲದ್ದೆಂದು ಊಹಿಸಬಹುದಾಗಿದೆ.

ಕುಂತಿದೇವಿ ಉಪಯೋಗಿಸುತ್ತಿದ್ದ ಒರಳು ಕಲ್ಲು ಹಾಗೂ ಒನಕೆ ಕಲ್ಲು ಇಲ್ಲಿಯ ಕುಂತಿ ದೇವಸ್ಥಾನದ ಅಕ್ಕ-ಪಕ್ಕಗಳಲ್ಲಿವೆ. ತಲಕಾಡಿನಲ್ಲಿ ಆಗುವ ಪಂಚಲಿಂಗ ದರ್ಶನಕ್ಕೆ ಹೋಗಲು ಸಾಧ್ಯವಾಗದೇ ಇದ್ದವರು ಈ ಪಂಚಲಿಂಗಗಳ ದರ್ಶನ ಮಾಡಿದರೆ ಅದರಷ್ಟೆ ಫಲ ದೊರೆಯುವುದು ಎಂಬ ನಂಬಿಕೆ ಇಲ್ಲಿದೆ.

ದೇವಸ್ಥಾನದ ಮುಂಭಾಗದಲ್ಲಿ ಎರಡು ಶಿಲಾಶಾಸನಗಳಿವೆ. ಇದರ ಸಮೀಪದಲ್ಲೇ ಒಂದು ಆಂಜನೇಯ ಸ್ವಾಮಿಯ ದೇವಸ್ಥಾನವಿದೆ. ಹೆಸರ ಘಟ್ಟದಲ್ಲಿ ಕಾಣಬಹುದಾದ ಆಂಜನೇಯ ಹಾಗೂ ಐವರ ಕಂಡಪುರದಲ್ಲಿ ಕಾಣಬರುವ ಆಂಜನೇಯ ಮೂರ್ತಿಗಳ ಕೆತ್ತನೆಯ ಹೋಲಿಕೆ ಒಂದೇ ರೀತಿಯಲ್ಲಿದ್ದು ; ವಿಗ್ರಹಗಳ ಮೇಲ್ಭಾಗಕ್ಕೆ ಶಂಖು-ಚಕ್ರಗಳು, ಎಡಗೈ ಯಲ್ಲಿ ಮಾವಿನಕಾಯಿ ಗೊಂಚಲು ಬಾಲದಲ್ಲಿ ಗಂಟೆಯೂ ಹಾಗೂ ಜುಟ್ಟನ್ನು ಕಟ್ಟಿಕೊಂಡಿರುವಂತೆಯೂ ಇದೆ. ಈ ಚಿಹ್ನೆಗಳು ಸಾಮಾನ್ಯವಾಗಿ ಶ್ರೀ ಬ್ರಹ್ಮಣ್ಯತೀರ್ಥರ ಶಿಷ್ಯರಾದ ವ್ಯಾಸತೀರ್ಥರಿಂದ ಪ್ರತಿಷ್ಠಾಪಿಸಲ್ಪಟ್ಟ ವಿಗ್ರಹ

ಗಳಲ್ಲಿ ಮಾತ್ರ ಕಂಡು ಬರುತ್ತವೆ. ಈ ಕಾರಣಗಳಿಂದ ಈ ಆಂಜನೇಯು ನನ್ನೂ ವ್ಯಾಸರಾಯರೇ ಪ್ರತಿಷ್ಠಾಪಿಸಿದ್ದೆಂದು ಹೇಳಬಹುದಾಗಿದೆ. ವ್ಯಾಸ ರಾಯರು ಈ ಅರ್ಕಾವತಿ ನದಿ ದಂಡೆಯ ಮೇಲೆ ಆಶ್ರಮ ಸ್ಥಾಪಿಸಿ ಕೊಂಡು ಕೆಲ ಕಾಲ ತಂಗಿದ್ದರು. ಈ ಕಾರಣದಿಂದಲೇ ಐವರ ಕಂಡಪುರ ಸಮೀಪದ ಹಳ್ಳಿಗೆ "ವ್ಯಾಸರ ಘಟ್ಟ" ಎಂದು ಹೆಸರಿದ್ದು ಕಾಲ ಬದಲಾ ದಂತೆ ಹೆಸರಘಟ್ಟ ಎಂದು ಪರಿವರ್ತನೆಗೊಂಡಿದೆ. ಐವರ ಕಂಡಪುರದ ಗೋಪಾಲಕೃಷ್ಣಸ್ವಾಮಿ ದೇವಸ್ಥಾನವು ಪ್ರೇಕ್ಷಣೀಯ ಸ್ಥಳವಾಗಿದ್ದು ತಳಪಾಯದ ಒಂದೆಡೆ ನಮೂದಿಸಿರುವಂತೆ ಈ ದೇವಸ್ಥಾನವು ಕ್ರಿ. ಶ. 1022 ರಲ್ಲಿ ಕಟ್ಟಲ್ಪಟ್ಟಿತೆಂದು ತಿಳಿದು ಬರುತ್ತದೆ.

ದೇವಸ್ಥಾನದ ಗರ್ಭಗುಡಿಯಲ್ಲಿ ಹಿಂದೆ ಚೆನ್ನಿಗರಾಯಸ್ವಾಮಿ ಇದ್ದು ಅದು ಶಿಥಿಲಗೊಂಡ ನಂತರ ಅಂದರೆ ಕೆಂಪೇಗೌಡರ ಕಾಲದಲ್ಲಿ ಗೋಪಾಲ ಕೃಷ್ಣ ದೇವರನ್ನೂ ಪ್ರತಿಷ್ಠಾಪಿಸಲಾಯಿತೆಂದೂ ತಿಳಿದು ಬರುತ್ತದೆ.

ಬೆಂಗಳೂರಿನ ಸ್ಥಾಪಕ ಕೆಂಪೇಗೌಡ ಇದೇ ಊರಿನಲ್ಲಿ ವ್ಯಾಸಂಗ ಮಾಡಿದ್ದು ಈಗಿನ ಗುರು ಮಾಧವಭಟ್ಟರ ಗುರು ಕುಲವು ಇಲ್ಲಿ ಇದ್ದಿತು.

ಚಾರಿತ್ರಿಕವಾಗಿ ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿರುವ ಈ ಐವರ ಕಂಡಪುರ ನಮ್ಮ ಪ್ರಾಚ್ಯ ಸಂಶೋಧನಾ ಇಲಾಖೆಯವರ ಕಣ್ಣಿಗೆ ಬೀಳದಿರು ವುದು ಒಂದು ಕೊರತೆಯಾಗಿದ್ದು, ಕರ್ನಾಟಕ ಧಾರ್ಮಿಕ ದತ್ತಿ ಇಲಾಖೆ ಯವರು ಇತ್ತ ಗಮನಹರಿಸಿ ಪುರಾಣ ಪ್ರಸಿದ್ಧವಾದ ಈ ಐವರ ಕಂಡ ಪುರವನ್ನು ಒಂದು ಪ್ರಸಿದ್ಧ ಯಾತ್ರಾಸ್ಥಳವನ್ನಾಗಿ ಮಾರ್ಪಡಿಸಬಹುದಾಗಿದೆ.

## "ತೋಟಗೆರೆಯ ಅರ್ಜನೇಶ್ವರ ಲಿಂಗ"

ಐವರ ಕಂಡಪುರದಲ್ಲಿ ಕಾಣದಿರುವ ಅರ್ಜನೇಶ್ವರ ಲಿಂಗವು ಹೆಸರ ಘಟ್ಟಕ್ಕೆ ಮೂರು ಕಿಲೋಮಿಟರ್ ದೂರದಲ್ಲಿರುವ ತೋಟಗೆರೆಯಲ್ಲಿ ಕಾಣ ಬಹುದಾಗಿದೆ. ಈ ಲಿಂಗವೂ ಇತರೆ ಲಿಂಗಗಳಂತೆಯೇ ಇದ್ದು ; ಲಿಂಗದ ಮುಂದೆ ವೃಷಭನಿದ್ದಾನೆ.

ತೊರೆಗೆರೆಯ ಸಮೀಪದ ಬೆಟ್ಟದ ಮೇಲೆ ಒಂದು ಹೆಜ್ಜೆಯ ಗುರುತಿದೆ. ಇದನ್ನು ಹೆಜ್ಜೆ ಎಂದು ಕರೆಯುತ್ತಾರೆ. ಇದೇ ತರಹದ ಮತ್ತೊಂದು ಹೆಜ್ಜೆಯನ್ನು ನೆಲಮಂಗಲ ತಾಲ್ಲೋಕಿನ ತ್ವರೆ ಛತ್ರದ ಬಳಿ ಕಾಣಬಹುದಾಗಿದೆ.

## "ಹೆಸರಘಟ್ಟದ ಶ್ರೀ ಲಕ್ಷ್ಮೀನರಸಿಂಹಸ್ವಾಮಿ"

ಹೆಸರಘಟ್ಟ ಬೆಂಗಳೂರಿನ ಉತ್ತರಕ್ಕೆ ಇಪ್ಪತ್ತಮೂರು ಕಿಲೋ ಮೀಟರ್ ದೂರದಲ್ಲಿದೆ. ಹಿಂದೆ ಈ ಊರಿಗೆ ವ್ಯಾಸರ ಘಟ್ಟ ಎಂದು ಹೆಸರಿದ್ದಿತು. 1532ರ ಮುಂಚೆ ಈ ಊರಿಗೆ ಶಿವನಸಮುದ್ರ ಅಗ್ರಹಾರ ಎಂದು ಇದ್ದಿತೆಂದು ಕಾಕೋಳು ಸ್ಥಳದ ಶಾಸನ ಒಂದರ ಪ್ರಕಾರ ತಿಳಿದು ಬರುತ್ತದೆ.

ಶ್ರೀ ಬ್ರಹ್ಮಣ್ಯತೀರ್ಥರ ಶಿಷ್ಯರಾದ ಶ್ರೀ ವ್ಯಾಸತೀರ್ಥರು ಅರ್ಕಾವತಿ ನದಿಯ ದಂಡೆಯ ಮೇಲೆ ಕುಟೀರ ನಿರ್ಮಿಸಿಕೊಂಡು ಜಪ ತಪ ಅನು ಷ್ಠಾನಾದಿಗಳಲ್ಲಿ ಕಳೆಯುತ್ತಿದ್ದು; ಇಲ್ಲಿಯ ಐವರ ಕಂಡಪುರದಲ್ಲಿ ಒಂದು ಪ್ರಾಣದೇವರನ್ನೂ ಪ್ರತಿಷ್ಠಾಪಿಸಿರುತ್ತಾರೆ. ಈ ಕಾರಣದಿಂದ ಊರಿಗೆ ವ್ಯಾಸರ ಘಟ್ಟ ಎಂದು 1532ರ ನಂತರ ಕರೆಯಲು ಪ್ರಾರಂಭಿಸಿ ಕ್ರಮೇಣ ಹೆಸರಘಟ್ಟವಾಗಿದೆ.

ವಿಜಯನಗರದ ಅರಸರು ನಿರ್ಮಿಸಿದ ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ದೇವಸ್ಥಾನದ ಕಟ್ಟಡ ನಿರ್ಮಾಣ ವಿಜಯನಗರದ ಕಾಲದ್ದಾದರೂ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯನ್ನು ದೂರ್ವಾಸರು ಪ್ರತಿಷ್ಠಾಪಿಸಿರುತ್ತಾರೆ.

ದೇವಸ್ಥಾನದ ಸ್ತಂಭಗಳಲ್ಲಿ ದಶಾವತಾರದ ಕೆತ್ತನೆ, ನಾಗಬಂಧ ಇತ್ಯಾದಿ ಚಿತ್ರಗಳನ್ನು ಚಿತ್ರಿಸಲಾಗಿದೆ. ನವರಂಗದ ಹೆಬ್ಬಾಗಿಲಿನಲ್ಲಿರುವ ಜಯ ವಿಜಯರ ವಿಗ್ರಹಗಳು ಅತಿ ದೊಡ್ಡದಾಗಿವೆ. ಫಾಲ್ಗುಣ ಮಾಸದ ಪೌರ್ಣಮಿ ಯಂದು ಇಲ್ಲಿ ಜಾತ್ರೆ ನಡೆಯುತ್ತದೆ.

ಇಲ್ಲಿನ ಚಂದ್ರಮೌಳೀಶ್ವರ ದೇವಸ್ಥಾನವು 1532ರಲ್ಲಿ ನಿರ್ಮಿತ ವಾಯಿತೆಂದು ದೇವಸ್ಥಾನದ ಹಿಂಭಾಗದಲ್ಲಿರುವ ಶಾಸನ ಒಂದರಿಂದ ತಿಳಿದು ಬರುತ್ತದೆ. ಮತ್ತೊಂದು ಶಾಸನದ ಪ್ರಕಾರ ಹೆಸರಘಟ್ಟ ಚೀಳೂರು ಚಾವಡಿಗೆ ಸೇರಿತ್ತೆಂದು ಅಚ್ಯುತರಾಯನ ಆಸ್ಥಾನದ ಅಧಿಕಾರಿಯೊಬ್ಬರು ವಾರಣಾಸಿಯಿಂದ ಕಾಶಿಲಿಂಗವನ್ನು ತಂದು ಚಂದ್ರಮೌಳೀಶ್ವರ, ನಂದಿಕೇಶ್ವರ ಹಾಗೂ ವಿಘ್ನೇಶ್ವರನ ಜೊತೆಗೆ ಪ್ರತಿಷ್ಠಾಪಿಸಿದನೆಂದು ತಿಳಿದು ಬರುತ್ತದೆ. ಈ ದೇವಸ್ಥಾನವನ್ನು 1976ರಲ್ಲಿ ಜೀರ್ಣೋದ್ಧಾರ ಮಾಡಲಾಯಿತು.

ಚಂದ್ರಮೌಳೀಶ್ವರ ದೇವಸ್ಥಾನದ ಸಮೀಪದಲ್ಲಿ ಆಂಜನೇಯ ದೇವ ಸ್ಥಾನವಿದೆ. ಈ ಆಲಯ ವಿಜಯನಗರ ಶೈಲಿಯಲ್ಲಿದ್ದು ಅವರಿಂದಲೇ ನಿರ್ಮಿತವಾಗಿದ್ದರೆಂದು ಊಹಿಸಬಹುದಾಗಿದೆ.

ಹೆಸರಘಟ್ಟದಲ್ಲಿ ಈ ದೇವಸ್ಥಾನಗಳಲ್ಲದೆ ಕಾಳಿಕಾ, ದಂಡಿಕಾಂಬ, ಮಾರಮ್ಮ ದೇವಸ್ಥಾನಗಳು ಹಾಗೂ ಮುಹಮ್ಮದೀಯರ ಮಸೀದಿಯೂ ಇದೆ. ಈ ಊರಲ್ಲಿ ನಡೆಯುವ ಜಾತ್ರೆ ಉತ್ಸವಾದಿಗಳಲ್ಲಿ ಹಿಂದೂ ಮುಸ್ಲಿಂ ಬಾಂಧವರು ಒಟ್ಟಾಗಿ ಸೇರಿ ಆಚರಿಸುವುದು ಒಂದು ವೈಶಿಷ್ಟ್ಯವಾಗಿದ್ದು ಭಾವೈಕ್ಯತೆಯ ಪ್ರತೀಕವಾಗಿದೆ.

ಹೆಸರಘಟ್ಟದ ಸುತ್ತಮುತ್ತ ಅನೇಕ ಗುಹೆಗಳು ಪೊಟರೆಗಳಿದ್ದು ಇಲ್ಲಿ ಅನೇಕ ಋಷಿಗಳು ತಪಸ್ಸು ಮಾಡುತ್ತಿದ್ದರೆಂದು ಹೇಳುತ್ತಾರೆ.

ಅರ್ಕಾವತಿ ನದಿಗೆ ಅಣೆಕಟ್ಟು ಹಾಕಿ ಇಲ್ಲಿಂದ ಬೆಂಗಳೂರಿಗೆ ನೀರು ಸರಬರಾಜು ಆಗುತ್ತದೆ.

ಡ್ಯಾನಿಷ್ ಹಾಲು ಉತ್ಪಾದನಾ ಕೇಂದ್ರ, ಕೋಳಿ ಸಾಗಾಣಿಕೆ ಹಾಗೂ ಅನೇಕ ಹಣ್ಣು ತರಕಾರಿ ಬೆಳೆಯುವ ಹಾಗೂ ಸಂಶೋಧನೆ ಮಾಡುವ ಕೇಂದ್ರ ಸ್ಥಳವೂ ಆಗಿರುವ ಹೆಸರಘಟ್ಟ ಉತ್ತಮ ವಿಹಾರ ಕೇಂದ್ರವೂ ಆಗಿದೆ.

# ಮಳೂರಿನ ಶ್ರೀ ಅಪ್ರಮೇಯ ಸ್ವಾಮಿ ದೇವಸ್ಥಾನ

ಕಣ್ವ ನದಿಯ ದಡದಲ್ಲಿ ನಯನ ಮನೋಹರವಾದ ನಿಸರ್ಗದ ಚನ್ನ ಪಟ್ಟಣಕ್ಕೆ ಎರಡು ಕಿಲೋಮೀಟರ್ ದೂರದಲ್ಲಿದೆ. ಇಲ್ಲಿ ಶ್ರೀರಾಮಾ ಪ್ರಮೇಯ ಸ್ವಾಮಿಯ ದೇವಸ್ಥಾನವಿದ್ದು ಸಂದರ್ಶಿಸಬೇಕಾದ ಪುಣ್ಯಕ್ಷೇತ್ರ ಗಳಲ್ಲೊಂದಾಗಿದೆ.

ಈ ಸ್ಥಳಕ್ಕೆ ಮೊಳತೂರು ಎಂದು (ಮೊಳೆತ+ಊರು) ಹೆಸರಿದ್ದು ನಂತರ ಮಳೂರಾಗಿದೆ. ಮೊಳತೂರು ಎಂದು ಹೆಸರು ಬರಲು ಒಂದು ದಂತ ಕಥೆ ಈ ರೀತಿ ಇದೆ :

ಹಿಂದೆ ಚನ್ನಪಟ್ಟಣ ಪ್ರದೇಶ ಗಂಗರಸರ ಆಡಳಿತಕ್ಕೆ ಒಳಪಟ್ಟಿತ್ತು. ಈ ಗಂಗ ಆರಸನಿಗೆ ಸಾರಂಗಧರ ಎಂಬ ಒಬ್ಬ ಮಗನಿದ್ದನು. ಈತನ ತಾಯಿಯ ಮರಣಾ ನಂತರ ಆ ರಾಜನು ಚಿಕ್ಕ ವಯಸ್ಸಿನ ರಾಜಕುಮಾರಿ ಯನ್ನು ವಿವಾಹವಾಗಿದ್ದನು.

ಈ ರಾಜಕುಮಾರಿಯು ಸಾರಂಗಧರನ ರೂಪ ಯೌವನಕ್ಕೆ ಮೋಹ ಗೊಂಡವಳಾಗಿ ಆತನನ್ನು ಪ್ರೇಮಿಸಿದಳು. ಇದನ್ನರಿತ ಸಾರಂಗಧರನು ತನ್ನ ಚಿಕ್ಕಮ್ಮನಾದ ಆಕೆಗೆ ಬುದ್ಧಿವಾದ ಹೇಳಿ ಆಕೆಗೆ ತನ್ನ ಮಾತೃ ಸಮಾನಳೆಂದು ಗೌರವಿಸಿ ಆಕೆಯ ಪ್ರೇಮವನ್ನು ನಿರಾಕರಿಸಿದನು. ಇದರಿಂದ ಕೋಪಗೊಂಡ ರಾಣಿಯು ಸಾರಂಗಧರನೇ ತನ್ನ ಮಾನಭಂಗ ಮಾಡಲು ಪ್ರಯತ್ನಿಸಿದನೆಂದು ರಾಜನಲ್ಲಿ ಅಪವಾದ ಹೊರಿಸಿದಳು. ಇದರಿಂದ ಕುಪಿತನಾದ ರಾಜನು ತನ್ನ ಮಗನ ತಪ್ಪಿಗೆ ಈತನ ಕೈ ಕಾಲು ಕತ್ತರಿಸಿ ಹಾಕುವಂತೆ ಆಜ್ಞಾಪಿಸಿದನು. ರಾಜಭಟ್ಟರು ಸಾರಂಗಧರನನ್ನು ಗುಡ್ಡದ ಮೇಲಕ್ಕೆ ಕರೆದುಕೊಂಡು ಹೋಗಿ ಆತನ ಕೈ ಕಾಲುಗಳನ್ನು ಕತ್ತರಿಸಿ ಹಾಕಿದರು. ಹೀಗೆ ಕೈ ಕಾಲುಗಳನ್ನು ಕತ್ತರಿಸಿ ಹಾಕಿದ ಸ್ಥಳವನ್ನು ಇಂದಿಗೂ ಸಹಾ ಅಬ್ಬೂರಿಗೆ ಎರಡು ಕಿಲೋಮೀಟರ್ ದೂರದಲ್ಲಿರುವ ಮಂಟಪ ವನ್ನು ಕಟ್ಟಿದ್ದು ಬಂಡೆಯೊಂದರಲ್ಲಿ ಬಂಡೆಯೊಂದರಲ್ಲಿ ಒಂದು ಲಿಂಗವನ್ನು ಕೆತ್ತಿದ್ದಾರೆ. ಇದಕ್ಕೆ ಸಾರಂಗಧರನ ಗುಡ್ಡ ಎಂದು ಕರೆಯುತ್ತಾರೆ.

ಹೀಗೆ ಕೈಕಾಲುಗಳನ್ನು ಕಳೆದುಕೊಂಡ ಸಾರಂಗಧರನು ನಿರಪರಾಧಿಯೂ ಮತ್ತು ದೈವ ಪರಾಯಣನೂ ಆಗಿದ್ದರಿಂದ ಈತನಿಗೆ ಕಣ್ವ ಋಷಿಗಳ ಅನುಗ್ರಹವಾಗಿ ಕಣ್ವ ನದಿಯಲ್ಲಿ ತೇಲಿಕೊಂಡು ಈಗ "ಮಳೂರು" ಇರುವ ಸ್ಥಳಕ್ಕೆ ಬರುತ್ತಾನೆ. ಅಲ್ಲಿ ಶ್ರೀ ರಾಮಾಪ್ರಮೇಯ ಸ್ವಾಮಿಯ ಕೃಪಾ ವಿಶೇಷದಿಂದ ಹಾಗೂ ಶ್ರೀ ಬ್ರಹ್ಮಣ್ಯತೀರ್ಥರ ಸ್ಪರ್ಶದಿಂದ ಈತನ ಕೈ ಕಾಲುಗಳು ಮೊಳೆತು ಮೊದಲಿನಂತಾಯಿತು. ಈ ವಿಷಯವನ್ನು ತಿಳಿದ ರಾಜನು ಸಾರಂಗಧರನು ನಿರಪರಾಧಿಯೆಂದು ತೀರ್ಮಾನಿಸಿ ಈ ಕುಟಿಲ ತಂತ್ರವನ್ನು ಮಾಡಿದ ತನ್ನ ಚಿಕ್ಕ ರಾಣಿಯನ್ನು ಸುಣ್ಣದಲ್ಲಿ ಬೇಯಿಸಿ ದನು. ಸಾರಂಗಧರನಿಗೆ ಕೈ ಕಾಲುಗಳು ಮೊಳೆತ ಸ್ಥಳವಾದ್ದರಿಂದ ಇದಕ್ಕೆ ಮೊಳತ್ಪೂರಃ ಎಂದು ಹೆಸರಾಯಿತು. ಇದರ ಅಪಭ್ರಂಶವೇ ಮಳೂರು.

ಶ್ರೀ ರಾಮ ಪ್ರಮೇಯ ಸ್ವಾಮಿ : ಇಲ್ಲಿನ ಶ್ರೀರಾಮ ಪ್ರಮೇಯ ಸ್ವಾಮಿಯ ವಿಗ್ರಹವು ಸುಮಾರು ಒಂದು ಮೀಟರ್ ಎತ್ತರವಿದ್ದು ನಾಲ್ಕು ಕೈಗಳಲ್ಲಿ ಶಂಖ–ಚಕ್ರ ಗದಾಧಾರಿಯಾಗಿ ಪದ್ಮಹಸ್ತನಾಗಿ ನಿಂತಿದ್ದಾನೆ. ಇದು ಸ್ವಯಂ ವ್ಯಕ್ತ ಮೂರ್ತಿ ಎಂದು ಸ್ಥಳ ಪುರಾಣದಿಂದ ತಿಳಿದು ಬರುತ್ತದೆ. ಬಲಭಾಗದ ವಕ್ಷದಲ್ಲಿ ಲಕ್ಷ್ಮೀದೇವಿಯನ್ನು ಕಾಣಬಹುದು. ಹಿಂದೆ ಇಲ್ಲಿ ಕಣ್ವ ಮಹರ್ಷಿಗಳು ಆಶ್ರಮ ಸ್ಥಾಪಿಸಿಕೊಂಡು ತಪಸ್ಸನ್ನಾಚರಿಸುತ್ತಿದ್ದ ರೆಂದೂ ಶ್ರೀರಾಮಚಂದ್ರನು ತ್ರೇತಾಯುಗದಲ್ಲಿ ವನವಾಸ ಮಾಡುವ ಸಮಯ ದಲ್ಲಿ ಇಲ್ಲಿಗೆ ಆಗಮಿಸಿ ಅಪ್ರಮೇಯ ಸ್ವಾಮಿಯನ್ನು ಪೂಜಿಸಿದನೆಂದೂ ಈ ಕಾರಣದಿಂದಾಗಿ ಈ ದೇವರಿಗೆ ಶ್ರೀರಾಮಾಪ್ರಮೇಯ ಸ್ವಾಮಿ ಎಂದು ಹೆಸರು ಬಂದಿತೆಂದು ಸ್ಥಳ ಪುರಾಣದಿಂದ ತಿಳಿದು ಬರುತ್ತದೆ.

ಶ್ರೀ ಕೈಲಾಶೇಶ್ವರ ಸ್ವಾಮಿ :

ಶ್ರೀರಾಮಾಪ್ರಮೇಯ ಸ್ವಾಮಿ ದೇವಸ್ಥಾನದ ಪಕ್ಕದಲ್ಲಿ ಕೈಲಾಶೇಶ್ವರ ಸ್ವಾಮಿ ದೇವಸ್ಥಾನವಿದೆ. ಈ ಎರಡೂ ದೇವಸ್ಥಾನಗಳನ್ನು ಚೋಳರು ನಿರ್ಮಿಸಿರುತ್ತಾರೆ. ಅಪ್ರಮೇಯ ಸ್ವಾಮಿಯ ದೇವಸ್ಥಾನದ ಹೊರಭಾಗದ ಗೋಡೆಗಳ ಮೇಲೆ ಅನೇಕ ತಮಿಳು ಶಾಸನಗಳು ಕಾಣ ಬರುತ್ತವೆ.

ಸುಖನಾಶಿಯ ಎದುರು ಭಾಗದಲ್ಲಿ ರಾಜರಾಣಿಯರ ವಿಗ್ರಹಗಳಿದ್ದು ಅವು ಜಗದೇವರಾಯ ಹಾಗೂ ಆತನ ರಾಣಿ ಎಂದು ಹೇಳುತ್ತಾರೆ. ಸುಖ ನಾಶಿಯ ಮುಂಭಾಗದ ಎಡಕ್ಕೆ ಇರುವ ಕಂಬದಲ್ಲಿ ಆಂಜನೇಯಸ್ವಾಮಿಯ ವಿಗ್ರಹವಿದೆ. ಇದು ಉದ್ಭವ ಮೂರ್ತಿ ಎಂದು ಸ್ಥಳೀಯರು ಹೇಳುತ್ತಾರೆ.

ದೇವಸ್ಥಾನಕ್ಕೆ ಬೃಹದಾಕಾರದ ರಾಯಗೋಪುರವಿದೆ.

ಪ್ರಾಕಾರದ ಸುತ್ತಲೂ ಮಂಟಪಗಳಿವೆ. ಶ್ರೀ ವೈಷ್ಣವ ಮತಾ ಚಾರ್ಯರ ವಿಗ್ರಹಗಳನ್ನು ಈ ಮಂಟಪಗಳಲ್ಲಿ ಸ್ಥಾಪಿಸಿರುತ್ತಾರೆ.

**ಅಂಬೆಗಾಲಿನ ಕೃಷ್ಣ :**

ಪ್ರಾಕಾರದ ಹಿಂಭಾಗದಲ್ಲಿ ಬಲಕ್ಕೆ ಅಂಬೆಗಾಲಿನ ಬೆಣ್ಣೆಕೃಷ್ಣನ ಗುಡಿ ಇದೆ. ಸಾಲಿಗ್ರಾಮ ಶಿಲೆಯಿಂದ ಕೆತ್ತಲಾಗಿರುವ ಈ ಮುದ್ದುಕೃಷ್ಣನನ್ನು ಶ್ರೀ ವ್ಯಾಸತೀರ್ಥರು ಪ್ರತಿಷ್ಠಾಪಿಸಿರುತ್ತಾರೆ. ಚನ್ನಪಟ್ಟಣದಲ್ಲಿ ವಾಸ್ತವ್ಯ ಮಾಡಿದ್ದಾಗ ಶ್ರೀ ವ್ಯಾಸರಾಯರು ಪ್ರತಿನಿತ್ಯ ಮಳೂರಿಗೆ ಆಗಮಿಸಿ ಶ್ರೀರಾಮಾಪ್ರಮೇಯ ಸ್ವಾಮಿಯನ್ನು ಹಾಗೂ ಈ ಬೆಣ್ಣೆಕೃಷ್ಣನನ್ನು ಪೂಜಿ ಸುತ್ತಿದ್ದರು. ಶ್ರೀ ಪುರಂದರದಾಸರು ಮಳೂರಿಗೆ ಆಗಮಿಸಿ, ಅಪ್ರಮೇಯ ಸ್ವಾಮಿಯನ್ನು ಪೂಜಿಸಿ ಈ ಬೆಣ್ಣೆಕೃಷ್ಣನನ್ನು ಹಾಡಿ ಹೊಗಳಿದ್ದಾರೆ. " ಆಡಿಸಿದಳು ಯಶೋದೆ ಜಗದೋದ್ಧಾರನ " ಎಂಬ ದೇವರನಾಮ ಇಲ್ಲೇ ರಚನೆಯಾದದ್ದು. ಪುರಂದರದಾಸರಂತೆ ಅನೇಕ ಹರಿದಾಸರು ಈ ಕೃಷ್ಣನನ್ನು ಹಾಡಿ ಹೊಗಳಿದ್ದಾರೆ.

ಅತ್ಯಂತ ಮನೋಹರವಾಗಿರುವ ಈ ಅಂಬೆಗಾಲು ಕೃಷ್ಣನ ಬಗ್ಗೆ ತಿಳಿದು ಬರುವ ಐತಿಹ್ಯ ಈ ರೀತಿ ಇದೆ :

ಮೈಸೂರು ಅರಸರಾಗಿದ್ದ ಮುಮ್ಮಡಿ ಕೃಷ್ಣದೇವರಾಯರು ಒಮ್ಮೆ ಈ ಸ್ಥಳಕ್ಕೆ ಭೇಟಿಕೊಟ್ಟು ಇಲ್ಲಿರುವ ಬೆಣ್ಣೆ ಕೃಷ್ಣನನ್ನು ಕಂಡು ಮೋಹಿತರಾಗಿ ಅವನ್ನು ಮೈಸೂರು ಅರಮನೆಯ ಕೋಟೆಯ ಒಳಭಾಗದಲ್ಲಿ ಪ್ರತಿಷ್ಠಾಪಿಸುವ ಉದ್ದೇಶದಿಂದ ಈ ವಿಗ್ರಹವನ್ನು ಮೈಸೂರಿಗೆ ಸಾಗಿಸಿದರಂತೆ. ಇದೇ ಸಂದರ್ಭದಲ್ಲಿ ಅರಮನೆಗೆ ಬೆಂಕಿ ಬಿದ್ದು ಅನಾಹುತವಾದದ್ದು. ಅಲ್ಲದೆ, ಸ್ವಪ್ನ

ದಲ್ಲಿ ಪುನಃ ತನ್ನನ್ನು ಮಳೂರಿನಲ್ಲಿಯೇ ಪ್ರತಿಷ್ಠಾಪಿಸಬೇಕೆಂದು ಆದೇಶ ನೀಡಿನಂತೆ ಆಗಿ, ತಕ್ಷಣ ಈ ಕೃಷ್ಣನನ್ನು ಮಳೂರಿಗೆ ತಂದು ಪುನರ್ ಪ್ರತಿಷ್ಠೆ ಮಾಡಲಾಯಿತು. ಈ ದೇವರ ಮಹಿಮೆಗೆ ಪ್ರಭಾವಿತರಾದ ಮಹಾಸ್ವಾಮಿಗಳವರು ಅಮೂಲ್ಯವಾದ ಆಭರಣಗಳನ್ನು ನೀಡಿರುತ್ತಾರೆ. ಮಹಾರಾಣಿಯವರು ತಮ್ಮ ಕೊರಳಲ್ಲಿದ್ದ ಸರ, ಪದಕ ಇತ್ಯಾದಿಗಳನ್ನು ಈ ಅಂಬೆಗಾಲು ಕೃಷ್ಣನಿಗೆ ಹಾಕಿರುತ್ತಾರೆ.

ಮಕ್ಕಳಿಲ್ಲದವರು ಈ ಕೃಷ್ಣನಿಗೆ ಹರಕೆ ಹೊತ್ತು ಕೃಷ್ಣನ ಗುಡಿಯಲ್ಲಿ ತೊಟ್ಟಿಲು ಕಟ್ಟುತ್ತಾರೆ. ಹೀಗೆ ಹರಕೆ ಹೊತ್ತು ಕಟ್ಟಿದ ಅನೇಕ ಮರದ ಹಿತ್ತಾಳೆಯ ಮತ್ತು ಬೆಳ್ಳಿಯ ತೊಟ್ಟಿಲುಗಳನ್ನೂ ಕಾಣಬಹುದಾಗಿದೆ.

ದೇವಸ್ಥಾನದ ಸಮೀಪದಲ್ಲಿ ಯಾಜ್ಞವಲ್ಕ್ಯ ತೀರ್ಥ ಎಂಬ ಒಂದು ಸರೋವರವಿದೆ. ಇಲ್ಲಿಂದ ಸುಮಾರು ಒಂದು ಕಿಲೋಮೀಟರ್ ದೂರದಲ್ಲಿ ಕಣ್ವ ನದಿಯ ದಂಡೆಯಮೇಲೆ ಶ್ರೀ ನರಸಿಂಹಸ್ವಾಮಿ ದೇವಸ್ಥಾನವಿದೆ. ಇದಕ್ಕೆ ನದಿ ನರಸಿಂಹಸ್ವಾಮಿ ದೇವಸ್ಥಾನ ಎಂದು ಕರೆಯುತ್ತಾರೆ. ಸುಮಾರು ಮೂರು ಅಡಿ ಎತ್ತರವಿರುವ ಕಪ್ಪುಶಿಲೆಯ ಸ್ವಾಮಿಯ ತೊಡೆಯ ಮೇಲೆ ಲಕ್ಷ್ಮೀದೇವಿ ಆಸೀನಳಾಗಿದ್ದಾಳೆ. ಶ್ರೀ ವ್ಯಾಸತೀರ್ಥರೂ ಈ ನೃಸಿಂಹ ಸ್ವಾಮಿಯನ್ನು ಪೂಜಿಸುತ್ತಿದ್ದರೆಂದು ಮಠದ ಮೂಲಗಳಿಂದ ತಿಳಿದು ಬರುತ್ತದೆ.

ಅಲ್ಲಿಂದ ಸ್ವಲ್ಪ ಮುಂದಕ್ಕೆ ವೇಣುಗೋಪಾಲಸ್ವಾಮಿ ದೇವಸ್ಥಾನವಿದೆ. ಅದರ ಸಮೀಪದಲ್ಲೇ ವ್ಯಾಸರಾಜರಿಂದ ಪ್ರತಿಷ್ಠಾಪಿಸಲ್ಪಟ್ಟ ಆಂಜನೇಯ ದೇವಸ್ಥಾನವಿದೆ,

ಶ್ರೀ ಅಪ್ರಮೇಯಸ್ವಾಮಿ ದೇವಸ್ಥಾನದ ಮುಂದಕ್ಕೆ ಶ್ರೀರಾಮದೇವರ ದೇವಸ್ಥಾನವಿದೆ. ರಾಮ, ಲಕ್ಷ್ಮಣ, ಸೀತಾದೇವಿಯರ ವಿಗ್ರಹಗಳು ಸುಮಾರು ಮೂರು ಅಡಿ ಎತ್ತರವಿದ್ದು ಪೀಠದ ಒಂದು ಕಾಲನ್ನು ಮಡಿಸಿಟ್ಟು ಕೊಂಡು ಒಂದು ಕಾಲನ್ನು ಇಳಿಬಿಟ್ಟಿರುವಂತೆ ಕಡೆಯಲಾಗಿದೆ. ಎಡಬಾಗದ ಒಂದು ಪುಟ್ಟ ಗುಡಿಯಲ್ಲಿ ವೇಣುಗೋಪಾಲಸ್ವಾಮಿ ವಿಗ್ರಹವಿದೆ.

**ರಥೋತ್ಸವ :**

ವೈಶಾಖದ ಬಹುಳ ಹಸ್ತಾ ನಕ್ಷತ್ರದಲ್ಲಿ ತ್ರಯೋದಶಿ ಅಥವಾ ಚತುರ್ದಶಿ ಹಾಗೆ ಶ್ರೀರಾಮಪ್ರಮೇಯ ಸ್ವಾಮಿಯ ರಥೋತ್ಸವವು ಅತಿ ವಿಜೃಂಭಣೆಯಿಂದ ನಡೆಯುತ್ತದೆ.

ಸುಮಾರು ಎಪ್ಪತ್ತು ವರ್ಷಗಳ ಹಿಂದೆ ಭದ್ರಾಚಲ ವಾಸಿಯಾದ ತಾಯಮ್ಮ ಎಂಬಾಕೆಯು ಇಲ್ಲಿಯ ಕೃಷ್ಣನಿಂದ ಆಕರ್ಷಿತಳಾಗಿ, ಇಲ್ಲಿಯೇ ನೆಲೆಸಿ, ಪ್ರತಿದಿನವೂ ಶ್ರೀಕೃಷ್ಣನ ಸೇವೆಯನ್ನು ಮಾಡುತ್ತಾ ಯಾಚನಾವೃತ್ತಿಯಿಂದ ಸಂಪಾದಿಸಿದ ಹಣದಲ್ಲಿ ಕೃಷ್ಣನಿಗೆ ಬೆಳ್ಳಿಯ ಕಿರೀಟ. ಕಾಲುಗೆಜ್ಜೆ ಇತ್ಯಾದಿ ಆಭರಣಗಳನ್ನು ಮಾಡಿಸಿಕೊಟ್ಟಿರುವುದನ್ನು ಕಾಣಬಹುದು.

ಮಳೂರಿಗೆ ಹಿಂದೆ ರಾಜೇಂದ್ರಸಿಂಹನಗರ ಎಂದು ಹೆಸರಿದ್ದಿತೆಂದು ತಿಳಿದು ಬರುತ್ತದೆ. ಹಿಂದೂ ಧರ್ಮಶಾಸ್ತ್ರವಾದ ಯಾಜ್ಞವಲ್ಕ್ಯ ಸ್ಮೃತಿ ಎಂಬ ಧರ್ಮಶಾಸ್ತ್ರ ಗ್ರಂಥಕ್ಕೆ "ಮಿತಾಕ್ಷರಿ" ಎಂಬ ಭಾಷ್ಯವನ್ನು ಬರೆದ ವಿಜ್ಞಾನೇಶ್ವರಿ ಯೋಗಿಯು ಈ ಸ್ಥಳದಲ್ಲಿದ್ದನೆಂದೂ. ಈತನು ಶ್ರೀರಾಮಪ್ರಮೇಯ ಸ್ವಾಮಿಯ ಭಕ್ತನೆಂದು ತಿಳಿದುಬರುತ್ತದೆ.

ಬೆಂಗಳೂರು ಜಿಲ್ಲೆಯ ಪವಿತ್ರ, ಪುಣ್ಯಕ್ಷೇತ್ರಗಳಲ್ಲಿ ಅತಿ ಮಹತ್ತರವಾದ ಇತಿಹಾಸವನ್ನು ಹೊಂದಿರುವ ಚನ್ನಪಟ್ಟಣ ತಾಲ್ಲೂಕಿನ ಮಳೂರು ವೀಕ್ಷಣಾರ್ಹ ಹಾಗೂ ಪುಣ್ಯಪದ ಕ್ಷೇತ್ರವಾಗಿದೆ.

# ಮಾಗಡಿಯ ಪುರಾತನ ದೇವಸ್ಥಾನಗಳು

## ಸಾಲಿಗ್ರಾಮ ರೂಪಿಯಾದ ರಂಗನಾಥಸ್ವಾಮಿ

ಮಾಗಡಿಯ ಬೆಟ್ಟ ತಪ್ಪಲುಗಳ ಪ್ರದೇಶಕ್ಕೆ ಹಿಂದೆ ಸ್ವರ್ಣಾಧಿ ಪರ್ವತ ಎಂದು ಹೆಸರಿದ್ದಿತು. ಈ ಮಾಂಡವ್ಯ ಋಷಿಗಳು ಭಗವಂತನ ಆದೇಶದ ಮೇರೆಗೆ ಗಾಢವಾದ ತಪಸ್ಸನ್ನು ಆಚರಿಸಿದರೆಂದು, ಭಗವಂತನು ಇವರಿಗೆ ಸಾಲಿಗ್ರಾಮ ರೂಪಿಯಾಗಿ ದರ್ಶನವಿತ್ತನೆಂದು ಸ್ಥಳಪುರಾಣದಿಂದ ತಿಳಿದು

ಬರುತ್ತದೆ. ಮಾಂಡವ್ಯ ಋಷಿಗಳು ಇದ್ದ ಪ್ರದೇಶಕ್ಕೆ ಮಾಂಡವ್ಯಕುಟಿ ಎಂದು ಇದ್ದು ಕಾಲಕ್ರಮೇಣ ಮಾಗಡಿಯಾಗಿದೆ.

ಮಾಗಡಿ ಬೆಂಗಳೂರಿಗೆ ನಲವತ್ತೈದು ಕಿಲೋಮೀಟರ್ ದೂರದಲ್ಲಿದೆ.

ಮಾಗಡಿಗೆ ಎರಡು ಕಿಲೋಮೀಟರ್ ದೂರದಲ್ಲಿ ತಿರುಮಲೆ ಎಂಬ ಕ್ಷೇತ್ರವಿದೆ. ಇದೇ ಸಾಲಿಗ್ರಾಮರೂಪಿಯಾದ ರಂಗನಾಥನ ದೇವಸ್ಥಾನ ವಿರುವ ಸ್ಥಳ. ಸಾಲಿಗ್ರಾಮ ರೂಪಿಯಾಗಿ ಮಾಂಡವ್ಯ ಋಷಿಗಳಿಗೆ ದರ್ಶನ ವಿತ್ತ ಭಗವಂತನನ್ನು ಅನೇಕ ವರ್ಷಗಳು ಮಾಂಡವ್ಯರು ಪೂಜಿಸಿದ್ದಾರೆ. ಈ ಸಾಲಿಗ್ರಾಮಕ್ಕೆ ಅಭಿಷೇಕ ಮಾಡಿದ ನೀರು ಪಾತ್ರದಲ್ಲಿ ನಿಲ್ಲದೆ ಭೂಮಿಯಲ್ಲಿ ಅಂತರ್ಗತವಾಗುವುದು ಇಲ್ಲಿನ ಒಂದು ವಿಶೇವಾಗಿದೆ.

ರಂಗನಾಥಸ್ವಾಮಿ ಸಾಲಿಗ್ರಾಮದ ಹಿಂಭಾಗಕ್ಕೆ ಮಾಂಡವ್ಯ ಋಷಿ ಗಳಿಂದ ಪ್ರತಿಷ್ಠಾಪಿತವಾದ ಪಶ್ಚಿಮ ವೆಂಕಟಾಚಲಪತಿ ಎಂಬ ವಿಗ್ರಹವಿದೆ.

ದೇವಸ್ಥಾನದ ಪೂರ್ವ ಹಾಗೂ ಪಶ್ಚಿಮಾಭಿಮುಖವಾಗಿರುವ ಎರಡು ಮಹಾದ್ವಾರಗಳು ಬೃಹದಾಕಾರವಾದ ಗೋಪುರಗಳಿಂದ ಕೂಡಿದ್ದು ; ಪೂರ್ವಾಭಿಮುಖವಾಗಿರುವ ಗೋಪುರವು ಸನ್ಯಾಸಿಯೊಬ್ಬರ ಆದೇಶದಮೇರೆಗೆ ಹುಸೇನ್ ಖಾನ್ ಎಂಬ ಮಹಮದೀಯ ಖಿಲ್ಲೆದಾರರಿಂದ ಕಟ್ಟಲ್ಪಟ್ಟಿದೆ. ಶ್ರೀಯುತರು ರಂಗನಾಥಸ್ವಾಮಿಯ ಪರಮ ಭಕ್ತರಾಗಿದ್ದರೆಂದು ತಿಳಿದು ಬರುತ್ತದೆ.

ದೇವಸ್ಥಾನದ ಪ್ರಕಾರದಲ್ಲಿ ಎಡಭಾಗಕ್ಕೆ ಗರುಡ ಆಳ್ವಾರ್ ಎಂಬ ದೇವಸ್ಥಾವಿದ್ದು ಅದರ ಪಕ್ಕದಲ್ಲಿ ಸೀತಾದೇವಿ ಅಮ್ಮನವರ ದೇವಸ್ಥಾನವಿದೆ. ಅಲ್ಲಿಂದ ಮುಂದೆ ಎಂಟು ಆಳ್ವಾರುಗಳ ಆಲಯವೂ ಮತ್ತು ಶ್ರೀ ವೈಷ್ಣವ ಸಿದ್ಧಾಂತದ ಪ್ರಮುಖ ಆಚಾರ್ಯರಾದ ವೇದಾಂತ ದೇಶಿಕರ್‌ರವರ ವಿಗ್ರಹವೂ ಇದೆ. ಯಾಗಶಾಲೆಯ ಪಕ್ಕದಲ್ಲಿ ಶ್ರೀ ರಾಮಾನುಜಾಚಾರ್ಯರ ದೇವಸ್ಥಾನವಿದೆ.

ದೇವಸ್ಥಾನದ ಹಿಂಭಾಗದಲ್ಲಿ ಸುಮಾರು ಆರು ಅಡಿ ಎತ್ತರವಿರುವ ಶ್ರೀದೇವಿ–ಭೂದೇವಿ ಸಹಿತನಾಗಿ ಬಲಗೈಯನ್ನು ತಲೆಗೆ ಕೊಟ್ಟು, ಏಳು ಹೆಡೆ

ಸರ್ಪದ ಮೇಲೆ ಮಲಗಿರುವ ರಂಗನಾಥಸ್ವಾಮಿ ವಿಗ್ರಹವಿದೆ. ಅಲ್ಲಿಂದ ಮುಂದೆ ಕುಲಶೇಖರ ಆಳ್ವಾರ್, ತಿರುಪಚ್ಚಿ ನಂಬಿಯಹಾರ್ ದೇವಸ್ಥಾನವೂ ಮತ್ತು ಚಿತ್ರಮಂಟಪವೂ ಇದೆ.

ಗರ್ಭಗುಡಿಯ ಹಿಂಭಾಗದ ಎಡಭಾಗಕ್ಕೆ ಬೆಳೆಯುತ್ತಿರುವ ರಂಗನಾಥ ಸ್ವಾಮಿಯನ್ನು ಗೋಡೆಯಮೇಲೆ ಕಾಣಬಹುದು. ಉದ್ಭವಮೂರ್ತಿಯಾದ ಈ ರಂಗನಾಥಸ್ವಾಮಿಯು ದಿನಕ್ರಮೇಣ ಬೆಳೆಯುತ್ತಿದ್ದಾನೆ. ಐದು ಹೆಡೆಯ ಸರ್ಪದ ಮೇಲೆ ಮೊಣಕಾಲನ್ನು ಎತ್ತಿ ಬಲಗಾಲಿನ ಮೇಲೆ ಮಡಿಚಿಟ್ಟು ಕೊಂಡು ಮಲಗಿರುವ ಈ ವಿಗ್ರಹವು ಈಗ ಸುಮಾರು ಮೂರು ಅಡಿ ಉದ್ದವಿದೆ.

ಮಕ್ಕಳಿಗೆ ಕಾಯಿಲೆ ಇತ್ಯಾದಿಗಳಾದರೆ, ದನಕರುಗಳು ಓಡಿಹೋದರೆ ಅಥವಾ ಏನಾದರೂ ಅನಾನುಕೂಲವಾದರೆ ಈ ಊರಿನ ಜನ ಬೆಳೆಯುತ್ತಿರುವ ಈ ರಂಗನಾಥನ ಬಳಿಗೆ ಬಂದು ತುಪ್ಪದ ದೀಪ ಹಚ್ಚಿ ಹರಕೆ ಹೊತ್ತುಕೊಳ್ಳು ವರು. ಈ ರಂಗನಾಥನ ದರ್ಶನಭಾಗ್ಯ ಪಡೆಯದೇ ಇದ್ದರೆ ಈ ಕ್ಷೇತ್ರ ದರ್ಶನದ ಪುಣ್ಯಫಲ ದೊರೆಯಲಾರದೆಂಬ ನಂಬಿಕೆ ಇಲ್ಲಿದೆ.

## ಕೋಟೆ ರಾಮೇಶ್ವರಸ್ವಾಮಿ

ಕೆಂಪೇಗೌಡ ಮತ್ತು ಅವನ ವಂಶಸ್ಥರಿಂದ ಮಾಗಡಿಯು 1728ರ ವರೆಗೆ ಆಳಲ್ಪಟ್ಟು ಅನಂತರ ಮೈಸೂರು ಅರಸರ ವಶವಾಯಿತು. ಕೆಂಪೇಗೌಡನಿಂದ ನಿರ್ಮಿತವಾದ ಕೋಟೆ ಈಗ ಛಿನ್ನವಾಗಿದ್ದು ಕೋಟೆಯ ಅವಶೇಷಗಳನ್ನು ಸ್ವಲ್ಪಮಟ್ಟಿಗೆ ಮಾತ್ರ ನೋಡಬಹುದು. ಈ ಕೋಟೆಯಲ್ಲಿ ರಾಮೇಶ್ವರ ದೇವಸ್ಥಾನವಿದೆ.

ರಾಮೇಶ್ವರ ಲಿಂಗವು, ಪರಶುರಾಮರಿಂದ ಪ್ರತಿಷ್ಠಾಪಿತವಾಗಿದ್ದು, ಲಿಂಗದ ಹಿಂದೆ ಕೊಡಲಿ ಏಟಿನಿಂದ ಹೊಡೆದ ಹಾಗೆ ಗುರುತಿದೆ.

ದೇವಸ್ಥಾನದ ಪ್ರಾಕಾರದಲ್ಲಿ ಪಶ್ಚಿಮಕ್ಕೆ ಪಂಚಲಿಂಗಗಳಿವೆ. ಪಾರ್ವತಿಯ ಲಿಂಗವನ್ನು ಕೆಲವು ವರ್ಷಗಳ ಹಿಂದೆ ಪ್ರತಿಷ್ಠಾಪಿಸಿದ್ದಾಗಿದೆ.

**ಅಚ್ಚರಿಯ ಗೆಜ್ಜೆ–ಗಂಟೆ!:**

ಗರ್ಭಗುಡಿಯ ರಾಮೇಶ್ವರ ಲಿಂಗದ ಮುಂಭಾಗದಲ್ಲಿರುವ ನಂದಿಯ ಕೊರಳಲ್ಲಿ ಒಂದು ಗೆಜ್ಜೆ ಹಾಗೂ ಎರಡು ಗಂಟೆಗಳಿವೆ. ಈ ಗೆಜ್ಜೆಯ ಮೇಲೆ ಬೆರಳಿನಿಂದ ಬಡಿದಾಗ ಗೆಜ್ಜೆ ಶಬ್ದವೂ, ಗಂಟೆಗಳ ಮೇಲೆ ಬೆರಳಿನಿಂದ ಬಡಿದಾಗ ಶುದ್ಧವಾದ ಕಂಚಿನ ಗಂಟೆಯ ಶಬ್ದವೂ ಸ್ಪಷ್ಟವಾಗಿ ಕೇಳಿ ಬರುತ್ತದೆ. ಅದು ಬಸವನ ಮೇಲಿರುವ ಇತರ ಯಾವ ಗೆಜ್ಜೆಯನ್ನು ಬಡಿದರೂ ಸಹಾ ಈ ವಿಧವಾದ ನಾದ ಮಾಧುರ್ಯ ಕೇಳಿ ಬರುವುದಿಲ್ಲ. ಇದು ಇಲ್ಲಿನ ಒಂದು ಅಚ್ಚರಿ.

# ಶ್ರೀ ಸೋಮೇಶ್ವರ ದೇವಸ್ಥಾನ

ಮಾಗಡಿಯ ಪಶ್ಚಿಮ ಭಾಗಕ್ಕೆ ಒಂದು ಕಿಲೋಮೀಟರ್ ದೂರದಲ್ಲಿ ಶ್ರೀ ಸೋಮೇಶ್ವರ ಸ್ವಾಮಿ ದೇವಸ್ಥಾನವಿದೆ. ಈ ದೇವಸ್ಥಾನವು ಕೆಂಪೇಗೌಡರಿಂದ ನಿರ್ಮಿಸಲ್ಪಟ್ಟದ್ದು ಇಲ್ಲಿಯ ಮೂಲ ದೇವರಾದ ಶ್ರೀ ಸೋಮೇಶ್ವರ ಸ್ವಾಮಿಯನ್ನು ಇವರಿಂದಲೇ ಪ್ರತಿಷ್ಠಾಪಿಸಲ್ಪಟ್ಟದಾಗಿದೆ.

ಈ ದೇವಸ್ಥಾನದ ಆಸ್ತಿಭಾರಕ್ಕೆ ಮುಂಚೆ ಪೂರ್ವದಿಕ್ಕಿಗೆ ಇದ್ದ ಬಂಡೆಯ ಮೇಲೆ ವಿಘ್ನೇಶ್ವರನ ವಿಗ್ರಹವನ್ನು ಕೆತ್ತಿಸಿ, ಪೂಜಾದಿಗಳನ್ನು ನಡೆಸಿ ನಂತರ ಸೋಮೇಶ್ವರಸ್ವಾಮಿ ದೇವಸ್ಥಾನಕ್ಕೆ ಆಸ್ತಿಭಾರವನ್ನು ಹಾಕಲಾಯಿತು. ಇಂದಿಗೂ ಪೂರ್ವ ದಿಕ್ಕಿನಲ್ಲಿರುವ ಬಂಡೆಯ ಮೇಲೆ ಈ ವಿನಾಯಕನನ್ನು ಕಾಣಬಹುದಾಗಿದೆ.

ಉತ್ತರಾಭಿಮುಖವಾಗಿರುವ ಈ ದೇವಸ್ಥಾನಕ್ಕೆ ಅನೇಕ ಸುಂದರವಾದ ಮಂಟಪಗಳಿವೆ. ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿರುವ ಮಹಾದ್ವಾರಗಳು ಬೃಹದಾಕಾರವಾದ ರಾಜಗೋಪುರಗಳಿಂದ ಕೂಡಿದ್ದು ; ಸಿಡಿಲು ಹೊಡೆದು ಈಗ ಭಿನ್ನವಾಗಿದೆ.

ದೇವಸ್ಥಾನದ ಎಡಭಾಗದಲ್ಲಿರುವ ಸುಂದರ ಮಂಟಪವು ಕೆಂಪೇಗೌಡರ ಮಂಟಪವಾಗಿದ್ದು ಬಲಭಾಗದ ಮಂಟಪವು ತಾಪ ಮಂಟಪ ಅಂದರೆ ದೇವ

ದಾಸಿಯರು ನರ್ತನ ಮಾಡುವ ಹಜಾರವಾಗಿದೆ. ಕೆಂಪೇಗೌಡರ ಹಜಾರದಲ್ಲಿ ಅನೇಕ ಚಿತ್ರಗಳನ್ನು ಚಿತ್ರಿಸಲಾಗಿದ್ದು ಕೆಲವನ್ನು ಮಾತ್ರ ಈಗ ನೋಡಬಹುದಾಗಿದೆ. ಈ ಹಜಾರದ ದಕ್ಷಿಣ ಕಂಬಲ್ಲಿ ಒಂದು ಪುರುಷಾಕೃತಿಯು.ನಾಯಿಯ ಮೇಲೆ ಗಂಭೀರವಾಗಿ ಕುಳಿತಿರುವಂತೆ ಚಿತ್ರಿಸಲಾಗಿದೆ. ನರ್ತಕಿಯರ ಹಜಾರದ ಒಂದು ಕಂಬದಲ್ಲಿ ಒಂದೂವರೆ ಅಡಿ ಎತ್ತರವಿರುವ ಕೆಂಪೇಗೌಡರ ವಿಗ್ರಹವಿದೆ.

ಈ ದೇವಸ್ಥಾನದಲ್ಲಿರುವ ನಂದಿ ವಿಗ್ರಹವು ರಾಮೇಶ್ವರ ಗುಡಿಯಲ್ಲಿರುವ ವಿಗ್ರಹಕ್ಕಿಂತಲೂ ಚಿಕ್ಕದಾಗಿದ್ದರೂ ಸುಂದರವಾಗಿದೆ. ದೇವಸ್ಥಾನದ ಮುಂಭಾಗಕ್ಕೆ ಸ್ವಲ್ಪ ದೂರದಲ್ಲಿ ಕಲ್ಯಾಣಿ ಇದೆ. ಹೊರಭಾಗದಲ್ಲಿ ಒಂದು ಬಸವನ ದೇವಸ್ಥಾನವಿದ್ದು ಆ ದೇವಸ್ಥಾನಕ್ಕೆ ಸುಂದರವಾದ ಗೋಪುರವಿದೆ. ಇದನ್ನು ಎಲ್ಲಾ ಭಾಗಗಳಿಂದ ಹಾಗೂ ಅತಿ ದೂದಿಂದಲೂ ಕಾಣಬಹುದಾಗಿದೆ. ಈ ಕಾರಣದಿಂದಾಗಿ ಈ ದೇವಸ್ಥಾನಕ್ಕೆ "ಶಿಖರ ದೇವಸ್ಥಾನ" ಎಂದು ಕರೆಯುತ್ತಾರೆ.

ಈ ದೇವಸ್ಥಾನದ ಅರ್ಚಕರಿಗೆ ಕೆಂಪೇಗೌಡರ ಕಾಲದಲ್ಲಿ ಅನೇಕ ಉಂಬಳಿಗಳು ದೊರೆತಿದ್ದು, ಅವುಗಳ ಬಗ್ಗೆ ಶಾಸನಗಳನ್ನು ಹೊರಡಿಸಲಾಗಿದೆ. ಅರ್ಚಕರ ತಾಮ್ರದ ಶಾಸನದ ತಗಡುಗಳಿದ್ದು ಕೆಂಪೇಗೌಡನ ವಂಶಸ್ಥರಲ್ಲಿ ಕಾಲದಲ್ಲಿದ್ದು ಅರ್ಚಕರ ಬಗ್ಗೆ ವಾಡಿಕೆಯಲ್ಲಿರುವ ಘಟನೆಯೊಂದು ಈ ರೀತಿಯದಾಗಿದೆ.

ವ್ಯಾಘ್ರದರ್ಶನ : ಕೆಂಪೇಗೌಡ ಮಹಾಪ್ರಭುವು ಸಾವನದುರ್ಗವನ್ನು ತನ್ನ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು ಪ್ರತಿದಿನ ಮಾಗಡಿಯ ಸೋಮೇಶ್ವರ ದೇವಸ್ಥಾನ ತಿರುಮಲೆಯ ಶ್ರೀ ರಂಗನಾಥಸ್ವಾಮಿ ದೇವಸ್ಥಾನ ಹಾಗೂ ಕೋಟೆಯ ರಾಮೇಶ್ವರಸ್ವಾಮಿ ದೇವಸ್ಥಾನಗಳಿಗೆ ಬೇಟಿನೀಡಿ, ದೇವರುಗಳಿಗೆ ಪೂಜೆ ಒತ್ಯಾದಿ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಈ ಮೂರು ದೇವಾಲಯಗಳಿಗೂ ಅರ್ಚಕರು ಒಬ್ಬರೇ ಆಗಿದ್ದು, ಕೆಂಪೇಗೌಡ ಕುದುರೆ ಮೇಲೆ ಬಂದು ದೇವಸ್ಥಾನದಿಂದ ಮತ್ತೊಂದು ದೇವಸ್ಥಾನಕ್ಕೆ ಹೋಗುವ ಮುಂಚೆಯೇ ಅರ್ಚಕರು ಅಲ್ಲಿಗೆ ಆಗಮಿಸಿ ಗೌಡನನ್ನು ಸ್ವಾಗತಿಸುತ್ತಿದ್ದರು ಗೌಡ ಅನೇಕದಿನಗಳ ಕಾಲ ಅರ್ಚಕರು ಈ ಪವಾಡದ

ಬಗ್ಗೆ ಯೋಚಿಸಿದ್ದ. ತಾನು ಕುದುರೆ ಮೇಲೆ ವೇಗವಾಗಿ ಹೋದರೂ ಯಾವುದೇ ವಾಹನವಿಲ್ಲದೆ ಈ ಅರ್ಚಕರು ತನಗಿಂತ ಮುಂಚೆ ಆ ದೇವಸ್ಥಾನಗಳಿಗೆ ಹೋಗಿ ಪೂಜೆಗೆ ಸಿದ್ಧರಾಗುತ್ತಿರುವುದು ಹೇಗೆ ? ಇದನ್ನು ಇವರಲ್ಲಿ ಪ್ರಸ್ತಾಪಿಸಲೇ ? ನಿಷ್ಠಾವಂತ ಬ್ರಾಹ್ಮಣರು ತನ್ನ ಮೇಲೆ ಕೋಪಗೊಂಡರೆ ? ಎಂದು ಸುಮ್ಮನಾಗುತ್ತಿದ್ದನು.

ಒಮ್ಮೆ ಕೆಂಪೇಗೌಡ ಸೋಮೇಶ್ವರ ದೇವಸ್ಥಾನದಲ್ಲಿ ಪೂಜೆ ಮುಗಿಸಿ ಪ್ರಸಾದ ಸ್ವೀಕರಿಸುವ ಸಮಯದಲ್ಲಿ "ಇಂದು ಕೇಳಿಯೇ ಬಿಡೋಣ" ಎಂಬ ಧೈರ್ಯ ತೆಗೆದುಕೊಂಡು "ಸ್ವಾಮಿ ನನಗೊಂದು ಸಂದೇಹ ಹಾಗೂ ಸಮಸ್ಯೆ ಬಂದಿದೆ. ತಾವು ಅದನ್ನು ಬಗೆಹರಿಸಬೇಕೆಂಬ ಕೋರಿಕೆ ನನ್ನದು" ಎಂದನು. "ಆಳುವ ಪ್ರಭುವಿಗೂ ಸಂದೇಹ ಸಮಸ್ಯೆಯೇ. ಅದು ಏನೆಂದು ತಿಳಿಸು. ನಮ್ಮಿಂದ ಸಾಧ್ಯವಾದರೆ ಬಗೆಹರಿಸೋಣ" ಎಂದರು. ತಪೋಸಿದ್ಧರಾದ ಅರ್ಚಕರು. "ತಾವೊಬ್ಬರೇ ಎಲ್ಲಾ ದೇವಸ್ಥಾನಗಳಲ್ಲೂ ಪೂಜೆ ಕೈಂಕರ್ಯಗಳನ್ನು ಕೈಗೊಳ್ಳುತ್ತೀರಿ ; ನಾವು ಹೋಗುವುದಕ್ಕೆ ಮುಂಚೆಯೇ ನೀವು ಅಲ್ಲಿ ಹೋಗಿ ನಮ್ಮ ಬರುವಿಕೆಗಾಗಿ ಎದುರು ನೋಡುತ್ತಿರುತ್ತೀರಿ. ಇದು ಹೇಗೆ ಸಾಧ್ಯ ? ನನ್ನ ಬಳಿ ಕುದುರೆ ಇದೆ; ಆದರೆ ತಮ್ಮ ಬಳಿ ಯಾವುದೇ ವಾಹನವಿಲ್ಲ, ಇದೇ ನನ್ನ ಸಮಸ್ಯೆ" ಎಂದನು.

ಅರ್ಚಕರು ಹುಸಿನಗೆ ನಕ್ಕು "ಗೌಡ ಒಂದು ಕ್ಷಣ ಕಣ್ಣು ಮುಚ್ಚಿಕೋ ನಮ್ಮ ವಾಹನವನ್ನು ತೋರಿಸುತ್ತೇವೆ" ಎಂದರು ಗೌಡ ಭಯ ಭಕ್ತಿಗಳಿಂದ ಅರ್ಚಕರು ಹೇಳಿದಂತೆ ಕಣ್ಣು ಮುಚ್ಚಿದ. ತರುವಾಯ ಅರ್ಚಕರು ತಮ್ಮ ಮಂತ್ರಸಿದ್ಧಿಯಿಂದ ಒಂದು ವ್ಯಾಘ್ರವನ್ನು(ಹುಲಿ)ಸೃಷ್ಟಿಸಿ ಕೆಂಪೇಗೌಡನನ್ನು ಕಣ್ಣು ಬಿಡುವಂತೆ ಹೇಳಿದರು. ತನ್ನ ಮುಂದೆ ಘರ್ಜಿಸುತ್ತಾ ನಿಂತಿರುವ ವ್ಯಾಘ್ರನನ್ನು ನೋಡಿ ಭಯಭೀತನಾಗಿ ಗೌಡ ಕ್ಷಮೆ ಯಾಚಿಸುವ ದೃಷ್ಟಿಯಿಂದ ಅರ್ಚಕರತ್ತ ನೋಡಲು ಅರ್ಚಕರು ನಸು ನಗುತ್ತಾ ತಮ್ಮ ತಪೋಶಕ್ತಿಯಿಂದ ಈ ವ್ಯಾಘ್ರನನ್ನು ತಾವು ಸೃಷ್ಟಿಸಿ ಅದರ ಮೇಲೆ ಬರುವುದಾಗಿ ತಿಳಿಸಿದರು.

ಕೆಂಪೇಗೌಡನು ಈ ಘಟನೆಯ ನೆನಪಿಗಾಗಿ ಅರ್ಚಕರಿಗೆ ಅನೇಕ ಉಂಬಳಿಗಳನ್ನು ನೀಡಿ ಶಾಸನಗಳನ್ನು ಬರೆಯಿಸಿದನು. ಈಗಲೂ ಈ ದೇವಸ್ಥಾನದ ಅರ್ಚಕ ಮನೆತನ ಈ ಉಂಬಳಿಗಳನ್ನು ಅನುಭವಿಸುತ್ತಿದ್ದಾರೆ.

# ವಿಠಲ ದೇವಸ್ಥಾನ

ಮಾಗಡಿಯ ಸಮೀಪದಲ್ಲೇ ಅಂದರೆ ಪಶ್ಚಿಮಕ್ಕೆ ಸುಮಾರು ಆರು ಕಿಲೋಮೀಟರ್ ದೂರದಲ್ಲಿ ಸಾತನೂರಿದೆ. ಇಲ್ಲಿಯ ವಿಠಲನ ದೇವಸ್ಥಾನವು ಕೆಂಪೇಗೌಡನ ಕಾಲಕ್ಕೂ ಹಿಂದಿನದಾಗಿದೆ. ಉತ್ತರವಾಗಿ ಸುಂದರವಾಗಿ ರುವ ಈ ವಿಠಲಮೂರ್ತಿ ಎರಡೂ ಕೈಗಳನ್ನು ಸೊಂಟದ ಮೇಲೆ ಇಟ್ಟು ಕೊಂಡಿದ್ದಾನೆ. ಬಲಗೈಯಲ್ಲಿ ಶಂಖು ಮತ್ತು ಕೊಳಲು ಹಾಗೂ ಎಡಗೈ ಯಲ್ಲಿ ಹಗ್ಗ ಮತ್ತು ಚೀಲದಂತೆ ಕೊಳಲು ಎಡಗೈಯಲ್ಲಿ ಹಗ್ಗ ಮತ್ತು ಚೀಲದಂತಿರುವ ವಸ್ತು ಕಾಣಬರುತ್ತದೆ. ಪ್ರಭಾವಳಿಯಲ್ಲಿ ದಶಾವತಾರದ ಕೆತ್ತನೆ ಇದೆ. ಈ ದೇವರನ್ನು "ವಿಠಲ ವೇಣುಗೋಪಾಲ ಸ್ವಾಮಿ" ಎಂದು ಕರೆಯುವ ವಾಡಿಕೆ ಇದೆ.

ಕೆಂಪೇಗೌಡ ಪ್ರಭು ತನ್ನ ರಾಣಿಯರಾದ ಕೆಂಪಮ್ಮ ಮತ್ತು ದುರ್ಗಾವತಿ ಎಂಬುವರ ಹೆಸರಿನಲ್ಲಿ ಮಾಗಡಿಯ ದಕ್ಷಿಣ ಹಾಗೂ ಪಶ್ಚಿಮ ದಿಕ್ಕಿನಲ್ಲಿ ಕ್ರಮವಾಗಿ ಎರಡು ಕೆರೆಗಳನ್ನು ಕಟ್ಟಿಸಿದ್ದಾನೆ. ಕೆಂಪಮ್ಮ ರಾಣಿಯ ಹೆಸರಿನಲ್ಲಿ ಕಟ್ಟಿಸಲಾದ ಕೆಂಪು ಸಮುದ್ರಕ್ಕೆ ಸಂಬಂಧಪಟ್ಟ ಘಟನೆ ಯನ್ನು ಈ ತೂಬಿನ ಕಲ್ಲಿನಲ್ಲಿ ನಮೂದಿಸಲಾಗಿದ್ದು ಅದು ಈ ರೀತಿಯ ದಾಗಿದೆ.

ಕೆಂಪು ಸಮುದ್ರದ ಗಾತ್ರಕ್ಕೆ ತಕ್ಕಂತೆ ಒಂದು ಬೃಹತ್ತಾದ ತೂಬಿನ ಕಲ್ಲನ್ನು ನುಣುಪಾದ ಕಲ್ಲಿನಿಂದ ಮಾಡಿಸಿ ತೂಬಿಗೆ ಅಳವಡಿಸಲು ಸಿದ್ಧ ಮಾಡಿಟ್ಟಿದ್ದರು. ಕೆಂಪು ಸಮುದ್ರದ ಸಮೀಪದಲ್ಲೇ ಇರುವ ಸಾತನೂರಿನ ಬ್ರಾಹ್ಮಣನೊಬ್ಬನು ತನ್ನ ಬೆಳಗಿನ ಶೌಚಕ್ಕಾಗಿ ಕೆರೆ ಅಂಗಳಕ್ಕೆ ಬಂದು ಕಲ್ಲನ್ನು ನೋಡುತ್ತಾರೆ. ಸೊಗಸಾದ ಕಲ್ಲು ಇದು ನಮ್ಮ ಮನೆ ಅಡಿಗ ಮನೆಯಲ್ಲಿರಲು ಯೋಗ್ಯವಾದದ್ದು ಎಂದು ಯೋಚಿಸಿ ತಕ್ಷಣವೇ ಆ ಕಲ್ಲನ್ನು ತಮ್ಮ ತಲೆ ಮೇಲೆ ಹೊತ್ತು ಊರಿನ ಮುಂಭಾಗಕ್ಕೆ ಬಂದು ನೆಶ್ಯವನ್ನು ತೀಡುವ ಸಲುವಾಗಿ ಆ ಕಲ್ಲನ್ನು ಕಳಕ್ಕೆ ಇಳಿ ಬಿಡುತ್ತಾರೆ.

ಪ್ರತ್ಯೇಕವಾದ ಒಂದು ದೇವಸ್ಥಾನದಲ್ಲಿ ಮೂರು ಅಡಿ ಎತ್ತರದ ಬಹುಸುಂದರವಾದ ಭದ್ರಕಾಳಿಯ ವಿಗ್ರಹವಿದೆ. ನವರಂಗದ ಬಲಭಾಗಕ್ಕೆ ಒಂದು ಋಷಿಯ ವಿಗ್ರಹವಿದೆ. ಕೆಂಪೇಗೌಡನು ಈ ಮುನಿಯಿಂದ "ವೀರ ಭದ್ರ ವಿಜಯ" ಎಂಬ ಚಂಪೂ ಕಾವ್ಯವನ್ನು ಬರೆಸಿದ್ದನೆಂಬ ಪ್ರತೀತಿ ಇದೆ.

ಶ್ರೀ ವೀರಭದ್ರಸ್ವಾಮಿ ದೇವಸ್ಥಾನದ ಸಮೀಪದಲ್ಲೇ ಶ್ರೀ ನರಸಿಂಹ ಸ್ವಾಮಿ ದೇವಸ್ಥಾನವಿದೆ. ದೇವಸ್ಥಾನದ ಪ್ರವೇಶ ದ್ವಾರದಲ್ಲಿ ಕಪ್ಪು ಶಿಲೆಯ ಎರಡು ಆನೆಗಳನ್ನು ಕೆತ್ತಲಾಗಿದೆ.

ಉದ್ಭವ ಶಿಲೆಯಲ್ಲಿ ಸುಮಾರು ಐದು ಅಡಿ ಎತ್ತರವಿರುವ ಉಗ್ರ ನರಸಿಂಹ ಸ್ವಾಮಿಯನ್ನು ಕೆತ್ತಲಾಗಿದೆ. ಭಯಭೀತರಾದ ಜನಕ್ಕೆ ಈ ಉಗ್ರ ನರಸಿಂಹ ಪರಮ ವೈದ್ಯನಾಗಿ ಅವರ ಸಂಕಷ್ಟಗಳನ್ನು ಪರಿಹರಿಸುತ್ತಿದ್ದಾನೆ.

## ಹುಲಿ ಕಲ್ಲಿನ ದೇವಾಲಯಗಳು

1310ರಲ್ಲಿ ಹೊಯ್ಸಳ ಅರಸರಿಂದ ಸ್ಥಾಪಿಸಲ್ಪಟ್ಟ "ಹುಲಿಕಲ್ಲು" ಮಾಗಡಿ ತಾಲ್ಲೂಕಿನಲ್ಲಿದೆ. ಇಲ್ಲಿಯ ರಾಮಲಿಂಗ ಬೆಟ್ಟದ ಬುಡದಲ್ಲ "ಗುರಿಯ ಚಿಂತ" ಎಂಬ ಸನ್ಯಾಸಿಯು ಕುಟೀರವನ್ನು ನಿರ್ಮಿಸಿಕೊಂಡಿದನು. ಒಂದು ದಿನ ಈತನ ಆಶ್ರಮದಲ್ಲಿ ವಾಸವಾಗಿದ್ದ ವೃಷಭದ ಮೇಲೆ ಒಂದು ಹುಲಿಯು ಬಿದ್ದಾಗ ಈ ವೃಷಭವು ಆ ಹುಲಿಯೊಡನೆ ಹೋರಾಡಿ ಆ ಹುಲಿ ಯನ್ನು ಕೊಂದು ಹಾಕಿತು. ಈ ಆಶ್ಚರ್ಯಕರವಾದ ವಿಷಯವು ಹೊಯ್ಸಳ ಅರಸರ ಗಮನಕ್ಕೆ ಬಂದು, ಈ ಸ್ಥಳ ಪ್ರಾಶಸ್ತ್ಯವಾದ ಸ್ಥಳ ಎಂದು ಅವನು ಪರಿಗಣಿಸಿ ಈ ಬೆಟ್ಟದ ಮೇಲೆ ಒಂದು ಕೋಟೆಯನ್ನು ನಿರ್ಮಿಸಿ ಈ ಸ್ಥಳಕ್ಕೆ "ಹುಲಿಕೊಲ್ಲು" ಎಂದು ನಾಮಕರಣ ಮಾಡಿದರು. ಈ ಹುಲಿ ಕೊಲ್ಲು ಕ್ರಮೇಣವಾಗಿ ಹುಲಿಕಲ್ಲಾಗಿದೆ.

ಹೊಯ್ಸಳರ ನಂತರ ಈ ಸ್ಥಳವು ಕೊರಟಗೆರೆಯ ಬೈಚಿಗೌಡನ ವಶಕ್ಕೆ ಬಂದು, ಈತನ ವಂಶಸ್ಥರು ಮೈಸೂರು ಅರಸರ ಆಶ್ರಿತರಾಗಿ ಈ ಸ್ಥಳ

ವನ್ನು ಆಳಿದರು. ನಂತರ ಇದು ಟಿಪ್ಪುಸುಲ್ತಾನನಿಂದ ಆಡಳಿತಕ್ಕೆ ಒಳ ಪಟ್ಟಿತು. ಇಲ್ಲಿ ಅನೇಕ ಶಿಥಿಲವಾದ ದೇವಸ್ಥಾನಗಳನ್ನೂ ಮಂಟಪಗಳನ್ನೂ ನೋಡಬಹುದಾಗಿದೆ. ಶಿಥಿಲವಾದ ಕೋಟೆಯ ಹಾಗೂ ಅರಮನೆಯ ಭಾಗ ಗಳನ್ನು ಗಮನಿಸಿದಾಗ ಇವು ಸುಂದರವಾಗಿ ಉತ್ತಮ ಕಲ್ಲುಗಳಿಂದ ನಿರ್ಮಿತ ವಾಗಿದ್ದವು ಎಂದು ಊಹಿಸಬಹುದಾಗಿದೆ.

ಹೊಯ್ಸಳ ಶಿಲ್ಪ ಸಂಪ್ರದಾಯದಲ್ಲಿ ಕಟ್ಟಲ್ಪಟ್ಟಿರುವ ಮಲ್ಲೇಶ್ವರ ಸ್ವಾಮಿ ದೇವಸ್ಥಾನವು ಚಿಕ್ಕದಾದರೂ ಸುಂದರವಾಗಿದೆ. ಹಿಂದಿನ ಗತ ವೈಭವದ ಮೂಕ ಸಾಕ್ಷಿಯಾಗಿ ಶಿಥಿಲಾವಸ್ಥೆಯಲ್ಲಿರುವ ಈ ದೇವಸ್ಥಾನವು ಉತ್ತರಾಭಿಮುಖವಾಗಿದ್ದು, ಗರ್ಭಗೃಹ, ಸುಖನಾಶಿ, ಹಾಗೂ ನವರಂಗ ಗಳಿಂದ ಕೂಡಿದೆ. ಮೇಲ್ಛಾವಣಿಯಲ್ಲಿ ಕಮಲದ ಹೂವನ್ನು ಕೆತ್ತಲಾಗಿದೆ. ನವರಂಗದ ಎರಡೂ ಪಾರ್ಶ್ವಗಳಲ್ಲಿ ಗಣಪತಿ ಮತ್ತು ಭೈರವನ ವಿಗ್ರಹ ಗಳಿವೆ.

ಹುಲಿಕಲ್ಲಿನ ಸಂಗಮೇಶ್ವರ ದೇವಸ್ಥಾನವು ಈಗ್ಗೆ ಎಪ್ಪತ್ತು ವರ್ಷ ಗಳ ಹಿಂದೆ ಕಟ್ಟಲ್ಪಟ್ಟಿದ್ದಾಗಿದೆ. ಪಾಳು ಬಿದ್ದಿದ್ದ ಕಾಮಧೇಶ್ವರ ದೇವ ಸ್ಥಾನದ ಅವಶೇಷಗಳನ್ನು ಉಪಯೋಗಿಸಿ ಈ ದೇವಸ್ಥಾನ ಕಟ್ಟಲಾಗಿದೆ.

ನವರಂಗದಲ್ಲಿ ಐದು ಅಡಿ ಎತ್ತರದ ಶ್ರೀ ವೇಣುಗೋಪಾಲಸ್ವಾಮಿ ವಿಗ್ರಹವೂ ಹಾಗೂ ಮೂರು ಅಡಿ ಎತ್ತರದ ನಾರಾಯಣ ಮತ್ತು ಸೂರ್ಯ ದೇವನ ವಿಗ್ರಹಗಳೂ ಇವೆ. ಈ ವಿಗ್ರಹಗಳನ್ನು ನಾಶವಾಗಿದ್ದ ಕಾಮಧೇಶ್ವರ ದೇವಸ್ಥಾನದಿಂದ ತಂದು ಇಲ್ಲಿ ಪ್ರತಿಷ್ಠಾಪಿಸಲಾಗಿದೆ.

ವೇಣುಗೋಪಾಲಸ್ವಾಮಿ ವಿಗ್ರಹವು ಬಹುಸುಂದರವಾಗಿ ಕಡೆಯಲ್ಪ ಟ್ಟಿದೆ. ಇಲ್ಲಿಯ ಕೆಂಪಮ್ಮ ದೇವಸ್ಥಾನದಲ್ಲಿ ಕುಳಿತಿರುವ ಒಂದು ಬಣ್ಣದ ವಿಗ್ರಹವಿದೆ. ದೇವಸ್ಥಾನದ ಒಳಭಾಗದಲ್ಲಿ ಒಂದು ವೀರಗಲ್ಲನ್ನು ಕಾಣ ಬಹುದಾಗಿದೆ.

# ದಕ್ಷಿಣ ಕಾಶಿ ; ಶಿವಗಂಗಾ ಕ್ಷೇತ್ರ

ಒಮ್ಮೆ ಪಾರ್ವತಿ ದೇವಿಗೆ ಬಹಳವಾಗಿ ಬಾಯಾರಲು ಆಕೆ ಶಿವನನ್ನು ಆತನ ಮುಡಿಯಲ್ಲಿರುವ ಗಂಗೆಯಿಂದ ಸ್ವಲ್ಪ ನೀರನ್ನು ಕೇಳಿದಳು. ಶಿವನು ಗಂಗೆಯನ್ನು ಕೊಡಲು ನಿರಾಕರಿಸಿದನು. ಇದರಿಂದ ಕೋಪಗೊಂಡ ಪಾರ್ವತಿ ಕಾಳಿಯ ಅವತಾರವಾದ ಹೊನ್ನಾದೇವಿಯ ರೂಪ ಹೊಂದಿ ತನ್ನ ಕತ್ತಿಯಿಂದ ಬಂಡೆಯೊಂದಕ್ಕೆ ಹೊಡೆದು ಅದರಿಂದ ನೀರನ್ನು ಹೊರ ತರಿಸಿ ತನ್ನ ಬಾಯಾರಿಕೆಯನ್ನು ನಿವಾರಿಸಿಕೊಂಡು ಅಲ್ಲೇ ನೆಲಸಿದಳು. ಬಂಡೆಯಿಂದ ಹೊರಬಂದ ನೀರು ಕೊಳವಾಗಿ ಪರಿಣಮಿಸಿ "ಪಾತಾಳಗಂಗೆ" ಎಂದು ಹೆಸರು ಪಡೆಯಿತು. ಈ ಕ್ಷೇತ್ರವೇ ಇಂದಿನ "ಶಿವಗಂಗಾ ಕ್ಷೇತ್ರ."

ಶಿವಗಂಗೆಯು ನೆಲಮಂಗಲ ತಾಲ್ಲೂಕಿನಲ್ಲಿದ್ದು ಬೆಂಗಳೂರಿಗೆ ಐವತ್ತು ನಾಲ್ಕು ಕಿಲೋಮೀಟರ್ ದೂರದಲ್ಲಿದೆ. ಪುರಾಣಗಳಲ್ಲಿ ಇದಕ್ಕೆ "ಕಾಕುದ್ಗಿರಿ" "ದಕ್ಷಿಣ ಕಾಶಿ" ಎಂಬ ಹೆಸರುಗಳುಂಟು. ಇಲ್ಲಿನ ಗಿರಿಯ ಶಿಖರವು ಸಮುದ್ರದ ಮಟ್ಟಕ್ಕೆ ಸುಮಾರು 4559 ಅಡಿ ಎತ್ತರದಲ್ಲಿದೆ. ದೂರದಿಂದ ಈ ಬೆಟ್ಟ ವನ್ನು ನೋಡಿದಾಗ ಪೂರ್ವಕ್ಕೆ ವೃಕ್ಷದಾಕಾರವಾಗಿಯೂ ದಕ್ಷಿಣಕ್ಕೆ ಲಿಂಗಾಕಾರ ವಾಗಿಯೂ, ಪಶ್ಚಿಮಕ್ಕೆ ಗಣೇಶಾಕಾರವಾಗಿಯೂ, ಉತ್ತರಕ್ಕೆ ಸರ್ಪಾಕಾರ ವಾಗಿಯೂ ಕಾಣುತ್ತದೆ.

ಹೊಯ್ಸಳೇಶ್ವರ ವಿಷ್ಣುವರ್ಧನನ ಮಹಾರಾಣಿ ಶಾಂತಳಾದೇವಿಯು ಪ್ರಾಣಾರ್ಪಣೆ ಮಾಡಿದ ಸ್ಥಳವೂ ಇದೇ ಆಗಿದೆ. ಬೆಟ್ಟದ ಉತ್ತರ ಭಾಗಕ್ಕೆ ಕೆಂಪೇಗೌಡನಿಂದ ನಿರ್ಮಿತವಾದ ಅನೇಕ ಪವಿತ್ರ ಗೃಹಗಳಿವೆ. ಕೆಂಪೇಗೌಡನು ಅನೇಕ ದಿನ ಇಲ್ಲಿ ತಂಗಿದ್ದನೆಂದೂ ಹಾಗೂ ಭೈರವ ನಾಣ್ಯಗಳನ್ನು ಇಲ್ಲಿ ಅಚ್ಚು ಹಾಕಿ ಚಲಾವಣೆಗೆ ತಂದು ದೇಶಕ್ಕೆ ಒದಗಿ ಬಂದ ಕ್ಷಾಮವನ್ನು ಪಾರು ಮಾಡಿದನೆಂದು ತಿಳಿದು ಬರುತ್ತದೆ.

ಶಿವಗಂಗೆಯ ಪ್ರಮುಖ ದೇವಸ್ಥಾನಗಳೆಂದರೆ ಹೊನ್ನಾದೇವಿ ದೇವ ಸ್ಥಾನ ಹಾಗೂ ಗಂಗಾಧರೇಶ್ವರಸ್ವಾಮಿ ದೇವಸ್ಥಾನಗಳು. ಬೆಟ್ಟದ ಮೇಲೆ

ಎಂಟು ಕೊಳಗಳಿವೆ. ಇವುಗಳಲ್ಲಿ ಮುಖ್ಯವಾದುದು ಪಾತಾಳ ಗಂಗೆ. ಈ ಕೊಳದಲ್ಲಿ ಬೇಸಿಗೆ ಕಾಲದಲ್ಲಿ ನೀರು ಹೆಚ್ಚಾಗಿಯೂ ಹಾಗೂ ಮಳೆಗಾಲ ದಲ್ಲಿ ಕಮ್ಮಿಯಾಗಿಯೂ ಇರುತ್ತದೆ. ಇದು ಇಲ್ಲಿನ ವಿಶೇಷಗಳಲ್ಲಿ ಒಂದು.

ಪಾತಾಳಗಂಗೆಯಿಂದ ಮುಂದೆ ಹೋದಂತೆ ಕಲ್ಲುಬಾಗಿಲು ಎಂಬ ದ್ವಾರ ವಿದ್ದು ಅದರಿಂದ ಕೆಲವು ಗಜಗಳ ಅಂತರದಲ್ಲಿ "ಕಣ್ವ ತೀರ್ಥ" ಎಂಬ ಬಾವಿ ಇದೆ. ಈ ಬಾವಿಯನ್ನು 1652ರಲ್ಲಿ ಶಿವಾಜಿಯ ತಂದೆಯಾದ ಷಹಜಿ ಯ ದ ಕಟ್ಟಿಸಲ್ಪಟ್ಟಿತೆಂದು ಇಲ್ಲಿರುವ ಶಿಲಾ ಶಾಸನದಿಂದ ತಿಳಿದು ಬರುತ್ತದೆ. ಇಲ್ಲಿಂದ ಸ್ವಲ್ಪ ಮುಂದಕ್ಕೆ ನಡೆದಂತೆ ಇಕ್ಕೆಲಗಳಲ್ಲಿಯೂ ಬಂಡೆಗಳಿಂದ ಕೂಡಿದ ಕಡಿದಾದ ರಸ್ತೆ ಸಿಗುತ್ತದೆ. ಇದಕ್ಕೆ "ಒನಕೆ ಗಂದಿ" ಎಂದು ಹೆಸರು. ಮೈಸೂರಿನ ಶ್ರೀಮನ್ ಮಹಾರಾಜರವರು ಹತ್ತೊಂಬತ್ತ ನೂರರಲ್ಲಿ ಇಲ್ಲಿಗೆ ಭೇಟಿ ಕೊಟ್ಟಿದ್ದರು ಎಂಬುದಕ್ಕೆ ಇಲ್ಲಿಯ ಒಂದು ಬಂಡೆಯ ಮೇಲೆ ಇಂಗ್ಲೀಷಿನಲ್ಲಿ ಶಾಸನವಿದೆ. 1388ರ ಸುಮಾರಿನಲ್ಲಿ ಕಡೆದಿರಬಹುದೆಂದು ಊಹಿಸಲಾಗಿರುವ ನಂದಿಯ ವಿಗ್ರಹವು ಇಲ್ಲಿದ್ದು ಇದಕ್ಕೆ "ಕೊಡಗಲ್ ಬಸವ" ಎಂದು ಕರೆಯುತ್ತಾರೆ.

ಗಿರಿಯ ಶಿಖರವನ್ನು ತಲುಪುತ್ತಿದ್ದಂತೆ ವೀರಭದ್ರಸ್ವಾಮಿ ದೇವಸ್ಥಾನ ವನ್ನು ಕಾಣಬಹುದು. ಇಲ್ಲಿಯ ಕೋಡಗಲ್ಲಿನ ಮೇಲೆ ಎರಡು ಕಂಬ ಗಳಿವೆ. ಈ ಬಂಡೆಯ ಮೇಲೆ ಕೆಳಭಾಗಕ್ಕೆ ಎರಡು ಕಬ್ಬಿಣದ ಕೊಕ್ಕೆಗಳಿದ್ದು, ಹಿಂದೆ ಈ ಕೊಕ್ಕೆಗಳಿಗೆ ಬೆಳ್ಳಿ ಮತ್ತು ಬಂಗಾರದ ಗಂಟೆಗಳನ್ನು ತೂಗು ಹಾಕಲಾಗಿತ್ತೆಂದು ತಿಳಿದು ಬರುತ್ತದೆ. ಆದರೆ ಇಷ್ಟು ಕಡಿದಾದ ಹಾಗೂ ತೀರಾ ಹೊರಚಾಚಿರುವ ಈ ಬಂಡೆಯ ಬುಡ ಭಾಗಕ್ಕೆ ಕೊಕ್ಕುಗಳನ್ನು ಹಾಕಿರುವುದನ್ನು ಗಮನಿಸಿದಾಗ ಅತ್ಯಂತ ಆಶ್ಚರ್ಯವಾಗುತ್ತದೆ. ಕಂಬ ಗಳ ಸುತ್ತಮುತ್ತಲೂ ಕನ್ನಡ ಹಾಗೂ ನಾಗರೀ ಲಿಪಿಯ ಅನೇಕ ಯಾತ್ರಾರ್ಥಿ ಗಳ ಹೆಸರನ್ನು ಕೆತ್ತಲಾಗಿದೆ. ಇಲ್ಲಿನ ದೀಪಸ್ತಂಭವು ಹೊಯ್ಸಳರ ರಾಜ ಮೊದಲನೇ ನರಸಿಂಹ ಆಳ್ವಿಕೆಯಲ್ಲಿ ಕೂಸು ಬಸವಣ್ಣ ಎಂಬುವನಿಂದ ನಿರ್ಮಿಸಲ್ಪಟ್ಟಿತ್ತೆಂದು ಗಂಗಾಧರೇಶ್ವರ ದೇವಸ್ಥಾನದಲ್ಲಿರುವ ಒಂದು ಶಿಲಾ ಶಾಸನದಿಂದ ತಿಳಿದು ಬರುತ್ತದೆ.

ಬೆಟ್ಟದ ಮೇಲೆ ಮೇಲ್ ಗವಿ ಮಠ, ಕೆಳಗಿನ ಗವಿ ಮಠಗಳೆಂಬ ಮಠ ಗಳಿವೆ. ಈ ಮಠದ ಸುತ್ತ ಬರುವಾಗ ಒರಳು ತೀರ್ಥವಿದೆ. ಪಾತಾಳಗಂಗೆ ತೀರ್ಥಕ್ಕೆ ಹೋಗುವ ದಾರಿಯಲ್ಲಿ ಅನೇಕ ವೀರಶೈವಗುರುಗಳ ಗದ್ದುಗೆ ಗಳಿವೆ.

ಗಂಗಾಧರೇಶ್ವರ ಮತ್ತು ಹೊನ್ನಾದೇವಿ ದೇವಸ್ಥಾನಗಳಲ್ಲಿ ಅನೇಕ ಸುಂದರವಾದ ವಿಗ್ರಹಗಳನ್ನು ಕಡೆಯಲಾಗಿದೆ. ಇವುಗಳಲ್ಲಿ ಮುಖ್ಯವಾದವು ಗಳು, ಪ್ರವೇಶದ್ವಾರದಲ್ಲಿರುವ ಖಜಾನೆ ಗಣಪತಿ ವಿಗ್ರಹ, ಇಲ್ಲಿಯ ಹರಿಹರ, ಸುಬ್ರಹ್ಮಣ್ಯ, ಮಹಿಷಾಸುರ ಮರ್ಧಿನಿ, ನಾರಾಯಣ. ಭೈರವ ಮತ್ತು ಗಣಪತಿ ವಿಗ್ರಹಗಳು ಜಕಣಾಚಾರಿಯಿಂದ ನಿರ್ಮಿತವಾದವುಗಳೆಂದು ತಿಳಿದು ಬರುತ್ತದೆ.

ಬಂಡೆಯೊಂದನ್ನು ಕೊರೆದು ನಿರ್ಮಿಸಲ್ಪಟ್ಟಿರುವ ಗಂಗಾಧರೇಶ್ವರ ಸ್ವಾಮಿ ದೇವಸ್ಥಾನವು 1140ರ ಹೊಯ್ಸಳೇಶ್ವರ ವಿಷ್ಣುವರ್ಧನನಿಂದ ಜೀರ್ಣೋದ್ಧಾರವಾಯಿತೆಂದು ಶಾಸನಗಳು ತಿಳಿಸುತ್ತವೆ. ಇಲ್ಲಿಯ ನವರಂಗ ಹೊಯ್ಸಳ ಶೈಲಿಯಲ್ಲಿ ಇದೆ. ಮೂಲದೇವರಾದ ಗಂಗಾಧರೇಶ್ವರ ಲಿಂಗಕ್ಕೆ ತುಪ್ಪ ಹಚ್ಚಿ ಮಂಗಳಾರತಿ ಮಾಡಿದಾಗ ಅದು ಬೆಣ್ಣೆಯಾಗಿ ಪರಿಣಮಿಸುತ್ತದೆ ಇದು ಅಚ್ಚರಿ ಸಂಗತಿ.

ಹೊನ್ನಾದೇವಿ ದೇವಸ್ಥಾನವು ಪೂರ್ವಾಭಿಮುಖವಾಗಿದೆ. ಪೀಠದ ಮೇಲೆ ಐದು ಅಡಿ ಎತ್ತರವಿರುವ ದೇವಿಯ ವಿಗ್ರಹವು ಸುಂದರವಾಗಿದೆ, ದೇವಿಗೆ ಎಂಟು ಕೈಗಳಿದ್ದು ಪ್ರತಿಯೊಂದು ಕೈಯಲ್ಲೂ ಕ್ರಮವಾಗಿ ಗಂಟೆ. ಶಂಖ, ಚಕ್ರ, ರುಂಡ. ಪಾಶ ಮತ್ತು ಕತ್ತಿಯನ್ನು ಹಿಡಿದುಕೊಂಡಿದ್ದು ಎರಡು ಕೈಗಳು ಬರಿದಾಗಿವೆ. ಸಂಸ್ಕೃತದ ಸ್ವರ್ಣಾಂಬ ಎಂಬ ಹೆಸರು ಕನ್ನಡ ದಲ್ಲಿ ಹೊನ್ನಮ್ಮ ಎಂದಾಗಿದೆ. ಉತ್ಸವ ವಿಗ್ರಹಕ್ಕೂ ಎಂಟು ಕೈಗಳಿವೆ. ಉತ್ಸವ ಮೂರ್ತಿಯ ಕೊರಳಲ್ಲಿರುವ ಬಂಗಾರದ ಪದಕದಲ್ಲಿ ಕೆತ್ತಿರುವಂತೆ ಇದು ಮೈಸೂರು ಅರಸರಾದ ಚಾಮರಾಜ ಒಡೆಯರ ಮಹಾರಾಣಿಯವರಾದ ದೇವರಾಜಮ್ಮಣ್ಣಿಯವರು ಕೊಟ್ಟಿದ್ದೆಂದು ತಿಳಿದುಬರುತ್ತದೆ.

ಕೆಂಪೇಗೌಡನ ಹಜಾರದ ಪೂರ್ವಕ್ಕೆ ಚಕ್ರತೀರ್ಥ ಎಂಬ ಕೊಳವಿದೆ.

ಆದರಿಂದ ಮೇಲು ಭಾಗಕ್ಕೆ ಅಂದರೆ ಪಶ್ಚಿಮ ದಿಕ್ಕಿಗೆ ಶಂಕರಾಚಾರ್ಯ ಎಂಬ ತೀರ್ಥವಿದೆ. ಅದ್ವೈತ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀ ಶಂಕರಾಚಾರ್ಯರು ಇಲ್ಲಿ ತಪಸ್ಸು ಮಾಡಿದ್ದರೆಂದು ಹೇಳಲಾಗಿದೆ. ಉತ್ತರದ ಇಳಿಜಾರಿನಲ್ಲಿರುವ ಒಂದು ಪುಟ್ಟ ಕೆರೆಗೆ ಮೈತ್ರೇಯ ತೀರ್ಥ ಎಂದು ಹೆಸರು. ಪಶ್ಚಿಮ ಇಳಿಜಾರಿನಲ್ಲಿರುವ ಗಂಗಾ ತೀರ್ಥದ ಬಳಿ "ಪಾಪಧಾರೆ" ಎಂಬ ಬಂಡೆ ಇದೆ. ಆದರ ಮೇಲೆ ಶಿವ ಹಾಗೂ ಪಾರ್ವತಿಯರ ಎರಡು ಜೊತೆ ಹೆಜ್ಜೆಗಳಿವೆ.

ಶಾಂತೇಶ್ವರ ದೇವಸ್ಥಾನವು ಪುರಾತನವಾದ ಶಿಲ್ಪಕಲೆಯಿಂದ ಕೂಡಿದ್ದು ಹೊಯ್ಸಳ ಶೈಲಿಯಲ್ಲಿದೆ. ಇಲ್ಲಿಯ ದೀಪಸ್ತಂಭವು ಇಪ್ಪತ್ತೆರಡು ಮೀಟರುಗಳಷ್ಟು ಎತ್ತರವಿದ್ದು ಇದರ ಮೇಲುಭಾಗದ ನಾಲ್ಕು ದಿಕ್ಕಿನಲ್ಲಿ ನಾಲ್ಕು ಗಂಟೆಗಳನ್ನು ನೇತುಹಾಕಿದ್ದರೆಂದೂ ಇದರಿಂದಾಗಿ ಈ ಕಂಬಕ್ಕೆ ಗಂಟೆ ಕಂಬ ಎಂದೂ ಕರೆಯುತ್ತಾರೆ. 1134ರಲ್ಲಿ ಹೊಯ್ಸಳೇಶ್ವರ ವಿಷ್ಣುವರ್ಧನನ ಮಡದಿಯಾದ ಶಾಂತಲಾದೇವಿಯು ಇಲ್ಲಿ ಪ್ರಾಣಾರ್ಪಣೆ ಮಾಡಿಕೊಂಡಳೆಂದೂ ಈ ಕಾರಣದಿಂದಾಗಿ ಇಲ್ಲಿಯ ದೇವಸ್ಥಾನಕ್ಕೆ " ಶಾಂತೇಶ್ವರ ದೇವಸ್ಥಾನ " ಎಂದು ಕರೆಯುತ್ತಾರೆ.

ಬೆಟ್ಟದ ಪಶ್ಚಿಮಕ್ಕೆ ಮಹಂತರ ಮಠ ಎಂಬ ವೀರಶೈವರ ಮಠವಿದೆ. ಒಂದು ಕಾಲದಲ್ಲಿ ಶಿವಗಂಗೆಯಲ್ಲಿ ಅರವತ್ತನಾಲ್ಕು ವೀರಶೈವ ಮಠಗಳಿದ್ದವೆಂದು ಹೇಳುತ್ತಾರೆ.

ಬೆಟ್ಟದ ಕೆಳಭಾಗದಲ್ಲಿ ಶಂಕರಾಚಾರ್ಯರ ಮಠವಿದೆ. ಗಂಗಾಧರೇಶ್ವರ ದೇವಸ್ಥಾನವು ಇಲ್ಲಿದ್ದು, ಮಠದ ಹಿಂಭಾಗಕ್ಕೆ ಶಂಕರ, ಶಾರದಾಂಬ ಹಾಗೂ ಚಂದ್ರಮೌಳೇಶ್ವರ ಸ್ವಾಮಿಯ ಚಿಕ್ಕ ದೇವಸ್ಥಾನಗಳಿವೆ. ಇಲ್ಲಿಯ ಅಗಸ್ತ್ಯ ತೀರ್ಥದ ಸುತ್ತಲೂ ನೂರ ಎಂಟು ಲಿಂಗಗಳನ್ನು ಸ್ಥಾಪಿಸಲಾಗಿದೆ.

ಶಿವಗಂಗೆ ಬೆಟ್ಟದ ತುಟ್ಟತುದಿಗೆ ಕುಂಬಿ ಬೆಟ್ಟ ಎಂದು ಕರೆಯಲಾಗುತ್ತದೆ. ಇಲ್ಲಿ ಎರಡು ಕಂಬಗಳಿದ್ದು ಒಂದಕ್ಕೆ ಜಲಸ್ತಂಭವೆಂದೂ ಮತ್ತೊಂದಕ್ಕೆ ದೀಪಸ್ತಂಭವೆಂದೂ ಕರೆಯುತ್ತಾರೆ. ಮಕರ ಸಂಕ್ರಾಂತಿಯಂದು ಜಲಸ್ತಂಭದಲ್ಲಿ ತೀರ್ಥ ಉದ್ಭವವಾಗುತ್ತದೆ.

ಅನೇಕ ತೀರ್ಥಗಳನ್ನು ಹೊಂದಿ ಅನೇಕ ಪುಣ್ಯಪುರುಷರ ಆವಾಸಸ್ಥಾನವಾಗಿದ್ದು, ವಿಹಾರಾರ್ಥಿಗಳಿಗೆ, ವಿಹಾರಧಾಮವೂ ಆಗಿ ಕಂಗೊಳಿಸುತ್ತಿರುವ ಶಿವಗಂಗಾ ಕ್ಷೇತ್ರದರ್ಶನ ಇಹಕ್ಕೆ ಸುಖವನ್ನೂ ಪರಕ್ಕೆ ಮೋಕ್ಷವನ್ನೂ ನೀಡುವುದರಲ್ಲಿ ಸಂದೇಹವೇ ಇಲ್ಲ.

## ಬನ್ನೇರುಘಟ್ಟದ ಚಂಪಕಧಾಮಸ್ವಾಮಿ

ಬನ್ನೇರುಘಟ್ಟ ಬೆಂಗಳೂರಿನ ದಕ್ಷಿಣಕ್ಕೆ ಇಪ್ಪತ್ತೆರಡು ಕಿಲೋಮೀಟರ್ ದೂರದಲ್ಲಿದೆ. ಬನ ಎಂದರೆ ಕಾಡು. ಘಟ್ಟ ಎಂದರೆ ಬೆಟ್ಟಗಳಿಂದ ಕೂಡಿದ್ದು ಎಂದು ಅರ್ಥ ಬರುತ್ತದೆ. ಈ ಕಾರಣದಿಂದಾಗಿಯೇ ಈ ಪ್ರದೇಶಕ್ಕೆ ಬನ್ನೇರುಘಟ್ಟ ಎಂದು ಹೆಸರು ಬಂದಿದೆ.

ಆನೇಕಲ್ಲು ತಾಲ್ಲೂಕಿಗೆ ಸೇರಿದ ಈ ಸ್ಥಳವು ಪವಿತ್ರ ಯಾತ್ರಾಸ್ಥಳವಾಗಿದ್ದು, ಇಲ್ಲಿಯ ಬೆಟ್ಟದಲ್ಲಿ "ಚಂಪಕಧಾಮ ಸ್ವಾಮಿ" ದೇವಸ್ಥಾನವಿದೆ. ಸಮುದ್ರ ಮಟ್ಟಕ್ಕೆ 3271 ಅಡಿಗಳ ಎತ್ತರವಿದ್ದು ತಂಪಾದ ಹವಾಗುಣದಿಂದಲೂ ಕಂಗೊಳಿಸುತ್ತಿದ್ದು ಪ್ರವಾಸಿಗಳು ಹಾಗೂ ಯಾತ್ರಾರ್ಥಿಗಳನ್ನು ಆಕರ್ಷಿಸುವ ಕೇಂದ್ರವಾಗಿದೆ.

ಬನ್ನೇರುಘಟ್ಟದ ಮೂಲ ದೇವರಾದ ಸಂಪಂಗಿ ರಾಮಸ್ವಾಮಿಯ ರಥೋತ್ಸವವು ಫಾಲ್ಗುಣ ಬಹುಳ ಅಷ್ಟಮಿಯಂದು ಪ್ರಾರಂಭವಾಗಿ ಸುಮಾರು ಹತ್ತು ದಿನಗಳು ಅನೇಕ ಉತ್ಸವಾದಿಗಳು ನಡೆಯುತ್ತವೆ. ಈ ಸಂದರ್ಭದಲ್ಲಿ ಸಾವಿರಾರು ಭಕ್ತಾದಿಗಳು ಆಗಮಿಸಿ ಸ್ವಾಮಿಯ ರಥೋತ್ಸವ ಇತ್ಯಾದಿಗಳಲ್ಲಿ ಭಾಗವಹಿಸಿ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿ ಕೊಡುತ್ತಾರೆ.

ಬನ್ನೇರುಘಟ್ಟದ ಕ್ಷೇತ್ರ ಮೂರ್ತಿಯಾದ ಚಂಪಕಧಾಮ ಸ್ವಾಮಿಗೆ ಸಂಪಂಗಿ ರಾಮಸ್ವಾಮಿ ಎಂದು ಕರೆಯುತ್ತಾರೆ, ಕಾರಣ, ಪ್ರತಿದಿನವೂ ಈ ದೇವರಿಗೆ ಸಂಪಿಗೆ ಪುಷ್ಪಾರ್ಚನೆ ಆಗಲೇಬೇಕೆಂಬ ಸಂಪ್ರದಾಯ ನಡೆದು ಬಂದಿರುತ್ತದೆ.

ಈ ದೇವಾಲಯವು ಕೃತಯುಗದಿಂದಲೂ ಇದ್ದು ದುರ್ವಾಸಾದಿ ಮಹಾ ಮುನಿಗಳು ಈ ದೇವರನ್ನು ಪೂಜಿಸಿರುತ್ತಾರೆ. ತ್ರೇತಾಯುಗದಲ್ಲಿ ಜನಕ ಮಹಾರಾಜನಿಂದ ಈ ದೇವಸ್ಥಾನದ ಜೀರ್ಣೋದ್ಧಾರವಾಯಿತೆಂದು ಪ್ರತೀತಿ.

ದೇವಸ್ಥಾನವನ್ನು ಪ್ರವೇಶಿಸುವಾಗ ಮಹಾದ್ವಾರವೆಂದು ಕರೆಯಲ್ಪಡುವ ಭವ್ಯವಾದ ಮಂಟಪವಿದೆ. ಮಹಾದ್ವಾರವನ್ನು ದಾಟಿ ಒಳಗೆ ಪ್ರವೇಶಿಸುತ್ತಿದ್ದಂತೆಯೇ ಧ್ವಜಸ್ತಂಭದ ಪೀಠದಲ್ಲಿ ಶಾಸನಗಳನ್ನು ಕೆತ್ತಲಾಗಿದೆ. ಇಲ್ಲಿಂದ ಮುಂದಕ್ಕೆ ಕೆಲವು ಮೆಟ್ಟಿಲುಗಳನ್ನು ಹತ್ತಿ ಹೋದರೆ ಒಳಭಾಗದಲ್ಲಿ ಒಂದು ಪುಟ್ಟ ಪ್ರಾಕಾರವಿದ್ದು ಮಧ್ಯದಲ್ಲಿ ಗರ್ಭಗುಡಿ ಇದೆ. ಗರ್ಭಗುಡಿಯ ಇಕ್ಕೆಲಗಳಲ್ಲಿಯೂ ಸುಮಾರು ಒಂದು ಮೀಟರ್ ಅಂದರೆ ಮೂರು ಅಡಿ ಎತ್ತರದ ಜಯ-ವಿಜಯರ ವಿಗ್ರಹಗಳಿವೆ. ಗರ್ಭಗುಡಿಯ ಒಳಭಾಗದಲ್ಲಿ ಶ್ರೀದೇವಿ ಮತ್ತು ಭೂದೇವಿ ಸಹಿತನಾದ ಚಂಪಕಧಾಮಸ್ವಾಮಿಯ ದಿವ್ಯಮೂರ್ತಿ ಕಂಗೊಳಿಸುತ್ತಿದೆ. ಚಂಪಕಧಾಮಸ್ವಾಮಿಯ ವಿಗ್ರಹವು ಒಂದು ಅಡಿ ಪೀಠದ ಮೇಲೆ ಸುಮಾರು ಮೂರುವರೆ ಅಡಿ ಎತ್ತರವಿದ್ದು, ಮೇಲಿನ ಎರಡೂ ಕೈಗಳಲ್ಲಿ ಶಂಖ-ಚಕ್ರವನ್ನೂ ಕೆಳಗಿನ ಎರಡೂ ಕೈಗಳಲ್ಲಿ ಅಭಯ ಮುದ್ರಿಕೆಯನ್ನು ಹೊಂದಿದ್ದು, ಕಪ್ಪು ಶಿಲೆಯಿಂದ ಕೂಡಿದುದಾಗಿದೆ.

ದೇವಸ್ಥಾನದ ಒಂದು ಭಾಗದಲ್ಲಿ ವರಾಹ, ಕತ್ತಿ ಲಾಂಛನಗಳನ್ನು ಗಮನಿಸಿದಾಗ ಈ ದೇವಸ್ಥಾನವು ಚೋಳರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿರಬಹುದೆಂದು ಊಹಿಸಬಹುದಾಗಿದೆ. ಅನೇಕ ಕಂಬಗಳಿಂದ ಕೂಡಿರುವ ಈ ದೇವಸ್ಥಾನವು ಭವ್ಯವಾಗಿ ಕಟ್ಟಲ್ಪಟ್ಟಿದ್ದು ನೋಡಲು ಮನೋಹರವಾಗಿದೆ ಪ್ರವೇಶದ್ವಾರದ ಬಲಭಾಗಕ್ಕೆ ಲಕ್ಷ್ಮೀದೇವಿಯರ ದೇವಸ್ಥಾನವಿದೆ. ಈ ದೇವಸ್ಥಾನದ ನವರಂಗದಲ್ಲಿ ವಿಶೇಷ ಉತ್ಸವಾದಿ ಸಂದರ್ಭಗಳಲ್ಲಿ ಉಪಯೋಗಿಸುವಂತಹ ಗರುಡ, ಶೇಷ, ಹಯಗಜ ಇತ್ಯಾದಿ ವಾಹನಗಳನ್ನು ಇಡಲಾಗಿದೆ.

**ಬೆಟ್ಟದ ನರಸಿಂಹ :**

ಚಂಪಕಧಾಮಸ್ವಾಮಿ ದೇವಸ್ಥಾನದ ಎಡಭಾಗದಿಂದ ಬೆಟ್ಟವನ್ನು ಹತ್ತಲು ಮೆಟ್ಟಿಲುಗಳನ್ನು ಕಡೆಯಲಾಗಿದೆ. ಬೃಹತ್ ಬಂಡೆಯಾಕಾರದಲ್ಲಿ

ರುವ ಈ ಬೆಟ್ಟವನ್ನು ಹತ್ತಿಹೋದರೆ ಮೇಲ್‌ಭಾಗದಲ್ಲಿ ಶ್ರೀ ನರಸಿಂಹಸ್ವಾಮಿ ದೇವಸ್ಥಾನವಿದೆ. ದೇವಸ್ಥಾನದ ವಾಸ್ತುಶಿಲ್ಪವನ್ನು ಗಮನಿಸಿದಾಗ ಈ ದೇವಸ್ಥಾನವು ಅಷ್ಟೊಂದು ಪುರಾತನವಲ್ಲದ್ದೆಂದು ತೋರುತ್ತದೆ.

ಇಲ್ಲಿನ ಗರ್ಭಗುಡಿಯಲ್ಲಿ ಸುಮಾರು ನಾಲ್ಕು ಅಡಿ ಎತ್ತರವಿರುವ ಶ್ರೀ ನರಸಿಂಹಸ್ವಾಮಿಯ ವಿಗ್ರಹವಿದೆ. ಅಲ್ಲಿಂದ ಮುಂದಕ್ಕೆ ಬೆಟ್ಟದ ಶಿಖರಾಗ್ರದಲ್ಲಿ ಒಂದು ಕಲ್ಲಿನ ಕಂಬವನ್ನು ನಿಲ್ಲಿಸಿದ್ದು ಅದರ ಮೇಲೆ ಒಂದು ದೊಡ್ಡ ಮಣ್ಣಿನ ಹಣತೆಯನ್ನು ಇಡಲಾಗಿದೆ. ಯಾತ್ರಾರ್ಥಿಗಳು ಈ ಹಣತೆಯಲ್ಲಿ ದೀಪಗಳನ್ನು ಹಚ್ಚುವ ಸಂಪ್ರದಾಯ ನಡೆದು ಬಂದಿದೆ. ಈ ಜ್ಯೋತಿಯನ್ನು ಬಹು ದೂರದವರೆಗೆ ಕಾಣಬಹುದು.

**ಸುವರ್ಣಮುಖಿ :**

ಶ್ರೀ ನರಸಿಂಹಸ್ವಾಮಿ ದೇವಸ್ಥಾನದ ಪಶ್ಚಿಮಾಭಿಮುಖವಾಗಿ ಸುಮಾರು ಎರಡು ಕಿಲೋಮೀಟರ್ ದೂರಹೋದರೆ "ಸುವರ್ಣಮುಖಿ" ಎಂಬ ಕ್ಷೇತ್ರವು ಸಿಗುತ್ತದೆ. ಈ ಕ್ಷೇತ್ರವನ್ನು ತಲುಪುತ್ತಿದ್ದಂತೆ ಮುಂಭಾಗದಲ್ಲಿ ಪುಟ್ಟ ದೇವಸ್ಥಾನವಿದೆ. ಇದರಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಪ್ರಾಣದೇವರ ವಿಗ್ರಹವಿದೆ. ಇದರ ಮುಂಭಾಗದಲ್ಲಿ ನಂದಿಯ ವಿಗ್ರಹವಿದೆ. ಈ ವಿಗ್ರಹದ ಮುಂಭಾಗಕ್ಕೆ ಒಂದು ಅಡಿ ಎತ್ತರವಿರುವ ಗಣೇಶನ ವಿಗ್ರಹವಿದೆ. ಇದರ ಮುಂಭಾಗದಲ್ಲಿ ನಂದಿಯ ವಿಗ್ರಹವಿದೆ. ಪ್ರಾಣದೇವರ ಹಾಗೂ ರುದ್ರದೇವರ ವಿಗ್ರಹಗಳು ಒಂದೇ ಗರ್ಭಗುಡಿಯಲ್ಲಿರುವುದು ಈ ಸ್ಥಳದ ಒಂದು ವಿಶೇಷ. ಈ ಗುಡಿಯ ಹಿಂಭಾಗದಲ್ಲಿ ಅಶ್ವತ್ಥ ವೃಕ್ಷವಿದ್ದು ಇದರ ಬಲಭಾಗಕ್ಕೆ ಚಚ್ಚೌಕವಾದ ಸೋಪಾನದಿಂದ ಕೂಡಿದ ನುಣುಪಾದ ಮೆಟ್ಟಲುಗಳಿಂದ ಕೂಡಿದ ಒಂದು ಕೊಳವನ್ನು ಕಾಣಬಹುದು. ಇದೇ "ಸುವರ್ಣಮುಖಿ" ನದಿಯ ಜನ್ಮಸ್ಥಾನ. ಇಲ್ಲಿಯ ತಿಳಿಯಾದ ನೀರು ಅತ್ಯಂತ ರುಚಿಕರವಾಗಿದ್ದು ತತ್ಕಾಪಿ ಬೇಸಿಗೆ ದಿನಗಳಲ್ಲಿ ಯಾತ್ರಿಕರ ಹೃನ್ಮನಗಳನ್ನು ತಣಿಸುವ ಸಾಧನವಾಗಿದೆ.

ಈ ನದಿಯ ಪಶ್ಚಿಮದ ದಂಡೆಯ ಮೇಲೆ ಪೂರ್ವಾಭಿಮುಖವಾಗಿ ಸುಮಾರು ಎರಡೂವರೆ ಅಡಿ ಎತ್ತರವಿರುವ ಪ್ರಾಣದೇವರ ವಿಗ್ರಹವಿದೆ.

ಇದಕ್ಕೆ ಸುತ್ತಲೂ ನಾಲ್ಕು ಕಂಬಗಳಿಂದ ಕೂಡಿದ ಒಂದು ಮಂಟಪವನ್ನು ಕಟ್ಟಲಾಗಿದೆ.

ಸುವರ್ಣಮುಖಿ ನದಿಯ ದಂಡೆಯ ಮೇಲೆ ಅಂಬಾಭವಾನಿ ಆಶ್ರಮ ಇದೆ. ಅಲ್ಲಿ ಭೂತಗ್ರಹ ಪೀಡೆ ಇತ್ಯಾದಿಗಳನ್ನು ಬಿಡಿಸುತ್ತಾರೆ.

ಸುವರ್ಣಮುಖಿಯಲ್ಲಿ ಶ್ರದ್ಧಾಭಕ್ತಿಪೂರ್ವಕವಾಗಿ ಸ್ನಾನ ಮಾಡಿ ಭಕ್ತಿಯಿಂದ ಶ್ರೀ ಚಂಪಕಧಾಮಸ್ವಾಮಿಯ ಸೇವಾದಿಗಳನ್ನು ಮಾಡಿದವರಿಗೆ ವಿಶೇಷ ಫಲಪ್ರಾಪ್ತಿಯಾಗುತ್ತದೆಂದು ನಂಬಿಕೆ. ಸಂತಾನ ಪ್ರಾಪ್ತಿಗಾಗಿ ಇದೇ ಕ್ರಮದಲ್ಲಿ ಸ್ವಾಮಿಯ ಸೇವೆಯನ್ನು ಮಾಡುವುದು ಇಲ್ಲಿನ ಸಂಪ್ರದಾಯ ವಾಗಿದೆ.

ನಿಬಿಡವಾದ ನಿಸರ್ಗಸೌಂದರ್ಯದಿಂದ ಕೂಡಿರುವ ಇಲ್ಲಿನ ಸುವರ್ಣ ಮುಖಿ ಪ್ರದೇಶವು ಪವಿತ್ರ ಯಾತ್ರಾಸ್ಥಳ ಮಾತ್ರವಲ್ಲದೆ ವಿಹಾರಯೋಗ್ಯ ವಾದ ಪ್ರಶಾಂತ ಸ್ಥಳವಾಗಿದೆ. ನಗರದಿಂದ ಇಲ್ಲಿಗೆ ಬಿ.ಟಿ.ಎಸ್. ಬಸ್ ಸೌಲಭ್ಯವಿದ್ದು ಹೋಗಿಬರಲು ಅನುಕೂಲವಿದೆ. ರಜಾ ದಿನಗಳಲ್ಲಿ ಹಾಗೂ ಬಿಡುವಿನ ವೇಳೆಯಲ್ಲಿ ಈ ಚಂಪಕಧಾಮ ಸ್ವಾಮಿಯ ಸನ್ನಿಧಾನವು ವಿಶ್ರಾಂತಿ ಧಾಮವೂ ಆಗಿದ್ದು ಆಸ್ತಿಕ ಪ್ರತಿಪಾದನೆಯ ಭವ್ಯ ಕೇಂದ್ರವಾಗಿದೆ.

## ರಾಮಲಿಂಗೇಶ್ವರ ಗುಹಾಂತರ ದೇವಾಲಯ

ಬೆಂಗಳೂರಿನ ದಕ್ಷಿಣಕ್ಕೆ ಹದಿಮೂರು ಕಿಲೋಮೀಟರ್ ದೂರದಲ್ಲಿರುವ "ಹುಳಿಮಾವು" ಪುರಾತನ ಗುಹಾಂತರ ಶಿಲಾ ದೇವಾಲಯಕ್ಕೆ ಪ್ರಖ್ಯಾತ ವಾಗಿದೆ.

ಇನ್ನೂರು ಅಡಿ ಅಗಲ ಹಾಗೂ ನೂರಿಪ್ಪತ್ತು ಅಡಿ ಉದ್ದ ವಿಸ್ತೀರ್ಣ ವುಳ್ಳ ಈ ದೇವಾಲಯ ಪ್ರೇಕ್ಷಣೀಯ ಸ್ಥಳವಾಗಿದೆ. ಯಾವುದೇ ಆಧಾರ ವಿಲ್ಲದೆ ಚಾಚಿಕೊಂಡು ಸಾಕಷ್ಟು ಗಾತ್ರದಿಂದ ಕೂಡಿದ ಬಂಡೆಯಲ್ಲಿ ಯಾವುದೇ ಕೆತ್ತನೆ ಮಾಡಿದ ಉಳಿ ಏಟಿನ ಗುರುತುಗಳು ಕಾಣಬರುವುದಿಲ್ಲ.

ಪಲ್ಲವರ ಕಾಲದಲ್ಲಿ ಈ ರೀತಿಯ ದೇವಾಲಯಗಳು ಸಾಮಾನ್ಯ ವಾದರೂ ಶಿಲಾಶಾಸ್ತ್ರಜ್ಞ ಹಾಗೂ ಸಂಶೋಧಕ ಡಾ॥ ಎನ್. ಆರ್. ರಾವ್

ರವರ ಅಭಿಪ್ರಾಯದಂತೆ ಈ ಗುಹೆ ಶಿಲಾಯುಗದ ಮಾನವರು ವಾಸ ಮಾಡುತ್ತಿದ್ದ ಸ್ಥಳವೆಂದು ತಿಳಿದು ಬರುತ್ತದೆ. ಇದನ್ನು ಪುಷ್ಟೀಕರಿಸಲು ಇಲ್ಲಿ ಬೂದಿಯ ರಾಶಿಯೇ ದೊರೆತಿದೆ.

ಹುಳಿಮಾವಿಗೆ ಹಿಂದೆ ಆಮ್ರಾಪುರ ಎಂದು ಹೆಸರಿದ್ದಿತೆಂದು ಕ್ರಿ.ಶ. 1652ರ ಒಂದು ದಾಖಲೆಯಿಂದ ತಿಳಿದು ಬರುತ್ತದೆ. ಆಮ್ರ ಎಂದರೆ ಮಾವು ಎಂದು ಅರ್ಥ ಬರುತ್ತಿದ್ದು ಹಾಗೂ ಇಲ್ಲಿ ಬೆಳೆಯುವ ಮಾವು ಹುಳಿಯಾಗಿರುತ್ತಿದ್ದರಿಂದ ಕಾಲಕ್ರಮೇಣ ಈ ಊರಿಗೆ "ಹುಳಿಮಾವು" ಎಂದು ಹೆಸರು ಬಂದಿರಬೇಕು.

ಗುಹೆಯ ಎಡ ಭಾಗದಲ್ಲಿ ಗುಡಿಯೊಂದಿದ್ದು ಪಾಣಿಪೀಠದ ಮೇಲೆ ಲಿಂಗವನ್ನು ಪ್ರತಿಷ್ಠಾಪಿಸಿದ್ದಾರೆ. ಈ ಲಿಂಗವನ್ನು ರಾಮಲಿಂಗೇಶ್ವರ ಎಂದು ಕರೆಯುತ್ತಾರೆ. ಇದೇ ಆಲಯದಲ್ಲಿ ರಾಮ, ಲಕ್ಷ್ಮಣ ಹಾಗೂ ಸೀತೆಯ ಕಂಚಿನ ಉತ್ಸವ ಮೂರ್ತಿಗಳಿವೆ,

ಕಾರ್ತೀಕ ಮಾಸದಲ್ಲಿ ಇಲ್ಲಿ ಒಂದು ತಿಂಗಳ ಪರ್ಯಂತ ಉತ್ಸವಗಳು ನಡೆಯುತ್ತವೆ.

ಗುಹೆಯ ಹೊರ ಭಾಗದಲ್ಲಿ ಒಂದು ಗದ್ದುಗೆ ಇದ್ದು ಇದು ಶ್ರೀ ರಮಾನಂದಸ್ವಾಮಿಯವರದೆಂದು ಹೇಳುತ್ತಾರೆ. ಶ್ರೀಗಳವರು ಈಗ್ಗೆ ಹದಿನಾರು ವರ್ಷಗಳ ಹಿಂದೆ ಅನೇಕ ವರ್ಷಗಳ ಕಾಲ ಈ ಗುಹೆಯಲ್ಲಿ ವಾಸಿಸುತ್ತಿದ್ದು ರಾಮಲಿಂಗೇಶ್ವರ ಸ್ವಾಮಿಯನ್ನು ಪೂಜಿಸುತ್ತಿದ್ದರು. ಇವರ ಕಾಲದಲ್ಲಿ ಈ ಗುಹಾಂತರ ದೇವಾಲಯ ಬೆಳಕಿಗೆ ಬಂದು ಅನೇಕ ಭಕ್ತಾದಿಗಳನ್ನು ಆಕರ್ಷಿಸತೊಡಗಿದೆ. ಪ್ರತಿವರ್ಷ ಸ್ವಾಮೀಜಿಯವರ ಜಯಂತಿಯಂದು ಸಾಮೂಹಿಕ ವಿವಾಹಗಳು ನಡೆಯುತ್ತವೆ. ಇದೇ ಸಮಯದಲ್ಲಿ ರಾಮಲಿಂಗೇಶ್ವರ ಜಾತ್ರೆಯೂ ನಡೆಯುತ್ತದೆ.

ಹುಳಿಮಾವಿನಲ್ಲಿ ಗಂಗರ ಕಾಲದ್ದೆಂದು ಹೇಳಲಾದ ಸೋಮೇಶ್ವರ ದೇವಸ್ಥಾನವಿದೆ. ಎತ್ತರವಾದ ಲಿಂಗವನ್ನು ಗಮನಿಸಿದಾಗ ಇದು ಚೋಳರ ಕಾಲದ್ದೆಂದು ಊಹಿಸಬಹುದಾದರೂ ಪಾಣೀಪೀಠ ಗಂಗರ ಕಾಲದ ಶಿಲ್ಪಕಲೆಯನ್ನು ಹೋಲುತ್ತದೆ.

ಗರ್ಭಗುಡಿಯು ಮುಂದಿರುವ ನವರಂಗದಲ್ಲಿ ವಿಜಯನಗರ ಸಾಮ್ರಾಜ್ಯದ ಪೂರ್ವದ ಸ್ಥಂಭಗಳಿವೆ. ದೇವಾಲಯದ ಹೊರ ಅಂಗಳದಲ್ಲಿ ಭಿನ್ನವಾಗಿರುವ ಸೂರ್ಯದೇವನ ವಿಗ್ರಹವಿದೆ. ದೇವಾಲಯದ ಒಳಭಾಗದಲ್ಲಿ ಸೂರ್ಯ ಹಾಗೂ ಭೈರವ ದೇವರ ವಿಗ್ರಹಗಳಿವೆ. ಎರಡು ಶಿಲಾ ಬಾಲಿಕೆಯರ ವಿಗ್ರಹಗಳೂ ಇಲ್ಲಿ ಕಾಣಬರುತ್ತವೆ.

ಹುಳಿಮಾವಿನ ಇತರೆ ದೇವಸ್ಥಾನಗಳೆಂದರೆ ಮುತ್ತುರಾಯ (ಆಂಜನೇಯ) ಹಾಗೂ ಪ್ರಾಣದೇವರ ದೇವಸ್ಥಾನಗಳಿವೆ. ರಾಮ ಮಂದಿರವೂ ಇಲ್ಲಿದ್ದು ಇತ್ತೀಚೆಗೆ ಇಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳ ಬೃಂದಾವನವನ್ನು ಪ್ರತಿಷ್ಠಾಪಿಸಿರುತ್ತಾರೆ. ಪ್ರತಿ ವರ್ಷದ ಶ್ರಾವಣಮಾಸದಲ್ಲಿ ಇಲ್ಲಿ ಮೂರು ದಿನಗಳ ಕಾಲ ಸ್ವಾಮಿಗಳವರ ಆರಾಧನಾಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ನಡೆಯುತ್ತದೆ.

ಬೆಂಗಳೂರು ಜಿಲ್ಲೆಯಲ್ಲಿ ನೋಡಲೇಬೇಕಾದ ಸ್ಥಳಗಳಲ್ಲಿ ಹುಳಿಮಾವೂ ಒಂದಾಗಿದೆ.

## ರಾಜರಾಜೇಶ್ವರಿ ದೇವಸ್ಥಾನ

ಕೆಂಚೇನಹಳ್ಳಿ ಬೆಂಗಳೂರಿನ ಪಶ್ಚಿಮಕ್ಕೆ ಹನ್ನೊಂದು ಕಿಲೋ ಮೀಟರ್ ದೂರದಲ್ಲಿದೆ. ಈಗ ಈ ಹಳ್ಳಿಗೆ ರಾಜೇಶ್ವರಿ ನಗರವೆಂದು ಹೆಸರಿಡಲಾಗಿದೆ.

1960ರಲ್ಲಿ ತಮಿಳುನಾಡಿನ ತಿರುಚಿಯಿಂದ ಬಂದ ಸ್ವಾಮೀಜಿಯೊಬ್ಬರು ಇಲ್ಲಿ ಚಿಕ್ಕದಾದ ಮಠ ಸ್ಥಾಪಿಸಿ, ಗೋಸಂರಕ್ಷಣೆ ಹಾಗೂ ಅನೇಕ ಸಾಮಾಜಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಕಾಲಕ್ರಮೇಣ ಆಶ್ರಮದ ಆರ್ಥಿಕ ಸ್ಥಿತಿ ಉತ್ತಮಗೊಂಡು ಪಕ್ಕದ ಪ್ರದೇಶವನ್ನೆಲ್ಲಾ ಕ್ರಯಮಾಡಿ ಆಶ್ರಮವನ್ನು ವಿಸ್ತರಿಸಿದರು. ಈಗ ಮಠ ಸುಮಾರು ಹದಿಮೂರು ಎಕರೆ ಪ್ರದೇಶವನ್ನು ಹೊಂದಿದೆ.

ರಾಜರಾಜೇಶ್ವರಿ ದೇವಸ್ಥಾನವನ್ನು ದ್ರಾವಿಡ ಶೈಲಿಯಲ್ಲಿ ಕಟ್ಟಲಾಗಿದ್ದು ಹಿಂದಿನ ಚೋಳರ ಕಾಲದ ದೇವಸ್ಥಾನಗಳನ್ನು ನೆನಪಿಗೆ ತರುತ್ತದೆ. ಅತಿ

ವಿಶಾಲವಾದ ಈ ದೇವಸ್ಥಾನವನ್ನು ಮೂರುಭಾಗಗಳಾಗಿ ವಿಂಗಡಿಸಿದ್ದು ಮಹಾದ್ವಾರ, ಮುಖಮಂಟಪ ಹಾಗೂ ಗರ್ಭಗುಡಿಯಿಂದ ಕೂಡಿವೆ. ಈ ಮೂರು ವಿಭಾಗಗಳ ಮೇಲ್‌ಭಾಗದಲ್ಲೂ ರಾಯಗೋಪುರಗಳನ್ನು ನಿರ್ಮಿಸಲಾಗಿದೆ.

ವಿಶಾಲವಾದ ಮುಖಮಂಟಪವು ಅನೇಕ ಸುಂದರ ಕೆತ್ತನೆಗಳ ಸ್ಥಂಭಗಳಿಂದ ಕೂಡಿದೆ. ನವರಂಗವೂ ಸಾಕಷ್ಟು ದೊಡ್ಡ ಪ್ರಮಾಣದಲ್ಲಿದ್ದು ಪ್ರಾಕಾರದಿಂದ ಕೂಡಿದೆ.

ರಾಜರಾಜೇಶ್ವರಿ ಮಾತೆಯು ಕುಳಿತಿರುವ ಭಂಗಿಯಲ್ಲಿದ್ದು, ಬಲಗಾಲನ್ನು ಮಡಿಸಿ ಎಡಗಾಲನ್ನು ಕೆಳಗೆ ನೀಡಿರುವಂತಿದ್ದು ಸುಂದರವಾಗಿದೆ.

ರಾಜರಾಜೇಶ್ವರಿ ನಗರವನ್ನು ಪ್ರವೇಶಿಸುವ ಸ್ಥಳದಲ್ಲಿ ಭವ್ಯವಾದ ಮಹಾದ್ವಾರವನ್ನು ನಿರ್ಮಿಸಲಾಗಿದೆ.

ರಾಜರಾಜೇಶ್ವರಿ ದೇವಸ್ಥಾನದ ಬಲಭಾಗಕ್ಕೆ ಕೈಲಾಸಾಶ್ರಮವಿದೆ, ಆಶ್ರಮದ ಮುಂಭಾಗದ ಎರಡು ಪಕ್ಕಗಳಲ್ಲಿ ಮುನೇಶ್ವರ ಹಾಗೂ ವಿಘ್ನೇಶ್ವರ ದೇವಸ್ಥಾನಗಳಿವೆ. ವಿಘ್ನೇಶ್ವರನ ದೇವಸ್ಥಾನದ ಬಲಭಾಗಕ್ಕೆ ಗ್ರಂಥಾಲಯ ಹಾಗೂ ಅತಿಥಿ ಗೃಹವಿದೆ.

ಮಠದ ಹಿಂಭಾಗಕ್ಕೆ ಗೋಶಾಲೆ ಇದೆ. ಮಠದ ಸುತ್ತಲೂ ತೆಂಗಿನ ಮರ ಇತ್ಯಾದಿ ಅನೇಕ ಮರಗಿಡಗಳನ್ನು ಬೆಳೆಸಲಾಗಿದ್ದು ಇದೊಂದು ತಪೋವನವಾಗಿ ಕಾಣುತ್ತದೆ.

ಅಲ್ಲಿ ಅನೇಕ ಸನ್ಯಾಸಿಗಳಿದ್ದು ಅವರ್‍ಯಾರಿಗೂ ಕನ್ನಡ ಬರುವುದಿಲ್ಲ. ಇವರೆಲ್ಲರೂ ತಮಿಳುನಾಡಿನಿಂದ ಬಂದವರಾಗಿದ್ದು, ಆಶ್ರಮ ಪ್ರವೇಶ ಮಾಡಿದಂತೆ ನಾವು ತಮಿಳುನಾಡಿಗೆ ಹೋದಂತೆ ಭಾಸವಾಗುತ್ತದೆ.

ವೇದ ಪಾಠಶಾಲೆ ಹಾಗೂ ಒಂದು ಶಾಲೆಯನ್ನು ನಡೆಸುತ್ತಿರುವ ಈ ಆಶ್ರಮ ವಿಶಾಲವಾದ ಧಾರ್ಮಿಕ ಭಾವನೆಯನ್ನು ಹೊಂದಿದೆ.

ನವರಾತ್ರಿ ಉತ್ಸವವು ಇಲ್ಲಿ ವಿಜೃಂಭಣೆಯಿಂದ ಆಚರಿಸಲಾಗುತ್ತದೆ.

ಶ್ರೀರಾಮನವಮಿ ಮಕರಸಂಕ್ರಾಂತಿ ಹಾಗೂ ಸ್ವಾಮೀಜಿಯವರ ಜಯಂತಿ ಇಲ್ಲಿ ನಡೆಯುವ ಇತರೆ ಸಮಾರಂಭಗಳಾಗಿರುತ್ತವೆ.

ರಾಜರಾಜೇಶ್ವರ ದೇವಸ್ಥಾನ ಹಾಗೂ ಆಶ್ರಮದ ಮಧ್ಯೆ ಮತ್ತೊಂದು ದೇವಸ್ಥಾನದ ಕೆಲಸಕಾರ್ಯಗಳು ನಡೆಯುತ್ತಿದ್ದು ಅನೇಕ ಶಿಲ್ಪಿಗಳು ಕಾರ್ಯನಿರತರಾಗಿದ್ದಾರೆ.

ಬೆಂಗಳೂರಿನಲ್ಲೇ ಅತ್ಯಂತ ಭವ್ಯ ಹಾಗೂ ಶ್ರೀಮಂತ ದೇವಸ್ಥಾನ ರಾಜರಾಜೇಶ್ವರಿ ದೇವಸ್ಥಾನವಾಗಿದ್ದು, ಬೆಂಗಳೂರಿಗೆ ಬರುವ ಪ್ರವಾಸಿಗರೆಲ್ಲರೂ ಸಂದರ್ಶಿಸಲೇ ಬೇಕಾದ ಪುಣ್ಯಧಾಮವಾಗಿದೆ.

# ಬೆಂಗಳೂರು ಜಿಲ್ಲೆಯ ಪ್ರಮುಖ ದೇವಸ್ಥಾನಗಳು

## ಬೆಂಗಳೂರು ಉತ್ತರ

| | | | |
|---|---|---|---|
| 1. | ಧರ್ಮೇಶ್ವರ | ದೇವಸ್ಥಾನ | ಐವರ ಕಂಡಪುರ |
| 2. | ಗೋಪಾಲಕೃಷ್ಣ | " | " |
| 3. | ಆಂಜನೇಯ | " | " |
| 4. | ಪಾಂಡವರಿಂದ ಪ್ರತಿಷ್ಠಾಪಿಸಲ್ಪಟ್ಟ ಪಂಚಲಿಂಗಗಳು | ದೇವಸ್ಥಾನ | ಹೆಸರಘಟ್ಟ |
| 5. | ನರಸಿಂಹಸ್ವಾಮಿ | " | " |
| 6. | ಚಂದ್ರಮೌಳೇಶ್ವರ | " | " |
| 7. | ದನವಿನ ಮಾರಮ್ಮ | " | " |
| 8. | ಚಂಡಿಕಾಂಬ | " | " |
| 9. | ಕಾಳಿಕಾದೇವಿ | " | ಕಾಕೋಳು |
| 10. | ವೇಣುಗೋಪಾಲಸ್ವಾಮಿ | " | " |
| 11. | ವೀರಭದ್ರ ದೇವರ | " | " |
| 12. | ಆಂಜನೇಯ | " | " |
| 13. | ಬೆಂಕಿ ಮಾರಮ್ಮ | " | " |
| 14. | ಬತ್ತಿಲಿಂಗೇಶ್ವರ | " | " |
| 15. | ಬೀರೇದೇವರ | " | " |
| 16. | ಕರೆಮ್ಮ | " | " |

| | | | |
|---|---|---|---|
| 17. | ಕಾಳಮ್ಮ | ದೇವಸ್ಥಾನ | ಬ್ಯಾತ |
| 18. | ಶ್ರೀ ಲಕ್ಷ್ಮೀದೇವಿ | " | " |
| 19. | ಪೂಜಮ್ಮ | " | ಶ್ಯಾನುಭೋಗನ ಹಳ್ಳಿ |
| 20. | ಶ್ರೀರಾಮದೇವರ ಆಂಜನೇಯ | " | " |
| 21. | ಈಶ್ವರ | " | ಮತ್ಕೂರು |
| 22. | ಕೋದಂಡರಾಮ | " | ಬ್ಯಾಟರಾಯನ ಪುರ |
| 23. | ಆಂಜನೇಯಸ್ವಾಮಿ | " | ಹಾರೋಹಳ್ಳಿ ಪೋಸ್ಟ್ |
| 24. | ಚೆನ್ನಕೇಶವ | " | ಚಿಕ್ಕಜಾಲ |
| 25. | ಬಸವಣ್ಣನ | " | " |
| 26. | ಈಶ್ವರ | " | " |
| 27. | ಗಣೇಶ | " | " |
| 28. | ಅಕ್ಕ ತಂಗಿ ಬೆಟ್ಟದ | " | ಹುತ್ತನ ಹಳ್ಳಿ |
| 29. | ವೇಣುಗೋಪಾಲಸ್ವಾಮಿ | " | ಕಾಚರಕನ ಹಳ್ಳಿ |
| 30. | ಭೀಮೇಶ್ವರ | " | ಮಹಾಕಳಿ (ತ್ವರೆ ಛತ್ರ) |
| 31. | ಆಂಜನೇಯ | " | " |
| 32. | ಭೂತಪ್ಪನ | " | " |
| 33. | ವರದರಾಜಸ್ವಾಮಿ | " | ಸಿಂಗಾಪುರ |
| 34. | ಈಶ್ವರ | " | ಸೊಂಡೆಕೊಪ್ಪ |
| 35. | ಚೆನ್ನಕೇಶವ | " | " |
| 36. | ಚಂದ್ರಮೌಳೇಶ್ವರ | " | " |
| 37. | ವೇಣುಗೋಪಾಲಸ್ವಾಮಿ | " | ಯಲಹಂಕ |
| 38. | ವಿಶ್ವನಾಥೇಶ್ವರ | " | " |
| 39. | ಕೋಟೆ ಆಂಜನೇಯ | " | " |
| 40. | ವೀರಣ್ಣಸ್ವಾಮಿ | " | " |
| 41. | ನಗರೇಶ್ವರ | " | " |
| 42. | ಬಲೆ ಆಂಜನೇಯ | " | " |

| | | | |
|---|---|---|---|
| 43. | ನರಸಿಂಹಸ್ವಾಮಿ | ದೇವಸ್ಥಾನ | ಯಲಹಂಕ |
| 44. | ಪಾಂಡುರಂಗಸ್ವಾಮಿ | " | " |
| 45. | ಚೆನ್ನಕೇಶವ | " | " |
| 46. | ಆಂಜನೇಯಸ್ವಾಮಿ | " | ಭೈರಾಪುರ |

ಬೆಂಗಳೂರು ದಕ್ಷಿಣ

| | | | |
|---|---|---|---|
| 47. | ವೆಂಕಟರಮಣಸ್ವಾಮಿ | ದೇವಸ್ಥಾನ | ಭೈರಾಪುರ |
| 48. | ರಾಮದೇವರ | " | " |
| 49. | ಸೋಮೇಶ್ವರ | " | " |
| 50. | ಕರಗದಮ್ಮ | " | " |
| 51. | ಸೋಮೇಶ್ವರ | " | ಮಡಿವಾಳ |
| 52. | ಸಂಜೀವರಾಯಸ್ವಾಮಿ | " | ಇಂದಲವಾಡಿ |
| 53. | ಆಂಜನೇಯ | " | " |
| 54. | ಚಂಪಕಧಾಮಸ್ವಾಮಿ | " | ಬನ್ನೇರುಘಟ್ಟ |
| 55. | ನರಸಿಂಹಸ್ವಾಮಿ | " | " |
| 56. | ರಾಮಲಿಂಗೇಶ್ವರ ಗುಹಾಂತರ | " | ಹುಳಿಮಾವು |
| 57. | ಸೋಮೇಶ್ವರ | " | " |
| 58. | ಶ್ರೀ ರಾಘವೇಂದ್ರಸ್ವಾಮಿಗಳ | " | " |
| 59. | ಮುತ್ತುರಾಯ | " | " |
| 60. | ವರದರಾಜಸ್ವಾಮಿ | " | ಜಿಗಣಿ |
| 61. | ಚನ್ನಕೇಶವ | " | ಹಾರವರ ಗದ್ದೆ |
| 62. | ನಗರೇಶ್ವರ | " | ಬೇಗೂರು |
| 63. | ಚೋಳೇಶ್ವರ | " | " |
| 64. | ಕಾಶಿವಿಶ್ವೇಶ್ವರ | " | ಬಿದರಹಳ್ಳಿ |
| 65. | ಗುಂಡು ಹನುಮಂತರಾಯ | " | " |
| 66. | ಸೋಮೇಶ್ವರ | " | " |

| | | | |
|---|---|---|---|
| 67. | ಗೋಪಾಲಸ್ವಾಮಿ | ದೇವಸ್ಥಾನ | ಬಿದರಹಳ್ಳಿ |
| 68. | ಮದ್ದೂರಮ್ಮ | " | " |
| 69. | ಸೋಮೇಶ್ವರ | " | ಕಾಚರಕನಹಳ್ಳಿ |
| 70. | ಚೆನ್ನಕೇಶವ | " | " |
| 71. | ಗೋಪಾಲಸ್ವಾಮಿ | " | ಲಿಂಗರಾಜಪುರ |
| 72. | ಶಂಕರಾಚಾರ್ಯರ ಮಠ | " | " |
| 73. | ಕಾಶಿ ವಿಶ್ವೇಶ್ವರ | " | ಕಾಡುಗೋಡಿ |
| 74. | ನಂಜುಂಡೇಶ್ವರ | " | " |
| 75. | ಆಂಜನೇಯ | " | " |
| 76. | ರಾಜರಾಜೇಶ್ವರಿ | " | ಕೆಂಚೇನಹಳ್ಳಿ |
| 77. | ಶ್ರೀರಾಮ ದೇವರ | " | ಕೆಂಗೇರಿ |
| 78. | ಸೋಮೇಶ್ವರ | " | " |
| 79. | ಆಂಜನೇಯ | " | " |
| 80. | ಗಣಪತಿ | " | " |
| 81. | ಯಲ್ಲಮ್ಮ | " | " |
| 82. | ಶ್ರೀ ರಾಘವೇಂದ್ರಸ್ವಾಮಿ | " | " |
| 83. | ಮುನೇಶ್ವರ | " | ಕೇತೋಹಳ್ಳಿ |
| 84. | ಮಹಾಬಲೇಶ್ವರ | " | ಕೃಷ್ಣರಾಜಪುರ |
| 85. | ಶ್ರೀರಾಮ ದೇವರ | " | " |
| 86. | ವೆಂಕಟರಮಣಸ್ವಾಮಿ | " | " |
| 87. | ಕಟ್ಟೆ ವಿನಾಯಕ | " | " |
| 88. | ಕನ್ಯಕಾಪರಮೇಶ್ವರಿ | " | " |
| 89. | ಕೋಟೆ ಆಂಜನೇಯ | " | " |
| 90. | ಬಸವೇಶ್ವರ | " | " |
| 91. | ಕೊಲ್ಲಾಪುರದಮ್ಮ | " | " |
| 92. | ಬ್ಯಾಟರಾಯಸ್ವಾಮಿ | " | ಮೂಗಲೂರು |
| 93. | ವೆಂಕಟರಮಣಸ್ವಾಮಿ | " | ಮುತ್ತನಲ್ಲೂರು |

| | | | |
|---|---|---|---|
| 94. | ಪಂಡಿನ ಮಾರಮ್ಮ | ದೇವಸ್ಥಾನ | ಮುತ್ತನಲ್ಲೂರು |
| 95. | ವೀರಭದ್ರ ದೇವರ | " | " |
| 96. | ಆಂಜನೇಯ | " | " |
| 97. | ಅನಂತ ಪದ್ಮನಾಭಸ್ವಾಮಿ | " | ಸೋಮನಹಳ್ಳಿ |
| 98. | ಚೆನ್ನರಾಯಸ್ವಾಮಿ | " | ವರ್ತೂರು |
| 99. | ಸೋಮೇಶ್ವರ | " | " |
| 100. | ಧರ್ಮರಾಯಸ್ವಾಮಿ | " | " |
| 101. | ಚೌಡೇಶ್ವರಿ | " | " |
| 102. | ವಲ್ಲಭರಾಯಸ್ವಾಮಿ | " | ವಸಂತಪುರ |
| 103. | ಭವಾನಿ ಶಂಕರ | " | " |
| 104. | ಸುಬ್ರಹ್ಮಣ್ಯಸ್ವಾಮಿ | " | " |
| 105. | ಆಂಜನೇಯ | " | ಬಾಣಸವಾಡಿ |
| 106. | ಲಕ್ಷ್ಮಿದೇವಿ | " | ಕೋರಮಂಗಲ |

## ದೊಡ್ಡಬಳ್ಳಾಪುರ ತಾಲೋಕು

| | | | |
|---|---|---|---|
| 107. | ವೆಂಕಟರಮಣಸ್ವಾಮಿ | ದೇವಸ್ಥಾನ | ದೊಡ್ಡಬಳ್ಳಾಪುರ |
| 108. | ಚೌಡೇಶ್ವರಿ | " | " |
| 109. | ಈಶ್ವರ | " | " |
| 110. | ಸೋಮೇಶ್ವರ | " | " |
| 111. | ಜನಾರ್ಧನ | " | " |
| 112. | ಕಾಶಿ ವಿಶ್ವೇಶ್ವರ | " | " |
| 113. | ನಗರೇಶ್ವರ | " | " |
| 114. | ಅರ್ಕಾವತಿ | " | " |
| 115. | ಶ್ರೀ ರಾಘವೇಂದ್ರಸ್ವಾಮಿ | " | " |
| 116. | ಘಾಟಿ ಸುಬ್ರಹ್ಮಣೇಶ್ವರ | " | ಘಾಟಿಸುಬ್ರಹ್ಮಣ್ಯ |
| 117. | ತಿರುಮಲ | " | ಮಧುರೆ |

| | | | |
|---|---|---|---|
| 118. | ರಾಮದೇವರ | ದೇವಸ್ಥಾನ | ಮಧುರೆ |
| 119. | ಪ್ರಸನ್ನ ಈಶ್ವರ | " | " |
| 120. | ಶನಿ ಮಹಾತ್ಮದೇವರ | " | ಕಾನಸವಾಡಿ |
| 121. | ನೀಲಕಂಠೇಶ್ವರ | " | ಇಸ್ತೂರು |
| 122. | ಕೋದಂಡರಾಮಸ್ವಾಮಿ | " | " |
| 123. | ಆಂಜನೇಯ | " | " |
| 124. | ಕಂಬಲಮ್ಮ | " | " |
| 125. | ಈಶ್ವರ | " | " |
| 126. | ವೀರಭದ್ರದೇವರ | " | ಹುಲ್ಕಡಿಬೆಟ್ಟ |
| 127. | ಚೆನ್ನಿಗರಾಯಸ್ವಾಮಿ | " | ದೊಡ್ಡ ಬೆಳವಂಗಲ |
| 128. | ಆಂಜನೇಯ | " | ಅರಳು ಮಲ್ಲಿಗೆ |

## ನೆಲಮಂಗಲ ತಾಲೋಕು

| | | | |
|---|---|---|---|
| 129. | ಗಂಗಾಧರೇಶ್ವರ | ದೇವಸ್ಥಾನ | ಶಿವಗಂಗೆ |
| 130. | ಹೊನ್ನಾದೇವಿ | " | " |
| 131. | ಶಾರದಾಂಬ | " | " |
| 132. | ಆದಿಶಂಕರ | " | " |
| 133. | ಚಂದ್ರಮೌಳೇಶ್ವರ | " | " |
| 134. | ಕಾಶಿ ವಿಶ್ವೇಶ್ವರ | " | ತ್ಯಾಮಗೊಂಡ್ಲು |
| 135. | ಚಂದ್ರಮೌಳೇಶ್ವರ | " | " |
| 136. | ಪಟ್ಟಾಲದಮ್ಮ | " | " |
| 137. | ಕೋಟೆ ವರಾರಮ್ಮ | " | " |
| 138. | ಹನುಮಂತರಾಯ | " | " |
| 139. | ರಂಗನಾಥಸ್ವಾಮಿ ಬೆಟ್ಟ | " | ಮಹಿಮಾಪುರ |
| 140. | ಸೋಮೇಶ್ವರ | " | ಮನ್ನೆ |
| 141. | ಕಪಿಲೇಶ್ವರ | " | " |

| | | | |
|---|---|---|---|
| 142. | ಅಕ್ಕ ತಂಗಿಯರ | ದೇವಸ್ಥಾನ | ಮನ್ನೆ |
| 143. | ಮನ್ನೆ ಅಮ್ಮ | " | " |
| 144. | ಸೂಳೆಯರ ಗುಡಿ | " | " |
| 145. | ಗಣಪತಿ | " | " |
| 146. | ಶ್ರೀರಾಮ ದೇವರ | " | ಹೆಗ್ಗುಂದ |
| 147. | ಆಂಜನೇಯ | " | " |
| 148. | ಬಸವಣ್ಣ | " | " |
| 149. | ಮಾರಮ್ಮ | " | " |
| 150. | ಗಣಪತಿ | " | " |
| 151. | ಚೆನ್ನಕೇಶವ (ಮುಸಲ್ಮಾನರ ಪ್ರಾರ್ಥನಾ ಮಂದಿರವಾಗಿದೆ) | " | " |
| 152. | ಶ್ರೀ ಲಕ್ಷ್ಮೀನಾಥ ತೀರ್ಥರ ಬೃಂದಾವನ | " | ನರಸೀಪುರ |
| 153. | ರುದ್ರದೇವರ | " | ನೆಲಮಂಗಲ |
| 154. | ಬಸವೇಶ್ವರ | " | " |
| 155. | ಆಂಜನೇಯ | " | " |
| 156. | ಲಕ್ಷ್ಮೀಚೆನ್ನಕೇಶವ | " | " |
| 157. | ಕಾಶಿ ವಿಶ್ವೇಶ್ವರ | " | " |
| 158. | ಗಣಪತಿ | " | " |
| 159. | ವೀರಾಂಜನೇಯ | " | " |
| 160. | ಮಹಾಲಿಂಗೇಶ್ವರ | " | " |
| 161. | ನರಸಿಂಹಸ್ವಾಮಿ | " | ನಿಜಗಲ್ |
| 162. | ಲಕ್ಷ್ಮೀ | " | " |
| 163. | ಕೋಡಿಯಪ್ಪ | " | " |

## ದೇವನಹಳ್ಳಿ ತಾಲೋಕು

| | | | |
|---|---|---|---|
| 164. | ನಗರೇಶ್ವರಸ್ವಾಮಿ | ದೇವಸ್ಥಾನ | ವಿಜಯಪುರ |
| 165. | ಚೆನ್ನಕೇಶವ | " | " |
| 166. | ವೀರಭದ್ರದೇವರ | " | " |
| 167. | ಸೋಮೇಶ್ವರ | " | ವಿಜಯನಗರ |
| 168. | ಚೆನ್ನರಾಯಸ್ವಾಮಿ | " | ಕುಂದನ |
| 169. | ಬಸವಣ್ಣ | " | " |
| 170. | ಈಶ್ವರ | " | " |
| 171. | ದುರ್ಗಮ್ಮ | " | " |
| 172. | ಸೋಮೇಶ್ವರ | " | " |
| 173. | ಗೋಪಾಲಕೃಷ್ಣ | " | " |
| 174. | ಆಂಜನೇಯ | " | " |
| 175. | ಮುತ್ತುರಾಯ | " | " |
| 176. | ಮಹೇಶ್ವರಮ್ಮ | " | " |
| 177. | ಚೆನ್ನಕೇಶವ | " | ಆವತಿ |
| 178. | ಆಂಜನೇಯ | " | " |
| 179. | ಈಶ್ವರ | " | " |
| 180. | ಕನ್ನಿಕಲಮ್ಮ | " | " |
| 181. | ಗೌತಮಗಿರಿ ಕ್ಷೇತ್ರ | " | ಯೆಂಬರಹಳ್ಳಿ |
| 182. | ವೇಣುಗೋಪಾಲಸ್ವಾಮಿ | " | ದೇವನಹಳ್ಳಿ |
| 183. | ವೀರಭದ್ರದೇವರ | " | " |
| 184. | ನಗರೇಶ್ವರ | " | " |
| 185. | ರಂಗನಾಥಸ್ವಾಮಿ | " | " |
| 186. | ಬಸವೇಶ್ವರ | " | " |
| 187. | ಕಾಳಮ್ಮ | " | " |
| 188. | ಆಂಜನೇಯ | " | " |

| | | | |
|---|---|---|---|
| 189. | ಗೋಪಾಲಸ್ವಾಮಿ | ದೇವಸ್ಥಾನ | ಅರ್ಧಶಪಳ್ಳಿ |
| 190. | ಮಹೇಶ್ವರ | " | " |
| 191. | ಮುನೇಶ್ವರ | " | " |

## ಹೊಸಕೋಟೆ ತಾಲೋಕು

| | | | |
|---|---|---|---|
| 192. | ಅವಿಮುಕ್ತೇಶ್ವರ | ದೇವಸ್ಥಾನ | ಹೊಸಕೋಟೆ |
| 193. | ವರದರಾಜಸ್ವಾಮಿ | " | " |
| 194. | ವಿಠೋಬ | " | " |
| 195. | ವೇಣುಗೋಪಾಲಸ್ವಾಮಿ | " | " |
| 196. | ವೀರಭದ್ರದೇವರು | " | " |
| 197. | ಧರ್ಮೇಶ್ವರ | " | ಕೊಂಡರಹಳ್ಳಿ |
| 198. | ಈಶ್ವರ | " | ನೀಲವಗಿಲು |
| 199. | ಬನ್ನೇಶ್ವರ | " | ಲಕ್ಕೊಂಡಹಳ್ಳಿ |
| 200. | ವೆಂಕಟರಮಣಸ್ವಾಮಿ | " | " |
| 201. | ಆಂಜನೇಯ | " | " |
| 202. | ಮಲ್ಲೇಶ್ವರ | " | ನಂದಗುಡಿ |
| 203. | ಆಂಜನೇಯ | " | " |
| 204. | ಮುತ್ಯಾಲಮ್ಮ | " | " |
| 205. | ಧರ್ಮರಾಯಸ್ವಾಮಿ | " | ಶಿವನಪುರ |
| 206. | ಭೀಮೇಶ್ವರ | " | " |
| 207. | ಲಕ್ಷ್ಮಿನಾರಾಯಣ | " | " |
| 208. | ಗಂಗಮ್ಮ | " | " |
| 209. | ಸೋಮೇಶ್ವರ | " | ಸೂಲಿಬೇಲಿ |
| 210. | ನಗರೇಶ್ವರ | " | " |
| 211. | ಆಂಜನೇಯ | " | " |
| 212. | ಕಾಶಿವಿಶ್ವೇಶ್ವರ | " | " |
| 213. | ಚೆನ್ನಕೇಶವ | " | ದಳಸಗೆರೆ |

| | | | |
|---|---|---|---|
| 214. | ವಿದ್ಯಾಗಣಪತಿ | ದೇವಸ್ಥಾನ | ದಳಸಗೆರೆ |
| 215. | ಆಂಜನೇಯ | " | " |
| 216. | ಪಟಾಲಮ್ಮ | " | " |
| 217. | ಬೀರೇದೇವರು | " | ದೊಡ್ಡ ಹುಲ್ಲೂರು |
| 218. | ಈಶ್ವರ | " | " |
| 219. | ಸೋಮೇಶ್ವರ | " | ಹಸಿಗಾಲ |
| 220. | ವೆಂಕಟರಮಣಸ್ವಾಮಿ | " | ಕಮ್ಮಸಂದ್ರ |
| 221. | ಸೋಮೇಶ್ವರ | " | " |
| 222. | ಮಾರಿಯಮ್ಮ | " | " |

## ಕನಕಪುರ ತಾಲ್ಲೋಕು

| | | | |
|---|---|---|---|
| 223. | ಗವಿ ಮಹದೇಶ್ವರ | ದೇವಸ್ಥಾನ | ಅಚ್ಚಲು |
| 224. | ಹನುಮಂತರಾಯಸ್ವಾಮಿ | " | " |
| 225. | ಬಸವೇಶ್ವರ | " | " |
| 226. | ನಾರಾಯಣಸ್ವಾಮಿ | " | ಅರಳಲು |
| 227. | ವೆಂಕಟರಮಣಸ್ವಾಮಿ | " | " |
| 228. | ಬಸವೇಶ್ವರ | " | " |
| 229. | ಪಟಾರಮ್ಮ | " | " |
| 230. | ಕೊಲ್ಲಾಪುರದಮ್ಮ | " | " |
| 231. | ಕಡಿವಟಾರಮ್ಮ | " | ಬನವಾಸಿ |
| 232. | ಮಾರಮ್ಮ | " | " |
| 233. | ಮಲ್ಲೇಶ್ವರಸ್ವಾಮಿ | " | ಒಡೇರಹಳ್ಳಿ |
| 234. | ರಂಗನಾಥಸ್ವಾಮಿ | " | ಬಿಳಿಕಲ್ ಬೆಟ್ಟ |
| 235. | ರಾಮದೇವರ | " | ಹಲ್ಸೂರು |
| 236. | ಬಸವೇಶ್ವರ | " | " |
| 237. | ಈಶ್ವರ | " | " |
| 238. | ಅರುಣಾಚಲೇಶ್ವರ | " | ಹಾರೋಹಳ್ಳಿ |

| | | | |
|---|---|---|---|
| 239. | ಕೃಷ್ಣಸ್ವಾಮಿ | ದೇವಸ್ಥಾನ | ಹಾರೋಹಳ್ಳಿ |
| 240. | ಬಸವೇಶ್ವರ | " | " |
| 241. | ಕಬ್ಬಿಲಮ್ಮ | " | ಕಬ್ಬಾಲ್ |
| 242. | ಭೀಮೇಶ್ವರ | " | " |
| 243. | ರಂಗನಾಥಸ್ವಾಮಿ | " | ಕನಕಪುರ |
| 244. | ಆಂಜನೇಯ | " | " |
| 245. | ಕೋದಂಡರಾಮಸ್ವಾಮಿ | " | " |
| 246. | ವಲಕೋಟಮ್ಮ | " | " |
| 247. | ಮಹದೇಶ್ವರ | " | " |

**ಆನೇಕಲ್ ತಾಲೋಕು**

| | | | |
|---|---|---|---|
| 248. | ಅಮೃತ ಮಲ್ಲಿಕಾರ್ಜುನ | ದೇವಸ್ಥಾನ | ಆನೇಕಲ್ |
| 249. | ಚೆನ್ನಕೇಶವ | " | " |
| 250. | ಭವಾನಿ ಶಂಕರ | " | " |
| 251. | ತಿಮ್ಮರಾಯಸ್ವಾಮಿ | " | " |
| 252. | ಕೋದಂಡರಾಮಸ್ವಾಮಿ | " | ಸರ್ಜಾಪುರ |
| 253. | ಆಂಜನೇಯ | " | " |
| 254. | ಮಹಾಬಲೇಶ್ವರ | " | " |
| 255. | ಮದ್ದೂರಮ್ಮ | " | " |
| 256. | ಬಿಸಿಲು ಮಾರಮ್ಮ | " | " |
| 257. | ನಾರಾಯಣಸ್ವಾಮಿ | " | ನಾರಾಯಣ ಘಟ್ಟ |
| 258. | ಕೋಟೆ ಲಕ್ಷ್ಮೀನಾರಾಯಣ | " | ಬಿದ್ರಗುಪ್ಪೆ |
| 259. | ಬಸವೇಶ್ವರ | " | ಮುಕನಹಳ್ಳಿ |
| 260. | ಕರಗದಮ್ಮ | " | " |
| 261. | ಕಾಶಿವಿಶ್ವೇಶ್ವರ | " | " |

**ರಾಮನಗರ ತಾಲೋಕು**

| | | | |
|---|---|---|---|
| 262. | ರಾಮದೇವರ | ದೇವಸ್ಥಾನ | ರಾಮಗಿರಿ |

| | | | |
|---|---|---|---|
| 263. | ರಾಮೇಶ್ವರ | ದೇವಸ್ಥಾನ | ರಾಮಗಿರಿ |
| 264. | ಅರ್ಕೇಶ್ವರ | ,, | ರಾಮನಗರ |
| 265. | ರೇವಣಸಿದ್ದೇಶ್ವರ | ,, | ,, |
| 266. | ಆಂಜನೇಯ | ,, | ,, |
| 267. | ಚಾಮುಂಡೇಶ್ವರಿ | ,, | ,, |
| 268. | ಬಂಡಿಕಾಳಮ್ಮ | ,, | ,, |
| 269. | ಹನುಮಂತರಾಯನ | ,, | ಹನುಮಂತನಗರ |
| 270. | ಮಲ್ಲೇಶ್ವರಸ್ವಾಮಿ | ,, | ಅರ್ಚಕನ ಹಳ್ಳಿ |
| 271. | ವೀರಭದ್ರ ದೇವರ | ,, | ಶಿವನ ಹಳ್ಳಿ |
| 272. | ಆಂಜನೇಯಸ್ವಾಮಿ | ,, | ಚೆನ್ನಮ್ಮನ ಹಳ್ಳಿ |
| 273. | ಕಮಲೇಶ್ವರ | ,, | ,, |
| 274. | ಈಶ್ವರ | ,, | ಜಡೆ ಸಿದ್ದೇಶ್ವರಬೆಟ್ಟ |
| 275. | ಭೀಮೇಶ್ವರ | ,, | ರೇವಣ ಸಿದ್ದೇಶ್ವರಬೆಟ್ಟ |
| 276. | ನಾರಾಯಣಸ್ವಾಮಿ | ,, | ಜಲಮಂಗಲ |
| 277. | ಸೋಮೇಶ್ವರ | ,, | ,, |
| 278. | ಕಂಬಾಲಮ್ಮ | ,, | ,, |
| 279. | ಮಾರಮ್ಮ | ,, | ,, |
| 280. | ಮುನೇಶ್ವರ | ,, | ,, |
| 281. | ಈಶ್ವರ | ,, | ದೊಡ್ಡವಂಗವಾಡಿ |
| 282. | ಆಂಜನೇಯ | ,, | ,, |
| 283. | ಗೋಪಾಲಸ್ವಾಮಿ | ,, | ,, |

## ಚೆನ್ನಪಟ್ಟಣ ತಾಲೋಕು

| | | | |
|---|---|---|---|
| 284. | ಕಂಬದ ನರಸಿಂಹಸ್ವಾಮಿ | ದೇವಸ್ಥಾನ | ,, |
| 285. | ಆಂಜನೇಯಸ್ವಾಮಿ | ,, | ,, |
| 286. | ಶ್ರೀ ಬ್ರಹ್ಮಣ್ಯ ತೀರ್ಥರ ಬೃಂದಾವನ | ,, | ,, |

| | | | |
|---|---|---|---|
| 287. | ಶ್ರೀ ಪುರುಕ್ಷೇತ್ರ ತೀರ್ಥರ ಗುಹೆ | ದೇವಸ್ಥಾನ | ದೊಡ್ಡದಂಗವಾಡಿ |
| 288. | ಶ್ರೀನಿವಾಸ | " | " |
| 289. | ವರದರಾಜಸ್ವಾಮಿ | " | " |
| 290. | ಆಂಜನೇಯಸ್ವಾಮಿ | " | " |
| 291. | ಪುರಂದರ | " | " |
| 292. | ವಿಜಯದಾಸರ | " | " |
| 293. | ಲಕ್ಷ್ಮೀನಾರಾಯಣ | " | " |
| 294. | ನೀಲಕಂಠೇಶ್ವರ | " | " |
| 295. | ಸುಗ್ರೀವ | " | " |
| 296. | ವೀರಭದ್ರ ದೇವರ | " | " |
| 297. | ಕನ್ಯಕಾ ಪರಮೇಶ್ವರಿ | " | " |
| 298. | ಅಪ್ರಮೇಯಸ್ವಾಮಿ | " | ಮಳೂರು |
| 299. | ಅಂಬೆಗಾಲು ಕೃಷ್ಣ | " | " |
| 300. | ಅಮೃತೇಶ್ವರ | " | " |
| 301. | ನಾರಾಯಣಸ್ವಾಮಿ | " | " |
| 302. | ವರದಸ್ವಾಮಿ | " | " |
| 303. | ಕೆಂಗಲ್ ಆಂಜನೇಯಸ್ವಾಮಿ | " | ಕೆಂಗಲ್ |
| 304. | ವೀರಭದ್ರ ದೇವರ | " | ಮುನ್‌ಕುಂದ |
| 305. | ಸೋಮೇಶ್ವರ | " | " |
| 306. | ಆಂಜನೇಯ | " | " |
| 307. | ಆಂಜನೇಯ | " | ದೇವರ ಹೊಸಹಳ್ಳಿ |
| 308. | ನರಸಿಂಹ ದೇವರ | " | ಕೋರನಗೆರೆ |
| 309. | ಆಂಜನೇಯಸ್ವಾಮಿ | " | " |
| 310. | ಶ್ರೀರಾಮದೇವರ | " | ಕುಡ್ಲೂರು |
| 311. | ಮಂಗಳೇಶ್ವರ | " | " |
| 312. | ನರಸಿಂಹದೇವರ | " | " |

| | | | |
|---|---|---|---|
| 313. | ಮಸವಣಮ್ಮ | ದೇವಸ್ಥಾನ | ಕುಡ್ಲೂರು |
| 314. | ಗೋಪಾಲಕೃಷ್ಣ | " | " |
| 315. | ಚಾಮುಂಡೇಶ್ವರಿ | " | ಸಿಂಗರಾಜಪುರ |
| 316. | ಈಶ್ವರ | " | ಸೊಗಲೆ |
| 317. | ಕೆಂಪಮ್ಮ | " | " |
| 318. | ತಿಮ್ಮಪ್ಪನಬೆಟ್ಟ | " | " |
| 319. | ಸಿದ್ಧರಾಮೇಶ್ವರ | " | ಬೇವೂರು |
| 320. | ಉಸಾಲಮ್ಮ | " | " |
| 321. | ಚೌಡೇಶ್ವರಿ | " | " |
| 322. | ಅಕೋಶ್ವರ | " | " |
| 323. | ಸೋಮೇಶ್ವರ | " | " |
| 324. | ಬಸವೇಶ್ವರ | " | ಇಗ್ಗಲಪುರ |
| 325. | ಆಂಜನೇಯ | " | " |
| 326. | ಬೀರಪ್ಪ | " | " |

## ಮಾಗಡಿ ತಾಲೋಕು

| | | | |
|---|---|---|---|
| 327. | ರಾಮದೇವರ ಬೆಟ್ಟ | ದೇವಸ್ಥಾನ | ಹುಲಿಕಲ್ಲು |
| 328. | ಜನಾರ್ಧನ | " | " |
| 329. | ಮಂಡಿಯಮ್ಮ | " | " |
| 330. | ಕೊಲ್ಲಾಪುರದಮ್ಮ | " | " |
| 331. | ವೀರಭದ್ರ | " | " |
| 332. | ಸರ್ವೇಶ್ವರ | " | " |
| 333. | ಆಂಜನೇಯ | " | " |
| 334. | ಕಲ್ಲೇಶ್ವರ | " | ಕಲ್ಯ |
| 335. | ಆಂಜನೇಯ | " | " |
| 336. | ಅಂತರ ಗಂಗೆ | " | ಕುದೂರು |
| 337. | ಕುದೂರಮ್ಮ | " | " |

| | | | |
|---|---|---|---|
| 338. | ಈಶ್ವರ | ದೇವಸ್ಥಾನ | ಕುಮಾರು |
| 339. | ಸೋಮೇಶ್ವರ | " | ಮಾಗಡಿ |
| 340. | ರಂಗನಾಥಸ್ವಾಮಿ (ತಿರುಮಲೆ) | " | " |
| 341. | ರಾಮಸ್ವಾಮಿ | " | " |
| 342. | ನರಸಿಂಹಸ್ವಾಮಿ | " | ಸಾವನ ದುರ್ಗ |
| 343. | ವೀರಭದ್ರ ದೇವರ | " | " |
| 344. | ನರಸಿಂಹ ದೇವರ | " | ಸುಗ್ಗನಹಳ್ಳಿ |
| 345. | ಕಾಶಿ ವಿಶ್ವೇಶ್ವರ | " | ಸುಂಕಿ ಘಟ್ಟ |
| 346. | ವಿಠಲ ಗೋಪಾಲಸ್ವಾಮಿ | " | ಸಾತನೂರು |
| 347. | ಸ್ವಯಂ ಭೇಶ್ವರ | " | " |
| 348. | ಕಂಬಲಮ್ಮ | " | " |
| 349. | ಶನಿದೇವರ | " | " |
| 350. | ರುದ್ರೇಶ್ವರ | " | ಬಿಸ್ಕೂರು |
| 351. | ಅರ್ಕೇಶ್ವರ | " | " |
| 352. | ರಂಗನಾಥಸ್ವಾಮಿ | " | " |
| 353. | ವಿನಾಯಕ | " | " |
| 354. | ವರದರಾಜಸ್ವಾಮಿ | " | ಬೈರಾಪುರ |
| 355. | ಕಳಿಘಟ್ಟ ಅಮ್ಮ | " | " |



# ತುಮಕೂರು ಜಿಲ್ಲೆಯ ದೇವಾಲಯಗಳು

ತುಮಕೂರು ಜಿಲ್ಲೆ ಹಲವು ರಾಜವಂಶಗಳ ಆಳ್ವಿಕೆಗಳಿಗೆ ಒಳಪಟ್ಟಿದ್ದ ಜಿಲ್ಲೆಯಹಾಗಿದೆ. ಈ ಜಿಲ್ಲೆಯು ಕಿಬ್ಬನ ಹಳ್ಳಿಯಲ್ಲಿ ಶಿಲಾಯುಗದ ಅವಶೇಷ ಗಳು ದೊರತಿವೆ. ಕದಂಬ, ಗಂಗ ಈ ರಾಜವಂಶಗಳ ಆಳ್ವಿಕೆಯಲ್ಲಿದ್ದ ಜಿಲ್ಲೆ ಯಲ್ಲಿ ಕ್ರಿ.ಶ. 9-10ನೆಯ ಶತಮಾನದಲ್ಲಿ ನೊಳಂಬರು ಆಳುತ್ತಿದ್ದರು. ಹೊಯ್ಸಳರ ಆಡಳಿತಕ್ಕೆ ಮುಂದೆ ಒಳಪಟ್ಟ ಈ ಜಿಲ್ಲೆಯ ತುರುವೇಕೆರೆ ಹೊಯ್ಸಳ ಒಂದನೆಯ ನರಸಿಂಹನ ರಾಣಿ ಲೋಕಾಂಬಿಕೆಯ ತವರೂರು. ವಿಜಯನಗರದ ಅರಸರುಗಳ ಸಾಮಂತರಾಗಿ ಅನೇಕ ಪಾಳೆಯಗಾರರು ಇಲ್ಲಿ ಆಳಿದರು. ಇದರಲ್ಲಿ ನಿಡುಗಲ್, ಹೊಳವನಹಳ್ಳಿ, ಮಧುಗಿರಿ, ಹಾಗಲವಾಡಿ ಮತ್ತು ಹೆಬ್ಬೂರು ಪಾಳಯಗಾರರು ಪ್ರಮುಖರು. ಕೆಲಕಾಲ ಶಿರಾ ಪಟ್ಟಣ ಮರಾಠರ ಅಧೀನದಲ್ಲಿತ್ತು. ಬಳಿಕ ಹೈದರಾಲಿ ಶಿರಾವನ್ನು ಗೆದ್ದು ಸುಬೇದಾರನನ್ನು ಅಲ್ಲಿ ನೇಮಿಸಿದ. ಪುನಃ ಮರಾಠರು ಶಿರಾ ವಶಪಡಿಸಿ ಕೊಂಡರೂ ಟಿಪ್ಪುಸುಲ್ತಾನ್ ಮರಳಿ ತನ್ನ ವಶಕ್ಕೆ ಪಡೆದುಕೊಂಡ. ಮುಂದೆ ಮೈಸೂರು ಒಡೆಯರ ಆಳ್ವಿಕೆಗೆ ತುಮಕೂರು ಜಿಲ್ಲೆ ಒಳಪಟ್ಟಿತು. ಆಧುನಿಕ ಆಡಳಿತಕ್ಕೆ ಇಂದು ಒಳಪಟ್ಟಿರುವ ಈ ಜಿಲ್ಲೆಯಲ್ಲಿ ತುಮಕೂರು, ಗುಬ್ಬಿ, ತಿಪಟೂರು, ತುರುವೆಕೆರೆ, ಕುಣಿಗಲ್, ಪಾವಗಡ, ಕೊರಟಗೆರೆ, ಮಧುಗಿರಿ ಶಿರಾ, ಚಿಕ್ಕನಾಯಕನ ಹಳ್ಳಿ ಎಂಬ ಹತ್ತು ತಾಲ್ಲೂಕುಗಳಿವೆ.

**ದೇವಾಲಯಗಳು :** ತುಮಕೂರು ಹಿಂದೆ ಕ್ರೀಡಾಪುರದ ಅರಸರಿಗೆ ಸೇರಿತ್ತು. ಕ್ರೀಡಾಪುರದ ರಾಜ ಈ ಊರನ್ನು ತುಮಕೆ (ಕೋಲು) ಬಾರಿಸುವವನಿಗೆ ಕೊಟ್ಟಿದ್ದ ಕಾರಣ ಊರಿಗೆ ತುಮಕೂರು ಎಂದು ಹೆಸರಾಗಿದೆ. ತುಮಕೂರಿನಲ್ಲಿ ಹಳೆಯವೂ ಇತ್ತೀಚಿನ ದೇವಾಲಯಗಳೂ ಸೇರಿ 40 ದೇವಾಲಯಗಳಿವೆ. ಸೋಮೇಶ್ವರ, ಗೋಪಾಲಕೃಷ್ಣ, ಶಂಕರಮಠದ ಗಣಪತಿ, ಶಾರದಾಂಬಾರಗುಡಿ, ಲಕ್ಷ್ಮೀನಾರಾಯಣ ಮೊದಲಾದ ದೇವಾಲಯಗಳಿವೆ. ಲಕ್ಷ್ಮೀನಾರಾಯಣನ ದೇವಸ್ಥಾನ ಕ್ರಿ.ಶ. 1560 ರಲ್ಲಿ ರಚಿತವಾದುದಾಗಿದೆ. ತುಮಕೂರು ತಾಲ್ಲೂಕಿನಲ್ಲಿ ಗೂಳೂರು, ಸಿದ್ಧಗಂಗಾ, ಕೈದಾಳ, ನಿಜಗಲ್ಲು ಶೆಟ್ಟಿಹಳ್ಳಿ, ಹೆಬ್ಬೂರು ಪ್ರಸಿದ್ಧ ಸ್ಥಳಗಳು.

**ಸಿದ್ಧಗಂಗಾ :** ತುಮಕೂರಿಗೆ ಐದು ಕಿ. ಮೀ. ದೂರದಲ್ಲಿದೆ. ತುಮಕೂರು ಬೆಂಗಳೂರು ಹೆದ್ದಾರಿಯಲ್ಲಿ ಸಿಗುವ ಕ್ಯಾತಸಂದ್ರ ಗ್ರಾಮಕ್ಕೆ ಒಂದು ಕಿ. ಮೀ. ದೂರಕ್ಕಿರುವ ಗ್ರಾಮ. ಸಿದ್ಧಗಂಗಾ ಒಂದು ವೀರಶೈವ ಧಾರ್ಮಿಕ ಕ್ಷೇತ್ರ. ಇಲ್ಲಿರುವ ಬೆಟ್ಟದ ಮೇಲೆ ಸಿದ್ಧಲಿಂಗೇಶ್ವರ ದೇವಾಲಯವಿರುತ್ತದೆ. ಇಲ್ಲಿ ಕಾಣಸಿಗುವ ಜಲಬುಗ್ಗೆಗೆ ಸಿದ್ಧಗಂಗೆ ಎಂದು ಕರೆಯುವರು. ಇಲ್ಲಿರುವ ಸಿದ್ಧಗಂಗಾಮಠ ಆರುನೂರು ವರ್ಷಗಳಿಗೂ ಹಳೆಯದು. ಸಾರ್ವಜನಿಕ ಸೇವೆಗೆ ಈ ಮಠ ಹೆಸರಾಗಿದೆ. ಡಾ. ಶಿವಕುಮಾರಸ್ವಾಮಿಗಳು ಈ ಕ್ಷೇತ್ರದಲ್ಲಿ ಹಲವು ಅಭಿವೃದ್ಧಿ ಕಾರ್ಯಗಳನ್ನು ಮಾಡಿರುವರು. ಇಲ್ಲಿ ಸಂಸ್ಕೃತ ಪಾಠಶಾಲೆ ಇದೆ. ಮಠದ ಆಶ್ರಯದಲ್ಲಿ ಹಲವು ಸಾರ್ವಜನಿಕ ಶೈಕ್ಷಣಿಕ ಸಂಸ್ಥೆಗಳು ಕೆಲಸ ಮಾಡುತ್ತವೆ.

ಶ್ರೀ ಕ್ಷೇತ್ರದಲ್ಲಿ ಪ್ರತಿವರ್ಷ ಶಿವರಾತ್ರಿ ಕಾಲದಲ್ಲಿ ಜಾತ್ರೆ ಹಾಗೂ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವ ನಡೆಯುವುದು. ಆಗ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ವ್ಯವಸ್ಥೆ ಮಾಡಲಾಗುತ್ತದೆ.

**ಕೈದಾಳ :** ತುಮಕೂರಿನ ದಕ್ಷಿಣಕ್ಕೆ 5 ಕಿ.ಮೀ. ದೂರಕ್ಕಿದೆ. ಇದು ಶಿಲ್ಪಿ ಜಕಣಾಚಾರಿಯ ಜನ್ಮಸ್ಥಳ ಎನ್ನುತ್ತಾರೆ. ಜಕಣಾಚಾರಿ ಬೇಲೂರಿನಲ್ಲಿ ನಿರ್ಮಿಸಿದ ಚೆನ್ನಕೇಶವ ಮೂರ್ತಿಯಲ್ಲಿರುವ ದೋಷವನ್ನು ಅವನ ಮಗ ಡಂಕಣನು ತೋರಿಸಿಕೊಟ್ಟಾಗ ಜಕಣಾಚಾರಿಯು ತನ್ನ ಬಲಗೈ

ಕತ್ತರಿಸಿಕೊಂಡು ಕೈದಾಳ ಸೇರಿದನಂತೆ. ಅಲ್ಲಿ ಚೆನ್ನಕೇಶವ ದೇವಾಲಯ ನಿರ್ಮಿಸಲು ಜಕಣನಿಗೆ ಮತ್ತೆ ಕೈ ಬಂತು. ಇದರಿಂದ ಊರಿಗೆ ಕೈದಾಳ ವೆಂದು ಹೆಸರಾಗಿದೆ.

ಕೈದಾಳದಲ್ಲಿ ಚೆನ್ನಕೇಶವ, ಗಂಗಾಧರೇಶ್ವರ ದೇವಾಲಯಗಳಿವೆ. ಚೆನ್ನ ಕೇಶವ ದೇವಾಲಯ ದ್ರಾವಿಡ ವಾಸ್ತು ಶೈಲಿಯಲ್ಲಿದೆ. ಈ ದೇವಾಲಯದ ಮಹಾದ್ವಾರದ ಮೇಲಿನ ಗೋಪುರ ವಿಜಯನಗರ ಕಾಲದಲ್ಲಿ ನಿರ್ಮಿತ ವಾದುದಾಗಿದೆ. ಗರ್ಭಗುಡಿಯ ಮೂಲ ವಿಗ್ರಹ ಐದೂವರೆ ಅಡಿ ಎತ್ತರ ವಿದ್ದು ಎರಡೂವರೆ ಅಡಿ ಎತ್ತರದ ಪೀಠದ ಮೇಲೆ ಸ್ಥಾಪಿತವಾಗಿದೆ. ವಿಗ್ರಹಸುಂದರವಾಗಿದ್ದು ಪ್ರಭಾವಳಿಯ ಮೇಲೆ ದಶಾವತಾರ ಚಿತ್ರಗಳಿವೆ. ಮಹಾದ್ವಾರದ ಬಲ ಬದಿಯ ಕಂಬವೊಂದರ ಮೇಲೆ ಪತ್ನಿ ಸಹಿತನಾದ ಚೆನ್ನಕೇಶವನನ್ನು ಎಡಗಡೆ ಕಂಬದ ಮೇಲೆ ಖಡ್ಗ ಭೂಷಿತನಾದ ಮೂರ್ತಿ ಯನ್ನು ಚಿತ್ರಿಸಲಾಗಿದೆ. ಗಂಗಾಧರೇಶ್ವರ ದೇವಾಲಯ ದ್ರಾವಿಡ ಶೈಲಿ ಯದು. ಇದರ ನವರಂಗದಲ್ಲಿ ಕರಿಕಲ್ಲಿನ ನಯವಾದ ನಾಲ್ಕು ಕಂಬ ಗಳಿವೆ. ಇವುಗಳ ತಳಭಾಗದ ನಾಲ್ಕು ಪಕ್ಕಗಳಲ್ಲೂ ಶಿವ, ಬ್ರಹ, ವಿಷ್ಣು, ಮೊದಲಾದ ದೇವರುಗಳ ಉಬ್ಬು ಚಿತ್ರಗಳನ್ನು ಕೆತ್ತಲಾಗಿದೆ. ನವರಂಗದ ಗೋಡೆಗಳು ಚಿತ್ರಪಟ್ಟಿಕೆಗಳಿಂದ ಸಾಲಂಕೃತವಾಗಿವೆ.

**ಗೂಳೂರು :** ಗೂಳೂರು ಗಣೇಶ ಎಂದು ಕರ್ನಾಟಕದಾದ್ಯಂತ ಪ್ರಸಿದ್ಧಿ ಇದೆ. ಕೈದಾಳದ ಸಮೀಪವಿರುವ ಗ್ರಾಮ ಇಲ್ಲಿ ಪ್ರತಿ ವರ್ಷ ಭಾದ್ರಪದ ಚೌತಿಯಂದು ಬೃಹದ್ ಗಣೇಶಮೂರ್ತಿಯನ್ನು ರಚಿಸುವ ಕೆಲಸವನ್ನಾರಂಭಿಸುತ್ತಾರೆ. ಅಂದು ಪ್ರಾಣಪ್ರತಿಷ್ಠೆ ಮಾಡಿದ ಸಣ್ಣಗಣೇಶ ವಿಗ್ರಹ ಈ ಬೃಹದ್ ವಿಗ್ರಹದ ಹೊಟ್ಟೆಯೊಳಗಿರುತ್ತದೆ. ದೊಡ್ಡ ವಿಗ್ರಹ ಎಂಟು ಅಡಿ ಎತ್ತರವಿರುತ್ತದೆ. ಇದರ ನಿರ್ಮಾಣಕ್ಕೆ ಎರಡು ತಿಂಗಳು ಬೇಕಾಗುತ್ತದೆ. ಈ ವಿಗ್ರಹ ನೋಡಲೆಂದು ಸುತ್ತಮುತ್ತಲಿನ ಜನ ಧಾವಿಸಿ ಬರುತ್ತಾರೆ. ಮೂರ್ತಿಯ ವಿಸರ್ಜನೆ ಒಂದು ದೊಡ್ಡ ಕಾರ್ಯಕ್ರಮ. ವೈಭವದಿಂದ ಜರುಗುತ್ತದೆ.

**ನಿಜಗಲ್ಲು :**

ತುಮಕೂರಿಗೆ 16 ಕಿ.ಮೀ ದೂರದಲ್ಲಿರುವ ನಿಜಗಲ್ಲು ಬೆಟ್ಟದ ಮೇಲೆ ವೀರಭದ್ರಸ್ವಾಮಿ ಗುಡಿ ಇದೆ. ಗುಡಿಯಲ್ಲಿ 12 ಅಡಿ ಎತ್ತರದ ವೀರಭದ್ರನ ವಿಗ್ರಹದ ಎಡಕ್ಕೆ ದಕ್ಷನ ವಿಗ್ರಹ, ಬಲಕ್ಕೆ ಭದ್ರಕಾಳಿ ವಿಗ್ರಹಗಳೂ ಇವೆ. ವೀರಭದ್ರನ ಬಲಕ್ಕೆ ಒಂದೂವರೆ ಅಡಿ ಎತ್ತರದ ಕುಳಿತ ಭಂಗಿಯ ವಿಗ್ರಹ ಕೇಶಿಸ್ವಾಮಿಯದಾಗಿದೆ. ಈ ಗುಡಿಯನ್ನು ಕಟ್ಟಿಸಿದ ಪಾಳಿನ ಪಂಪಣ್ಣನ ವಿಗ್ರಹ ಗುಡಿಯ ಹೊರಗಿನ ದೀಪಸ್ತಂಭದ ಬಳಿ ಇದ್ದು ಅವನನ್ನು ಕೋಡಿ ಯಪ್ಪನೆಂದು ಪೂಜಿಸುವರು. ಬೆಟ್ಟದ ಮೇಲೆ ಕೆಲವು ನೀರಿನ ದೋಣಗಳಿವೆ. ಸಿದ್ಧರ ದೋಣಿ ಪೂಜೆಗೆ ಒಬ್ಬ ಫಕೀರ ಇದ್ದು ಹಿಂದುಗಳು ಸಹ ಅವನ ನೆರವಿನಿಂದ ಪೂಜೆ ಸಲ್ಲಿಸುವರು. ರಸಸಿದ್ಧರ ಗುಡಿಯ ರಸಸಿದ್ಧ ಋಷಿಯ ವಿಗ್ರಹವನ್ನು ಹಿಂದುಗಳು ಪೂಜಿಸುವರು. ಅಕ್ಕ ತಂಗಿಯರ ದೋಣಿ ಬಳಿ ಶಿಥಿಲಾವಸ್ಥೆಯಲ್ಲಿರುವ ನರಸಿಂಹಸ್ವಾಮಿ ದೇವಾಲಯವಿದೆ. ಬೆಟ್ಟದ ಇಳ ಕಲ್ಲಿನಲ್ಲಿರುವ ಗವಿಯಲ್ಲಿ ಶಿವನ ಗುಡಿ ಇದೆ.

ತುಮಕೂರು ತಾಲ್ಲೂಕಿನ ಮಾರಳೂರಿನಲ್ಲಿ ರಾಮದೇವಾಲಯವೂ, ರೆಟ್ಟ ಹಳ್ಳಿಯಲ್ಲಿ ಆಂಜನೇಯ ದೇವಾಲಯವೂ, ಬೆಳ್ಳಾವೆಯಲ್ಲಿ ಸೋಮೇಶ್ವರ ದೇವಾಲಯವೂ ಇದೆ. ತುಮಕೂರಿಗೆ 3 ಕಿ. ಮೀ. ದೂರದ ಬೆಳಗುಂಬ ಬೆಟ್ಟದ ಮೇಲೆ ಸಿದ್ಧರಾಮೇಶ್ವರ ದೇವಾಲಯವಿದ್ದು ಪುಣ್ಯಕ್ಷೇತ್ರ ಎನಿಸಿದೆ.

**ತುರುವೇಕೆರೆ ದೇವಾಲಯಗಳು**

ತುರುವೇಕೆರೆ, ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಈ ಊರಿಗೆ ಈ ಹೆಸರು ಬರಲು ಊರಿನ ಉತ್ತರ ಭಾಗಕ್ಕಿರುವ ದೊಡ್ಡಕೆರೆಯೇ ಕಾರಣ ಎಂದು ತಿಳಿಯಲಾಗಿದೆ. ಇಲ್ಲಿ ಚೆನ್ನಕೇಶವ, ಮೂಲೆಶಂಕರ ದೇವಾಲಯಗಳಿವೆ. ಇವು ಹೊಯ್ಸಳರ ಕಾಲದವಾಗಿವೆ. ಮೈಸೂರು ಜಿಲ್ಲೆಯ ಸೋಮನಾಥಪುರ ದೇವಾಲಯವನ್ನು ನಿರ್ಮಿಸಿದ ಸೋಮಣ್ಣ ದಂಡನಾಯಕನೇ ಈ ದೇವಾಲಯ ಗಳನ್ನೂ ಕಟ್ಟಿಸಿದ. ಚನ್ನಕೇಶವ ದೇವಾಲಯ ಪೂರ್ವಾಭಿಮುಖವಾಗಿದೆ. ಗರ್ಭಗೃಹ, ಸುಕನಾಸಿ, ನವರಂಗ. ಮುಖಮಂಟಪ ಇವೆ. ನವರಂಗ, ಸುಕನಾಸಿ ಭಾಗದಲ್ಲಿ ಶಿಲ್ಪಗಳಿಂದ ಕೂಡಿದ ಭುವನೇಶ್ವರಿಗಳಿವೆ. ಮೂಲೆ

ಶಂಕರ ದೇವಾಲಯದ ಪ್ರವೇಶದ್ವಾರ, ಮುಖ ಮಂಟಪಗಳು ದಕ್ಷಿಣಾಭಿಮುಖವಾಗಿವೆ. ನವರಂಗದಲ್ಲಿ ಭೈರವ, ವೀರಭದ್ರ, ಸುಬ್ರಹ್ಮಣ್ಯ ಶಿಲ್ಪಗಳಿವೆ.

ಗಂಗಾಧರೇಶ್ವರ, ಬೇಟೆರಾಯ ದೇವಾಲಯಗಳು ತುರುವೇಕೆರೆಯ ಇತರ ದೇವಾಲಯಗಳು. ಗಂಗಾಧರೇಶ್ವರ ದ್ರಾವಿಡ ಶೈಲಿಯ ಗುಡಿ. ಉತ್ತರಾಭಿಮುಖವಾಗಿರುವ ಈ ದೇವಾಲಯದಲ್ಲಿ ದೊಡ್ಡ ಪ್ರಾಕಾರ. ಶಿವ ಮತ್ತು ಪಾರ್ವತಿ ಗುಡಿಗಳಿವೆ. ಕಲ್ಲಿನ ದೀಪಸ್ತಂಭವೊಂದು ಇಲ್ಲಿ ಇದ್ದು ಅದರ ಮೇಲೆ ಭಕ್ತ ದಂಪತಿಗಳ ವಿಗ್ರಹವಿದ್ದು ಕುತೂಹಲ ಮೂಡಿಸುತ್ತದೆ. ಪಾತಾಳಾಂಕಣದಲ್ಲಿರುವ ಒಂದು ಮಂಟಪದಲ್ಲಿ ದೊಡ್ಡನಂದಿ ಇದ್ದು ಅದರ ಶಿಲ್ಪ ತನ್ನ ಎಂದಿನ ಹೊಳಪನ್ನು ಉಳಿಸಿಕೊಂಡಿದೆ. ಬೇಟೆರಾಯ ದೇವಾಲಯ ಊರಿನ ಒಂದು ಪ್ರಮುಖ ಗುಡಿ. ದೇವಾಲಯ ಪೂರ್ವಾಭಿಮುಖವಾಗಿದೆ. ಇದರಲ್ಲಿ ಗರ್ಭಗುಡಿ, ಸುಕನಾಸಿ, ನವರಂಗ, ಹಜಾರ ಇವೆ. ನವರಂಗದ ಉತ್ತರಕ್ಕೆ ಒಂದು ಅರ್ಧ ಮಂಟಪ ಮತ್ತು ದಕ್ಷಿಣದೆಡೆಗೆ ಒಂದು ಕೋಣೆ ಇವೆ. ದೇವಾಲಯ ದ್ರಾವಿಡ ಶೈಲಿಯದಾಗಿದೆ. ಈ ದೇವಾಲಯದಲ್ಲಿ ಪ್ರತಿ ಫಾಲ್ಗುಣ ಮಾಸದಲ್ಲಿ ಜಾತ್ರೆ ಜರುಗುತ್ತದೆ.

ತುರುವೇಕೆರೆ ತಾಲ್ಲೂಕಿನ ಹೊಸಹಳ್ಳಿಯಲ್ಲಿ ಹೊಯ್ಸಳರ ಕಾಲದ ಕಲ್ಲೇಶ್ವರ ದೇವಾಲಯವಿದೆ. ಮಾಯಸಂದ್ರದಲ್ಲಿ ಮಾಯಮ್ಮ, ಕೊಲ್ಲಾಪುರದಮ್ಮ ಈ ಗ್ರಾಮದೇವತೆಗಳ ಗುಡಿಗಳಿವೆ. ರಾಮಸಾಗರ ಎಂಬಲ್ಲಿನ ವರದರಾಜ ದೇವಾಲಯ ಖ್ಯಾತಿವೆತ್ತಿದೆ. ಕಡಸೂರಿನಲ್ಲಿ ಭೈರವದೇವಾಲಯ ವಿದೆ. ಸಂಪಿಗೆಗ್ರಾಮದಲ್ಲಿ ವೆಂಕಟರಮಣಸ್ವಾಮಿ ದೇವಾಲಯವಿದೆ. ಸೂಳೆಕೆರೆ ಗ್ರಾಮದಲ್ಲಿ ಈಶ್ವರ ಹಾಗೂ ವೀರಭದ್ರರ ದೇವಾಲಯಗಳಿವೆ.

**ತಿಪಟೂರು**

ತೆಂಗಿನ ಬೇಸಾಯಕ್ಕೆ ಹೆಸರಾದ ತಿಪಟೂರು ತಾಲ್ಲೂಕು ಹಲವು ದೇವಾಲಯಗಳನ್ನು ಹೊಂದಿದ್ದು ಧರ್ಮ, ಸಂಸ್ಕೃತಿಗಳ ನೆಲೆವೀಡಾಗಿದೆ. ತಿಪಟೂರಿನಲ್ಲಿ ಕಲ್ಲೇಶ್ವರ ಗ್ರಾಮದೇವತೆ ತಿಪಟೂರಮ್ಮ, ಮಲ್ಲಿಕಾರ್ಜುನ,

ಕಾಶಿ ವಿಶ್ವೇಶ್ವರ, ಕನ್ಯಕಾಪರಮೇಶ್ವರಿ, ಆಂಜನೇಯಸ್ವಾಮಿ ದೇವಾಲಯ ಗಳಿವೆ. ಉಳಿದವೆಂದರೆ,

1. ಲಕ್ಷ್ಮೀನಾರಾಯಣ ಸ್ವಾಮಿ ದೇವಾಲಯ. ಪೊನ್ನವಳ್ಳಿ (ಚೋಳರ ಕಾಲದ್ದಾಗಿದೆ)

2. ಶಂಕರೇಶ್ವರ ದೇವಾಲಯ. ಕೆರೆಗೋಡಿ ಗ್ರಾಮ. ದೇವಾಲಯದ ಒಳಗೆ ಬುದ್ಧ ವಿಗ್ರಹವಿರುವುದು ವಿಶೇಷ. ವಿಶ್ವೇಶ್ವರ, ನಂದಿವಿಗ್ರಹಗಳೂ ಇವೆ. ವೀರಶೈವ ಮಠವೊಂದಿದೆ.

3. ರಂಗಾಪುರದ ರಂಗನಾಥ ದೇವಾಲಯ.

**ನೊಣವಿನ ಕೆರೆ**

ತಿಪಟೂರು ತಾಲ್ಲೂಕಿನಲ್ಲಿ ತಿಪಟೂರಿಗೆ 13 ಕಿ.ಮೀ ದೂರದಲ್ಲಿರುವ ಹಳ್ಳಿ. ಇಲ್ಲಿ ಕೆಲವು ಶೈವ ಹಾಗೂ ವೈಷ್ಣವ ದೇವಾಲಯಗಳಿವೆ. ವಾಸ್ತು ಶಿಲ್ಪ ಹಾಗೂ ಕಲೆ ದೃಷ್ಟಿಯಿಂದ ಇವು ಗಮನಸೆಳೆಯುತ್ತವೆ.

1. **ನೊಣಬೇಶ್ವರ :** ತುರುವೇಕೆರೆ ಮಾರ್ಗದಲ್ಲಿ ದಿಬ್ಬವೊಂದರ ಮೇಲಿದೆ. ಇದೊಂದು ಚಿಕ್ಕಕಟ್ಟಡ. ಗರ್ಭಗೃಹ, ತೆರೆದ ಸುಕನಾಸಿ, ನವರಂಗ ಗಳಿವೆ. ಶಿವಲಿಂಗ ಮಧ್ಯಮಗಾತ್ರದ್ದಾಗಿ ಮೇಲ್ಭಾಗ ಚಪ್ಪಟೆಯಾಗಿರುವುದು ವಿಶೇಷ. ಸುಕನಾಸಿ ಹಾಗೂ ನವರಂಗದ ಕಂಬಗಳು ಅಷ್ಟಕೋನಗಳಿಂದ ಕೂಡಿದ್ದು ಗಂಟೆಯಾಕಾರದ ಕಂಠದ ಮೇಲೆ ಚಕ್ರಗಳನ್ನು ಹೊಂದಿವೆ. ನವರಂಗದ ಭುವನೇಶ್ವರಿಯಲ್ಲಿ ಒಂಬತ್ತು ಫಲಕಗಳಿದ್ದು ಮಧ್ಯದಲ್ಲಿ ಪದ್ಮವನ್ನು ಬಿಡಿಸಲಾಗಿದೆ ದೇವಾಲಯದಲ್ಲಿ ಲತಾಪಟ್ಟಿಕೆಗಳನ್ನು ಕಾಣುತ್ತೇವೆ.

2. **ಗರಿಗೇಶ್ವರ ದೇವಾಲಯ :** ನೊಣಬೇಶ್ವರ ದೇವಾಲಯದ ಉತ್ತರಕ್ಕಿದೆ. ಇವೆರಡೂ ಅವಳಿ ದೇವಾಲಯಗಳಂತೆ ತೋರುತ್ತವೆ. ಗರಿಗೇಶ್ವರ ದೇವಾಲಯವು ನೊಣಬೇಶ್ವರ ದೇವಾಲಯವನ್ನು ಹೋಲುತ್ತದೆ.

3. **ಶಾಂತೇಶ್ವರ ದೇವಾಲಯ :** ಇದು ಗರಿಗೇಶ್ವರ ದೇವಾಲಯಕ್ಕೆ ಸಮೀಪದಲ್ಲಿದೆ. ಸುಕನಾಸಿ ಹಾಗೂ ಹೆಚ್ಚು ಅಲಂಕೃತ ಕಂಬಗಳಿವೆ. ನವರಂಗದಲ್ಲಿ ಒಂದು ಪ್ರಾಚೀನ ನಂದಿವಿಗ್ರಹವಿದೆ.

**4. ಕಲ್ಲೇಶ್ವರ ದೇವಾಲಯ :** 11ನೇ ಶತಮಾನದ್ದಾಗಿದೆ. ಚಿಕ್ಕ ಗರ್ಭಗೃಹ, ತೆರೆದ ಸುಕನಾಸಿ, ನವರಂಗಗಳನ್ನು ಹೊಂದಿದೆ.

**5. ವೇಣುಗೋಪಾಲ ದೇವಾಲಯ :** ಹೊಯ್ಸಳರ ಕಾಲದ ತ್ರಿಕೂಟಾಚಲ, ಒಳಗಿನ ನವರಂಗ, ಪಶ್ಚಿಮದ ಸುಕನಾಸಿ, ಮೂರು ಗರ್ಭ-ಗೃಹಗಳು. ಮಹಾದ್ವಾರ ಇವೆಲ್ಲ ಹೊಯ್ಸಳರ ಕಾಲದ ರಚನೆಗಳು. ಉಳಿದಂತೆ ವಿಜಯನಗರ ಕಾಲದ ರಚನೆಗಳಾಗಿವೆ. ದಕ್ಷಿಣದ ಗರ್ಭಗೃಹದಲ್ಲಿ ವೇಣುಗೊಪಾಲ ಉತ್ತರದಲ್ಲಿ ಯೋಗಾನರಸಿಂಹ ಹಾಗೂ ಪಶ್ಚಿಮ ಗರ್ಭಗೃಹದಲ್ಲಿ ಜನಾರ್ದನ ವಿಗ್ರಹಗಳಿವೆ. ಇವೆಲ್ಲ ಹೊಯ್ಸಳ ಶಿಲ್ಪಗಳು.

**6. ಬ್ಯಾಟರಾಯ ದೇವಾಲಯ :** ಕ್ರಿ. ಶ. 16ನೆಯ ಶತಮಾನದ್ದಾಗಿದೆ. ಇದರ ನವರಂಗದ ಕಂಬವೊಂದರ ಮೇಲೆ ಗಡ್ಡದಾರಿ ಹಾಗೂ ಟೋಪಿ ಹಾಕಿಕೊಂಡಿರುವ ಒಂದು ಪುರುಷ ವಿಗ್ರಹವಿದೆ. ಇದು ದೇವಾಲಯ ನಿರ್ಮಿಸಿದ ಕೊನೇರಿ ಅಯ್ಯಂಗಾರ್ಯರ ಚಿತ್ರವೆಂದು ಹೇಳುತ್ತಾರೆ. ನವರಂಗದ ಕಂಬಗಳ ಮೇಲೆ ವಿಜಯನಗರದ ಕೃಷ್ಣದೇವರಾಯ, ಅವನ ರಾಣಿಯರ ಮೂರ್ತಿಗಳಿರುವುದು ವಿಶೇಷ.

ಗ್ರಾಮ ದೇವತೆ ಉಡಲಸಮ್ಮ, ಗೊಲ್ಲಮ್ಮ, ಕೋಡಿ ಬಸವಣ್ಣನ ದೇವಸ್ಥಾನಗಳು ಇತರ ದೇವಾಲಯಗಳಾಗಿವೆ. ಪ್ರತಿವರ್ಷ ಮೇ ತಿಂಗಳಲ್ಲಿ ನೊಣವಿನ ಕೆರೆಯಲ್ಲಿ ಬ್ಯಾಟರಾಯಸ್ವಾಮಿ ರಥೋತ್ಸವ ನಡೆಯುತ್ತದೆ.

**ವಿಘ್ನಸಂತೆ :**

ತಿಪಟೂರಿನ ಆಗ್ನೇಯಕ್ಕೆ 16 ಕಿ.ಮೀ. ದೂರದಲ್ಲಿದೆ. ನೊಣವಿನಕೆರೆಗೆ 5 ಕಿ.ಮೀ. ದೂರಕ್ಕಿರುವ ಈ ಹಳ್ಳಿಯ ಹಳೇ ಹೆಸರು ಇಗನ ಸಂತೆ.

ಲಕ್ಷ್ಮಿನರಸಿಂಹ ದೇವಾಲಯ ಇಲ್ಲಿನ ಪ್ರಮುಖ ದೇವಾಲಯ. 1286 ರಲ್ಲಿ ಇದು ಹೊಯ್ಸಳರಿಂದ ನಿರ್ಮಾಣಗೊಂಡುದಾಗಿ ತಿಳಿದು ಬರುತ್ತದೆ. ಇದು ಹೊಯ್ಸಳ ಶೈಲಿಯ ತ್ರಿಕೂಟಾಚಲ. ದೇವಾಲಯದ ಶಿಖರ ಸುಂದರ ರಚನೆಯುಳ್ಳದ್ದಾಗಿದೆ. ಮುಖ್ಯ ಗರ್ಭಗೃಹದಲ್ಲಿ ಕೇಶವ ದೇವರು, ಪಶ್ಚಿಮದ ಗರ್ಭಗುಡಿಯಲ್ಲಿ ಲಕ್ಷ್ಮೀನಾರಾಯಣ ಹಾಗೂ ದಕ್ಷಿಣದ ಗರ್ಭಗುಡಿಯಲ್ಲಿ

ವೇಣುಗೋಪಾಲ ವಿಗ್ರಹಗಳು ಪ್ರತಿಷ್ಠಾಪನೆಯಾಗಿವೆ. ಈ ಮೂರ್ತಿಗಳು ಸುಂದರ ರಚನೆಗಳಾಗಿವೆ.

ಬಾಲಲಿಂಗೇಶ್ವರ ದೇವಾಲಯ, ಭೈರವ ದೇವಾಲಯ, ಬನಶಂಕರಿ ದೇವಾಲಯ ಇವು ವಿಘ್ನಸಂತೆ ಗ್ರಾಮದ ಇತರ ದೇವಾಲಯಗಳಾಗಿವೆ.

## ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ದೇವಾಲಯಗಳು

ತಾಲ್ಲೂಕಿನ ಪಟ್ಟಣವಾದ ಚಿಕ್ಕನಾಯಕನ ಹಳ್ಳಿಯಂತ ದ್ರಾವಿಡ ಶೈಲಿಯ ದೊಡ್ಡದೂ, ಸುಂದರವೂ, ಆದ ವೆಂಕಟರಮಣಸ್ವಾಮಿ ದೇವಾಲಯವಿದೆ. ರಾಮೇಶ್ವರ, ಹುಳಿಯಾರು ಆಂಜನೇಯ, ಬ್ರಹ್ಮಪುರಿ ಆಂಜನೇಯ, ಗ್ರಾಮ ದೇವತೆ ಹಿರಿಮಾವರದಾ ಎಲ್ಲಮ್ಮ (ರೇಣುಕಾ) ದೇವಿ ದೇವಾಲಯಗಳಿವೆ. ರೇಣುಕಾದೇವಿಯ ಪತಿ ಜಮದಗ್ನಿ ಕುಳಿತಿರುವ ಕಲ್ಲಿನ ವಿಗ್ರಹ ಒಂದು ಅಡಿ ಎತ್ತರವಿದ್ದು ಎಲ್ಲಮ್ಮನ ವಿಗ್ರಹದ ಒಲಗಡೆಯಲ್ಲಿದೆ. ಈ ಊರಿನಲ್ಲಿ ತಾತಯ್ಯನ ಗೋರಿ ಎಂದು ಒಂದು ಮುಸ್ಲಿಂ ಸಮಾಧಿ ಇದ್ದು ಪ್ರತಿವರ್ಷ ಉರುಸ್ ನಡೆಯುತ್ತದೆ.

**ತಾಲ್ಲೂಕಿನ ಇತರ ದೇವಾಲಯಗಳು :**

1. ಮಹಾಲಿಂಗೇಶ್ವರ ದೇವಾಲಯ, ದಬ್ಬೆಘಟ್ಟ. (ಮೂರು ಗರ್ಭಗುಡಿಗಳು–ಹೊಯ್ಸಳೇಶ್ವರ, ಬ್ರಹ್ಮೇಶ್ವರ, ಮಾದೇಶ್ವರ. )
2. ಪಾತಾಳಲಿಂಗೇಶ್ವರ ಗುಡಿ, ದೊಡ್ಡ ಬಿದರೆ (ನೂರು ಲಿಂಗಗಳಿವೆ)
3. ಸಿದ್ಧರಾಮೇಶ್ವರ ದೇವಾಲಯ, ಯಳನಾಡು : ಇಲ್ಲಿ ಪೂಜಾ ಪ್ರತಿಮೆ ಲಿಂಗಾಕೃತಿಯ ಮಾತ್ರ.
4. ರಂಗನಾಥಸ್ವಾಮಿ ಗುಡಿ, ಹೊನ್ನೆಬಾಗಿ.
5. ಶಾಂತಮಲ್ಲಪ್ಪ, ಹಂಜೇರಪ್ಪ ದೇವಾಲಯಗಳು, ಒಡೇರಹಳ್ಳಿ.
6. ಗೋಪಾಲಕೃಷ್ಣ ದೇವಾಲಯ, ಕಂದಿಕೆರೆ.
7. ಮರುಳಸಿದ್ದೇಶ್ವರ ಗದ್ದುಗೆ, ಕುಪ್ಪೂರು.
8. ಮಲ್ಲಿಕಾರ್ಜುನ ದೇವಾಲಯ, ಪಂಕಜನಹಳ್ಳಿ.

**ಹುಳಿಯಾರು**

ಚಿಕ್ಕನಾಯಕನಹಳ್ಳಿಗೆ 24 ಕಿ.ಮೀ. ದೂರಕ್ಕಿದೆ. ಇಲ್ಲಿ ರಂಗನಾಥ ಮತ್ತು ಮಲ್ಲೇಶ್ವರ ದೇವಾಲಯಗಳಿವೆ. ರಂಗನಾಥ ಹೊಯ್ಸಳ ಶೈಲಿಯ ಗುಡಿ ವಿಗ್ರಹ ಐದು ಅಡಿ ಎತ್ತರವಿದೆ. ಅನಂತ ಶಯನದಲ್ಲಿ ಒರಗಿರುವ ಶ್ರೀ ರಂಗ ನಾಥನ ನಾಭಿಯಲ್ಲಿ ಬ್ರಹ್ಮ, ಶಿರದಲ್ಲಿ ಶ್ರೀದೇವಿ, ಪಾದದಲ್ಲಿ ಭೂದೇವಿ ಚಿತ್ರಣವಿದೆ. ಇಲ್ಲಿರುವ ಗಣಪತಿ ವಿಗ್ರಹ ಐದು ಅಡಿ ಎತ್ತರವಿದೆ. ಮಲ್ಲೇಶ್ವರ ದೇವಾಲಯ ಚಾಳುಕ್ಯರ ಕಾಲದ್ದಾಗಿದೆ. ನವರಂಗದ ಒಳಗೆ ಸುಂದರವಾದ ಪುಷ್ಪಗಳ ಕೆತ್ತನೆ ಇದೆ.

**ಶೆಟ್ಟಿಕೆರೆ :**

ತಾಲ್ಲೂಕಿನ ಕೇಂದ್ರದಿಂದ 8 ಕಿ.ಮೀ. ದೂರಕ್ಕಿದೆ ಇಲ್ಲಿ ಯೋಗ ಮಾಧವ ದೇವಾಲಯ ಪ್ರಸಿದ್ಧವಾಗಿದೆ. ದೇವಾಲಯದ ಜಗತಿ ನಕ್ಷತ್ರಾಕಾ ರಕ್ಕಿದೆ. ಮೂರು ಗರ್ಭಗುಡಿಗಳಿವೆ. ವೇಣುಗೋಪಾಲ, ಲಕ್ಷ್ಮೀನಾರಾಯಣ ಯೋಗಮಾಧವ ವಿಗ್ರಹಗಳು ಈ ಗರ್ಭಗುಡಿಯಲ್ಲಿವೆ. ಇಲ್ಲಿ ರಂಗನಾಥ ಸ್ವಾಮಿ, ಹನುಮಂತ ದೇವಾಲಯಗಳೂ ಇವೆ.

ಚಿಕ್ಕನಾಯಕನ ಹಳ್ಳಿ ತಾಲ್ಲೂಕಿನಲ್ಲಿ ಜರುಗುವ ಜಾತ್ರೆಗಳು ಹಲವು. ದಾಸುಡಿಯ ಆಂಜನೇಯಸ್ವಾಮಿ ಜಾತ್ರೆ, ಮುದ್ದೇನಹಳ್ಳಿ ಬಾಗಲ ಬಸವೇಶ್ವರ ಜಾತ್ರೆ, ಕರೆಹಳ್ಳಿ ರಂಗಸ್ವಾಮಿ ಜಾತ್ರೆ, ಚಿಕ್ಕನಾಯಕನಹಳ್ಳಿ ಪ್ರಸನ್ನೇಶ್ವರಸ್ವಾಮಿ ಜಾತ್ರೆ ಇವು ಪ್ರಸಿದ್ಧ.

## ಗುಬ್ಬಿ ಚೆನ್ನಬಸವೇಶ್ವರ ದೇವಾಲಯ

ಗುಬ್ಬಿ ಒಂದು ತಾಲ್ಲೂಕು ಕೇಂದ್ರ. ಈ ಊರಿಗೆ ಅಮರಗುಂಡ ಚಟಕಪುರ ಎಂಬ ಹೆಸರುಗಳೂ ಇದ್ದವು. ಎರಡು ಗುಬ್ಬಚ್ಚಿಗಳು ಮಲ್ಲಿ ಕಾರ್ಜುನ ಪುರಾಣವನ್ನು ಸದಾಕೇಳುತ್ತಿದ್ದು ಪುರಾಣ ಓದಿ ಮುಗಿಸಿದ ದಿನ ಪ್ರಾಣಬಿಟ್ಟವೆಂದೂ, ಊರಿಗೆ ಗುಬ್ಬಿ ಎಂಬ ಹೆಸರು ಬಂದಿತೆನ್ನುತ್ತಾರೆ. ಇಲ್ಲಿನ ಮಲ್ಲಿಕಾರ್ಜುನ ದೇವಾಲಯದಲ್ಲಿ ಗುಬ್ಬಚ್ಚಿಗಳದೆನ್ನುವ ಸಮಾಧಿ ಇದೆ. ಗುಬ್ಬಿ ಚನ್ನಬಸವೇಶ್ವರ ದೇವಾಲಯ ಊರಿನ ದೊಡ್ಡ ದೇವಾಲಯ, ಗುಬ್ಬಿ

ಯಲ್ಲಿ ಗದ್ದೆ ಮಲ್ಲೇಶ್ವರ ದೇವಾಲಯವಿದ್ದು ಇವರಲ್ಲಿ ಮೂರು ಗರ್ಭಗೃಹ ಗಳಿವೆ. ದಕ್ಷಿಣಾಮೂರ್ತಿ, ಪಾರ್ವತಿ, ವೀರಭದ್ರ ಇವು ಗರ್ಭಗುಡಿಯ ಮೂರ್ತಿಗಳು. ವೈಲಪ್ಪ ಅಥವಾ ಓಹಿಲಪ್ಪ ದೇವಸ್ಥಾನದಲ್ಲಿ ಭಕ್ತ ಓಹಿಲನ ವಿಗ್ರಹವಿದೆ.

ಬ್ಯಾಟರಾಯಸ್ವಾಮಿ, ಜನಾರ್ದನ ದೇವಾಲಯಗಳು ಚಿದಂಬರಾಶ್ರಮ ದಲ್ಲಿ ದತ್ತಾತ್ರೇಯ ಮಂದಿರ ಇವು ಗುಬ್ಬಿಯ ಇತರ ದೇವಾಲಯಗಳು.

**ಕುಣಿಗಲ್ :**

ಒಂದು ತಾಲ್ಲೂಕು ಕೇಂದ್ರ. ಹಿಂದೆ ಕುಣಿಂಗಲುನಾಡು ಎಂದು ಖ್ಯಾತಿ ಪಡೆದಿತ್ತು. ನರಸಿಂಹನ ಗುಡಿ ಇಲ್ಲಿ ಪ್ರಮುಖವಾಗಿದೆ. ಆದರೆ ಇಲ್ಲಿರುವುದು ಜನಾರ್ಧನನ ವಿಗ್ರಹ. ಸೋಮೇಶ್ವರ ದೇವಾಲಯ, ವೆಂಕಟರಮಣ ಇತರ ದೇವಾಲಯಗಳು. ಶಿವರಾಮೇಶ್ವರ ದೇವಾಲಯ ಹೊಸದಾಗಿ ಕಟ್ಟಿದ್ದು ದಾಗಿದೆ. ಇದರಲ್ಲಿ ಗಂಗ ಶೈಲಿಯ ಮಹಿಷಾಸುರಮರ್ಧಿನಿ ವಿಗ್ರಹವಿದೆ.

**ಎಡೆಯೂರು :**

ಇದೊಂದು ವೀರಶೈವ ಧಾರ್ಮಿಕ ಕೇಂದ್ರ. ಇಲ್ಲಿ ತೋಂಟದ ಸಿದ್ಧ ಲಿಂಗಸ್ವಾಮಿಗಳ ಸಮಾಧಿ ಇದೆ. ಸಿದ್ಧಲಿಂಗೇಶ್ವರ ದೇವಾಲಯ ದ್ರಾವಿಡ ವಾಸ್ತುಶೈಲಿಯಲ್ಲಿದೆ. ಮುಖಮಂಟಪ ಮತ್ತು ಹಜಾರದ ಚಾವಣಿಯ ಮೇಲೆ ಸಿದ್ಧಲಿಂಗಸ್ವಾಮಿಗಳ ಜೀವನದ ಹಲವು ದೃಶ್ಯಗಳನ್ನೂ ಶಿವನ ಇಪ್ಪತ್ತೈದು ಲೀಲೆಗಳನ್ನೂ ಚಿತ್ರಿಸಿ ಕನ್ನಡದಲ್ಲಿ ವಿವರಿಸಲಾಗಿದೆ. ಸಿದ್ಧಲಿಂಗ ಯತಿಗಳ ಚಿತ್ರವೊಂದು ಇಲ್ಲಿ ಭಕ್ತರನ್ನು ಸೆಳೆಯುತ್ತದೆ. ಗದ್ದುಗೆಯ ಮೇಲೆ ಬೆಳ್ಳಿ ಕವಚವುಳ್ಳ ವಿಭೂತಿ ಲಿಂಗವೂ ಲೋಹದ ಉತ್ಸವ ಮೂರ್ತಿಯೂ ಇದೆ. ಎಡೆಯೂರು ಕುಣಿಗಲ್ ತಾಲ್ಲೂಕಿನ ಒಂದು ಗ್ರಾಮ.

**ಅಮೃತೂರು :**

ಕುಣಿಗಲ್ಲಿನಿಂದ 22 ಕಿ.ಮೀ. ದೂರಕ್ಕಿದೆ. ಇಲ್ಲಿ ದ್ರಾವಿಡ ಶೈಲಿಯ ಚೆನ್ನಕೇಶವ ದೇವಾಲಯವಿದೆ, ಕಂಬಗಳು ಶಿಲ್ಪಗಳಿಂದ ಕೂಡಿವೆ. ಇದೇ ಊರಿನಲ್ಲಿ ಸೋಮೆಶ್ವರ ದೇವಾಲಯದಲ್ಲಿ ಉದ್ಭವ ಲಿಂಗವಿದೆ. ದೀಪಸ್ಥಂಭ ಉಯ್ಯಾಲೆ ಕಂಬ ಈ ದೇವಾಲಯದ ಇತರ ಆಕರ್ಷಣೆಗಳು.

**ಹುಲಿಯೂರು ದುರ್ಗ :**

ಕುಣಿಗಲಿನ ದಕ್ಷಿಣಕ್ಕೆ 24 ಕಿ.ಮಿ.ೂ ದೂರಕ್ಕಿದೆ. ಇಲ್ಲಿನ ಬೆಟ್ಟದ ಹತ್ತಿರ ಗೋಪಾಲಕೃಷ್ಣ ದೇವಾಲಯವೂ ಬೆಟ್ಟದ ಪಕ್ಕದ ಹೇಮಗಿರಿ ಶಿಖರ ದಲ್ಲಿ ಮಲ್ಲಿಕಾರ್ಜುನ ದೇವಾಲಯವೂ ಇದೆ. ವರದರಾಜ ದೇವಾಲಯ ಪೂರ್ವದ ಇಳಿಜಾರು ಭಾಗದಲ್ಲಿದ್ದು ಇಲ್ಲಿನ ಪೂಜಾ ವಿಗ್ರಹ ಗುಂಡಾಗಿದೆ. ಇದನ್ನು ಹೇಮಗಿರಿಯಪ್ಪ ಎನ್ನುವರು. ದಕ್ಷಿಣ ಇಳಿಜಾರು ಭಾಗದಲ್ಲಿ ಭೈರವ ದೇವಾಲಯವಿದೆ.

ಹುತ್ರಿದುರ್ಗದಲ್ಲಿ ಶಂಕರೇಶ್ವರ ದೇವಾಲಯವಿದೆ. ಆದಿನಾರಾಯಣ, ವೀರಭದ್ರ, ಆಂಜನೇಯ ಇತರ ದೇವಾಲಯಗಳು.

**ಮಧುಗಿರಿ :**

ಮಧುಗಿರಿ ತಾಲ್ಲೂಕು ಕೇಂದ್ರ. ಇದರ ಮೊದಲ ಹೆಸರು ಮದ್ದಗಿರಿ. ಮಧು ಎಂಬ ಹೆಸರಿನ ಗಿರಿಯ ಬುಡದಲ್ಲಿ ಊರು ಇದ್ದುದರಿಂದ ಈ ಊರಿಗೆ ಮಧುಗಿರಿ ಎಂಬ ಹೆಸರು ಬಂದಿದೆ. ಇಲ್ಲಿ ಒಂದು ಕೋಟೆಯ ಮೇಲೆ ಗೋಪಾಲಕೃಷ್ಣ ದೇವಸ್ಥಾನವಿದೆ. ಅಲ್ಲಿ ಭೀಮನ ಬುಗ್ಗೆಯ ಹತ್ತಿರ ಆಂಜನೇಯನ ಗುಡಿ ಇದೆ. ವೆಂಕಟರಮಣ ಸ್ವಾಮಿ ದೇವಸ್ಥಾನ ಮಧುಗಿರಿಯ ಪ್ರಮುಖ ಆಕರ್ಷಣೆಯಾಗಿದೆ.

ಮಧುಗಿರಿ ತಾಲ್ಲೂಕಿನ ದೊಡ್ಡ ದಾಳಿವಟ್ಟದಲ್ಲಿರುವ ದೊಡ್ಡ ಲಕ್ಷ್ಮಿನರ-ಸಿಂಹ ದೇವಾಲಯ ಪ್ರಸಿದ್ಧವಾಗಿದೆ. ಕೋಡಿಗೇನ ಹಳ್ಳಿಯಲ್ಲಿ ಕಂಬದರಾಯ ದೇವಾಲಯವಿದೆ. ಮಿಡಿಗೇಶಿ ಐತಿಹಾಸಿಕವಾಗಿ ಪ್ರಸಿದ್ಧವಾಗಿರುವ ಊರು. ಇಲ್ಲಿನ ಕೋಟೆ ಒಳಭಾಗದಲ್ಲಿ ಮೂರು ಹಿಂದು ದೇವಾಲಯಗಳಿವೆ. ಜಬಿ ಆಂಜನೇಯನ ಗುಡಿ ಪಾಳೆಯಗಾರರ ಕಾಲದ್ದಾಗಿದ್ದು ಅಲ್ಲಿ ದೊಡ್ಡ ಕಲ್ಲಿನ ಮೇಲೆ ಕೆತ್ತಲಾದ ಆಂಜನೇಯನ ಉಬ್ಬುಶಿಲ್ಪವಿದೆ. ಮಲ್ಲೇಶ್ವರನ ಗುಡಿ, ವೆಂಕಟರಮಣ ಗುಡಿ, ಇತರ ದೇವಾಲಯಗಳು. ಕೋಟೆಯ ಮುಖ್ಯ ದೇವಾಲಯವೆಂದರೆ ವೆಂಕಟರಮಣ ದೇವಾಲಯ. ಇದು ದ್ರಾವಿಡ ಶೈಲಿ ಯದಾಗಿದೆ. ಎತ್ತರವಾದ ಗೋಪುರವನ್ನು ಹೊಂದಿದೆ. ಇದರ ನವರಂಗದ

ಬಾಗಿಲಿನಲ್ಲಿರುವ ಗೂಡುಗಳಲ್ಲಿ ಗಣಪತಿ ಹಾಗೂ ವೀರಭದ್ರರ ಶಿಲ್ಪಗಳಿವೆ. ಐದಡಿ ಉದ್ದದ ಕಾಳಿಂಗ ಸರ್ಪದ ಮೇಲೆ ನರ್ತಿಸುತ್ತಿರುವ ಕೃಷ್ಣನ ಶಿಲ್ಪ ಈ ದೇವಾಲಯದಲ್ಲಿ ಗಮನ ಸೆಳೆಯುತ್ತದೆ. ಈ ದೇವಾಲಯ ಮಧು-ಗಿರಿಯ ವೆಂಕಟರಮಣ ದೇವಾಲಯವನ್ನು ಹೋಲುತ್ತದೆ. ದೇವಾಲಯದ ದ್ವಾರಮಂಟಪದ ಕಂಬಗಳು ಸಿಂಹಲಾಂಛನವನ್ನು ಹೊಂದಿವೆ. ದ್ವಾರ ಮಂಟಪದಲ್ಲಿ ಬಲದ ಸಣ್ಣಗುಡಿಯಲ್ಲಿ ಗಣೇಶ ಮತ್ತು ಎಡದ ಗುಡಿಯಲ್ಲಿ ಭೈರವನ ಮೂರ್ತಿಗಳಿವೆ.

**ಶಿರಾ :**

ಇತಿಹಾಸ ಪ್ರಸಿದ್ಧವಾದ ಸ್ಥಳ. ಶಿರಾವನ್ನು ಕೆಲಕಾಲ ಹೈದರ್ ಆಳಿದ್ದನು. ಶಿರಾದ ನವಾಬರು ಪ್ರಸಿದ್ಧಿ ಪಡೆದವರು. ಬಸಲತ್ ಜಂಗನು ಹೈದರನಿಗೆ ಶಿರಾದ ನವಾಬನೆಂದು ಬಿರುದನ್ನು ನೀಡಿದ್ದನು. 17-18ನೆಯ ಶತಮಾನಗಳಲ್ಲಿ ಶಿರಾ ಪ್ರಾಂತ್ಯದಿಂದ ಆಳಿದ ಒಂದು ಅರಸು ಮನೆತನ ಶಿರಾ ನವಾಬರು. ಹೈದರಾಲಿ 1761ರಲ್ಲಿ ಶಿರಾವನ್ನು ಗೆದ್ದು ತಾನು ನವಾಬನಾಗಿದ್ದನು.

ಶಿರಾದಲ್ಲಿ ಜಾಮಿಯಾ ಮಸೀದಿ ಇದ್ದು ಮಹಮದೀಯರ ಪ್ರಾರ್ಥನಾ ಮಂದಿರವಾಗಿದೆ.

ಶಿರಾ ತಾಲ್ಲೂಕಿನಲ್ಲಿ ಸೀಬಿ ಒಂದು ಪ್ರೇಕ್ಷಣೀಯ ಸ್ಥಳ. ಇಲ್ಲಿ ಪ್ರಸಿದ್ಧ ನರಸಿಂಹಸ್ವಾಮಿ ದೇವಾಲಯವಿದೆ. ಪ್ರತಿವರ್ಷ ಮಾಘಮಾಸದಲ್ಲಿ ಜಾತ್ರೆ ನಡೆಯುತ್ತದೆ. ತಾವರೆಕೆರೆ ಬಂಡಿ ರಂಗನಾಥಸ್ವಾಮಿ ಜಾತ್ರೆ ಪಟ್ಟ ನಾಯಕನ ಹಳ್ಳಿ ಗಂಗಬ್ರಹ್ಮೇಶ್ವರ ಜಾತ್ರೆ ಈ ತಾಲ್ಲೂಕಿನ ಪ್ರಸಿದ್ಧ ಜಾತ್ರೆಗಳಾಗಿವೆ.

**ಪಾವಗಡ :**

ತಾಲ್ಲೂಕು ಕೇಂದ್ರ. ಇಲ್ಲಿರುವ ಬೆಟ್ಟದ ಮೇಲೆ 'ಬೆಟ್ಟದ ಆಂಜನೇಯ ಎಂಬ ಏಳಡಿ ಎತ್ತರದ ವಿಗ್ರಹವಿದೆ. ಪಾವಗಡದಲ್ಲಿ ಗೋಪಾಲಕೃಷ್ಣ ದೇವಾಲಯವಿದೆ. ಈ ತಾಲ್ಲೂಕಿನ ಮುಖ್ಯ ಸ್ಥಳ ನಿಡುಗಲ್ಲು. ಹಿಂದೆ ಪಾಳೆ ಪಟ್ಟಿನ ಕೇಂದ್ರವಾಗಿತ್ತು. ಇಲ್ಲಿ ಬೆಟ್ಟದ ತುದಿಯಲ್ಲಿ ಹರಶಿಯ ಪುಟ್ಟಣ್ಣ

ನಾಯಕ ಕಟ್ಟಿದ ಬಸವನ ಗುಡಿ, ಸ್ವಲ್ಪ ಕೆಳಗೆ ತಿಮ್ಮಣ್ಣನಾಯಕನೆಂಬುವನು ಜೀರ್ಣೋದ್ಧಾರ ಮಾಡಿದ ಹಳೆಯ ಕಾಳಹಸ್ತೀಶ್ವರ ಗುಡಿ ಇವೆ. ಸುಂದರ ಶಿಲ್ಪಗಳಿದ್ದ ನಾಗೇಶ್ವರ ದೇವಾಲಯ, ಲಕ್ಷ್ಮಣೇಶ್ವರ ದೇವಾಲಯ ಇತರ ಗುಡಿಗಳು. ಬೆಟ್ಟದ ಮೊದಲವರಿಸಲ್ಲಿ ತಳದ ಗ್ರಾಮಕ್ಕೆ ಸೇರಿದಂತೆ ರಂಗ ಧಾಮನ ಮಂಟಪವೆಂಬ ಶಿಖರವಿರುವ ಒಂದು ಚಿಕ್ಕದೇವಾಲಯವಿದೆ. ನಿಡುಗಲ್ಲು ಗ್ರಾಮದ ಸುತ್ತ ಸನಿಹದಲ್ಲಿ ವೀರಭದ್ರ, ಪಾರ್ಶ್ವನಾಥ, ಆದಿನಾರಾಯಣ, ಲಕ್ಷ್ಮೀನರಸಿಂಹ, ಮಲೆ ಮಲ್ಲಿಕಾರ್ಜುನ, ಸೋಮೇಶ್ವರ, ನಗರೇಶ್ವರ ದೇವಾಲಯಗಳಿವೆ. ದುರ್ಗದ ಅಡಿಯಲ್ಲಿ ಹೊಟ್ಟೇಶ್ವರ(ನಾನೂರು ವರ್ಷಗಳಷ್ಟು ಹಳೆಯದು), ಕಾಶಿವಿಶ್ವೇಶ್ವರ ದೇವಾಲಯಗಳು ಇವೆ. ಬಂಗಾರ ನಾಯಕನ ಬೆಟ್ಟದಲ್ಲಿ ಕದಂಬರಾಯ ದೇವಸ್ಥಾನವಿದ್ದು ಇಲ್ಲಿ ಒಂದು ಕಂಬವೇ ಪೂಜಾವಿಗ್ರಹವಾಗಿದೆ. 13 ಅಡಿಯ ಕಲ್ಲಿನ ಕಂಬ ಇದಾಗಿದೆ. ಗುಂಡಲಪಳ್ಳಿಯಲ್ಲಿ ಈಶ್ವರ ಮತ್ತು ಆಂಜನೇಯ ದೇವಾಲಯಗಳಿವೆ.

**ಕೊರಟಗೆರೆ**

ಒಂದು ತಾಲ್ಲೂಕು ಕೇಂದ್ರ. ಈ ಊರಿನಲ್ಲಿ ಗೋಕುಲದ ಆಂಜನೇಯ ದೇವಾಲಯವಿದೆ. ಇಲ್ಲಿನ ಬೆಟ್ಟದ ಮಧ್ಯ ಎತ್ತರಕ್ಕೆ ಗಂಗಾಧರೇಶ್ವರ ದೇವಾಲಯವಿದೆ. ಬೆಟ್ಟದ ತುದಿಯಲ್ಲಿ ಒಂದು ಬಸವಣ್ಣನ ಗುಡಿ ಇದೆ.

ಹೊಳವನಹಳ್ಳಿ ಕೊರಟಗೆರೆಗೆ 6 ಕಿ. ಮೀ ದೂರದಲ್ಲಿದೆ. ಇಲ್ಲಿ ರಾಘವೇಂದ್ರಸ್ವಾಮಿ ಬೃಂದಾವನವಿರುತ್ತದೆ. ಇದರ ಸಮೀಪದ ಕ್ಯಾಮೇನ ಹಳ್ಳಿಯಲ್ಲಿ ಆಂಜನೇಯ ಜಾತ್ರೆ ವರ್ಷಕ್ಕೊಮ್ಮೆ ನಡೆದು ಪ್ರಸಿದ್ಧವೆನಿಸಿದೆ. ಅಗ್ರಹಾರ ತಾಲ್ಲೂಕಿನ ಒಂದು ಮುಖ್ಯ ಗ್ರಾಮ. ಇಲ್ಲಿ ವೀರಭದ್ರ ದೇವಾಲಯವಿದೆ. ಅಕ್ಕಿರಾಮ ಪೂರದಲ್ಲಿ ಹೈದರನ ಕಾಲದಲ್ಲಿ ಪುನರ್ರಚಿಸಲಾದ ವೆಂಕಟರಮಣದೇವಾಲಯವಿದೆ. ಬೂದಗಾವಿಯಲ್ಲಿ ಸಿದ್ಧರ ಬೆಟ್ಟವಿದ್ದು ಅಲ್ಲಿ ಗೋಸಲಸಿದ್ದೇಶ್ವರ ಸ್ವಾಮಿಯ ಸಮಾಧಿ ಇದೆ. ಇಲ್ಲಿಯ ಗುಹಾ ದೇವಾಲಯದ ಬಳಿ ಇರುವ ಬುಗ್ಗೆ ಸುವರ್ಣಮುಖಿಯ ಮೂಲವೆನ್ನುತ್ತಾರೆ.

## ದೇವರಾಯನದುರ್ಗ

ತುಮಕೂರಿಗೆ 18 ಕಿ. ಮೀ ಈಶಾನ್ಯಕ್ಕಿರುವ ಗಿರಿಕ್ಷೇತ್ರ. ಇದೊಂದು ಪ್ರವಾಸಾಕರ್ಷಣೀಯ ಕೇಂದ್ರವೂ ಆಗಿದೆ.

ದೇವರಾಯನದುರ್ಗ ಬೆಟ್ಟದವರುಗಳಲ್ಲಿ ಕೆಳಗಿನ ಸಮತಲ ಪ್ರದೇಶದಲ್ಲಿ ಲಕ್ಷ್ಮೀನರಸಿಂಹ ದೇವಾಲಯವಿದೆ. ದ್ರಾವಿಡ ಶೈಲಿಯ ಈ ದೇವಾಲಯವನ್ನು ಮೈಸೂರರಸರಾಗಿದ್ದ ಒಂದನೆಯ ಕಂಠೀರವ ನರಸರಾಜ ಒಡೆಯರು 17ನೇ ಶತಮಾನದಲ್ಲಿ ಕಟ್ಟಿಸಿದರು. ಪ್ರತಿವರ್ಷ ಚೈತ್ರಮಾಸದಲ್ಲಿ ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಇದರ ಸಮೀಪವೇ ಹನುಮಂತ ಅಥವಾ ಸಂಜೀವರಾಯನ ಗುಡಿ ಇದೆ.

ಬೆಟ್ಟದಲ್ಲಿ ಮತ್ತಷ್ಟು ಮೇಲೆ ಎರಡನೆ ಹಂತದ ಮಟ್ಟಸ ಪ್ರದೇಶವಿದೆ. ಅಲ್ಲಿ ರಾಮತೀರ್ಥ ಮತ್ತು ಧನುಸ್‌ತೀರ್ಥ ಎರಡು ದೋಣೆಗಳೂ ಹಾಗೂ ಸಮೀಪದಲ್ಲಿ ರಾಮಲಕ್ಷ್ಮಣ ಸೀತೆಯರ ವಿಗ್ರಹಗಳಿಂದ ಒಂದು ಗುಹೆ ಇದೆ. ಬೆಟ್ಟದ ಮೇಲುಗಡೆ ಲಕ್ಷ್ಮೀನರಸಿಂಹ ದೇವಾಲಯ ಪೂರ್ವಾಭಿಮುಖವಾಗಿದೆ. ಇಲ್ಲಿ ಗರ್ಭಗೃಹ, ಸುಕನಾಸಿ, ನವರಂಗ, ಮುಖಮಂಟಪಗಳಿವೆ. ದೇವಾಲಯದ ಹತ್ತಿರ ಒಂದು ದೋಣಿ ಮತ್ತು ಒಂದು ಗುಹೆ ಇವೆ. ಗುಹೆಯ ಮೆಟ್ಟಿಲುಗಳು ಪಾದತೀರ್ಥವೆಂಬ ನೀರಿನ ಹೊಂಡಕ್ಕೆ ಬಿಡುತ್ತವೆ. ನೀರು ದೇವರ ಪಾದದಿಂದ ಹುಟ್ಟುವುದರಿಂದ ತೀರ್ಥಕ್ಕೆ ಪಾದತೀರ್ಥ ಎಂಬ ಹೆಸರಿದೆ. ಮೇಲೆ ಒಂದು ಗರುಡನ ಚಿಕ್ಕಗುಡಿ ಇದೆ. ಇದರ ಬಳಿ ಇರುವ ದೀವಿಗೆ ಗುಂಡಿನ ಮೇಲೆ ದೀಪಹಚ್ಚಿದಾಗ ಬಹುದೂರದವರೆಗೆ ಕಾಣುತ್ತದೆ.

ದೇವರಾಯನ ದುರ್ಗದಿಂದ ಸ್ವಲ್ಪ ದೂರದಲ್ಲಿ ತುಮಕೂರು ರಸ್ತೆಯ ಪಕ್ಕಕ್ಕೆ ನಾಮದ ಚಿಲುಮೆ ಇದೆ.

ಚಿಕ್ಕದೇವರಾಜ ಒಡೆಯರು 1696ರಲ್ಲಿ ಈ ದುರ್ಗವನ್ನಾಕ್ರಮಿಸಿಕೊಂಡ ಮೇಲೆ ಇದಕ್ಕೆ ದೇವರಾಯನದುರ್ಗ ಎಂಬ ಹೆಸರು ಬಂದಿದೆ. ದೇವರಾಯನ ದುರ್ಗದ ದಕ್ಷಿಣದಲ್ಲಿ ಶಿಂಷಾ ನದಿ ಹುಟ್ಟುತ್ತದೆ.

ತುಮಕೂರು ಜಿಲ್ಲೆಯಲ್ಲಿ ಸಿದ್ಧಗಂಗಾ, ದೇವರಾಯನದುರ್ಗ, ಗುಬ್ಬಿ ಚೆನ್ನಬಸವೇಶ್ವರ, ಕೈದಾಳ, ಗೂಳೂರು, ಎಡೆಯೂರು ಸಿದ್ಧಲಿಂಗೇಶ್ವರ ಖ್ಯಾತಿವೆತ್ತ ಸ್ಥಳಗಳಾಗಿವೆ. ಪ್ರವಾಸಿಗಳು ಇಲ್ಲಿಗೆಲ್ಲ ಮೇಲಿಂದ ಮೇಲೆ ಬರುತ್ತಿರುತ್ತಾರೆ.

# ಚಿತ್ರದುರ್ಗ ಜಿಲ್ಲೆಯ ದೇವಾಲಯಗಳು

ಚಿತ್ರದುರ್ಗ ಐತಿಹಾಸಿಕವಾಗಿಯೂ ನವ ಶಿಲಾಯುಗದಿಂದಲೂ ಪ್ರಸಿದ್ಧವಾಗಿರುವ ಜಿಲ್ಲೆಯಾಗಿದೆ. ಚಿತ್ರದುರ್ಗ, ಚಳ್ಳಕೆರೆ, ಹಿರಿಯೂರು, ಮೊಳಕಾಲ್ಮೂರು, ದಾವಣಗೆರೆ. ಜಗಳೂರು, ಹೊಸದುರ್ಗ. ಹೊಳಲ್ಕೆರೆ ಮತ್ತು ಹರಿಹರ ಇವು ಈ ಜಿಲ್ಲೆಯ ಒಂಬತ್ತು ತಾಲ್ಲೂಕುಗಳು.

ಚಿತ್ರದುರ್ಗ ಗಂಡುಮೆಟ್ಟಿದ ಭೂಮಿ. ವೀರ ಮದಕರಿನಾಯಕ ಆಳಿದ ಊರು. ಈ ಜಿಲ್ಲೆ ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತೆಂಬುದು ಅಶೋಕನ ಶಾಸನಗಳಿಂದ ತಿಳಿದು ಬರುತ್ತದೆ. ಬಳಿಕ ಸಾತವಾಹನರು. ಬನವಾಸಿ ಕದಂಬರು. ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು, ನೊಳಂಬರು, ಹೊಯ್ಸಳರು, ದೇವಗಿರಿಯಾದವರು. ವಿಜಯನಗರದರಸರು, ಚಿತ್ರದುರ್ಗದ ಪಾಳೆಯಗಾರರು, ಟಿಪ್ಪು, ಬ್ರಿಟೀಷರು ಈ ಜಿಲ್ಲೆಯ ಮೇಲೆ ಪ್ರಭುತ್ವವಿಟ್ಟುಕೊಂಡಿದ್ದರು. ಚಿತ್ರದುರ್ಗ ಜಿಲ್ಲೆಯಲ್ಲಿ ಹಲವು ಪ್ರಾಚೀನ ಸ್ಮಾರಕಗಳಿವೆ.

ಈ ಜಿಲ್ಲೆಯಲ್ಲಿ ಇತಿಹಾಸ ಪ್ರಸಿದ್ಧ, ಪುರಾಣ ಪ್ರಸಿದ್ಧವಾದ ಹಲವು ದೇವಾಲಯಗಳಿವೆ. ಚಾಳುಕ್ಯರ ಕಾಲದಲ್ಲೂ ಹೊಯ್ಸಳರ ಕಾಲದಲ್ಲೂ ಈ ಜಿಲ್ಲೆಯಲ್ಲಿ ಹಲವಾರು ದೇವಾಲಯಗಳು ನಿರ್ಮಾಣಗೊಂಡವು. ಚಿತ್ರದುರ್ಗದ ಪಾಳೆಯಗಾರರು ಕಟ್ಟಿಸಿದ ದೇವಾಲಯಗಳು ಚಿತ್ರದುರ್ಗದ ಬೆಟ್ಟದ ಮೇಲೂ ಇತರ ಕಡೆಗಳಲ್ಲೂ ಉಳಿದು ಬಂದಿವೆ.

## ಚಿತ್ರದುರ್ಗ

ಇದು ಜಿಲ್ಲೆಯ ಆಡಳಿತ ಕೇಂದ್ರ. ಚಿತ್ರದುರ್ಗ ತಾಲ್ಲೂಕಿನ ಮುಖ್ಯ ಪಟ್ಟಣ. ಬಂಡೆಗಲ್ಲುಗಳಿಂದಾವೃತವಾದ ಎತ್ತರವಾದ ಬೆಟ್ಟದ ಬುಡದಲ್ಲಿ ಉತ್ತರ ದಿಕ್ಕಿನ ಕಡೆ ಊರು ವಿಸ್ತರಿಸಿದೆ. ಪುರಾಣ ಕಾಲದಲ್ಲಿ ಇಲ್ಲಿ ಹಿಡಿಂಬ ನೆಂಬ ರಾಕ್ಷಸನು ವಾಸಿಸುತ್ತಿದ್ದನೆಂದು ಈ ಊರಿಗೆ ಹಿಡಿಂಬ ಪಟ್ಟಣ, ಚಿನ್ಮೂಲಾದ್ರಿ ಎಂಬ ಹೆಸರುಗಳಿವೆ. ಚಿತ್ರದುರ್ಗದ ಬೆಟ್ಟದ ಮೇಲೆ ಹಿಡಿಂಬೇಶ್ವರ ದೇವಾಲಯವಿದೆ. ಇದೊಂದು ಪ್ರಾಚೀನ ದೇವಾಲಯ. ವಿಜಯನಗರದರಸರ ಕಾಲಕ್ಕೆ ಈ ಊರು ಚಿತ್ರದುರ್ಗ, ಚಿತ್ರಕಲ್ ದುರ್ಗ ಎಂದು ಹೆಸರಾಯಿತು.

ಚಿತ್ರದುರ್ಗದ ಪ್ರಧಾನ ಆಕರ್ಷಣೆ ಕೋಟೆ ಹಾಗೂ ಪ್ರಾಚೀನ ದೇವಾಲಯಗಳು. ಕೋಟೆ ಏಳುಸುತ್ತಿನ ಬೆಟ್ಟದ ಮೇಲೆ ಒಂದು ಸುಭದ್ರ ಕಟ್ಟಡ. ಮೇಲುಕೋಟೆ ಏರಿ ಹೋಗುವಾಗ ಐದು ಬಾಗಿಲುಗಳನ್ನು ಹಾದು ಹೋಗ ಬೇಕು. ಐದನೆಯ ಬಾಗಿಲು ಹಾದುಹೋಗುತ್ತಿದ್ದಂತೆ ದೇವಾಲಯಗಳು ಸಿಗುತ್ತವೆ. ಬೆಟ್ಟದ ಮೇಲೆ ಸಂಪಿಗೆ ಸಿದ್ದೇಶ್ವರ. ಹಿಡಿಂಬೇಶ್ವರ, ಏಕನಾಥೇಶ್ವರಿ. ಫಲ್ಗುಣೇಶ್ವರ, ಗೋಪಾಲಕೃಷ್ಣ, ಸುಬ್ಬರಾಯ ಮತ್ತು ಬಸವ ದೇವಾಲಯಗಳಿವೆ. ಹಿಡಿಂಬೇಶ್ವರ, ಸಿದ್ದೇಶ್ವರ, ಫಲ್ಗುಣೇಶ್ವರ, ಏಕನಾಥೇಶ್ವರಿ ದೇವಾಲಯಗಳು ಸ್ವಾಭಾವಿಕ ಗವಿಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ಶಿವ ದೇವಾಲಯಗಳು. ಹೊಯ್ಸಳರ ಆಳ್ವಿಕೆ ಕಾಲದಲ್ಲಿ ಇವುಗಳ ಮುಂದೆ ನವರಂಗಗಳೂ ಮುಖಮಂಟಪಗಳೂ. ಜಗತಿಗಳೂ ನಿರ್ಮಾಣಗೊಂಡವು. ಬಸವೇಶ್ವರ ದೇವಾಲಯ ಬಳಪದ ಕಲ್ಲಿನಲ್ಲಿ ರಚಿತವಾದ, ಗೆರುಮಾಳೆದಂಡನಾಯಕನ ಕಾಲದ ಕಟ್ಟಡ. ವಿಜಯನಗರದರಸರ ಕಾಲದಲ್ಲಿ ಸಿದ್ದೇಶ್ವರ, ಹಿಡಿಂಬೇಶ್ವರ ಗುಡಿಗಳ ಮುಂದಿನ ಮೂರಂತಸ್ತಿನ ಗೋಪುರ ದ್ವಾರಗಳು ಉಯ್ಯಾಲೆ ಕಂಬಗಳು ನಿರ್ಮಾಣವಾದವು ಎನ್ನುತ್ತಾರೆ. ಏಕನಾಥೇಶ್ವರಿ ದೇವಾಲಯದ ಮುಂದೆ ಕಾಣುವ ನಲವತ್ತು ಅಡಿಗೂ ಹೆಚ್ಚು ಎತ್ತರದ ಕಲ್ಲಿನ ಕಂಬ, ಉಯ್ಯಾಲೆ ಕಂಬಗಳು ನಾಯಕರ ಕಾಲದ ರಚನೆಗಳು.

ಕೆಳಕೋಟೆಯಲ್ಲಿ ಉಚ್ಚಂಗಿಯಮ್ಮನ ದೇವಾಲಯ ಬೆಟ್ಟದ ಬುಡದಲ್ಲಿ ಎತ್ತರವಾದ ಪ್ರದೇಶದಲ್ಲಿ ಕೆಳಗಿನ ಪಟ್ಟಣವನ್ನು ನೋಡುತ್ತಿರುವಂತೆ ಕಟ್ಟಲಾಗಿದೆ. ಉತ್ಸವಾಂಬ ಎಂದೂ ದೇವಿಗೆ ಹೇಳುತ್ತಾರೆ. ಏರಡಂತಸ್ತಿನ ಈ ದೇವಾಲಯವು ಚಿತ್ರದುರ್ಗದ ಮುಖ್ಯ ದೇವಾಲಯ. ಈ ದೇವಾಲಯದ ಮುಂದೆ ಎತ್ತರವಾದ ಒಂದು ದೀಪದ ಕಂಬ ಹಾಗೂ ಉಯ್ಯಾಲೆ ಕಂಬ ಇದೆ. ಪೂರ್ವದ ರಂಗಯ್ಯನ ಬಾಗಿಲವರೆಗೂ ರಥ ಬೀದಿ ಇದೆ. ಊರಿನ ದಕ್ಷಿಣಕ್ಕಿರುವ ಇನ್ನೊಂದು ಗುಡ್ಡದ ಮೇಲೆ ಓಬಳಾದೇವಿ ಗುಡಿ ಇದೆ. ಇದನ್ನು ಬೇಡರ ಕುಲದೇವರೆಂದು ಪರಿಗಣಿಸಲಾಗಿದೆ.

ಚಿತ್ರದುರ್ಗದಲ್ಲಿ ಮುರುಗಿ ಮಠ ಪ್ರಸಿದ್ಧವಾದುದು. ಎರಡಂತಸ್ತಿನ ಈ ಕಟ್ಟಡದ ಮುಂದೆ ಆನೆ ಬಾಗಿಲು ಎಂಬ ಹೆಬ್ಬಾಗಿಲಿದೆ. ಇಲ್ಲಿ ಮುರಗಿ ಸ್ವಾಮಿಗಳ ಗದ್ದುಗೆ ಇದೆ.

ಸಿರಿಗೆರೆಯಲ್ಲಿ ತರಳಬಾಳು ಸಂಪ್ರದಾಯದ ವೀರಶೈವ ಮಠವಿದೆ. ಇದು ಉಜ್ಜಯಿನಿ ಪೀಠಕ್ಕೆ ಸೇರಿತ್ತೆಂದು ಹೇಳುತ್ತಾರೆ.

## ಹರಿಹರೇಶ್ವರ ದೇವಾಲಯ, ಹರಿಹರ

ಹರಿಹರ ತಾಲ್ಲೂಕು ಕೇಂದ್ರ. ಇಲ್ಲಿನ ಹರಿಹರೇಶ್ವರ ದೇವಾಲಯ ಅಥವಾ ಶಂಕರ ನಾರಾಯಣ ದೇವಾಲಯ ಕ್ರಿ. ಶ. 11ನೆಯ ಶತಮಾನದ ಹೊತ್ತಿಗೆ ಪ್ರಸಿದ್ಧವಾಗಿತ್ತು. ಈಗಿರುವ ದೇವಾಲಯವನ್ನು ಹೊಯ್ಸಳ ಮಂತ್ರಿ ಪೋಲಾಳ್ವ ದಂಡನಾಥನು 1224ರಲ್ಲಿ ಕಟ್ಟಿಸಿದನು. ಇದು ಜಿಲ್ಲೆಯಲ್ಲೇ ಅತ್ಯಂತ ಸುಂದರವಾಗಿದೆ. ಹಲವಾರು ಅರಸರು ಈ ದೇವಾಲಯಕ್ಕೆ ದತ್ತಿ ಬಿಟ್ಟಿದ್ದಾರೆ. ದೇವಾಲಯದಲ್ಲಿ ಅನೇಕ ಶಾಸನಗಳಿವೆ. ದೇವಾಲಯದ ವಾಸ್ತುಶಿಲ್ಪ ಗಮನ ಸೆಳೆಯುತ್ತದೆ. ಹಿಂದೆ ಹರಿಹರ ಗುಹಾಸುರ ಎಂಬ ರಾಕ್ಷಸನ ರಾಜಧಾನಿ. ಬ್ರಹ್ಮನಿಂದ ವರ ಪಡೆದು ಅವನು ಹರಿಯಿಂದಲಾಗಲಿ ಹರನಿಂದಲಾಗಲಿ ಸಾವು ಬರಬಾರದೆಂದು ಆ ವರದ ಬಲದಿಂದ ಸಜ್ಜನರನ್ನು ಪೀಡಿಸತೊಡಗಿದ. ಆಗ ಶಿವ ಮತ್ತು ವಿಷ್ಣು ಒಂದು ಗೂಡಿ ಹರಿಹರ ರೂಪಿನಿಂದ ರಾಕ್ಷಸನನ್ನು ಕೊಂದರು. ಹಾಗೆ ಈ ಊರಿಗೆ ಹರಿಹರ ಎಂಬ ಹೆಸರು

ಬಂದಿದೆ. ಹರಿಹರ ದೇವಾಲಯವೂ ಇವೆ. ಇದಕ್ಕೆ ಗುಹಾರಣ್ಯ ಕ್ಷೇತ್ರ ವೆಂತಲೂ ಹೆಸರು. ಕಾರಣ, ಸಾಯುವ ಮೊದಲು ಗುಹಾಸುರ ಊರಿಗೆ ತನ್ನ ಹೆಸರಿಡಬೇಕೆಂದು ಬೇಡಿದ್ದನಂತೆ.

ಹರಿಹರದ ದಕ್ಷಿಣಕ್ಕೆ 12 ಕಿ. ಮೀ. ದೂರದಲ್ಲಿ ನಂದಿ ತಾವರೆಯಲ್ಲಿ ಅಮೃತಲಿಂಗ ಮಾಣಿಕೇಶ್ವರ ದೇವಾಲಯವಿದೆ. ಇದನ್ನು ಹೊಯ್ಸಳ ಅಧಿ ಕಾರಿ ಮಾಣಿಕಣ್ಣ ಕಟ್ಟಿಸಿದುದಾಗಿ ತಿಳಿದು ಬರುತ್ತದೆ. ಇದರ ಒಳಗೂ ಹೊರಗೂ ಗೋಡೆಯ ಮೇಲೆ ಎರಡು ಅಡಿ ಎತ್ತರದ ಮೂರ್ತಿಗಳ ಸಾಲಿದೆ. ಮಲೆಪನ್ನೂರು ರಂಗನಾಥನ ಪರಮ ಭಕ್ತಳಾಗಿ ಕಾವ್ಯಗಳನ್ನು ರಚಿಸಿದಳೆಂದೂ ಹೇಳುತ್ತಾರೆ.

### ಹಿರಿಯೂರು

ಚಿತ್ರದುರ್ಗ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ವೇದಾವತಿ ನದಿಯ ಬಲದಂಡೆಯ ಮೇಲಿದೆ. ಇಲ್ಲಿ ತೇರುಮಲ್ಲೇಶ್ವರ ದೇವಾಲಯವಿದೆ. ಇದಕ್ಕೆ ಮೂರು ಪ್ರವೇಶ ದ್ವಾರಗಳಿವೆ. ಮಹಾದ್ವಾರದ ಎದುರು ಉಯ್ಯಾಲೆ ಕಂಬವಿದೆ. ಸುಮಾರು 45 ಅಡಿ ಎತ್ತರದ ದೀಪಸ್ತಂಭವಿದ್ದು ಅದರ ತುದಿ ಯಲ್ಲಿ ಬಸವನ ವಿಗ್ರಹ ಹಾಗೂ ನಾಲ್ಕು ದಿಕ್ಕಿನಲ್ಲಿ ಒಂದೊಂದರಲ್ಲೂ ಸುಮಾರು ಹತ್ತು ಕೆ.ಜಿ. ಎಣ್ಣೆ ತುಂಬಬಹುದಾದಂತಹ ಎರಡೆರಡು ಕಬ್ಬಿಣದ ದೊಡ್ಡ ದೀಪಗಳಿವೆ. ವರ್ಷಕ್ಕೊಮ್ಮೆ ದೀಪಗಳನ್ನು ಹಚ್ಚುತ್ತಾರೆ. ನವ ರಂಗದಲ್ಲಿ ಶಿವಪಾರ್ವತಿಯರ ವಿಗ್ರಹಗಳೂ ನಂದಿಯ ಮೇಲೆ ಕುಳಿತ ಉಮಾ ಮಹೇಶ್ವರರ ವಿಗ್ರಹಗಳೂ ಇವೆ. ತೇರುಮಲ್ಲೇಶ್ವರ ದ್ರಾವಿಡ ಶೈಲಿಯ ದೇವಾಲಯ ಪ್ರತಿವರ್ಷ ಮಾಘಮಾಸದಲ್ಲಿ ರಥೋತ್ಸವ ನಡೆಯುತ್ತದೆ.

ಹಿರಿಯೂರಿಗೆ ಈಶಾನ್ಯದಲ್ಲಿ 26 ಕಿ. ಮೀ. ದೂರಕ್ಕಿರುವ ಅಬ್ಬಿನ ಹೊಳೆಯಲ್ಲಿ ರಂಗನಾಥ ದೇವಾಲಯವಿದೆ. ಐಮಂಗಲ ಇದೇ ತಾಲ್ಲೂಕಿನ ಒಂದು ಗ್ರಾಮ. ಇಲ್ಲಿ ವೀರಭದ್ರ ದೇವಾಲಯದಲ್ಲಿ ಸುಕನಾಸಿ, ಗರ್ಭಗೃಹ ಇವೆ. ಇಲ್ಲಿರುವ ಕೆಲವೇ ಶಿಲ್ಪಗಳು ನಾಯಕರ ಕಾಲದ ಶೈಲಿಯವಾಗಿವೆ. ಹಿರಿಯೂರಿನ ಪಶ್ಚಿಮಕ್ಕೆ 14 ಕಿ. ಮೀ. ದೂರದಲ್ಲಿರುವ ಭರಮಗಿರಿಯಲ್ಲಿ

ಕಣಿವೆ ಮಾರಮ್ಮನ ಉತ್ಸವಮೂರ್ತಿ ಇದೆ. ವರ್ಷಕ್ಕೊಮ್ಮೆ ಇವರ ಜಾತ್ರೆಯಾಗುತ್ತದೆ.

**ದಾವಣಗೆರೆ**

ಒಂದು ತಾಲ್ಲೂಕು ಕೇಂದ್ರ. ಇಲ್ಲಿ ವೀರಭದ್ರ ದೇವಾಲಯ, ಕವಿ ಮಹಲಿಂಗ ರಂಗರ ಸಮಾಧಿ, ಶಿವಶರಣ ಬಸಕೇಶ್ವರ ಸಮಾಧಿ ಹಾಗೂ ದೇವಾಲಯ, ನಗರದೇವತೆ ದುರ್ಗಾಂಬೆ ದೇವಾಲಯ ಇವೆ. ಪ್ರತಿವರ್ಷ ಫಾಲ್ಗುಣ ಮಾಸದಲ್ಲಿ ಇಲ್ಲಿ ದುಗ್ಗಮ್ಮ ಜಾತ್ರೆ (ದುರ್ಗಾಂಬೆ) ನಡೆಯುತ್ತದೆ. ಅನಗೋಡು ಈ ತಾಲ್ಲೂಕಿನ ಒಂದು ಮುಖ್ಯಸ್ಥಳ. ಇಲ್ಲಿ ಸಿದ್ದೇಶ್ವರ ದೇವಾಲಯವಿದೆ. ಬಾಡ ಎಂಬಲ್ಲಿ ಹಿಂದಿನ ದೇವಾಲಯಗಳ ಅವಶೇಷಗಳನ್ನು ಕಾಣಬಹುದಾಗಿದೆ. ಕಬ್ಬೂರು ಒಂದು ಅಗ್ರಹಾರವಾಗಿತ್ತು. ಇಲ್ಲಿ ಕಲ್ಲೇಶ್ವರ ದೇವಾಲಯವಿದೆ. ಇದೊಂದು ಪ್ರಾಚೀನ ದೇವಾಲಯ ಆಸ ಕೊಂಡದ ಈಶ್ವರ ದೇವಾಲಯದ ನವರಂಗದ ಕಂಬಗಳು ವೈವಿಧ್ಯಮಯ ಹಾಗೂ ಸುಂದರವಾಗಿವೆ. ಈ ಕಂಬಗಳು ಬೇಲೂರಿನ ಕಂಬಗಳನ್ನು ನೆನಪಿಗೆ ತರುತ್ತವೆ. ಹದಡಿಯಲ್ಲಿ ಪಾಳೆಯಗಾರರ ಕಾಲದ ಹನುಮಾನ್ ದೇವಾಲಯ ವಿದೆ. ಕೊಡಗದೂರಿನಲ್ಲಿ ಹಲವು ಹಾಳು ದೇವಾಲಯ ಹಾಗೂ ಹನುಮಂತ ದೇವಾಲಯವಿದೆ. ಮಳಲಕೆರೆ ಗ್ರಾಮ ಅಲ್ಲಿನ1701ರ ಈಶ್ವರ ದೇವಾಲಯಕ್ಕೆ ಪ್ರಸಿದ್ಧಿ ಇದೆ. ಮಾಯಕೊಂಡದಲ್ಲಿ ಕೇಶವ ಹಾಗೂ ಓಬಳನರಸಿಂಹ ದೇವಾಲಯಗಳೂ ಶಂಕರನ ಹಳ್ಳಿಯಲ್ಲಿ ರಂಗನಾಥಸ್ವಾಮಿ ದೇವಾಲಯವೂ ಇವೆ.

ದಾವಣಗೆರೆ ದಕ್ಷಿಣಕ್ಕೆ 21 ಕಿ. ಮೀ. ದೂರದಲ್ಲಿರುವ ಲೊಕ್ಕಿಕೆರೆಯಲ್ಲಿ ಕೋಡಿಕಲ್ಲೇಶ್ವರ ದೇವಾಲಯವಿದೆ. ಪ್ರಾಚೀನ ದೇವಾಲಯ. ಕೇತೇಶ್ವರ, ನಾರಾಯಣ, ಮೈಲಾರದೇವ, ವೀರಭದ್ರ, ಆಂಜನೇಯ ದೇವಾಲಯಗಳು ಈ ಗ್ರಾಮದ ಇತರ ದೇವಾಲಯಗಳು.

ಕೋಡಿಕಲ್ಲೇಶ್ವರ ದಕ್ಷಿಣಾಭಿಮುಖವಾಗಿದೆ. ಮೂರು ಗರ್ಭಗುಡಿ ಗಳಿಂದ ಕೂಡಿದೆ. ದೇವಾಲಯದ ಹೊರಭಾಗ ಪೂರ್ವವಾಗಿ ಮಣ್ಣಿನಿಂದ ಮುಚ್ಚಿಹೋಗಿದ್ದು ಇದರ ಹೊರ ನೋಟ ಕಾಣಿಸುವುದಿಲ್ಲ. ದೇವಸ್ಥಾನ

ಶಿಥಿಲವಾಗಿದೆ. ಇಲ್ಲಿನ ಸೂರ್ಯನ ಗುಡಿಯಲ್ಲಿ ಸಪ್ತ ಮಾತೃಕೆಯರು, ಮಹಿಷ ಮರ್ಧಿನಿ, ಚಂಡಿಕೇಶ ಮೂರ್ತಿಗಳಿವೆ. ಈ ದಿನ ಸ್ನಾನಕ್ಕೆ ಹೊಯ್ಸಳ ಇಮ್ಮಡಿನರಸಿಂಹನ ಕಾಲದಲ್ಲಿ ದತ್ತಿ ಬಿಟ್ಟಿದ್ದ ವಿಷಯ ದೇವಾಲಯದ ಕಂಬ ಗಳ ಮೇಲಿರುವ ಶಾಸನಗಳಿಂದ ತಿಳಿದು ಬರುತ್ತದೆ.

ಕೇತೇಶ್ವರ ಬಳಪದ ಕಲ್ಲಿನ ನಿರ್ಮಾಣ. ಚಾಳುಕ್ಯ ಶೈಲಿಯಲ್ಲಿದೆ. ಇದರ ಭುವನೇಶ್ವರಿಯಲ್ಲಿ ತಾಂಡವೇಶ್ವರ ಒಳಮಂಟಪದಲ್ಲಿ ಗಣೇಶ, ಮಹಿಷ ಮರ್ಧಿನಿ ವಿಗ್ರಹಗಳಿವೆ. ಹನ್ನೊಂದನೆ ಶತಮಾನದ್ದೆನ್ನಲಾದ ಈ ದೇವಾಲಯ ಸುಂದರವಾಗಿದೆ. ನಾರಾಯಣ ದೇವಾಲಯದ ಗರ್ಭಗುಡಿಯ ಮೂರ್ತಿ ಭಿನ್ನವಾಗಿದೆ.

### ಜಗಳೂರು

ಒಂದು ತಾಲ್ಲೂಕು ಕೇಂದ್ರ. ಜೋಗಪ್ಪ ಋಷಿಯ ಹೆಸರಿನಿಂದ ಈ ಊರಿಗೆ ಜಗಳೂರೆಂದು ಹೆಸರಿದೆ. ಇಲ್ಲಿ ಜೋಗಪ್ಪ ದೇವಾಲಯವಿದೆ. ಇದರಲ್ಲಿ ತ್ರಿಶೂಲ ಕಮಂಡಲಧಾರಿಯಾದ ಮೂರು ಅಡಿ ಎತ್ತರದ ಮೂರ್ತಿ ಇದೆ. ಕೆಮ್ಮವ್ವ ಇಲ್ಲಿನ ಇನ್ನೊಂದು ದೇವಾಲಯ. ಇಲ್ಲಿ ಕುಳಿತಭಂಗಿಯ ಒಂದೂವರೆ ಅಡಿ ಎತ್ತರದ ತ್ರಿಶೂಲ ಮತ್ತು ಡಮರುಧಾರಿ ವಿಗ್ರಹವಿದೆ. ಈ ದೇವರ ಅರ್ಚನೆಯಿಂದ ಕೆಮ್ಮು ನಿಲ್ಲುವುದೆಂದು ಜನ ನಂಬಿರುವುದರಿಂದ ದೇವರಿಗೆ ಕೆಮ್ಮವ್ವ ಎಂಬ ಹೆಸರಿದೆ. ಇಲ್ಲಿ ಕಲ್ಲುಮಠ ಎಂಬ ವೀರಶೈವ ಮಠವಿದೆ. ಅಲ್ಲಿಯೇ ತೋಟದಸ್ವಾಮಿ ಎಂಬುವರ ಗದ್ದುಗೆ ಇದೆ.

ಅನಗೋಡು ಈ ತಾಲ್ಲೂಕಿನ ಐತಿಹಾಸಿಕ ಸ್ಥಳ ಹಿಂದೆ ಇದನ್ನು ಅಶೋಕ ಪಟ್ಟಣ ಎನ್ನುತ್ತಿದ್ದರು. ಇಲ್ಲಿ ಸ್ವಯಂಭೂ ಕಲಿದೇವೇಶ್ವರ ದೇವಾಲಯವಿದೆ. ಇದು ಕಲ್ಯಾಣದ ಚಾಳುಕ್ಯರ ಕಾಲದ ರಚನೆಯಾಗಿದೆ.

ಈ ತಾಲ್ಲೂಕಿನ ಕೋಟಿ ಗುಡ್ಡ, ಕಲ್ಲೇ ದೇವರಪುರ, ಗುರುಸಿದ್ಧಾಪುರ ಗಳಲ್ಲಿ ಜಾತ್ರೆ ಸೇರುತ್ತದೆ.

ಹಾನೆಯದ ಅಕ್ಕ-ತಂಗಿಯರ ಗುಡಿ, ಕಬ್ಬೂರಿನ ಅವಿ ಮುಕ್ತೇಶ್ವರ ದೇವಾಲಯ, ಕಂದಗಲ್ಲಿನ ಕಲ್ಲೇಶ್ವರ, ಮಳಲಕೆರೆಯ ಲಿಂಗ, ಜನಾರ್ಧನ

ಮತ್ತು ನಾರಾಯಣರನ್ನೊಳಗೊಂಡ ತ್ರಿಕೂಟಾಚಲ ದೇವಾಲಯ, ಕೊಡಗಿ ನೂರಿನ ಸೋಮೇಶ್ವರ ಹಾಗೂ ವಿಷ್ಣು ದೇವಾಲಯ, ನೀರ್ತಡಿಯ ರಂಗನಾಥ ದೇವಾಲಯ, ಮೊಳಕಾಲ್ಮೂರು ತಾಲ್ಲೂಕಿನ ಜಟಂಗ ರಾಮೇಶ್ವರ ದೇವಾಲಯ ಇವು ಜಿಲ್ಲೆಯ ಇತರ ಗಮನಾರ್ಹ ದೇವಾಲಯಗಳು. ನೀರ್ತಡಿಯ ರಂಗನಾಥ ದೇವಾಲಯದ ಹೊರಗೋಡೆಯ ಮೇಲಿನ ಮೂರ್ತಿ ಶಿಲ್ಪಗಳು ವಿಜಯನಗರದ ಶೈಲಿಯನ್ನು ಹೋಲುತ್ತವೆ. ದೇವಾಲಯದ ಗರ್ಭಗುಡಿಯ ಶಿಲಾಗೋಪುರ ವಿಶಿಷ್ಟವಾದುದಾಗಿದೆ.

ಜಟಂಗ ರಾಮೇಶ್ವರ ದೇವಾಲಯದಲ್ಲಿ ಜಟಾಯುವಿನ ಹೆಸರಿನಲ್ಲಿ ಶ್ರೀರಾಮನೇ ಲಿಂಗವನ್ನು ಪ್ರತಿಷ್ಠಾಪಿಸಿದನೆಂದೂ ಮತ್ತು ದೇವಾಲಯ ಇಟ್ಟಿಗೆಯದಾಗಿತ್ತೆಂದೂ ಇದನ್ನು ಕಿತ್ತು ರಾ ಮೇ ಶ್ವ ರ ನಿ ಗಾ ಗಿ ಕಲ್ಲಿನ ದೇವಾಲಯವೊಂದನ್ನು ಹಾಗೂ ಕೆಲವು ದೇವಾಲಯಗಳನ್ನು ಲಿಂಗ ಶಿವಜೀ ಯನು ಕಟ್ಟಿಸಿದನೆಂದು ಒಂದು ಶಾಸನ ತಿಳಿಸುತ್ತದೆ. ಇದು ಕ್ರಿ.ಶ. 961ರ ಶಾಸನವಾಗಿದೆ. ಜಟಂಗ ರಾಮೇಶ್ವರ ಒಂದು ಬೆಟ್ಟ. ಇದು ಮೊಳ ಕಾಲ್ಮೂರು ತಾಲ್ಲೂಕಿನ ಬ್ರಹ್ಮಗಿರಿ ಬೆಟ್ಟಕ್ಕೆ ಮೂರು ಕಿ.ಮಿ. ದೂರದಲ್ಲಿ ರಾಮಸಾಗರದ ಬಳಿ ಇರುವ ಬೆಟ್ಟ. ಇಲ್ಲಿ ಸ್ವಾಭಾವಿಕ ಗವಿಗಳೂ ಏಕಾಂತ ತೀರ್ಥದಂತಹ ಸ್ವಾಭಾವಿಕದೊಣೆಗಳೂ ಇವೆ.

ನೊಳಂಬರು ಮತ್ತು ಚಾಳುಕ್ಯರ ಕಾಲದಲ್ಲಿ ಇಲ್ಲಿ ಕೆಲವು ಸಣ್ಣ ದೇವಾಲಯಗಳು ರಚಿತವಾಗಿವೆ. ವಿಜಯನಗರದರಸರ ಕಾಲದಲ್ಲಿ ಪಾಳೆಯ ಗಾರರ ಕಾಲದಲ್ಲಿ ಕೆಲವು ಗುಡಿಗೋಪುರಗಳ ನಿರ್ಮಾಣವಾಗಿದೆ.

ಸಣ್ಣ ಹಾಗೂ ದೊಡ್ಡ ಜಟಂಗ ರಾಮೇಶ್ವರ ಬೆಟ್ಟಗಳು ಸೇರಿವೆ. ಸಣ್ಣಬೆಟ್ಟದ ಮೇಲೆ ಕೆಲವು ದೇವಾಲಯಗಳಿವೆ. ದೊಡ್ಡ ಮಹಾದ್ವಾರದ ಗೋಪುರ ಈಗ ಶಿಥಿಲವಾಗಿದೆ. ಮಹಾದ್ವಾರದ ಒಳಹೋದರೆ ಒಂದು ಸಣ್ಣ ಮಹಾದ್ವಾರವಿದ್ದು ಅದರ ಎರಡೂ ಕಡೆ ಗಣಪತಿ ಚಾಮುಂಡಾಂಬಿಕೆ ಯರ ಗುಡಿಗಳು ಇವೆ. ಮುಂದೆ ಹೋದರೆ ಒಂದು ದೀಪಸ್ತಂಭ ಕಾಣುತ್ತದೆ. ಇದರ ಎತ್ತರ 40 ಅಡಿಗಳು ಇಲ್ಲಿ ಪಂಪಾವತಿ ದೇವಾಲಯ ವಿದ್ದು ಅದರ ಶಿಖರ ಕದಂಬ ನಾಗರ ರೀತಿಯದಾಗಿದೆ. ಜಂಬುಕೇಶ್ವರನ

ಗುಡಿ ಇಟ್ಟಿಗೆಯದು. ಇವೇ ಅಲ್ಲದೆ ವೀರಭದ್ರ, ಜನಾರ್ದನ, ಅರ್ಕೇಶ್ವರ, ತಪ್ಪೋಲಿಂಗ, ಭೈರವ ಮೊದಲಾದ ಸರಳ ರಚನೆಯ ಗುಡಿಗಳಿವೆ. ಜಟಿಂಗ ರಾಮೇಶ್ವರ ಮುಖ್ಯ ದೇವಾಲಯ ಇದು ಪ್ರಾಚೀನ ದೇವಾಲಯ ಇವರಲ್ಲಿ ಗರ್ಭಗುಡಿ, ಸುಕನಾಸಿ, ನವರಂಗಗಳಿವೆ.

ಜನ ಇಲ್ಲಿ ಜಟಾಯು ಪಕ್ಷಿಯ ದೇಹಕ್ಕೆ ರಾಮ ಅಗ್ನಿಸ್ಪರ್ಶ ಮಾಡಿದ ಸ್ಥಳ ಎಂದು ಒಂದು ಪ್ರದೇಶವನ್ನು ತೋರಿಸುತ್ತಾರೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ನುಂಕೆ ಭೈರವಬೆಟ್ಟ (ಎತ್ತರ 921 ಮೀ) ಪ್ರಸಿದ್ಧವಾದುದು. ಇದನ್ನು ಸುಂಕಪ್ಪನಗುಡ್ಡ ಎಂದೂ ಕರೆಯುತ್ತಾರೆ. ಈ ಬೆಟ್ಟದಲ್ಲಿ ಪ್ರತಿ ವೈಶಾಖದಲ್ಲಿ ಜಾತ್ರೆ ನಡೆಯುತ್ತದೆ. ಇಲ್ಲಿ ಲುಂಕೇಶ್ವರ ಹೆಸರಿನಲ್ಲಿ ಕದಂಬ ದೊರೆಯೊಬ್ಬ ಕಟ್ಟಿಸಿದ ದೇವಾಲಯವಿದೆ. ಈ ತಾಲ್ಲೂಕಿನ ಬೊಮ್ಮ ಘಟ್ಟದ ರಾಮದೇವರ ಜಾತ್ರೆ ಪ್ರಸಿದ್ಧವಾಗಿದೆ.

ರಾಷ್ಟ್ರಕೂಟರ ಕಾಲದಲ್ಲಿ ಸುಮಾರು 10ನೇಯ ಶತಮಾನದಲ್ಲಿ ಕಟ್ಟಿದ ಜಿಲ್ಲೆಯ ನಂದಗುಡಿ ಗ್ರಾಮದ ಈಶ್ವರ ದೇವಾಲಯ ಪ್ರಾಚೀನ ದೇವಾಲಯ ಇಲ್ಲಿ ಬೃಹದಾಕಾರದ ನಂದಿ, ವಿಶಾಲವಾದ ಮಧ್ಯದ ಅಂಕಣವನ್ನು ಹೊಂದಿರುವ ನವರಂಗದ ಕಂಬಗಳು, ಸುಕನಾಸಿ, ದ್ವಾರಪಾಲಕರ ವಿಗ್ರಹ ಇವೆ. ಹಾಗೂ ಗಮನ ಸೆಳೆಯುತ್ತವೆ.

ಮದರಿ ಕಲ್ಲು ಎಂಬ ಹೆಸರಿನಲ್ಲಿ ನೊಳಂಬ ಪಲ್ಲವರ ಪ್ರಾಂತ್ಯವೊಂದರ ರಾಜಧಾನಿಯಾಗಿದ್ದ ಚಿಕ್ಕ ಮಧುರೆಯಲ್ಲಿ ಕ್ರಿ.ಶ. 790ರಲ್ಲಿ ಕಟ್ಟಲಾದ ಗವ ಗಣೇಶ್ವರ ದೇವಾಲಯ ಶಿಥಿಲಾವಸ್ಥೆಯಲ್ಲಿದೆ. ಇದನ್ನು ರಾಣಿ ಗವಗಣಬ್ಬೆ ಕಟ್ಟಿಸಿದಳು. ಇದರಲ್ಲಿ ಚೌಕನಾದ ಕಂಬಗಳೂ, ಸೂರ್ಯನೇ ಮೊದಲಾದ ಚಿಕ್ಕ ಚಿಕ್ಕ ಮೂರ್ತಿಗಳಿವೆ.

ತುರುವನೂರು ಚಿತ್ರದುರ್ಗ ತಾಲ್ಲೂಕಿನ ಒಂದು ಮುಖ್ಯಪಟ್ಟಣ. ಇಲ್ಲಿ ರಾಮಲಿಂಗ ದೇವಾಲಯವಿದ್ದು ಇದರಲ್ಲಿರುವ ನಂದಿ, ಲಿಂಗ ವಿಗ್ರಹ ಗಳು ನೊಳಂಬ ಕಾಲದವು. ನಂದಿ ವಿಗ್ರಹ ಸುಂದರ ಕಲಾಕೃತಿಯಾಗಿದೆ. ಈಗ ಗುಡಿ ನವೀಕರಿಸಲ್ಪಟ್ಟಿದೆ. ತುರುವಪ್ಪನ ಗುಡಿ ಸ್ಥಳೀಯ ನಾಯಕ

ತುರುವಪ್ಪನ ನೆನಪಿಗಿದೆ. ಇದರ ಗರ್ಭಗುಡಿಯಲ್ಲಿ ಕೆಲವು ಕಲ್ಲುಗುಂಡುಗಳನ್ನು ಸಾಲಾಗಿಟ್ಟು ಪೂಜಿಸುತ್ತಾರೆ.

## ನಾಯಕನ ಹಟ್ಟಿ

ಚಳ್ಳಕೆರೆ ತಾಲ್ಲೂಕಿನ ಒಂದು ಪುಣ್ಯಕ್ಷೇತ್ರ, ಚಳ್ಳಕೆರೆಗೆ 22 ಕಿ.ಮೀ. ದೂರದಲ್ಲಿದೆ. ಇಲ್ಲಿ ತಿಪ್ಪೇರುದ್ರಯ್ಯ ಎಂಬ ಪ್ರಸಿದ್ಧ ಶಿವಶರಣನ ದೇವಾಲಯವಿದೆ. ತಿಪ್ಪೇರುದ್ರಯ್ಯ 250 ವರ್ಷಗಳ ಹಿಂದೆ ಜೀವಿಸಿ ಹಲವು ಪವಾಡಗಳನ್ನು ಮೆರೆದ ಲೋಕೋಪಕಾರಿ. ದೇವಾಲಯದ ಗೋಪುರವೇ ಸುಮಾರು 80 ಅಡಿ ಎತ್ತರ ಇವೆ. ಗೋಪುರ ಹಲವು ಪೌರಾಣಿಕ ಚಿತ್ರಗಳನ್ನೊಳಗೊಂಡಿದ್ದು ಆಕರ್ಷಿಸುತ್ತದೆ. ಇಟ್ಟಿಗೆ ಗಾರೆಯ ಈ ಗೋಪುರವನ್ನು ಬಸೆಟ್ಟಪ್ಪ ಎಂಬ ಭಕ್ತ ಕಟ್ಟಿಸಿದನೆಂದು ಹೇಳುತ್ತಾರೆ. ಗೋಪುರದ ಮಹಾದ್ವಾರವನ್ನು ದಾಟಿ ಮುಂದೆ ಹೋದರೆ ಮಹಂತೇಶ್ವರ ಲಿಂಗವನ್ನು ನೋಡಬಹುದು.

ಈ ಊರಿನ ಚಿಕ್ಕ ಕೆರೆಯ ಹಿಂದೆ ತಿಪ್ಪೇರುದ್ರಯ್ಯನ ಸಮಾಧಿ ಇದೆ. ಸಮಾಧಿಯ ಸುತ್ತ ವಿಶಾಲವಾದ ಅಂಗಳವಿದೆ. ತಿಪ್ಪೇರುದ್ರಯ್ಯನ ಜಾತ್ರೆ ಪ್ರತಿವರ್ಷ ಫಾಲ್ಗುಣ ಮಾಸದಲ್ಲಿ ವೈಭವದಿಂದ ಜರುಗುತ್ತದೆ.

## ಮಲಸಿಂಗನ ಹಳ್ಳಿ

ಹೊಳಲ್ಕೆರೆ ತಾಲ್ಲೂಕಿನಲ್ಲಿನ ಈ ಗ್ರಾಮದಲ್ಲಿ ಪ್ರತಿ ವರ್ಷ ನಡೆಯುವ ತಿರುಮಲ ದೇವರ ಜಾತ್ರೆಯಲ್ಲಿ ಕತ್ತೆಯನ್ನು ತಲೆ ಮೇಲೆ ಹೊತ್ತುಕೊಂಡು ಕುಣಿಯುತ್ತಾರೆ.

❁

# ಕೋಲಾರ ಜಿಲ್ಲೆಯ ದೇವಾಲಯಗಳು

ಕೋಲಾರ ಕರ್ನಾಟಕದ ಪೂರ್ವ ಅಂಚಿನಲ್ಲಿರುವ ಒಂದು ಜಿಲ್ಲೆ. ಹಲವು ಬೆಟ್ಟ ಶ್ರೇಣಿಗಳನ್ನು ಹೊಂದಿರುವ ಈ ಜಿಲ್ಲೆಯಲ್ಲಿ ಕರ್ನಾಟಕದ ಒಂದು ಪ್ರಮುಖ ಗಿರಿಧಾಮವಾದ ನಂದಿ ದುರ್ಗವಿದೆ. ಚಿನ್ನದ ನಾಡೆಂದು ಕರ್ನಾಟಕಕ್ಕೆ ಹೇಳುವುದು ಕೋಲಾರ ಜಿಲ್ಲೆಯ ಚಿನ್ನದ ಗಣಿಗಳಿಂದಾಗಿ ಎಂಬುವುದು ಜನ ಜನಿತ. ಚಿನ್ನದ ಗಣಿಗಾರಿಕೆ ಜಿಲ್ಲೆಯ ಒಂದು ದೊಡ್ಡ ಉದ್ಯಮ.

ಕೋಲಾರ ಜಿಲ್ಲೆ ಪೌರಾಣಿಕವಾಗಿಯೂ ಐತಿಹಾಸಿಕವಾಗಿಯೂ ಪ್ರಸಿದ್ಧಿ ಪಡೆದಿದೆ. ಈ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನ ಆವನಿ ಪ್ರದೇಶದಲ್ಲಿ ವಾಲ್ಮೀಕಿ ಮುನಿ ವಾಸಿಸುತ್ತಿದ್ದನೆಂದು ಹೇಳುವರು. ಚಿಂತಾಮಣಿ ಬಳಿಯ ಕೈವಾರ ಮಹಾಭಾರತದ ಕಾಲದಲ್ಲಿ ಏಕಚಕ್ರಪುರವಾಗಿತ್ತೆಂದು ಹೇಳುತ್ತಾರೆ. ಕೋಲಾರದ ಪಶ್ಚಿಮಕ್ಕಿರುವ ಶತಶೃಂಗ ಪರ್ವತ ರೇಣುಕ ಮತ್ತು ಪರಶು ರಾಮನಿಗೆ ಸಂಬಂಧಿಸಿದಂತೆ ತಿಳಿದು ಬರುತ್ತದೆ.

ಇಲ್ಲಿ ಗಂಗರು, ನೊಳಂಬರು, ಹೊಯ್ಸಳರು, ವಿಜಯನಗರದ ಅರಸರು, ಪಾಳೆಗಾರರು ರಾಜ್ಯಭಾರ ಮಾಡಿರುತ್ತಾರೆ. ಈ ಜಿಲ್ಲೆಯ ನಂದಿಯಲ್ಲಿರುವ ಭೋಗ ನಂದೀಶ್ವರ ಮತ್ತು ಅರುಣಾಚಲೇಶ್ವರ ದೇವಾಲಯ ಗಳು ಜಿಲ್ಲೆಯ ಅತಿ ಪ್ರಾಚೀನ ವಾಸ್ತುಕೃತಿಗಳು.

ಕೋಲಾರ ಜಿಲ್ಲೆಯಲ್ಲಿ ಒಟ್ಟು ಹನ್ನೊಂದು ತಾಲ್ಲೂಕುಗಳಿವೆ. ಚಿಕ್ಕ ಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ, ಬಾಗೇಪಲ್ಲಿ, ಗುಡಿಬಂಡೆ, ಗೌರಿ ಬಿದನೂರು, ಕೋಲಾರ, ಶ್ರೀನಿವಾಸಪುರ, ಮುಳಬಾಗಿಲು, ಬಂಗಾರಪೇಟೆ ಮತ್ತು ಮಾಲೂರು ಇವು ಈ ತಾಲ್ಲೂಕುಗಳಾಗಿವೆ.

**ಕೋಲಾರ :**

ಇದು ಬಹಳ ಹಳೆಯ ಊರು. ಕೋಲಾರಮ್ಮ ಗ್ರಾಮದೇವತೆ. ಕೋಲಾಹಲಪುರ, ಕುವಲಾಲ, ಕೋಳಾಲ ಕೋಲಾಲ ಇವು ಪ್ರಾಚೀನ ಹೆಸರುಗಳು. ಈ ಊರಿನಲ್ಲಿ ಕೋಲಾರಮ್ಮ, ಸೋಮೇಶ್ವರ, ಆಂಜನೇಯ, ವೆಂಕಟರಮಣ, ಕೋದಂಡರಾಮ ದೇವಾಲಯಗಳಿವೆ. ಗ್ರಾಮದೇವತೆ ಕೋಲಾರಮ್ಮನ ದೇವಾಲಯ ಮುಖ್ಯ ಗುಡಿ. ಇದರ ಮುಂದೆ ಒಂದು ಮಹಾದ್ವಾರವಿದ್ದು ಇಲ್ಲಿನ ಚೌಕ ಕಂಬಗಳಮೇಲೆ ಅನೇಕ ಕುತೂಹಲಕಾರಿ ಶಿಲ್ಪಗಳಿವೆ, ಮಹಾದ್ವಾರಕ್ಕೆ ಹೊಂದಿಕೊಂಡಂತೆ ಯಾವ ಪ್ರಾಕಾರವೂ ಇರದೆ ಮುಂದೆ 14 ಕಂಬಗಳ ಮೇಲೆ ಎತ್ತಿದ ಮತ್ತೊಂದು ಮಹಾದ್ವಾರವಿದ್ದು ಅದಕ್ಕೆ ಪ್ರಾಕಾರವಿದೆ. ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಸಪ್ತ ಮಾತೃಕಾ ವಿಗ್ರಹಗಳಿವೆ. ಎರಡೂ ಪಕ್ಕದಲ್ಲಿ ದಕ್ಷಿಣಾಮೂರ್ತಿ, ವಿನಾಯಕ ಮೂರ್ತಿ ಮೂರ್ತಿಗಳಿವೆ. ಇಲ್ಲಿನ ಚಾಮುಂಡಿ ವಿಗ್ರಹದೆದುರು ಶ್ರೀಯಂತ್ರವನ್ನು ಸ್ಥಾಪಿಸಲಾಗಿದೆ. ಮಧ್ಯದ ಅಂಕಣದಲ್ಲಿ ಕಪಾಲಭೈರವಿ (ಚೇಳಮ್ಮ) ಮೂರ್ತಿ ಇದ್ದು ದೇವಿ ಚೇಳು ಕಡಿತ ನಿವಾರಿಸುವಳೆಂಬ ಪ್ರತೀತಿ ಇದೆ. ದಕ್ಷಿಣದ ಕಡೆಗೆ ನಾಲ್ಕು ಗಿಡ್ಡ ಕಂಬಗಳ ಗುಡಿ ಇದ್ದು ಅಲ್ಲಿ ಸಪ್ತಮಾತೃಕೆಯರ ದೊಡ್ಡ ವಿಗ್ರಹಗಳೂ ಕೋಲಾರಮ್ಮನ ಉತ್ಸವ ಮೂರ್ತಿಯೂ ಇವೆ.

ಸೋಮೇಶ್ವರ ದೇವಾಲಯ ಕರ್ನಾಟಕದ ಒಂದು ಆಸ್ತಿ ಎನ್ನಬಹುದು. ಇಲ್ಲಿನ ವಾಸ್ತು ವಿನ್ಯಾಸ ಮತ್ತು ಶಿಲ್ಪ ಗಮನ ಸೆಳೆಯುತ್ತವೆ, ದ್ರಾವಿಡ ಶೈಲಿಯ ದೊಡ್ಡ ಕಟ್ಟಡದಲ್ಲಿ ದೊಡ್ಡ ಪ್ರಾಕಾರವಿದೆ. ಅದರ ಮುಂದೆ ಮಹಾದ್ವಾರ ಮತ್ತು ಮೇಲೆ ಇಟ್ಟಿಗೆಯ ಗೋಪುರವಿದೆ. ಗುಡಿಯಲ್ಲಿ ಗರ್ಭಗೃಹ ಸುಕನಾಸಿ, ನವರಂಗ ಇವೆ. ಮುಂದೆ ಅನೇಕ ಕಂಬಗಳ ಒಂದು ಮುಖ ಮಂಟಪವಿದೆ. ಪ್ರಾಕಾರದೊಳಗೆ ಕೆಲವು ಸಣ್ಣ ಗುಡಿಗಳೂ, ದೊಡ್ಡ ಕಲ್ಯಾಣ ಮಂಟಪವೂ ಇದೆ. ದೇವಾಲಯದ ಹೊರಗೋಡೆಗಳು ಶಿಲ್ಪಗಳಿಂದ ಅಲಂಕೃತವಾಗಿವೆ; ಗರ್ಭಗುಡಿಯಲ್ಲಿ ಸೋಮೇಶ್ವರಲಿಂಗವಿದೆ. ದೇವಾಲಯದ ಶಿಲ್ಪಾಲಂಕರಣ ಕಣ್ಮನಗಳನ್ನು ಸೆಳೆಯುತ್ತವೆ.

ಕೋಲಾರ ಪಟ್ಟಣದಲ್ಲಿ ಸುಂದರ ರಮಣೀಯ ಪ್ರದೇಶವೊಂದಿದ್ದು

ಅವನ್ನು ಅಂತರಗಂಗೆ ಎನ್ನುತ್ತಾರೆ. ಮೆಟ್ಟಿಲು ಏರಿ ಆ ಪ್ರದೇಶಕ್ಕೆ ಹೋದಾಗ ಸಹಜವಾಗಿಯೇ ನೆಮ್ಮದಿ ಸಿಗುತ್ತದೆ. ಅಲ್ಲಿರುವ ಶಿವಸಾನ್ನಿಧ್ಯ ಭಕ್ತರಿಗೆ ಪ್ರೀತಿಯ ತಾಣವಾಗಿದೆ. ಕವಿ ಹೃದಯ ಕಂಡು ಮಿಡಿಯಿತು ಕೂಡ.

ಆವ ಲೋಕದಿಂ ಆವಮಾರ್ಗದಿಂ ಆವ ವೇಗ ರೂಪಗಳಿಂಬರ್ಪೆಯೋ
ಬಸವನ ಬಾಯಿಂದ ನಮಗೆ ಜಲಧಾರೆ ಗಂಗಾಮಾತೆ
ಹಿತ, ಪವಿತ್ರ, ದಣಿವತೀರಿಪಳು ಭುವನವಿಖ್ಯಾತೆ
ಪ್ರದೇಶವೋ ತಾಂ ಕಲ್ಮದು. ಆವ ಶಿಲೆಗುಂಟೀ ಭಾಗ್ಯ !
ಬಸವನಂ ಪೊತ್ತ ಶಿಲೆಗೆ ಅದಾವ ಜನ್ಮದ ಅವತರಣಿಕೆಯೋ ?
ಓ ಅಂತರಗಂತರಗಂಗೆ ಬಾ ತಾಯಿ ಚೇತನದಾತೆ
ಬಸವಳಿದು ಬಾಯಾರಿ ಬಂದ ನಿನ್ನವರ ನಿಮಿಷದಿಂ ಸುಖಪಡಿಸಿ
ಶ್ರೀಮಾತೆ ಮೆಟ್ಟಲು ಮೆಟ್ಟಲೇರಿ ನಿನ್ನ ನೋಡಬರುವಾಗ
ನಮೋ ಅನಂತಾಯ ಶಿವಾಯ ಗಂಗೋತ್ರಿಧಾರೆ ಸಕಲ ಸಂಪ್ರೀತೆ
ಅಂತರಂಗದ ಒಳಗೆ ಎತ್ತಿಹಿಡಿಪ ನಿನ್ನ ಸ್ಪರ್ಶ ಹಿತ
ನಿನ್ನ ಕಂಡ ಬಳಿಕ ಪಾಪಿಗಳಿಲ್ಲ, ನೀನಿರ್ಪ ನೆಲ ಖ್ಯಾತ,

ರೇಣುಕೆ (ಎಲ್ಲಮ್ಮ)ಯ ನೆನಪಿಗೆ ಕೋಲಾರದಲ್ಲಿ ಕೋಲಾರಮ್ಮನ ದೇವಾಲಯ ಕಟ್ಟಲಾಗಿದೆ.

ಕೋಲಾರದ ಬಳಿಯ ಬೆಟ್ಟವೊಂದರ ಮೇಲಿರುವ ಪಾಪರಾಜನಹಳ್ಳಿಯಲ್ಲಿ ಶಿವ ದೇವಾಲಯ ಹಾಗೂ ಉಸ್ಮಾನ್ ಅಲಿಯ ದರ್ಗಾ ಇವೆ. ಕೋಲಾರದ ಇನ್ನೊಂದು ಬೆಟ್ಟದ ಮೇಲೆ ತೇರುಹಳ್ಳಿ ಗ್ರಾಮದಲ್ಲಿ ಗಂಗಾಧರೇಶ್ವರನ ಬೃಹತ್ ದೇವಾಲಯವಿದೆ. ಇದು ಕ್ರಿ.ಶ. 12–13ನೆ ಶತಮಾನದ್ದೆಂದು ಪ್ರತೀತಿ ಇದೆ. ಈ ತಾಲ್ಲೂಕಿನ ಬೆಳ್ಳೂರಿನಲ್ಲಿ ರಾಮದೇವಾಲಯವೂ ರಾಮದೇವಾಲಯವೂ ವೆಂಕಟಾಪುರದಲ್ಲಿ ವೆಂಕಟರಮಣ ದೇವಾಲಯವಿದೆ.

ಮಕ್ಕಲೇಕರಿ ಬೆಟ್ಟದ ಮೇಲೆ ಮಾರ್ಕಂಡೇಶ್ವರ ದೇವಾಲಯವಿದೆ. ಇದೊಂದು ಪ್ರಾಚೀನ ದೇವಾಲಯ. ಪ್ರತಿ ಮಹಾಶಿವರಾತ್ರಿಯಲ್ಲಿ ಸುಮಾರು

ಇಪ್ಪತ್ತು ದಿನಗಳ ಕಾಲ ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಮೂರಕ್ಕೆ ಬೆಟ್ಟದ ಮೇಲಿನ ದೇವಾಲಯದ ದೃಶ್ಯ ಅಪೂರ್ವವಾಗಿರುತ್ತದೆ. ವಾಣ ರಾಸಿಯ ಇರುಳಪ್ಪ ದೇವಾಲಯ. ಹೋಳೂರಿನ ಲಕ್ಷ್ಮೀನಾರಾಯಣ ದೇವಾಲಯ ತಾಲ್ಲೂಕಿನ ಇತರ ದೇವಸ್ಥಾನಗಳು. ಕೋಲಾರದ ದರ್ಗಾ ಮತ್ತು ಮಸೀದಿಗಳು ಹೆಸರುವಾಸಿ. ಮಕ್ಬರಾ ಇಲ್ಲಿನ ಇಸ್ಲಾಮೀ ಕಟ್ಟಡ ಗಳಲ್ಲಿ ಮುಖ್ಯವಾದುದು.

**ಶಿಡ್ಲಘಟ್ಟ**

ಒಂದು ತಾಲ್ಲೂಕು ಕೇಂದ್ರ. ಕೋಲಾರದ ವಾಯುವ್ಯಕ್ಕೆ 48 ಕಿ.ಮೀ. ದೂರದಲ್ಲಿದೆ. 1526ರಲ್ಲಿ ಹಲಸೂರಮ್ಮ ಎಂಬುವಳು (ಉಜ್ಜನಿ ಕೆಂಪೇ ಗೌಡನ ಪತ್ನಿ) ತನ್ನ ಮಗಾವ ಶಿಡ್ಲಗೌಡನ ಹೆಸರಿನಲ್ಲಿ ಈ ಊರನ್ನು ಸ್ಥಾಪಿಸಿ ದಳು, ಈ ಪಟ್ಟಣದಲ್ಲಿ ಆಂಜನೇಯ ದೇವಾಲಯ, ವೇಣುಗೋಪಾಲ ಸ್ವಾಮಿ, ವೆಂಕಟರಮಣ ದೇವಾಲಯ, ನಗರೇಶ್ವರ. ಶ್ರೀಕಂಠೇಶ್ವರ ದೇವಾ ಲಯಗಳಿವೆ. ವೆಂಕಟರಮಣ ದೇವಾಲಯದಲ್ಲಿ ನಾಲ್ಕು ಅಡಿ ಎತ್ತರದ ವಿಗ್ರಹವಿದ್ದು ಅಕ್ಕಪಕ್ಕದಲ್ಲಿ ಶ್ರೀದೇವಿ, ಭೂದೇವಿಯರ ವಿಗ್ರಹಗಳಿವೆ. ನಗರೇಶ್ವರ ದೇವಳದಲ್ಲಿ ಶಿವಲಿಂಗದ ಬಲಭಾಗದಲ್ಲಿ ವಿಘ್ನೇಶ್ವರ, ಎಡಭಾಗ ದಲ್ಲಿ ಪಾರ್ವತಿ ದೇವಿಯರ ಗರ್ಭಗುಡಿಗಳಿವೆ. ವೇಣುಗೋಪಾಲನ ಗುಡಿಯಲ್ಲಿ ವೇಣುಗೋಪಾಲಸ್ವಾಮಿ ವಿಗ್ರಹವಿದ್ದು ಅಕ್ಕಪಕ್ಕ ರುಕ್ಮಿಣಿ ಸತ್ಯಭಾಮೆಯರ ವಿಗ್ರಹಗಳಿವೆ.

**ಮುಳಬಾಗಿಲು :**

ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಈ ಪಟ್ಟಣದಲ್ಲಿ ನರಸಿಂಹ ತೀರ್ಥ. ಶ್ರೀ ಪಾದರಾಯರ ಬೃಂದಾವನವಿದೆ. ಮುಳಬಾಗಿಲಿನಲ್ಲಿ ಶ್ರೀಪಾದ ರಾಯರ ಮಠವಿದೆ. ಬೃಂದಾವನದ ಬಲಭಾಗದಲ್ಲಿ ನರಸಿಂಹದೇವಾಲಯ ವಿದೆ. ಈ ಊರಿನ ಆಂಜನೇಯಸ್ವಾಮಿಯ ವಿಖ್ಯಾತವಾದದ್ದು. ದೇವ ಸ್ಥಾನ ವಿಶಾಲವಾಗಿದ್ದು ಬೃಹದಾಕಾರದ ಆಂಜನೇಯಸ್ವಾಮಿ ವಿಗ್ರಹವಿದೆ.

ಆವನಿ ತಾಲ್ಲೂಕಿನ ಒಂದು ಪುಣ್ಯಕ್ಷೇತ್ರ. ಪುರಾಣ ಪ್ರಸಿದ್ಧವಾದ

ಅವಂತಿಕಾ ಕ್ಷೇತ್ರ. ಇಲ್ಲಿ ಅತ್ಯಂತ ಪ್ರಾಚೀನ ದೇವಾಲಯಗಳು ಇಲ್ಲಿನ ಬೆಟ್ಟದ ನೈಋತ್ಯದಲ್ಲಿ ಒಂದು ದೊಡ್ಡ ಪ್ರಾಂಗಣದ ಮಧ್ಯೆ ಇವೆ. ಇವೆಲ್ಲವೂ ಶೈವ ದೇವಾಲಯಗಳು. ಈ ದೇವಾಲಯಗಳೆಂದರೆ ರಾಮೇಶ್ವರ, ಪಾರ್ವತಿ, ಲಕ್ಷ್ಮಣೇಶ್ವರ, ಭರತೇಶ್ವರ, ಶತೃಘ್ನೇಶ್ವರ, ಸುಗ್ರೀವೇಶ್ವರ, ಅಂಜನೇಶ್ವರ ಮೊದಲಾದುವು. ಲಕ್ಷ್ಮಣೇಶ್ವರ ಗುಡಿ ಸುಂದರವಾಗಿದ್ದು ಗರ್ಭಗುಡಿ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗುಡಿಯ ಹೊರಗೋಡೆ ಸುತ್ತಲೂ ಅಲಂಕೃತವಾದ ಪಟ್ಟಿಕೆಗಳಿವೆ. ಇಲ್ಲೆಲ್ಲ ಹಲವು ಹತ್ತು ಶಿಲ್ಪಗಳಿವೆ. ನವರಂಗದಲ್ಲಿ ಮಧ್ಯೆ ಉಮಾಮಹೇಶ್ವರ ಮತ್ತು ಸುತ್ತಲೂ ಅಷ್ಟದಿಕ್ಪಾಲಕರ ಕೆತ್ತನೆಯಿರುವ ಮನಸೆಳೆಯುವ ಭುವನೇಶ್ವರಿ ಇದೆ. ಈ ದೇವಾಲಯ ಹತ್ತನೆ ಶತಮಾನದ್ದಿರಬೇಕೆಂದು ಊಹಿಸಲಾಗಿದೆ. ಉಳಿದ ಶತೃಘ್ನೇಶ್ವರ, ಅಂಜನೇಶ್ವರ, ಭರತೇಶ್ವರ ದೇವಾಲಯಗಳೂ ಲಕ್ಷ್ಮಣೇಶ್ವರ ಗುಡಿ ಮಾದರಿಯವಾಗಿವೆ. ಪಾರ್ವತಿ ದೇವಾಲಯ ಸಾಮಾನ್ಯ ಕಟ್ಟಡ. ಗರ್ಭಗುಡಿ, ನವರಂಗ, ಮುಖಮಂಟಪಗಳನ್ನೊಳಗೊಂಡಿದೆ. ರಾಮೇಶ್ವರ ದ್ರಾವಿಡ ಶೈಲಿಯ ಶಿಖರವನ್ನು ಹೊಂದಿದೆ.

ಏಕಾಂತ ರಾಮಯ್ಯ ದೇವಾಲಯ, ಕಾಮಾಕ್ಷಿ ದೇವಾಲಯ ಇತರ ದೇವಾಲಯಗಳು. ಆವನಿಯ ಶೃಂಗೇರಿ ಮಠ ಬಹಳ ಹೆಸರುವಾಸಿ. ಆವನಿ ಕ್ಷೇತ್ರ ದಕ್ಷಿಣದ ಗಯಾ ಎಂದು ಪ್ರಸಿದ್ಧಿಯಾಗಿದೆ. ಇಲ್ಲಿನ ವಾಲ್ಮೀಕಿ ಪರ್ವತದ ಮೇಲೆ ಸೀತಾ-ಪಾರ್ವತಿ ಗುಡಿ ಇದೆ.

ಮುಳಬಾಗಲು ತಾಲ್ಲೂಕಿನ ಕುರುಡು ಮಲೆಯಲ್ಲಿ ಪ್ರಾಚೀನ ದೇವಾಲಯಗಳ ಅವಶೇಷಗಳಿವೆ. ಇಲ್ಲಿ ಹೊಯ್ಸಳ ಶೈಲಿಯ ಸೊಗಸುಗಳನ್ನು ಕಾಣಬಹುದು. ಎಂಟೂವರೆ ಅಡಿ ಎತ್ತರದ ಅತಿ ಸುಂದರ ಗಣಪತಿಯ ಶಿಲಾಕೃತಿ, ಐದು ಅಡಿ ಎತ್ತರದ ನವಿಲಿನ ಮೇಲೆ ಕುಳಿತಿರುವ ಕುಮಾರ ಸ್ವಾಮಿಯ ವಿಗ್ರಹವನ್ನು ಇಲ್ಲಿನ ದೇವಾಲಯದಲ್ಲಿ ಕಾಣಬಹುದು. ಕುರುಡುಮಲೆ ಮಹಾಗಣಪತಿ ಅತಿ ಪ್ರಾಚೀನ ದೇವಾಲಯ. ಈ ದೇವಾಲಯಕ್ಕೆ ಗರ್ಭಗುಡಿ, ಸುಕನಾಸಿ, ನವರಂಗ ಹಾಗೂ ಮುಖಮಂಟಪ ಇವೆ. ಇಲ್ಲಿನ ಮಂಟಪದಲ್ಲಿರುವ ಹಸಿರು ಕಲ್ಲಿನ ಇಲಿ 2ಅಡಿ ಎತ್ತರ 3 ಅಡಿ ಉದ್ದವಿದೆ. ಕುಮಾರಸ್ವಾಮಿ

ವಿಗ್ರಹ ಹಸಿರು ಕಲ್ಲಿನದಾಗಿದೆ. ಗರ್ಭಗುಡಿ ವಿಸ್ತಾರವಾಗಿದ್ದು ಮುಂದೆ ಎರಡು ಕಂಬಗಳಿವೆ. ಎರಡು ಅಡಿ ಎತ್ತರವಿರುವ ದೀರ್ಘ ಚತುರ ಪ್ರಾಕಾರದ ಪೀಠದ ಮೇಲಿರುವ ಅಂಡಾಕಾರದ ಒಂದೂವರೆ ಅಡಿ ಎತ್ತರದ ಆಸನದ ಮೇಲೆ ಮಹಾಗಣಪತಿ ಮೂರ್ತಿ ಇದೆ. ಕುರುಡು ಮಲೆಯ ಸೋಮೇಶ್ವರ ದೇವಾಲಯ ದ್ರಾವಿಡ ರೀತಿಯದು. ಗರ್ಭಗೃಹ, ಎರಡು ಸುಕನಾಸಿಗಳು ಮತ್ತು ಮುಂದೆ ಒಂದು ಮಂಟಪ ಇದೆ. ಪ್ರವೇಶದ್ವಾರ ದಕ್ಷಿಣಾಭಿಮುಖ ವಾಗಿದೆ. ಮಂಟಪದಲ್ಲಿ 16 ಕೋನಗಳುಳ್ಳ 4 ಕಂಬಗಳಿವೆ. ಗರ್ಭಗುಡಿ ಯಲ್ಲಿರುವ ಲಿಂಗದ ಮುಂಭಾಗದ ಕಿಟಕಿಯ ಹತ್ತಿರ ಮೂರು ವ್ಯಕ್ತಿಗಳ ಶಿಲ್ಪಗಳಿದ್ದು ಇವು ದೇವಾಲಯವನ್ನು ನಿರ್ಮಿಸಿದ ಇಳವಂಜಿರಾಯ ಮತ್ತವನ ರಾಣಿಯರದಿರಬೇಕೆಂದು ತಿಳಿಯಲಾಗಿದೆ.

## ಮಾಲೂರು ತಾಲ್ಲೂಕು

ಮಾಲೂರು ತಾಲ್ಲೂಕು ಕೇಂದ್ರ. ವಕ್ಕಲೇರಿ ಬೆಟ್ಟದಲ್ಲಿರುವ ಮಾರ್ಕಂಡೇಶ್ವರ ದೇವಾಲಯಕ್ಕೆ ಈ ಊರಿನ ತೋಟಗಳಿಂದ ಮಲ್ಲಿಗೆ ಹೂವನ್ನು ಕಳುಹಿಸುತ್ತಿದ್ದುದರಿಂದ ಊರಿಗೆ ಮಲ್ಲಿಕಾಪುರ ಅಥವಾ ಮಲ್ಲಿಗೆ ಪಟ್ಟಣ ಎಂಬ ಹೆಸರಿತ್ತು. ಮುಂದೆ ಮರಾಠರ ಕೈವಶವಾಗಿದ್ದ ಈ ಊರನ್ನು ರಜಪೂತ ಜಮೀನುದಾರ ಹೃದರಾಮ್ ಸಿಂಗ್ ವಶಪಡಿಸಿಕೊಂಡು ಊರಿಗೆ ಮಾಲೂರು ಎಂದು ಹೆಸರಿಸಿದ.

ಶಂಕರನಾರಾಯಣಸ್ವಾಮಿ, ಧರ್ಮರಾಯಸ್ವಾಮಿ, ಬೀರೇಶ್ವರಸ್ವಾಮಿ ಮತ್ತು ಕೋದಂಡರಾಮಸ್ವಾಮಿ ದೇವಾಲಯಗಳು ಈ ಊರಿನ ಪ್ರಮುಖ ಗುಡಿಗಳಾಗಿವೆ. ಮಾಲೂರು ನಗರದಲ್ಲಿರುವ ಶಂಕರ ನಾರಾಯಣ ದೇವಾಲಯ ಪ್ರಾಚೀನವಾದುದು. ಈಶ್ವರ ಹಾಗೂ ವಿಷ್ಣು ಇಬ್ಬರ ಅಂಶಗಳನ್ನೂ ಹೊಂದಿರುವ ಈ ಬಗೆಯ ಅರ್ಧ ಶಂಕರ ಅರ್ಧನಾರಾಯಣ ಲಿಂಗ ಭಾರತ ದಲ್ಲೇ ಅಪರೂಪ. ಮಾಲೂರಿನ ಧರ್ಮರಾಜ ಗುಡಿಯಲ್ಲಿ ಪಂಚಪಾಂಡವರ ವಿಗ್ರಹಗಳಿವೆ. ಈ ಊರಿನಲ್ಲಿ ನಡೆಯುವ ಧರ್ಮರಾಯಸ್ವಾಮಿ ಕರಗ ಪ್ರಸಿದ್ಧ.

ಈ ತಾಲ್ಲೂಕಿನ ಚಿಕ್ಕತಿರುಪತಿ ದಕ್ಷಿಣಕಾಶಿ ಎಂಬ ಹೆಸರು ಪಡೆದಿದೆ. ಬೆಂಗಳೂರಿನಿಂದ 40 ಕಿ. ಮೀ. ದೂರದಲ್ಲಿರುವ ಈ ಪುಣ್ಯಕ್ಷೇತ್ರಕ್ಕೆ ಒಳ್ಳೆ ಸಾರಿಗೆ ಸೌಲಭ್ಯವಿದೆ. ಆಂಧ್ರ ತಮಿಳುನಾಡುಗಳಿಂದ ಕರ್ನಾಟಕದ ನಾನಾ ಭಾಗಗಳಿಂದ ಇಲ್ಲಿಗೆ ಯಾತ್ರಿಕರು ಬರುತ್ತಾರೆ. ಇಲ್ಲಿನ ಪ್ರಸನ್ನ ವೆಂಕಟರಮಣ ಸ್ವಾಮಿ ಅಭಯ ಮುದ್ರೆತೋರಿದ್ದಾನೆ. ಕೃಷ್ಣ ಶಿಲೆಯಿಂದ ಮಾಡಿರುವ ಮೂರ್ತಿ ಮೂರೂವರೆ ಅಡಿ ಎತ್ತರವಿದ್ದು ಪದ್ಮ ಪೀಠದ ಮೇಲೆ ನಿಂತಿರುತ್ತದೆ. ದೇವಸ್ಥಾನದ ಪ್ರವೇಶದ್ವಾರದ ಮೇಲೆ ಸುಮಾರು ಎಂಬತ್ತು ಅಡಿಗಳ ಆಕರ್ಷಕ ಗೋಪುರವಿದೆ. ದೇವಾಲಯಕ್ಕೆ ವಿಶಾಲ ಪ್ರಾಕಾರವಿದ್ದು ಗುಡಿ ಚೋಳರ ವಾಸ್ತುಶಿಲ್ಪದ ಮಾದರಿಯಲ್ಲಿದೆ. ಆಂಧ್ರದ ತಿರುಪತಿಗೆ ಹೋಗ ಲಾರದವರು ತಮ್ಮ ಹರಕೆ ಸಲ್ಲಿಸಲು ಚಿಕ್ಕತಿರುಪತಿಗೆ ಬರುತ್ತಾರೆ. ಭಕ್ತರು ಇಲ್ಲಿ ತಲೆ ಮುಡಿಕೊಡುವ, ಹುಟ್ಟುಕೂದಲು ಕೊಡುವ ಪದ್ಧತಿ ಇದೆ.

ಮಾಲೂರಿಗೆ 19 ಕಿ. ಮೀ ದೂರದಲ್ಲಿರುವ ಕಲ್ಲುಬೆಟ್ಟಗಳ ಟೇಕಲ್ ಗುಡ್ಡ. ಇಲ್ಲಿ ವರದರಾಜ ದೇವಸ್ಥಾನವಿದೆ. ಇದೊಂದು ಸುಂದರವಾದ ದೊಡ್ಡ ಗುಡಿ. ಅದರ ಮಹಾದ್ವಾರ ದ್ರಾವಿಡ ಶೈಲಿಯಲ್ಲಿದ್ದು ಪಶ್ಚಿಮಾಭಿ ಮುಖವಾಗಿದೆ. ಶಿಂಗಪ್ಪೆರುಮಾಳ್ ದೇವಸ್ಥಾನ ಉತ್ತಮ ಕಟ್ಟಡ. ಇದರಲ್ಲಿ ಶಿಲ್ಪಗಳಿರುವ ಶಿಲಾಸ್ತಂಭಗಳಿವೆ. ಇಲ್ಲಿನ ಆಂಜನೇಯ ದೇವಸ್ಥಾನದಲ್ಲಿ ಏಳು ಅಡಿ ಎತ್ತರದ ಆಂಜನೇಯ ಮೂರ್ತಿ ಇದೆ. ಗ್ರಾಮದೇವತೆ ಪಟಾಳಮ್ಮ ಗುಡಿಯಲ್ಲಿ ಮೂರಡಿ ಎತ್ತರದ ನಾಲ್ಕು ಕೈಗಳುಳ್ಳ ಕುಳಿತ ಭಂಗಿಯ ದೇವತೆ ಇದೆ.

ಮಾಲೂರು ತಾಲ್ಲೂಕಿನ ವಿರೂಪಾಕ್ಷ ಪುರದಲ್ಲಿ ವಿರೂಪಾಕ್ಷ ದೇವಾ ಲಯವಿದೆ. ಮಡಿವಾಳ ಗ್ರಾಮದಲ್ಲಿ ಚೋಳರ ಕಾಲದ ಗಂಗಾಧರೇಶ್ವರ ಗುಡಿ ಇದೆ. ಮಾಲೂರಿನ ಉತ್ತರಕ್ಕಿರುವ ತೋರಣ ಹಳ್ಳಿಯಲ್ಲಿ ಸಪ್ಪಲಮ್ಮನ ದೇವಾಲಯವಿದೆ. ಈ ದೇವಿ ದನಗಳಿಗೆ ಬರುವ ಸಪ್ಪೆ ಜಾಢ್ಯ ವಾಸಿಮಾಡು ವಳೆಂಬ ನಂಬಿಕೆ ಇದೆ. ಚಿಕ್ಕಕಡತೂರಿನಲ್ಲಿ ಪ್ರಾಚೀನ ಕಾಲದ ವೀರರ ಗುಡಿ ಗಳಿವೆ. ಭಾರತದ ಹಲವಾರು ನೂತನ ದೇವಾಲಯಗಳಲ್ಲಿ ಕಾಣುವ ದೇವತಾ

ಮೂರ್ತಿಗಳನ್ನು ಕಡೆಯುವ ಊರು ಶಿವಾರ ಪಟ್ಟಣ. ಇಲ್ಲಿನ ಬಸವಣ್ಣ ಲಂಡನ್ನಿನ ಮ್ಯೂಸಿಯಂನಲ್ಲಿದ್ದರೆ ವೇಣುಗೋಪಾಲ ಅಮೇರಿಕದ ದೇವಾಲಯ ವೊಂದರಲ್ಲಿ ನೆಲೆಗೊಂಡಿದೆ.

## ಬಂಗಾರಪೇಟೆ ತಾಲ್ಲೂಕು

ಬೇತ ಮಂಗಲ ಬಂಗಾರಪೇಟೆ ತಾಲ್ಲೂಕಿನ ಒಂದು ಮುಖ್ಯ ಸ್ಥಳ. ಮೊದಲು ಈ ಊರಿಗೆ ವಿಜಯಾದಿತ್ಯ ಮಂಗಲ ಎಂಬ ಹೆಸರಿತ್ತು. ಇಲ್ಲಿ ವಿಜಯೇಂದ್ರ, ಆಂಜನೇಯ.ಅರ್ಕೇಶ್ವರ ದೇವಾಲಯಗಳಿವೆ. ವಿಜಯೇಂದ್ರ ದೇವಾಲಯ ಗರ್ಭಗೃಹ, ನವರಂಗ, ಮುಖಮಂಟಪಗಳನ್ನೊಳಗೊಂಡಿದೆ. ಆಂಜನೇಯ ದೇವಾಲಯದ ವಿಗ್ರಹ ಸುಮಾರು ಹನ್ನೆರಡು ಅಡಿ (3.7ಮೀ) ಎತ್ತರವಿರುವುದು ವಿಶೇಷ. ದೇವಾಲಯ ಸುಂದರವಾಗಿದೆ. ಕಂಬಗಳ ಕೆತ್ತನೆ ಗಮನಾರ್ಹವಾಗುತ್ತದೆ.

ಇದೇ ತಾಲ್ಲೂಕಿನ ಬೂದಿ ಕೋಟೆ ಬಂಗಾರಪೇಟೆಗೆ 11 ಕಿ. ಮೀ. ದೂರದಲ್ಲಿದೆ. ಇಲ್ಲಿನ ಒಂದು ಅವಶೇಷವಾಗಿರುವ ಕೋಟೆಯೊಳಭಾಗದಲ್ಲಿ ವೇಣುಗೋಪಾಲಸ್ವಾಮಿ ದೇವಾಲಯವೂ ಹೊರಭಾಗದಲ್ಲಿ ವೆಂಕಟೇಶ್ವರ ದೇವಾಲಯವೂ ಇದೆ. ಸೋಮೇಶ್ವರ ದೇವಾಲಯ ಊರಿಗೆ ಒಂದೂವರೆ ಕಿ. ಮೀ. ದೂರದಲ್ಲಿದೆ. ಇಲ್ಲಿ ಕಪ್ಪು ಶಿಲೆಯ ಶಿವಲಿಂಗವಿದೆ. ಎದುರಿಗೆ ನಂದಿವಿಗ್ರಹವಿರುವ ಗುಡಿ ಇದೆ. ದೇವಾಲಯದ ಪ್ರಾಕಾರದ ಸುತ್ತಲೂ ಎಡದಿಂದ ಕ್ರಮವಾಗಿ ವೀಣೆ ಇಲ್ಲವೆ ತಂಬೂರಿ ನುಡಿಸುವ ದಕ್ಷಿಣಾಮೂರ್ತಿ, ಸಪ್ತಮಾತೃಕೆಗಳು, ಭೈರವ, ಸೂರ್ಯ ಮೊದಲಾದ ಶಿಲ್ಪಗಳಿವೆ. ಕೋದಂಡ ರಾಮ ದೇವಾಲಯ ಊರಿನ ಮಧ್ಯ ಇದೆ. ಗಂಗಾಧರೇಶ್ವರ ದೇವಾಲಯ ಇಲ್ಲಿನ ಮತ್ತೊಂದು ಗುಡಿ.

ಬೂದಿಕೋಟೆ ಮಾರ್ಕಂಡೇಯ ನದಿಯ ಎರಡು ಕವಲುಗಳ ಸಂಗಮ ಸ್ಥಾನದಲ್ಲಿದೆ. ಈ ನದಿ ಎಡದಂಡೆ ಮೇಲೆ ರಾಘವೇಂದ್ರ ಸ್ವಾಮಿಗಳ ಬೃಂದಾವನ ಇದೆ.

**ಕೊಳತೂರು**

ಶ್ರೀನಿವಾಸಪುರ ತಾಲ್ಲೂಕಿನ ಒಂದು ಗ್ರಾಮ. ಈ ಊರಿಗೆ ಪೂರ್ವದಲ್ಲಿ ಶಿವ ದೇವಾಲಯವಿದೆ. ದೇವಾಲಯದ ಗೋಪುರವು ಕಲ್ಲಿನ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಚಿಂತಾಮಣಿ**

ತಾಲ್ಲೂಕು ಕೇಂದ್ರ. ಚಿಂತಾಮಣಿರಾವ್ ಎಂಬ ಮರಾಠನಾಯಕ ಈ ಪಟ್ಟಣವನ್ನು ಸ್ಥಾಪಿಸಿದನೆಂದು ಈ ಪಟ್ಟಣಕ್ಕೆ ಚಿಂತಾಮಣಿ ಎಂಬ ಹೆಸರಿದೆ. ಚಿಂತಾಮಣಿಯಲ್ಲಿರುವ 'ವರದಾಂಜನೇಯ ಸ್ವಾಮಿ' ಬೆಟ್ಟ ಊರಿಗೆ ಕಿರೀಟ ವಿಟ್ಟಂತೆ ಸುಂದರವಾಗಿದೆ.

ಚಿಂತಾಮಣಿ ತಾಲ್ಲೂಕಿನ ಪ್ರಸಿದ್ಧ ಕ್ಷೇತ್ರ ಕೈವಾರ. ಕೈವಾರ ಮಹಾ ಭಾರತದಲ್ಲಿ ಬರುವ ಏಕ ಚಕ್ರಪುರವೆಂದು ಹೇಳುತ್ತಾರೆ. ಅರಗಿನ ಮನೆ ಯಿಂದ ತಪ್ಪಿಸಿಕೊಂಡು ಬಂದು ಪಾಂಡವರು ಕೆಲಕಾಲ ಇಲ್ಲಿದ್ದರಂತೆ. ಈ ಹಳ್ಳಿಗೆ ಹತ್ತಿರುವ ಬೆಟ್ಟದಲ್ಲಿ ವಾಸವಾಗಿದ್ದ ಬಕಾಸುರನನ್ನು ಭೀಮ ಕೊಂದ ನೆಂದೂ ಹೇಳುತ್ತಾರೆ. ಕೈವಾರದಲ್ಲಿ ಅಮರನಾರಾಯಣ, ಭೀಮೇಶ್ವರ, ನಕುಲೇಶ್ವರ, ಸಹದೇವೇಶ್ವರ ದೇವಾಲಯಗಳಿವೆ. ಅಮರ ನಾರಾಯಣ ಗುಡಿ ಮುಖ್ಯ ಗುಡಿ. ಇದರ ವಾಸ್ತುಶಿಲ್ಪ ಗಮನಾರ್ಹವಾಗಿದೆ. ಇಟ್ಟಿಗೆ ಗಳಿಂದ ಕಟ್ಟಿದ ಶಿಖರವನ್ನುಳ್ಳ ಗರ್ಭಗೃಹ, ಸಣ್ಣ ಸುಕನಾಸಿ, ನಾಲ್ಕು ಕಂಬ ಗಳಿರುವ ನವರಂಗ ಇವೆ. ಮುಖಮಂಟಪವಿದ್ದು ಅತ್ಯಂತ ಸುಂದರವಾಗಿದೆ. ಮುಂದಿನ ಎರಡು ಕಂಬಗಳ ಮೇಲೆ ವಿಮಾನ, ಸಿಂಹ ಮತ್ತಿತರ ಪ್ರಾಣಿಗಳ ಚಿತ್ರಗಳನ್ನು ಕೆತ್ತಲಾಗಿದೆ. ಅದೇ ಉತ್ತರಭಾಗದ ಕಂಬದ ಮೇಲೆ ಹಾರುವ ಸಿಂಹ, ಗಂಧರ್ವರು, ಮೊಸಳೆ ಚಿತ್ರಗಳನ್ನು ಕೆತ್ತಲಾಗಿದೆ. ದಕ್ಷಿಣದ ದ್ವಾರ ಕಂಬದ ಮೇಲೆ ಹಂಸ, ನವಿಲು, ಸಿಂಹ, ಹುಲಿ ಹಾಗೂ ಸವಾರಿ ಆನೆಗಳನ್ನು ಚಿತ್ರಿಸಲಾಗಿದೆ. ನವರಂಗದ ದಕ್ಷಿಣ ಭಾಗದಲ್ಲಿ ಕಲ್ಲಿನ ಕಿಟಕಿ ಇದೆ. ಉತ್ತರ ಭಾಗದಲ್ಲಿ ವಿಜಯನಗರ ಸಾಮ್ರಾಜ್ಯ ಕಾಲದ್ದೆನ್ನಲಾದ ಸೀತಾರಾಮಲಕ್ಷ್ಮಣರ ಪ್ರತಿಮೆಗಳಿರುವ ಸಣ್ಣಗುಡಿ ಇವೆ. ಸುಕನಾಸಿ ಚಿಕ್ಕದಿದೆ. ಗರ್ಭಗುಡಿಯಲ್ಲಿ ಅಮರನಾರಾಯಣನ ಚೆಲುವಾದ ಪ್ರತಿಮೆ ಇದೆ.

ಭೀಮೇಶ್ವರ ದೇವಾಲಯ ದೊಡ್ಡದಾಗಿದ್ದು ಗರ್ಭಗುಡಿ, ಸುಕನಾಸಿ, ಅರ್ಧಮಂಟಪ ಮತ್ತು ರಂಗಮಂಟಪಗಳಿವೆ. ಹದಿನಾರು ಮುಖಗಳ ಕಂಬಗಳ ಮೇಲೆ ದೇವತೆಗಳ, ವೀರರ, ಹೂ ಮತ್ತು ಎಲೆಗಳ ಚಿತ್ರಗಳನ್ನು ಕೆತ್ತಲಾಗಿದೆ. ಸಹದೇವೇಶ್ವರ, ನಕುಲೇಶ್ವರ ಮಂದಿರಗಳು ಸಣ್ಣದಾಗಿವೆ. ಐವತ್ತಾರನೆ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಮೇಲೆ ಕೈವಾರ ಕ್ಷೇತ್ರ ಮತ್ತಷ್ಟು ಪ್ರಸಿದ್ಧಿಗೆ ಬಂದಿದೆ. ಪವಾಡ ಪುರುಷರೆಂದು ಹೆಸರಾಗಿರುವ ನಾರಾಯಣ ಯತೀಂದ್ರರ ಜೀವನ ತಿಳಿವದ್ದೇ ಆಗಿದೆ. ಕೈವಾರ ನಾರಾಯಣಪ್ಪನವರ ಹೆಸರಿನಲ್ಲಿ ಪ್ರತಿ ವರ್ಷ ಸಾಹಿತ್ಯ, ಸಾಂಸ್ಕೃತಿಕ, ಧಾರ್ಮಿಕ ಉತ್ಸವಗಳು ನಡೆಯುತ್ತಿವೆ. ಕೈವಾರ ಒಂದು ಸಂತ ಕ್ಷೇತ್ರ. ಪ್ರತಿವರ್ಷ ಜ್ಯೇಷ್ಠ ಶುದ್ಧ ತದಿಗೆಯಂದು ಯೋಗಿಗಳ ಆರಾಧನೋತ್ಸವ, ಪಾಲ್ಗುಣ ಬಹುಳ ಪಾಡ್ಯದಲ್ಲಿ ರಥೋತ್ಸವವು ವೈಭವದಿಂದ ನಡೆಯುತ್ತವೆ. ಕೈವಾರದಲ್ಲಿರುವ ನಾರಾಯಣ ಯೋಗಿಗಳ ಆಶ್ರಮ ಒಂದು ಧಾರ್ಮಿಕ ಕೇಂದ್ರವಾಗಿದೆ.

ಚಿಂತಾಮಣಿ ತಾಲ್ಲೂಕಿನ ಅಂಬಾಜಿ ದುರ್ಗ ಎತ್ತರವಾದ ಬೆಟ್ಟ. ಇದರ ಮೇಲೆ ಕೋಟೆ ಹಾಗೂ ಶಿವದೇವಾಲಯವಿದೆ. ಕೋನಕುಂಟ್ಲು ಎಂಬ ಸ್ಥಳದಲ್ಲಿ ವೆಂಕಟರಮಣ ದೇವಾಲಯವಿದೆ. ಆಷಾಢ ಶುಕ್ಲ ಹುಣ್ಣಿಮೆ ಯಂದು ದೊಡ್ಡ ಜಾತ್ರೆ ನಡೆಯುತ್ತದೆ. ಸಿಂಗ್ರಪಳ್ಳಿಯಲ್ಲಿ ಪಾಲ್ಗುಣ ಶುದ್ಧ ಏಕಾದಶಿಯಂದು ಲಕ್ಷ್ಮೀನರಸಿಂಹಸ್ವಾಮಿ ಜಾತ್ರೆ ನಡೆಯುತ್ತವೆ.

### ವಿದುರಾಶ್ವತ್ಥ

ಗೌರಿಬಿದನೂರು ತಾಲ್ಲೂಕಿನ ವಿದುರಾಶ್ವತ್ಥ ಒಂದು ಪವಿತ್ರ ಸ್ಥಳ. ವಿದುರ ನೆಟ್ಟನೆಂದು ಹೇಳಲಾದ ಬೃಹತ್ ಅಶ್ವತ್ಥ ವೃಕ್ಷ ಇಲ್ಲಿರುತ್ತದೆ. ನಾಗರ ಪ್ರತಿಷ್ಠೆಗಳಿಗಂತೂ ಲೆಕ್ಕವೇ ಇಲ್ಲ. ಅಶ್ವತ್ಥ ವೃಕ್ಷವನ್ನು ಜನ ಪೂಜಿ ಸುತ್ತಾರೆ. ಈ ವಟವೃಕ್ಷ ಉತ್ತರ ಪಿನಾಕಿನಿ ನದಿಯ ಎಡದಂಡೆ ಮೇಲಿದೆ. ಈ ವೃಕ್ಷದ ಪ್ರಕಾರಕ್ಕೆ ಹೊಂದಿಕೊಂಡಂತೆ ಈಶ್ವರ, ನವಗ್ರಹಗಳು, ನಾರಾಯಣ, ಶ್ರೀರಾಮರ, ಆಧುನಿಕ ಕಾಲದ ಸಣ್ಣ ದೇವಾಲಯಗಳಿವೆ. ಪ್ರತಿವರ್ಷ ಚೈತ್ರಮಾಸ ಹುಣ್ಣಿಮೆಯಂದು ಇಲ್ಲಿ ದೊಡ್ಡ ಜಾತ್ರೆ ನಡೆಯು ತ್ತದೆ.

ಗೌರಿಬಿದನೂರಿನಲ್ಲಿ ಹಿಂದೆ ವಿದುರನು ವಾಸಿಸುತ್ತಿದ್ದನೆಂದು ಇದಕ್ಕೆ ವಿದುರೂರು ಎಂಬ ಹೆಸರಿತ್ತೆಂದು ಹೇಳುತ್ತಾರೆ. ಇಲ್ಲಿ ಜಲಾಲ್ ಬುಖಾರಿ ವಲಿಯುದರ್ಗಾ ಇದೆ. ನವಗ್ರಹ ಮತ್ತು ವೆಂಕಟರಮಣ ದೇವಾಲಯಗಳಿವೆ. ವೆಂಕಟರಮಣ ದೇವಸ್ಥಾನದ ವಿಗ್ರಹದ ಎತ್ತರ ನಾಲ್ಕು ಅಡಿಗಳು.

**ಗುಡಿಬಂಡೆ**

ತಾಲ್ಲೂಕು ಕೇಂದ್ರ. ಈ ಊರಿಗೆ ಈ ಹೆಸರು ಬರಲು ಕಾರಣವೆಂದರೆ ಬಂಡೆಯ ಮೇಲಿರುವ ಗುಡಿಯೇ ಆಗಿದೆ. ಈ ಗುಡಿ ಅಹೋಬಲನರಸಿಂಹಸ್ವಾಮಿಯದಾಗಿದೆ. ಗವಿಗುಡಿ, ಗವಿಗರ್ಭಗುಡಿ ಮತ್ತು ಹೊರ ಅಂಕಣವೆಂದು ಎರಡಾಗಿ ವಿಂಗಡಿಸಲಾಗಿದೆ. ಹೊರ ಅಂಕಣದ ಮಂಟಪದ ದ್ವಾರದಲ್ಲಿ ದ್ವಾರಪಾಲಕ ವಿಗ್ರಹಗಳಿವೆ. ಮಂಟಪದ ಉತ್ತರದ ಗೋಡೆಯ ಮೇಲೆ ವಾಮನ, ರಾಮ, ಉಗ್ರನರಸಿಂಹ ಈ ಉಬ್ಬು ಚಿತ್ರಗಳಿವೆ. ಗರ್ಭಗುಡಿಯಲ್ಲಿ ಮೂರ್ತಿ ಇರುವುದಿಲ್ಲ. ಉದ್ಭವ ಶಿಲೆ ಇದೆ.

**ಚಿಕ್ಕಬಳ್ಳಾಪುರ**

ತಾಲ್ಲೂಕು ಕೇಂದ್ರ. ಚಿಕ್ಕಬಳ್ಳಾಪುರ ಕೋಲಾರಕ್ಕೆ 60 ಕಿ.ಮೀ. ದೂರದಲ್ಲಿದೆ. ಹಿಂದೆ ಈ ಊರು ಒಂದು ಪಾಳೆಯಗಾರರ ಅಧೀನದಲ್ಲಿತ್ತು. ಇಲ್ಲಿ ಚೆನ್ನಕೇಶವ ದೇವಾಲಯವಿದೆ. ಇದು ಅತ್ಯಂತ ಹಳೆಯದು. ಇತ್ತೀಚೆಗೆ ವೀರಭದ್ರ ದೇವಾಲಯ ನಿರ್ಮಾಣಗೊಂಡಿದೆ. ಇಲ್ಲಿ ಉತ್ತಮ ಎನಿಸಿದ ಸುದ್ದೆ ವಿಗ್ರಹಗಳಿವೆ.

ಚಿಕ್ಕಬಳ್ಳಾಪುರ ತಾಲ್ಲೂಕಿನ ಅಗಲ ಗುರ್ಕಿ ಗ್ರಾಮದಲ್ಲೂ ವೀರಭದ್ರ ದೇವಾಲಯವಿದೆ. ಅಜ್ಜಾವರ ಮತ್ತು ಅಣಕನೂರಿನಲ್ಲಿ ರಂಗನಾಥ ದೇವಾಲಯಗಳಿವೆ. ಮಂಚನಬೆಲೆ ಗ್ರಾಮದ ಆಂಜನೇಯ ದೇವಾಲಯ ಪಟ್ರೇನಹಳ್ಳಿಯ ಗೋಪಾಲ ಕೃಷ್ಣ ದೇವಾಲಯ, ರಂಗಸ್ಥಳ ಗ್ರಾಮದ ರಂಗನಾಥ ದೇವಾಲಯ, ಕಂದವರದ ಜ್ವರ ಹರೇಶ್ವರ ದೇವಾಲಯ ತಾಲ್ಲೂಕಿನ ಇತರ ದೇವಾಲಯಗಳು. ಜ್ವರಹರೇಶ್ವರ ದೇವಾಲಯದ ಬಳಿ ನಲವತ್ತು ಅಡಿ ಎತ್ತರದ ಗರುಡಗಂಬವಿದೆ.

## ನಂದಿದುರ್ಗ

ಕರ್ನಾಟಕದ ಸುಸಜ್ಜಿತ ಗಿರಿಧಾಮಗಳಲ್ಲಿ ನಂದಿದುರ್ಗವೂ ಒಂದು. ಇನ್ನೊಂದು ಕೆಮ್ಮಣ್ಣುಗುಂಡಿ ಗಿರಿಧಾಮ. ನಂದಿದುರ್ಗ ಅಥವಾ ನಂದಿಬೆಟ್ಟ ತುಂಬಾ ತಂಪು ಪ್ರದೇಶ. ಸುತ್ತಲೂ ಅರಣ್ಯ, ನಿಸರ್ಗ ರಮಣೀಯ ಪ್ರದೇಶ, ಚಾರಿತ್ರಿಕ ಸ್ಮಾರಕಗಳಿಂದ್ದು ನಂದಿದುರ್ಗ ಜನಪ್ರಿಯವಾಗಿದೆ. ಮಹಾತ್ಮಾ ಗಾಂಧಿ, ಮೈಸೂರಿನ ಮಹಾರಾಜರು ಬೇಸಿಗೆಯಲ್ಲಿ ಇಲ್ಲಿಗೆ ಬಂದು ತಂಗಲು ಬಯಸುತ್ತಿದ್ದರು. ಬೆಂಗಳೂರಿಗೆ ನಂದಿದುರ್ಗ 60 ಕಿ.ಮೀ. ದೂರದಲ್ಲಿದೆ. ನಂದಿಬೆಟ್ಟದ ಮೇಲೆ ಹೋಗಲು ಉತ್ತಮವಾದ ಮೋಟಾರು ಮಾರ್ಗವಿದೆ.

ಬೆಟ್ಟದ ಮೇಲೆ ಯೋಗ ನಂದೀಶ್ವರ ದೇವಾಲಯವಿರುತ್ತದೆ. ಶಿವ ಇಲ್ಲಿ ಯೋಗದೀಕ್ಷೆಯಲ್ಲಿರುವುದರಿಂದ ಉತ್ಸವಗಳು ಜರುಗುವುದಿಲ್ಲ. ದೇವಾಲಯವು ಗರ್ಭಗುಡಿ, ಸುಕನಾಸಿ. ನವರಂಗ ಮತ್ತು ಕಲ್ಯಾಣಮಂಟಪಗಳನ್ನೊಳಗೊಂಡಿದೆ. ಇದನ್ನು ಚೋಳರ ಕಾಲದಲ್ಲೇ ನಿರ್ಮಿಸಲಾಯಿತೆಂದು ಹೇಳುತ್ತಾರೆ. ಸುಕನಾಸಿಯ ಬಾಗಿಲವಾಡದ ಹಿತ್ತಾಳೆ ಚೌಕಟ್ಟಿನಲ್ಲಿ ಹಲವಾರು ಚಿತ್ರಗಳನ್ನು ಕೆತ್ತಲಾಗಿದೆ. ಎರಡು ಪಕ್ಕಗಳಲ್ಲಿಯೂ ಆಳೆತ್ತರದ ದ್ವಾರಪಾಲಕ ವಿಗ್ರಹಗಳಿವೆ. ಸುಕನಾಸಿಯ ದಕ್ಷಿಣಕ್ಕಿರುವ ಮಂಟಪದಲ್ಲಿ ಲಿಂಗೋದ್ಭವ ಮೂರ್ತಿ, ಗಜಸಂಹಾರ ಮೂರ್ತಿ, ದುರ್ಗಾ, ನಾಟ್ಯಗಣಪತಿ ಮೊದಲಾದ ವಿಗ್ರಹಗಳಿವೆ. ದೇವಿಗುಡಿಯಲ್ಲಿ ಮುಕ್ತಾಂಬಳ ವಿಗ್ರಹವಿದೆ. ಬೆಟ್ಟದ ಬುಡದ ನಂದಿ ಹಳ್ಳಿಯಲ್ಲಿ ಭೋಗನಂದೀಶ್ವರ ದೇವಾಲಯವಿದೆ. ನಂದಿಹಳ್ಳಿಯಲ್ಲಿ ಭೋಗ ನಂದೀಶ್ವರ ದೇವಾಲಯವಿದೆ. ನಂದಿಯಲ್ಲಿ ಭೋಗನಂದೀಶ್ವರ ಸ್ವಾಮಿ ಜಾತ್ರೆ ನಡೆಯುತ್ತದೆ. ಭೋಗ ನಂದೀಶ್ವರ ದೇವಾಲಯ ಎಂಟನೆಯ ಶತಮಾನದ್ದಾಗಿದೆ. ಪ್ರಾಕಾರದ ಎತ್ತರ ಭಾಗದಲ್ಲಿ ಶೃಂಗತೀರ್ಥ, ಮಧ್ಯ ಭಾಗದಲ್ಲಿ ವಸಂತ ಮಂಟಪ, ದಕ್ಷಿಣ ಭಾಗದಲ್ಲಿ ಆಲಯಗಳೂ ಕೂಡಿದ್ದು ಬೇರೆ ಬೇರೆ ಕಾಲಗಳ ಶಿಲ್ಪಕಲೆಗಳನ್ನು ಇಲ್ಲಿ ನೋಡಬಹುದು.

**ಧರ್ಮ- ಆಚರಣೆಗಳು**

ಕೋಲಾರದಲ್ಲಿರುವ ದರ್ಗಾ ಪ್ರಸಿದ್ಧ. ಮಕ್ಕಳಿಗೆ ಕಾಹಿಲೆ ಕಸಾಲೆಗಳಾದರೆ ಹಿಂದೂಗಳು ಮಕ್ಕಳನ್ನು ದರ್ಗಾಗೆ ಕರೆದೊಯ್ದು ಪೀರ್‌ಸಾಹೇಬರಿಂದ ಮಂತ್ರ ಹಾಕಿಸಿ ತಾಯಿತ ಕಟ್ಟಿಸುವ ರೂಢಿ ಇತ್ತು. ಕೋಲಾರದಲ್ಲಿ ನಡೆಯುವಷ್ಟು ಜಾತ್ರೆಗಳು ಬೇರಾವ ಜಿಲ್ಲೆಯಲ್ಲೂ ನಡೆಯುವುದಿಲ್ಲ. ನೂರಾರು ಜಾತ್ರೆಗಳಲ್ಲಿ ವಾಣರಾಸಿ, ಚಿಕ್ಕತಿರುಪತಿ, ವಕ್ಕಲೇರಿ, ದೇವರಗುಡಿಪಲ್ಲಿ, ತಲಕಾಯಲ ಕೊಂಡ ಜಾತ್ರೆಗಳು ಅತ್ಯಂತ ಪ್ರಸಿದ್ಧ. ಕೋಲಾರದ ಮಕ್ಬರಾ ಇಸ್ಲಾಮೀ ಕಟ್ಟಡದಲ್ಲಿ ಹೈದರಾಲಿಯ ಹನ್ನೆರಡು ಜನ ಸಂಬಂಧಿಕರ ಗೋರಿಗಳಿವೆ. ವರ್ಷಕ್ಕೊಮ್ಮೆ ಇಲ್ಲಿ ಉರುಸ್ ನಡೆಯುತ್ತದೆ. ಜಿಲ್ಲೆಯಲ್ಲಿ ಮಾಧ್ವಯತಿಗಳ ಎರಡು ಮಠಗಳು, ಅದ್ವೈತಿಗಳ ಒಂದು ಮಠ, ವೀರಶೈವರ ನಾಲ್ಕೈದು ಮಠಗಳೂ, ವಿಶ್ವಕರ್ಮರ ಹಾಗೂ ಕೈವಾರ ತಾತಯ್ಯನವರ ಒಂದೊಂದು ಪೀಠವೂ ಇವೆ. ಮುಸಲ್ಮಾನರ ಹಲವಾರು ದರ್ಗಾಗಳಿವೆ. ಧರ್ಮ ಸಮನ್ವಯಕ್ಕೆ ಹೆಸರಾಗಿದ್ದ ಜಿಲ್ಲೆ ಕೋಲಾರ.

**ಗಿರಿಯ ಮೇಲಿನ ಗ್ರಾಮ ತೇರುಹಳ್ಳಿ**

ಕೋಲಾರದ ಪ್ರಸಿದ್ಧ ಶತಶೃಂಗ ಪರ್ವತದ ಮೇಲೆ ಹಲವು ಗ್ರಾಮಗಳಿವೆ. ತೇರುಹಳ್ಳಿ ಅಂತಹ ಒಂದು ಗ್ರಾಮ. ಇಲ್ಲಿ ಒಂದು ನಲವತ್ತು ಮನೆಗಳಿದ್ದಾವು. ಇಲ್ಲಿನ ಗಂಗಾಧರೇಶ್ವರ ದೇವಾಲಯ ಪ್ರಸಿದ್ಧವಾಗಿದೆ. ದ್ರಾವಿಡ ಶೈಲಿಯ ಈ ದೇವಾಲಯದ ದಕ್ಷಿಣ ಮತ್ತು ಪಶ್ಚಿಮದ ಗೋಡೆಗಳ ಕೆಳ ಭಿತ್ತಿಗಳಲ್ಲಿ ತಮಿಳು ಲಿಪಿಗಳಿವೆ. ಈ ದೇವಾಲಯವನ್ನು ಪಾಂಡವರು ಒಂದೇ ರಾತ್ರಿಯಲ್ಲಿ ಕಟ್ಟಿದರೆನ್ನುತ್ತಾರೆ. ಯುಗಾದಿ ಆದ ಮೊಲೆ ವರ್ಷಕ್ಕೊಮ್ಮೆ ಇಲ್ಲಿ ಜಾತ್ರೆ ನಡೆಯುತ್ತದೆ. ದೇವಾಲಯದ ಪ್ರವೇಶದ್ವಾರದ ಗೋಪುರ ಇಟ್ಟಿಗೆಯ ನಿರ್ಮಾಣವಾಗಿದ್ದು ಎರಡು ಅಂತಸ್ತುಗಳನ್ನು ಹೊಂದಿದೆ.

# ಉತ್ತರ ಕನ್ನಡ ಜಿಲ್ಲೆ

ನಿಸರ್ಗ ಸೌಂದರ್ಯಕ್ಕೆ ಹೆಸರಾದ ಉತ್ತರ ಕನ್ನಡ ಜಿಲ್ಲೆ ಕರ್ನಾಟಕದ ಕರಾವಳಿ ಜಿಲ್ಲೆಗಳಲ್ಲಿ ಒಂದು. ಇಲ್ಲಿರುವ ಹಲವು ಜಲಪಾತಗಳಿಂದಾಗಿ ಈ ಜಿಲ್ಲೆಯನ್ನು ಜಲಪಾತಗಳ ಜಿಲ್ಲೆ ಎಂದೂ ಹೇಳುವರು. 'ಮಧು ಮಹೋತ್ಸವ ಮಾದೊಡಮೇನನೆಂಬೆ ನಾರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂದಿದ್ದಾನೆ ನಮ್ಮ ಆದಿ ಕವಿ ಪಂಪ. ಕ್ರಿ.ಶ. 200 ರಿಂದ ಕ್ರಿ.ಶ. 1347ರವರೆಗೆ ಬನವಾಸಿ ನಾಡಿನ ಹೃದಯವಾಗಿದ್ದ ಜಿಲ್ಲೆ ಉತ್ತರ ಕನ್ನಡ ಜಿಲ್ಲೆ. ಬಹು ಕಾಲ ಬನವಾಸಿ ಕದಂಬರ ಆಳ್ವಿಕೆಯಲ್ಲಿದ್ದ ಪ್ರದೇಶ. ಕರ್ನಾಟಕದಲ್ಲಿ ಮೊದಲು ಸಾಮ್ರಾಜ್ಯವನ್ನು ಕಟ್ಟಿದ ಕದಂಬರು ಆಳಿದ್ದು ಬನವಾಸಿ ನಾಡಿನಲ್ಲಿಯೇ. ಬನವಾಸಿ ಕದಂಬರ ರಾಜಧಾನಿಯೂ ಆಗಿತ್ತು. ಉತ್ತರ ಕನ್ನಡ ಜಿಲ್ಲೆ ಇತಿಹಾಸ ಕಾಲದಿಂದಲೂ ಬಹಳಷ್ಟು ಶೋಷಣೆಗೆ ಒಳಗಾಗಬೇಕಾಯಿತು. ವಿಜಯನಗರದರಸರು, ಬಿದನೂರು ಆಳಿದವರು, ಬಿಜಾಪುರ ಆದಿಲ್‌ಶಾಹಿಸುಲ್ತಾನರು, ಸೋದೆಯ ಅರಸರು, ಮರಾಠರು ಹೈದರಾಲಿ ಟಿಪ್ಪುಸುಲ್ತಾನರು ಕಡೆಗೆ ಬ್ರಿಟೀಷರು ಯಾರೂ ಬಿಡಲಿಲ್ಲ. ಟಿಪ್ಪುಸುಲ್ತಾನನ ಕಾಲದಲ್ಲಂತೂ ಅವನು ವಿಧಿಸಿದ ತೆರಿಗೆಗಳ ಭಾರ ತಾಳಲಾರದೆ ಜಿಲ್ಲೆಯ ಜನಸಂಖ್ಯೆ ಬಹಳಷ್ಟು ಇಲ್ಲವಾಯಿತು.

ಈ ಜಿಲ್ಲೆಯಲ್ಲಿ ಕಾರವಾರ, ಸೂಪಾ, ಹಳಿಯಾಳ, ಯಲ್ಲಾಪುರ, ಮುಂಡಗೋಡು, ಸಿರಸಿ, ಸಿದ್ದಾಪುರ, ಭಟ್ಕಳ, ಹೊನ್ನಾವರ, ಕುಮಟಾ, ಅಂಕೋಲ ಹೀಗೆ ಹನ್ನೊಂದು ತಾಲ್ಲೂಕುಗಳಿವೆ. ಈ ಜಿಲ್ಲೆಯಲ್ಲಿರುವ ಪುಣ್ಯ ಕ್ಷೇತ್ರಗಳು ಹಲವು. ಅಲ್ಲಿಯ ದೇವಸ್ಥಾನಗಳಿಗಾಗಿ ಅವು ಪ್ರಸಿದ್ಧ. ಶ್ರೀಕ್ಷೇತ್ರ

ಗೋಕರ್ಣ ದಕ್ಷಿಣ ಕಾಶಿ ಎಂದು ಹೆಸರಾಗಿದೆ. ತುಳುನಾಡಿನ ಸಪ್ತಕ್ಷೇತ್ರಗಳಲ್ಲಿ ಒಂದು. ಸಿರಸಿಯ ಮಾರಿಕಾಂಬಾ, ಉಳವಿಯ ಚನ್ನಬಸವೇಶ್ವರ ದೇವಾಲಯಗಳು ಜಾಗ್ರತ ಸ್ಥಳಗಳೆನಿಸಿವೆ. ಕಾರವಾರ ಕರ್ನಾಟಕದ ಒಂದು ಪ್ರಮುಖ ಬಂದರು. ಅದೊಂದು ಸುಂದರ ತೀರಪ್ರದೇಶವೂ ಹೌದು. ಜಿಲ್ಲೆಯ ಪ್ರಕೃತಿ ಸಂಪತ್ತು ಹಲವು ಹತ್ತು ಉದ್ದಿಮೆಗಳ ಸ್ಥಾಪನೆಗೆ ಅವಕಾಶ ಮಾಡಿಕೊಟ್ಟಿವೆ. ದಾಂಡೇಲಿಯಲ್ಲಿ ದೊಡ್ಡ ಕಾಗದದ ಕಾರ್ಖಾನೆ ಇದೆ. ಜಿಲ್ಲೆಯಲ್ಲಿ ಮ್ಯಾಂಗನೀಸ್ ಖನಿಜ ವಿಪುಲವಾಗಿ ದೊರೆಯುತ್ತದೆ. ಕಾಳಿನದಿ ಜಲವಿದ್ಯುತ್ ಯೋಜನೆ ನಾಡಿನ ಪ್ರಮುಖ ವಿದ್ಯುತ್ ಯೋಜನೆಯಾಗಿದ್ದು ಉತ್ತರ ಕನ್ನಡ ಜಿಲ್ಲೆಯಲ್ಲಿ ಈ ಯೋಜನೆ ಈಗಾಗಲೇ ತನ್ನ ಮೊದಲ ಹಂತ ದಿಂದ 910 ಮೆಗಾವಾಟ್ ವಿದ್ಯುತ್ ಉತ್ಪಾದಿಸುತ್ತಿದೆ. ಅಡಿಕೆ, ತೆಂಗು ಗೋಡಂಬಿ, ಕರಿಮೆಣಸು, ಬತ್ತ, ಕಬ್ಬು ಜಿಲ್ಲೆಯಲ್ಲಿ ಬೆಳೆಯುತ್ತಾರೆ. ಇಲ್ಲಿನ ಅರಣ್ಯಗಳು ಶ್ರೀಗಂಧ, ತೇಗ, ಬೀಟೆ ಮೊದಲಾದ ಅಮೂಲ್ಯ ಮರಗಳ ಬೀಡು. ಹಲವು ವನ್ಯ ಪ್ರಾಣಿಗಳೂ ಇಲ್ಲಿ ವಾಸಿಸಿವೆ.

## ದೇವಾಲಯಗಳು

ಸಂಸ್ಕೃತಿಯ ಪ್ರತೀಕವೆನಿಸಿದ ದೇವಾಲಯಗಳು ಜನತೆಯ ಧಾರ್ಮಿಕ ಪ್ರವೃತ್ತಿಗೆ ನೆರವಾಗುವ, ಮನಸ್ಸಿಗೆ ನೆಮ್ಮದಿ ನೀಡುವ ತಾಣಗಳು. ಉತ್ತರ ಕನ್ನಡ ಜಿಲ್ಲೆಯಲ್ಲಿ ಪುರಾಣೇತಿಹಾಸ ಕಾಲಗಳಿಂದಲೂ ಪ್ರಸಿದ್ಧವಾದ ದೇವಾಲಯಗಳು ಹಲವು ಇವೆ. ರಾವಣನಿರ್ಮಿತ ಪಂಚಶಿವಕ್ಷೇತ್ರಗಳು ಈ ಜಿಲ್ಲೆಯಲ್ಲಿ ಇದ್ದು ಭಕ್ತ ಜನರನ್ನು ಬರಮಾಡಿಕೊಳ್ಳುತ್ತವೆ. ಸಜ್ಜೇಶ್ವರ, ಮಹಾಬಲೇಶ್ವರ, ಮೃಡೇಶ್ವರ, ಧಾರೇಶ್ವರ, ಶಂಭುಲಿಂಗೇಶ್ವರ ಇವು ಈ ಕ್ಷೇತ್ರದೈವಗಳು. ಇವುಗಳಲ್ಲಿ ಶ್ರೀಕ್ಷೇತ್ರ ಗೋಕರ್ಣ ಭೂಕೈಲಾಸ ಎಂದು ಪ್ರಸಿದ್ಧವಾಗಿದೆ. ಇಲ್ಲಿನ ಮಹಾಬಲೇಶ್ವರ ದೇವಾಲಯವನ್ನು ಬನವಾಸಿ ಕದಂಬರು ಕಟ್ಟಿಸಿದರೆಂದು ಹೇಳಲಾಗುತ್ತದೆ. ತ್ರೇತಾಯುಗಕ್ಕೆ ನಮ್ಮನ್ನು ಕೊಂಡೊಯ್ಯುವ ಈ ದೇಗುಲದ ಬಗೆಗೆ ದೇಶಾದ್ಯಂತ ಭಕ್ತಿಯ ಭಾವನೆ ಇದೆ.

## ಶ್ರೀಕ್ಷೇತ್ರ ಗೋಕರ್ಣ

ರಾಮಾಯಣ, ಮಹಾಭಾರತ, ಭಾಗವತ ಪುರಾಣ ಕಾಲದಿಂದಲೂ ಗೋಕರ್ಣ ಪ್ರಸಿದ್ಧ ಕ್ಷೇತ್ರವಾಗಿದೆ. ಇದು ಉತ್ತರ ಕನ್ನಡ ಜಿಲ್ಲೆಯ ಕುಮಟ ದಿಂದ ಉತ್ತರಕ್ಕೆ 16 ಕಿ.ಮೀ. ದೂರದಲ್ಲಿರುವ ಪ್ರಸಿದ್ಧ ಯಾತ್ರಾಸ್ಥಳ. ತ್ರಿಸ್ಥಲಿ ಎಂದು ಹೆಸರಾದ ಮೂರು ಶಿವಕ್ಷೇತ್ರಗಳಲ್ಲಿ ಗೋಕರ್ಣ ಒಂದು. ಉಳಿದವು ಕಾಶಿ, ರಾಮೇಶ್ವರ. ಕದಂಬರ ಕಾಲದಿಂದ ವಿಜಯನಗರದ ಅರಸರ ಆಳ್ವಿಕೆಯ ಅಂತ್ಯದವರೆಗೂ ಗೋಕರ್ಣದ ಪ್ರಖ್ಯಾತವಾದ ಮಹಾ ಬಲೇಶ್ವರ ದೇವಾಲಯಕ್ಕೆ ಅರಸರು ದಾನ, ದತ್ತಿ ನೀಡಿದುದರ ಬಗ್ಗೆ ಉಲ್ಲೇ ಖಗಳಿವೆ.

ಮಹಾಬಲೇಶ್ವರ ದೇವಾಲಯ ಗೋಕರ್ಣದ ಮುಖ್ಯ ದೇವಸ್ಥಾನ. ಈ ದೇವಾಲಯ ಯಾವಾಗ ನಿರ್ಮಾಣಗೊಂಡಿತೆಂಬುದಕ್ಕೆ ಆಧಾರಗಳು ಕಂಡುಬಂದಿಲ್ಲ. ಬಹು ಪ್ರಾಚೀನ ಕಾಲದಿಂದಲೂ ಈ ದೇವಾಲಯ ಇದ್ದಿರಬೇಕೆಂದು ತಿಳಿಯಲಾಗಿದೆ. ರಾವಣನು ಈಶ್ವರನಿಂದ ಆತ್ಮಲಿಂಗವನ್ನು ಪಡೆಯಲೆಂದು ಘೋರ ತಪಸ್ಸನ್ನಾಚರಿಸಿ ಶಿವನ ಮೆಚ್ಚುಗೆಗೆ ಪಾತ್ರನಾದನು. ಶಿವ ನಿರುಪಾಯನಾಗಿ ರಾವಣನ ಕೈಯಲ್ಲಿ ಆತ್ಮಲಿಂಗವನ್ನು ಇಟ್ಟು ಎಂದಿಗೂ ಇದನ್ನು ನೆಲದ ಮೇಲಿಡತಕ್ಕದ್ದಲ್ಲ. ಇಟ್ಟಿದ್ದೆ ಆದಲ್ಲಿ ಅದು ಅಲ್ಲಿಯೇ ಸ್ಥಿರವಾಗುವುದು ಎಂದು ಹೇಳಿದನೆಂದೂ ಲಂಕೆಗೆ ಹಿಂತಿರುಗುವಾಗ ರಾವಣನು ಸಂಧ್ಯಾವಂದನೆ ಮಾಡಬೇಕಾಗಿ ಬಂದಾಗ ಲಿಂಗವನ್ನು ಬ್ರಹ್ಮಚಾರಿ ರೂಪದ ಗಣಪತಿಯ ಕೈಯಲ್ಲಿ ಇಟ್ಟು ಸಂಧ್ಯಾ ವಂದನೆಗೆ ಹೋದನೆಂದೂ ಹೇಳಿದ ಗಡುವಿನೊಳಗೆ ರಾವಣ ಹಿಂತಿರುಗದಿದ್ದಾಗ ಗಣಪತಿ ಲಿಂಗವನ್ನು ನೆಲದ ಮೇಲಿಟ್ಟನೆಂದೂ ಕಥೆ ಇದೆ. ತುಸು ಸಮಯ ದಲ್ಲಿ ಹಿಂತಿರುಗಿದ ರಾವಣ ಲಿಂಗವನ್ನು ಕೀಳಲು ಪ್ರಯತ್ನಿಸಿದಾಗ ಅದು ಗೋವಿನ ಕಿವಿಯ ಆಕಾರಕ್ಕೆ ತಿರುಗಿತೆಂದೂ ಪುರಾಣ ತಿಳಿಸುತ್ತದೆ. ಈ ಲಿಂಗವೇ ಮಹಾಬಲೇಶ್ವರ ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ ಎಂದು ಹೇಳುತ್ತಾರೆ. ಲಿಂಗ ಭೂತಲದಿಂದ ಸುಮಾರು ಎರಡು ಅಂಗುಲ ಎತ್ತರವಿದ್ದು ಶಿರೋಭಾಗ ಚಪ್ಪಟೆಯದಾಗಿದೆ. ದೇವಾಲಯವನ್ನು ಕಣಶಿಲೆಯಿಂದ ಕಟ್ಟಲಾ

ಗಿದ್ದು ಗರ್ಭಗೃಹದ ಶಿಖರ ಅರವತ್ತು ಅಡಿಗಳು ಎತ್ತರವಿದ್ದು ಪಗೋಡಾ ವಂತಿದೆ. ಶಿಖರದ ಮೇಲೆ ದಶಾವತಾರ, ಅಷ್ಟದಿಕ್ಪಾಲಕರು, ನಾಗ ಮೊದಲಾದ ಶಿಲ್ಪಗಳ ಕೆತ್ತನೆ ಇದೆ. ನವರಂಗದಲ್ಲಿ ಗಣಪತಿ, ಪಾರ್ವತಿ ಮೊದಲಾದ ದೇವರುಗಳ ವಿಗ್ರಹಗಳಿವೆ. ದೇವಾಲಯದ ಹೊರ ಭಾಗದಲ್ಲಿ ಗೋವಾರಸರ ಕಾಲದಲ್ಲಿ ಜಂಬಿಟ್ಟಿಗೆ ಕಲ್ಲಿನಿಂದ ಕಟ್ಟಿದ ಚಂದ್ರಶಾಲೆಯಿದೆ. ಸಪ್ತ ಕೋಟೀಶ್ವರ ಅಮೃತೇಶ್ವರ, ಸಂಗಮೇಶ್ವರ ಮೊದಲಾಗಿ ಮೂವತ್ತು ಶಿವ ಲಿಂಗಗಳಿವೆ. ಕೋಟಿತೀರ್ಥ ಅಗಸ್ತ್ಯತೀರ್ಥ ಮೊದಲಾದ ಮೂವತ್ತು ತೀರ್ಥಗಳು ಗೋಕರ್ಣದಲ್ಲಿವೆ. ಕೋಟಿತೀರ್ಥ ಅತ್ಯಂತ ದೊಡ್ಡದು. ಈ ತೀರ್ಥದಲ್ಲಿ ಭಕ್ತಾದಿಗಳು ಶಿವರಾತ್ರಿಯಂದು ಸ್ನಾನ ಮಾಡಿ ಪುನೀತರಾಗುವರು. ಈ ತೀರ್ಥದ ಆವರಣದೊಳಗೆ ಅಗಸ್ತ್ಯೇಶ್ವರ, ವಸಿಷ್ಠೇಶ್ವರ ಮೊದಲಾದ ಚಿಕ್ಕ ಗುಡಿಗಳಿವೆ.

ಗೋಕರ್ಣ ಗಣಪತಿ ವಿಗ್ರಹ ವಿಶಿಷ್ಟವಾದುದು. ದುಂಡುಶಿಲ್ಪದ ಈ ಮೂರ್ತಿ ಎತ್ತರ ಸುಮಾರು ಮೂರು ಅಡಿಗಳು, ಅಗಲ ಒಂದೂವರೆ ಅಡಿಗಳು. ದ್ವಿಭುಜ ಮೂರ್ತಿ, ಗಜಮುಖ, ಏಕದಂತ, ವಿಶಾಲ ಭುಜದ ಗಣಪತಿಯ ಕೈಕಾಲುಗಳು ಗಿಡ್ಡ ಹಾಗೂ ದಪ್ಪ. ತಲೆಯು ಹಿಂಬದಿ ಮಾನವನ ತರಹದ್ದಿರುವುದು ಗಮನಾರ್ಹ. ಮೇಲ್ಭಾಗ ಬೋಳಾಗಿರುತ್ತದೆ. ಪಾದದ ವರೆಗೂ ಇಳಿಬೀಳುವ ಹಾಗೆ ಗಣಪತಿ ಕಚ್ಚೆ ಹಾಕಿ ಧೋತ್ರ ಉಟ್ಟಿರುತ್ತಾನೆ. ಈ ವಿಗ್ರಹ ಕ್ರಿ.ಶ. ಆರನೆಯ ಶತಮಾನಕ್ಕೂ ಹಿಂದಿನದೆಂದು ತಿಳಿಯಲಾಗಿದೆ.

ಗೋಕರ್ಣ ಭಾರತದ ಶೈವತೀರ್ಥ ಕ್ಷೇತ್ರಗಳಲ್ಲಿ ಒಂದು. ಪ್ರವಾಸಾಕರ್ಷಣೀಯ ಸ್ಥಳ. ಸುಂದರ ಕಡಲತೀರ ಹೊಂದಿರುವ ಈ ಊರು ನಿಸರ್ಗ ರಮ್ಯವೂ ಆಗಿದೆ. ರಾವಣ ನಿರ್ಮಿತ ಪಂಚಶಿವ ಕ್ಷೇತ್ರಗಳಲ್ಲಿ ಒಂದಾದ ಗೋಕರ್ಣ ಉತ್ತರಕ್ಕೆ ಶಾಲ್ಮಲೀ, ದಕ್ಷಿಣಕ್ಕೆ ಅಘನಾಶಿನಿ ನದಿಗಳನ್ನು ಹೊಂದಿದೆ.

## ಮುರ್ಡೇಶ್ವರ ದೇವಾಲಯ

ಉತ್ತರ ಕನ್ನಡ ಜಿಲ್ಲೆಯ ಭಟ್ಕಳಕ್ಕೆ ಸಮೀಪದ ಮೃಡೇಶ್ವರ ಅಥವಾ ಮುರ್ಡೇಶ್ವರದಲ್ಲಿರುವ ಈ ದೇವಾಲಯ ಸಮುದ್ರದ ನಡುವೆ ಕಂಗೊಳಿಸು

ತ್ತದೆ. ರಾವಣ ಆತ್ಮಲಿಂಗವು ಕೈಬಿಟ್ಟು ಹೋಯಿತಲ್ಲ ಎಂದು ತನ್ನ ಶಕ್ತಿ ಎಲ್ಲವನ್ನೂ ಬಳಸಿ ಅದನ್ನು ಕೀಳಲು ಹೆಣಗಾಡಿದಾಗ ಲಿಂಗವನ್ನು ತಂದ ಸಂಪುಟ ಕೈಗೆ ಬಂದಿತು. ಸಂಪುಟಕ್ಕೆ ಕಟ್ಟಿದ ವಸ್ತ್ರವನ್ನು ರಾವಣ ಮುರಿ ಮುರಿದು ದಕ್ಷಿಣ ದಿಕ್ಕಿಗೆ ಬಗೆದನು. ಈ ಸ್ಥಳವೇ ಮೃಡೇಶ್ವರ ಅಥವಾ ಮುರುಡೇಶ್ವರ ಎಂದಾಯಿತೆನ್ನುತ್ತಾರೆ.

ಭಟ್ಕಳದಿಂದ ಉತ್ತರಕ್ಕೆ 12 ಕಿ.ಮೀ. ದೂರದಲ್ಲಿ ಮುರ್ಡೇಶ್ವರವಿದೆ. ಇಲ್ಲಿಯ ದೇವಾಲಯ ಈಗ ಭವ್ಯವಾಗಿರುವುದು ಪ್ರಖ್ಯಾತ ಉದ್ಯಮಿ ಆರ್. ಎನ್. ಶೆಟ್ಟಿಯವರ ಪರಿಶ್ರಮದಿಂದಾಗಿ ಹಾಗೂ ಅವರೇ ಚಾಲುಕ್ಯ ಕದಂಬರ ಶಿಲ್ಪಕಲೆಯನ್ನು ಸಂಯೋಜಿಸಿ ದೇವಾಲಯವನ್ನು ನಿರ್ಮಿಸಿದ್ದಾರೆ. ಈ ದೇವಾಲಯದ ಸೌಂದರ್ಯ, ಪರಿಸರ ಎಂಥವರನ್ನೂ ಸೆರೆಹಿಡಿದು ಬಿಡುತ್ತದೆ. ದೇವಾಲಯದ ಮೇಲೆ ಕೆತ್ತಲಾದ ಶಿಲ್ಪಕೃತಿಗಳು ಸೂಕ್ಷ್ಮ ಕೆತ್ತನೆಯ ಕುಸುರಿ ಕೆಲಸಗಳು. ಇವು ಕ್ಷೇತ್ರದ ಕಥೆಯನ್ನು ಸಾರುತ್ತವೆ. ದೇವಾಲಯದ ಎದುರಿಗೆ ಜೀವಂತ ಆನೆಯಷ್ಟೆ ಪ್ರಮಾಣದ ಎರಡು ಶಿಲಾಗಜಗಳು ಭಕ್ತರನ್ನು ಸ್ವಾಗತಿಸುತ್ತವೆ. ದೇವಾಲಯದ ಮುಖಮಂಟಪದ ರಚನೆ ಸುಂದರವಾಗಿದೆ. ಒಳಬದಿಯಲ್ಲಿ ಗಣಪತಿ, ಪಾರ್ವತಿ ಮೊದಲಾದ ಪುಟ್ಟಗುಡಿಗಳು, ಹೊರ ಆವರಣದಲ್ಲಿ ಸುಬ್ರಹ್ಮಣ್ಯ, ನವಗ್ರಹ, ಆಂಜನೇಯ ದೇವರ ಗುಡಿಗಳಿವೆ. ಮುರ್ಡೇಶ್ವರ ದೇವಸ್ಥಾನ ತುಂಬಾ ಪ್ರಾಚೀನವಾದುದೆಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ.

## ಶಿರಸಿಯ ದೇವಾಲಯಗಳು

ಶಿರಸಿ ಜಿಲ್ಲೆಯ ಒಂದು ಸಣ್ಣ ಪಟ್ಟಣ. ಉತ್ತರ ಕನ್ನಡ ಜಿಲ್ಲೆಗೆ ಶಿರಸ್ಸಿನಂತಿರುವ ಈ ಊರಿಗೆ ಶಿರಸಿ ಎಂದೇ ಹೆಸಲಾಯಿತು. ಮೊದಲಿಗೆ ಶಿರಸಿ ಕದಂಬರಿಗೆ ಸೇರಿತ್ತು. ಸೋದೆ ಸಂಸ್ಥಾನದ ಅಂಗವೂ ಆಗಿತ್ತು.

ಶಿರಸಿ ಹೆಸರುವಾಸಿಯಾಗಲು ಇಲ್ಲಿನ ಮಾರಿಗುಡಿಯೆ ಕಾರಣ. ಮಾರಮ್ಮ ಶಕ್ತಿ ದೇವತೆ. ಇವಳನ್ನು ಪೂಜಿಸಿದರೆ ಒಳ್ಳೆಯದಾಗುತ್ತದೆ ಎಂದು ಜನಪದ ನಂಬಿಕೆ. ಮನೋರೋಗಗಳು ದೂರಾಗುತ್ತವೆ ಎಂದೂ ಜನ ನಂಬಿ

ದ್ದಾರೆ. ಶಿರಸಿಯಲ್ಲಿನ ಮಾರಿಕಾಂಬಾ ಗುಡಿ ಭಕ್ತರ ನೆಚ್ಚಿನ ನೆಮ್ಮದಿಯ ತಾಣ. ಭಕ್ತಿಯಿಂದ ಅಡ್ಡ ಬಿದ್ದರೂ ಸಾಕು ಶಕ್ತಿಯಿದ್ದು ಯತ್ಕಿಂಚಿತ್ ಕಾಣಿಕೆ ಅರ್ಪಿಸಿದರೂ ಸಾಕು ಆಕೆಯದು ವರದ ಹಸ್ತ. ಮಾರಿಕಾಂಬೆಯ ವಿಗ್ರಹ ಸುಮಾರು 11 ಅಡಿ ಎತ್ತರವಿದೆ. ಎಂಟು ಕೈಗಳಿವೆ. ಕೈಗಳಲ್ಲಿ ವಿಶಿಷ್ಟ ಆಯುಧಗಳು. ಸುಂದರ ಕಲಾಕೃತಿ. ಸಿಂಹಾರೂಢಳಾಗಿ ಇಡೀ ಗರ್ಭ ಗುಡಿಯನ್ನು ವ್ಯಾಪಿಸಿಕೊಂಡಿರುವ ಈ ಮೂರ್ತಿಗೆ ಸರ್ವಾಭರಣಗಳನ್ನು ತೊಡಿಸಿದಾಗ ನೋಡಿದವರ ಕಣ್ಣಿಗೆ ದೊಡ್ಡ ಹಬ್ಬ. ಭಕ್ತಿಯ ಪರಾಕಾಷ್ಠತೆಯನು ಮುಟ್ಟುವರು ಭಕ್ತಾದಿಗಳು. ಅದೊಂದು ಭಕ್ತಿ ಸೌಂದರ್ಯ.

ಶಿರಸಿಯ ಬಸ್ ನಿಲ್ದಾಣಕ್ಕೆ ಅತಿ ಸಮೀಪದಲ್ಲಿರುವ ಈ ದೇವಾಲಯ ಸುಂದರವಾಗಿ ನಿರ್ಮಾಣವಾಗಿದೆ. ಗುಡಿ ಎದುರಿನ ಸಭಾಗೃಹ ದೊಡ್ಡ ಅರಮನೆಗಳ ಸಭಾಗೃಹವನ್ನು ನೆನಪಿಗೆ ತರುತ್ತದೆ. ದೇವಸ್ಥಾನದ ಸುತ್ತಲೂ ವಿಶಾಲವಾದ ಚಂದ್ರಶಾಲೆ. ಎದುರಿಗೆ ಗಣಪತಿ ಹನುಮಂತ ದೇವರುಗಳ ಚಿಕ್ಕವಾದರೂ ಸುಂದರವಾದ ಗುಡಿಗಳಿವೆ.

ಊರ ಹೊರಗಿನ ಕೆರೆಯೊಂದರಲ್ಲಿ ಇದ್ದ ವಿಗ್ರಹವನ್ನು ತಂದು ಪೂಜಿಸಿದಲ್ಲಿ ನಾಡಿಗೇ ಮಂಗಳವಾಗುವುದೆಂದು ಭಕ್ತನೊಬ್ಬನಿಗೆ ಶ್ರೀ ಮಾರಿಕಾಂಬಾ ದೇವಿ ತಿಳಿಸಿದಳೆಂದೂ, ಆ ಪ್ರಕಾರ ದೊರೆತ ದೇವಿಯ ಮೂಲ ವಿಗ್ರಹವನ್ನು ತಂದು ಪ್ರತಿಷ್ಠಾಪಿಸಿ ಪೂಜೆಗೆ ಬಳಸಲಾಯಿತು ಎಂದೂ ಪ್ರತೀತಿ ಇದೆ. ಕ್ರಿ.ಶ. 1689ರಲ್ಲಿ ಸೋದೆಯ ನಂದೀಶ್ವರ ಮಠದ ಸ್ವಾಮಿಗಳು ಅಪ್ಪಣೆ ಕೊಡಿಸಿದ ಮೇರೆಗೆ ಅಂದಿನ ಸ್ವಾದಿಯ ದೊರೆಗಳಾದ ಇಮ್ಮಡಿ ಸದಾಶಿವ ರಾಯರು ದೇವಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದರೆನ್ನಲಾಗಿದೆ. ಮಾರಿಕಾಂಬಾ ಜಾತ್ರೆ ಇಲ್ಲಿನ ಪ್ರಮುಖ ಆಕರ್ಷಣೆಯಾಗಿದೆ. ಗುಡಿಯಲ್ಲಿ ಪ್ರತಿವರ್ಷ ನವರಾತ್ರಿ, ದೀಪಾವಳಿ ದಿನಗಳಲ್ಲಿ ದೊಡ್ಡ ಉತ್ಸವಗಳು ಜರುಗುತ್ತವೆ. ಎರಡು ವರ್ಷಗಳಿಗೊಮ್ಮೆ ನಡೆಯುವ ಜಾತ್ರೆ ಅಪರೂಪದ ದೃಶ್ಯ. ದೇವಸ್ಥಾನದ ವತಿಯಿಂದ ನಡೆಸಲ್ಪಡುವ ಶಿಶುವಿಹಾರ, ಪುಸ್ತಕ ಭಂಡಾರ, ಇತರ ಶಿಕ್ಷಣ ಸಂಸ್ಥೆಗಳು ಗಮನಾರ್ಹ. ಮಾರಿಕಾಂಬ ದೇವಾಲಯದಲ್ಲಿ ಪೂಜೆಯೂ ಸಾತ್ವಿಕವಾದುದಾಗಿದೆ. ಕುರಿ ಕೋಣಗಳ ಬಲಿ ನಿಶಿದ್ಧ. ಕಾಲರಾದಂತಹ

ಭೀಕರ ರೋಗಗಳು ಕಡಿಮೆಯಾದಾಗ ಜನರಿಗೆ ಈ ದೇವತೆಯು ಮಾರಿಯಾಗಿ ತೋರದೆ ಮಹಾತಾಯಿಯಾಗಿ ಕಾಣುವಳು. ಸರ್ವ ಶಕ್ತಳೆಂದು ಜನ ನಂಬುವರು. ಶಿರಸಿ ಅತಿ ಜಾಗೃತ ಸ್ಥಳ. ಸಿದ್ಧಿ ಸ್ಥಾನ ಎಂದು ಹೆಸರು ಪಡೆದಿದೆ. ಕಾರಣ ಮಾರಿಕಾಂಬ ದೇವಾಲಯ.

ಶಿರಸಿಯ ಬಸ್ ನಿಲ್ದಾಣದಿಂದ ನೀಲೇಕಣಿವೆಗೆ ಹೋಗುವ ಒಳಹಾದಿಯ ಹತ್ತಿರ ಶ್ರೀ ಮಹಾಗಣಪತಿ ದೇವಾಲಯವಿದೆ. ರಾಯರಪೇಟೆ ದೇವಾಲಯವೆಂದೂ ಇದಕ್ಕೆ ಹೇಳುವರು. ಬಳಿಯೇ ಶಂಕರ ದೇವಾಲಯವಿದೆ. ಮಹಾ ಗಣಪತಿ ವಿಗ್ರಹವು ಆಕಾರದಲ್ಲಿ ದೊಡ್ಡದಾಗಿದೆ. ಗಣಪತಿಯ ಬಲ ಮತ್ತು ಎಡದ ಎದುರಿನ ಕೈಗಳನ್ನು ಮೋದಕ ಪಾತ್ರೆಗಳನ್ನು ಅತ್ಯಂತ ಆಕರ್ಷಕವಾಗಿ ನೈಪುಣ್ಯತೆಯಿಂದ ಕೆತ್ತಲಾಗಿದೆ.

ಸ್ವಾದಿಯ ಹಾದಿಯಲ್ಲಿ :

ಶಾಲ್ಮಲಾ ನದಿಯ ಝುಳು ಝುಳು ನಾದ. ನದಿ ಸೃಷ್ಟಿಸಿದ ಶಿವ ಗಂಗಾ ಜಲಪಾತದ ರಮ್ಯ ನೋಟ. ಸುತ್ತಲೂ ದಟ್ಟವಾದ ಅರಣ್ಯ, ಗಂಭೀರ ವಾತಾವರಣ. ನಿಸರ್ಗದೇವಿಯ ಆರಾಧಕರಿಗೆ ಹೇಳಿ ಮಾಡಿಸಿದ ತಾಣ. ಮಧ್ಯ ಗುರುರಾಜ ವಾದಿರಾಜ ಸ್ವಾಮಿಗಳ ಶಿಲಾವೃಂದಾವನ. ಅದಕ್ಕೆ ಸಮೀಪದಲ್ಲೇ ರಮಾ ತ್ರಿವಿಕ್ರಮ ದೇವಸ್ಥಾನ. ಇದೇ ಸ್ವಾದಿ ಅಥವಾ ಸೋಂದ ಪ್ರದೇಶ. ಶಿರಸಿಯಿಂದ 18 ಕಿ.ಮೀ. ದೂರದ ಸ್ವಾದಿ ಒಂದು ಕಾಲಕ್ಕೆ ರಾಜಧಾನಿ. ಇಂದು ಅತೀ ಸಣ್ಣ ಹಳ್ಳಿ. ಇಲ್ಲಿನ ಐತಿಹಾಸಿಕ ಅವ-ಶೇಷಗಳಾದ ಶಿಥಿಲಗೊಂಡ ಕೋಟೆ ಕೊತ್ತಲುಗಳು ಗತ ವೈಭವವನ್ನು ಸಾರುತ್ತವೆ. ವಿಜಯನಗರದ ಶ್ರೀ ವೆಂಕಟಪತಿ ಸಾಮ್ರಾಟರ ಸಾಮಂತ ರಾಜ್ಯವೆನಿಸಿದ್ದ ಸ್ವಾದಿ ಪುಣ್ಯವಶಾತ್ ವಾದಿರಾಜರ ಕೃಪೆಯಿಂದ ಇಂದು ಹೆಸರು ವಾಸಿಯಾಗಿದೆ. ಅರಸಪ್ಪ ನಾಯಕ ಸ್ವಾದಿಯನ್ನು ಆಳಿದ ದೊರೆ. ಇವನು ಒಮ್ಮೆ ರಾಜ್ಯಭ್ರಷ್ಟನಾಗಿದ್ದಾಗ ವಾದಿರಾಜರೇ ಅನುಗ್ರಹಿಸಿ ಮತ್ತೆ ರಾಜ್ಯ ದೊರಕಿಸಿ ಕೊಟ್ಟರೆಂದು ಪ್ರತೀತಿ ಇದೆ. ಸದಾಶಿವ ನಾಯಕ, ಬಸವಲಿಂಗ ನಾಯಕರೂ ಸ್ವಾದಿಯನ್ನು ಆಳಿದರು. ಶಬ್ದಾನುಶಾಸನ ಎಂಬ ಪ್ರಸಿದ್ಧ

ವ್ಯಾಕರಣ ರಚಿಸಿದ ಭಟ್ಟಾ ಅಳಂಕದೇವ ಇಲ್ಲಿನ ನಿಕಳಂಕ ಮಠವವನಾಗಿದ್ದನು.

ಸ್ವಾದಿಯಲ್ಲಿ ವಾದಿರಾಜ ಮಠವಿದೆ. ದ್ವೈತಮತ ಸಂಸ್ಥಾಪಕರಾದ ಶ್ರೀ ಮಧ್ವಾಚಾರ್ಯರ ಅನುಜರಾದ ಶ್ರೀ 108 ವಿಷ್ಣುತೀರ್ಥ ಶ್ರೀಪಾದಂ-ಗಳವರ ಪರಂಪರೆಯಾದ ಶ್ರೀಸೋದೆ ಮಠದ ಗುರುಗಳಾಗಿದ್ದ ಶ್ರೀ ವಾಗೀಶ ತೀರ್ಥ ಶ್ರೀಪಾದಂಗಳವರ ಶಿಷ್ಯರಾದ ವಾದಿರಾಜರು ಸ್ವಾದಿಯನ್ನು ಪುಣ್ಯ ಕ್ಷೇತ್ರವಾಗಿಸಲು ಶ್ರಮಿಸಿದರು.

ಸ್ವಾದಿಯು ರಮಾ ತ್ರಿವಿಕ್ರಮ ದೇವಸ್ಥಾನ ಚಿಕ್ಕದಾದರೂ ಐತಿಹ್ಯದಿಂದ ಕೂಡಿದ್ದು ಪವಿತ್ರವೆನಿಸಿದೆ. ಇಲ್ಲಿನ ರಮಾ ತ್ರಿವಿಕ್ರಮ ದೇವರನ್ನು ಶ್ರೀವಾದಿ ರಾಜರೇ ಪ್ರತಿಷ್ಠಾಪಿಸಿದರೆನ್ನಲಾಗಿದೆ. ಪ್ರಿಯಸೇವಕ ಶ್ರೀಭೂತರಾಜರ ಮೂಲಕ ಶ್ರೀ ಬದರಿಕಾಶ್ರಮದಿಂದ ರಮಾತ್ರಿವಿಕ್ರಮ ದೇವರನ್ನು ತರಿಸಿ, ಶ್ರೀ ವಾದಿರಾಜರು ಸ್ಥಾಪಿಸಿ 18 ವರ್ಷಗಳ ಕಾಲ ತಾವೇ ಆರಾಧಿಸಿದರು. ದೇವಸ್ಥಾನ ತುಂಬ ಸುಂದರವಾಗಿದ್ದು ದೇವಾಲಯದ ಎದುರಿಗೆ ಒಂದೇ ಶಿಲೆಯಿಂದ ನಿರ್ಮಿಸಿರುವ 80 ಅಡಿ ಎತ್ತರದ ಧ್ವಜಸ್ತಂಭವೊಂದು ಅದ್ಭುತವೆನಿಸಿದೆ ಸಮೀಪದ ಶ್ರೀವಾದಿರಾಜರ ಶಿಲಾಬೃಂದಾವನದ ಪ್ರದೇಶ ಪುಣ್ಯಕರವೆಂದು ಈ ಶ್ಲೋಕದಿಂದ ದೃಢವಾಗುತ್ತದೆ.

ತೀರ್ಥಾನಾಮುತ್ತಮಂ ತೀರ್ಥಂ
ವನಾನ ಮುತ್ತಮಂ ವನಂ
ಕ್ಷೇತ್ರಾಣಾಂ ಮುತ್ತಮಂ ಕ್ಷೇತ್ರಂ
ಮಮ ಬೃಂದಾವ ನಂದ್ವಿಜ

ಪುಣ್ಯತಮವಾದ ವಾದಿರಾಜರ ಪಂಚ ಬೃಂದಾವನದಲ್ಲಿ ದೇವತೆಗಳು ಸರ್ವದಾ ಇರುತ್ತಾರೆ. ಸ್ವಾದಿಯು ಈ ಬೃಂದಾವನ ಸಜ್ಜನರಿಗೆ ಕೋರಿದ್ದನ್ನು ಕೊಡುವಂಥದಾಗಿದೆ. ಈ ಬೃಂದಾವನವನ್ನು ಪಂಚಮಿ ದಿನಗಳಲ್ಲಿ ಪೂಜಿಸುವ ಪರಿಪಾಠವಿದೆ. ಬೃಂದಾವನದ ದಕ್ಷಿಣಕ್ಕೆ ವಾದಿರಾಜರ ಸೇವಕ ಶ್ರೀ ಭೂತ ರಾಜನ ಗುಡಿ ಇದೆ. ಈ ಕ್ಷೇತ್ರಕ್ಕೆ ಬಂದೊಡನೆ ಮೊದಲು ಭೂತರಾಜನಿಗೆ ಬಂದವರು ತಲಾ ಒಂದರಂತೆ ಉಂಡೆ ತೆಂಗಿನಕಾಯಿ ಉರುಳಿಸುವ ರೂಢಿ ಇದೆ

ವಾದಿರಾಜರ ಮಠಕ್ಕೆ ಅನಂತಾಸನ ಎಂದು ಹೆಸರಿದೆ. ಮಠದ ಕೆಳಕೆ 'ಧವಳ ಗಂಗೆ' ಎಂಬ ಪವಿತ್ರ ತೀರ್ಥವಿದೆ. ತೀರ್ಥದ ಸುತ್ತಲೂ ಸಣ್ಣ ಪುಟ್ಟ ಗುಡಿಗಳೂ, ಒಂದು ವಟವೃಕ್ಷವೂ ಇದ್ದು ಯಾತ್ರಿಕರಿಗೆ ಒಂದು ಒಳ್ಳೆಯ ವಾತಾವರಣವನ್ನು ಸೃಷ್ಟಿಸುತ್ತವೆ. ವಾದಿರಾಜರ ಮಠದಿಂದ ಒಂದೂವರೆ ಮೈಲಿ ದೂರದಲ್ಲಿ ಸ್ವರ್ಣವಲ್ಲಿ ಮಠವಿದೆ. ಇದು ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟದೆನ್ನಲಾಗಿದೆ. ಸ್ಮಾರ್ತರಿಗೆ ಪ್ರಿಯವಾದುದಾಗಿದೆ.

## ಬನವಾಸಿಯ ಮಧುಕೇಶ್ವರ ದೇವಾಲಯ

ಬನವಾಸಿಯು ಸಿರಸಿಗೆ ಸುಮಾರು 24 ಕಿ. ಮೀ. ದೂರಕ್ಕಿರುವ ವರದಾ ನದಿಯ ದಂಡೆ ಮೇಲಿರುವ ಪ್ರಸಿದ್ಧ ಕ್ಷೇತ್ರ. ಬನವಾಸಿಗೆ ಪೌರಾಣಿಕ ಮಹತ್ವವಿದೆ. ಪಾಂಡವರು ವನವಾಸ ಕಾಲದಲ್ಲಿ ಕೆಲ ಸಮಯ ಬನವಾಸಿಯ ಕಾಡುಗಳಲ್ಲಿ ಕಳೆದರೆಂದೂ ಹೇಳುತ್ತಾರೆ. ಸ್ಕಂದ ಪುರಾಣದ ಪ್ರಕಾರ ದೈತ್ಯ ಸೋದರರಾದ ಮಧುಕೈಟಭರೆಂದೂ ಮಹಾವಿಷ್ಣುವು ಈ ದೈತ್ಯರನ್ನು ಸಂಹರಿಸಿ ಶಿವನನ್ನು ಲಿಂಗದಲ್ಲಿ ಆವಾಹಿಸಿದುದರಿಂದ ಬನವಾಸಿಯಲ್ಲಿ ಮಧುಕೇಶ್ವರ ಲಿಂಗಸ್ಥಾಪನೆಯಾಯಿತು ಎನ್ನುತ್ತಾರೆ. ಮಧುಕೇಶ್ವರ ದೇವಾಲಯ ಬನವಾಸಿಗೆ ಖ್ಯಾತಿ ತಂದು ಕೊಟ್ಟಿದೆ.

ಐತಿಹಾಸಿಕ ಮಹತ್ವವಿರುವ ಬನವಾಸಿ ಕದಂಬರ ರಾಜಧಾನಿಯಾಗಿತ್ತು. ಇದಕ್ಕೆ ಹಿಂದೆ ಚಾಲುಕ್ಯರು, ರಾಷ್ಟ್ರಕೂಟರು, ಯಾದವರು, ಸ್ವಾದಿಯರಸರು ಆಳಿದರೆನ್ನಲಾಗಿದೆ. ಹಿಂದಿನ ಯುಗಗಳಲ್ಲಿ ಬನವಾಸಿಗೆ ಕೌಮುದಿ, ಜಯಂತಿ, ವೈಜಯಂತಿಪುರ ಎಂದೂ ಹೆಸರುಗಳಿದ್ದವು. ಅಶೋಕನ ಕಾಲದಲ್ಲಿ ಇಲ್ಲಿಗೆ ಬೌದ್ಧ ಧರ್ಮೋಪದೇಶಕರು ಧರ್ಮಪ್ರಚಾರಕ್ಕೆ ಬಂದಿದ್ದರು. ಬನವಾಸಿ ಕೋಟೆ ಬಹಳ ಹಳೆಯದು. ಪಂಪನ ಹೇಳಿಕೆಯಂತೆ ಎಂಟನೆ ಶತಮಾನದಲ್ಲಿ ಬನವಾಸಿ ಹನ್ನೆರಡು ಸಾವಿರ ಗ್ರಾಮಗಳಿಗೆ ಕೇಂದ್ರವಾಗಿತ್ತು. ಇಂದು ಬನವಾಸಿ ಒಂದು ಸಣ್ಣಹಳ್ಳಿ. ಇಲ್ಲಿ ಮಧುಕೇಶ್ವರ ದೇವಾಲಯವಿದೆ. ದೇವಾಲಯವು ಸುಮಾರು 115 ಅಡಿ ಉದ್ದ 45 ಅಡಿ ಅಗಲವಿದ್ದು ಗುಡಿಯೊಳಗೆ ಗರ್ಭಮಂಟಪ, ಘಂಟಾಮಂಟಪ, ಸಭಾಮಂಟಪ, ನಂದಿಮಂಟಪ,

ನೃತ್ಯಮಂಟಪಗಳೆಂದು ಆರು ಮಂಟಪಗಳಿವೆ. ದೊಡ್ಡ ಹಜಾರವಿದೆ. ಮಧುಕೇಶ್ವರ ಲಿಂಗವೇ 64 ಅಂಗುಲ (ಸುಮಾರು ಐದೂವರೆ ಅಡಿ) ಎತ್ತರ ವಿದ್ದು ಮಧುವಿನ ಬಣ್ಣವನ್ನು ಹೊಂದಿದ್ದು ಕತ್ತಲೆಯಲ್ಲೂ ಲಿಂಗವು ಹೊಳೆ ಯುತ್ತದೆ. ಇದರಿಂದಲೇ ಲಿಂಗಕ್ಕೆ ಮಧುಕೇಶ್ವರನೆಂಬ ಹೆಸರು ಬಂದಿತೆನ್ನು ತ್ತಾರೆ. ದೇವಾಲಯದಲ್ಲಿನ ನಂದಿ ವಿಗ್ರಹ ಬಹು ದೊಡ್ಡದು. 7ಅಡಿ 4 ಅಂಗುಲ ಎತ್ತರವಿದ್ದು ಸುಂದರವಾಗಿದೆ. ಮಧುಕೇಶ್ವರ ದೇವಾಲಯದ ಪ್ರಾಕಾರದಲ್ಲಿ ಪರಶುರಾಮ, ಶ್ರೀರಾಮ, ಸೂರ್ಯನಾರಾಯಣ, ಶ್ರೀದುರ್ಗಾ ದುಂಡಿರಾಜ ಗಣಪತಿ, ಆದಿಶೇಷ, ವೆಂಕಟರಮಣ, ವಾಯು, ಶ್ರೀಕೃಷ್ಣ, ಮಾರುತಿ ಈ ಸಣ್ಣಗುಡಿಗಳಿದ್ದು ಉತ್ತಮದೇವತಾ ಮೂರ್ತಿಗಳನ್ನು ಹೊಂದಿದೆ. ದೇವಾಲಯದ ಎಡ ಭಾಗದಲ್ಲಿ ಪಾರ್ವತಿದೇವಿ ಗುಡಿ ಇದ್ದು ಅಲ್ಲಿನ ಕಲ್ಲು ಕಂಬಗಳು ಕಲ್ಲಿನ ಮಂಟಪಗಳು ಸುಂದರವಾಗಿವೆ. ದೇವಾಲಯ ದಲ್ಲಿರುವ ಕಲ್ಲಿನ ಮಂಚ ಒಂದು ಮಹೋನ್ನತ ಕಲಾಕೃತಿ. ದೇವಸ್ಥಾನದ ಪ್ರದಕ್ಷಿಣಾ ಮಾರ್ಗದಲ್ಲಿರುವ ಈ ಮಂಚವನ್ನು ಕೋಣೆಯೊಂದರಲ್ಲಿ ಭದ್ರವಾ ಗಿರಿಸಲಾಗಿದೆ. ಕಲ್ಲುಮಂಚ ಆಸ್ಥಾನಮಂಟಪವೂ ಹೌದು. ಕ್ರಿ.ಶ.1628 ರಲ್ಲಿ ಸೋಂದಾ ಸಂಸ್ಥಾನದ ರಾಜ ರಘುನಾಥ ನಾಯಕರು ಮಧುಕೇಶ್ವರನ ಸೇವೆಗೆಂದು ಈ ಮಂಚವನ್ನು ಮಾಡಿಕೊಟ್ಟರೆಂದು ತಿಳಿದು ಬರುತ್ತದೆ. ಈ ಮಂಚವನ್ನು ನುಣುಪಾದ ಶಿಲೆಯಿಂದ ನಿರ್ಮಿಸಲಾಗಿದೆ. ಏಪ್ರಿಲ್ ತಿಂಗಳಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ.

## ಶಿವಶರಣರು ಉಳಿದ ಉಳವಿ

ಉಳವಿ ಮುಕ್ತಿಕ್ಷೇತ್ರ ಎಂದು ಪ್ರಸಿದ್ಧಿಯಾಗಿದೆ. ಜಿಲ್ಲೆಗೆ ಮುಕುಟ ಮಣಿಯಂತಿರುವ ಉಳವಿ ನಿಸರ್ಗ ಸೌಂದರ್ಯಕ್ಕೂ ಹೆಸರಾಗಿದೆ ದಾಂಡೇಲಿಗೆ ಸಮೀಪವಿರುವ ಉಳವಿ ಹಿಂದಕ್ಕೆ ವೃಷಭಪುರ ಎಂಬ ಹೆಸರನ್ನು ಹೊಂದಿತ್ತು. ಕಾಳಿನದಿ ಮತ್ತು ಯಲ್ಲಾಪುರ ತಾಲ್ಲೂಕುಗಳನ್ನು ಬೇರ್ಪ ಡಿಸುವ ದೊಡ್ಡ ಘಟ್ಟದ ತುದಿಯಲ್ಲಿ ಉಳವಿ ಕ್ಷೇತ್ರವಿದೆ. ಈ ಕ್ಷೇತ್ರದಲ್ಲಿ ಶಿವಶರಣರು ಉಳಿದರು ಎಂದು ಐತಿಹ್ಯವಿದೆ. ಕಲ್ಯಾಣದ ಕ್ರಾಂತಿಯ ಕಥೆ

ಒಂದು ಹೊಸ ಪಂಥದ ಸೃಷ್ಟಿಗೆ ನಾಂದಿಹಾಡಿತು. ಕ್ರಾಂತಿಯಲ್ಲಿ ಪಾಲ್ಗೊಂಡು ಶರಣರನ್ನು ಹಿಡಿದು ಬಡೆಯುವವರೆಗೂ ಕ್ರಾಂತಿ ಹಬ್ಬಿತು. ಕಂಗಲಾದ ಶರಣರು ದಿಕ್ಕೆಟ್ಟು ಓಡಿದರು. ಹೀಗೆ ಬಂದವರಲ್ಲಿ ಶ್ರೇಷ್ಠ ವಚನಕಾರ ಶಿವ ಭಕ್ತ ಚೆನ್ನಬಸವರೂ ಒಬ್ಬರು. ಇವರು ವಚನಕಾರ ವೀರಶೈವ ಮತಸ್ಥಾಪಕ ಬಸವಣ್ಣನವರ ಸೋದರಳಿಯ-ಚೆನ್ನಬಸವಣ್ಣನವರು ಘೋರಾರಣ್ಯದ ನಡು ವಿನ ಉಳವಿಗೆ ಬಂದು ಆಶ್ರಯ ಪಡೆದರೆನ್ನುತ್ತಾರೆ.

ಉಳವಿಯಲ್ಲಿ ಚೆನ್ನಬಸವಣ್ಣನವರ ಸಮಾಧಿ ಇದೆ. ಸ್ಮಾರಕ ಮಂದಿರ ವಾಸ್ತುಶಿಲ್ಪದ ದೃಷ್ಟಿಯಿಂದ ಉತ್ತಮವಾಗಿದೆ. ಪ್ರತಿವರ್ಷ ಮಾಘ ಶುಕ್ಲ ಹುಣ್ಣಿಮೆಯಂದು ಇಲ್ಲಿ ದೊಡ್ಡ ಜಾತ್ರೆಯೇ ನಡೆಯುತ್ತದೆ. ಅನುಭವ ಮಂಟಪದಲ್ಲಿ ಉಪನ್ಯಾಸ, ಶಿವಕಥೆಗಳು ಜರುಗುತ್ತವೆ. ಚೆನ್ನಬಸವಣ್ಣನವರ ಮಂದಿರದಿಂದ ನೈಋತ್ಯ ದಿಕ್ಕಿಗೆ ಹೋದರೆ ಸ್ವಾದಿ ಅರಸರ ಅರಮನೆ ಎಂದು ಕರೆಯಲ್ಪಡುವ ಹಲವು ಅವಶೇಷಗಳಿದ್ದು ಅಲ್ಲಿ ಒಂದು ಸದಾಶಿವ ಮಂದಿರವಿದೆ. ಉಳವಿಯಲ್ಲಿ ಮತ್ತೆರಡು ಸಣ್ಣ ಗುಡಿಗಳೆಂದರೆ ಅಕ್ಕಮಹಾದೇವಿ ಗುಡಿ, ಎತ್ತು ಕಾಯುವ ಬಸವಣ್ಣನ ಗುಡಿ ಹಾಗೂ ವೀರಭದ್ರ ದೇವಾಲಯ, ನಾಗಮ್ಮನ ಗವಿ, ಆಕಳ ಗವಿ, ಹರಳಯ್ಯನ ಚಿಲುಮೆ ಇತರ ಪ್ರೇಕ್ಷಣೀಯ ಸ್ಥಳಗಳು.

## ಶ್ರೀ ಕ್ಷೇತ್ರ ಇಡಗುಂಜಿ

ಇಡುಕುಂಜಾನನಂ ರಮ್ಯಂ ಯತ್ರವಿಘ್ನೇಶೋಭೀಷ್ಟದಾಯಕ
ಪೂಜಿತೊ ಮೋಕ್ಷೈಃ ಪಂಚಖಾದ್ಯಾದ್ಯೈಸ್ತತ್ಸು ನಿಶ್ಚಿತಂ

ಮಯೂರವರ್ಮನೆಂಬ ರಾಜನೊಬ್ಬ ವಿನಾಯಕನಿಗೆ ಸಲ್ಲಿಸಿದ ಪ್ರಾರ್ಥನೆ ಇದಾಗಿದೆ. ಇವನು ಕದಂಬ ವಂಸದ ರಾಜ. ಒಮ್ಮೆ ಇವನು ಇಡಾಕುಂಜವೆಂಬ ವನಕ್ಕೆ ಬಂದನು. ಅಲ್ಲಿ ಬ್ರಾಹ್ಮಣರಿಲ್ಲದಿದುದನ್ನು ಕಂಡು ಕಾಶಿಯ ಸರಸ್ವತಿ ತೀರದಿಂದ ಬ್ರಾಹ್ಮಣ ಕುಟುಂಬಗಳನ್ನು ಕರೆದು ತಂದು ಸ್ಥಾಪನೆ ಮಾಡಿದಾಗ ಹುಬ್ಬಾಸಿ ಎಂಬ ಚಂಡಾಲನ ತೊಂದರೆಯಿಂದಾಗಿ

ಬ್ರಾಹ್ಮಣರು ಅಲ್ಲಿಂದ ಹೊರಡತೊಡಗಿದರು. ಆಗ ಮಯೂರವರ್ಮನು ಗಣಪತಿಯ ಆರಾಧನೆ ಮಾಡಿ ಪ್ರಾರ್ಥಿಸಿದನು. ಚಂಡಾಲನು ತನ್ನ ಅಸುರೀ ಸ್ವಭಾವವನ್ನು ಬಿಟ್ಟು ಸೌಮ್ಯನಾದನು. ಈ ಪ್ರದೇಶವೇ ಇಡಗುಂಜಿ ಎಂದು ಹೆಸರಾಗಿ ಇಲ್ಲಿ ಗಣಪತಿಯು ವಿರಾಜಮಾನನಾಗಿದ್ದಾನೆ. ಇದೊಂದು ಮಹಾ ಸಿದ್ಧಿ ಕ್ಷೇತ್ರ ಎನಿಸಿದೆ. ಇಲ್ಲಿನ ಹಳೆಯ ಗುಡಿಯನ್ನು ಬನವಾಸಿ ಕದಂಬರ ಕಾಲದಲ್ಲಿಯೇ ಕಟ್ಟಿಸಲಾಯಿತೆನ್ನುತ್ತಾರೆ. ಪುರಾಣ ಕಾಲದಲ್ಲಿ ಇಡಗುಂಜಿ ಪರಶುರಾಮ ಕ್ಷೇತ್ರ, ಇಡಾಕುಂಜಿ, ಗುಂಜಾರಣ್ಯ ಎಂದು ಹೆಸರುಗಳನ್ನು ಪಡೆದಿದ್ದವು. ಇಲ್ಲಿ ವಿಘ್ನನಾಶಕನೂ ಕ್ಷಿಪ್ರ ಪ್ರಸಾದನೂ ಆದ ಗಣಪತಿ ಯನ್ನು ನಾರದರೇ ಪ್ರತಿಷ್ಠಾಪಿಸಿದರೆಂದು ತಿಳಿದು ಬರುತ್ತದೆ.

ಮಹಾಗಣಪತಿ ಮೂರ್ತಿ ದುಂಡು ಶಿಲ್ಪವಲ್ಲಿದ್ದು ಒಂದು ಕಲ್ಲಿನ ಹಲಗೆ ಮೇಲೆ ನಿಂತಂತೆ ಕಾಣುತ್ತದೆ. ವಿಗ್ರಹದ ಎತ್ತರ 83 ಸೆಂ. ಮೀ. ಅಗಲ 53 ಸೆಂ. ಮೀ. ಮೂರ್ತಿಗೆ ಎರಡು ದಂತಗಳಿದ್ದು ತಲೆಯ ಮೇಲ್ಭಾಗದ ಮುಂಭಾಗ ಆನೆಯ ಕುಂಭ ಸ್ಥಳದ ಹಾಗೆ ಇದೆ. ಮೇಲೆ ಸಹಸ್ರದಳ ಕಮಲ ವಿದೆ. ಕಂಠಾಭರಣ, ಗಂಟೆಗಳ ಸರ ಮೊದಲಾದ ಆಭರಣಗಳು ಎಡಗೈಯಲ್ಲಿ ಮೋದಕದ ಪಾತ್ರೆಯೂ ಇದೆ. ಸೊಂಡಿಲು ಮೋದಕಪಾತ್ರೆಯಲ್ಲಿ ಇರಿಸಿದೆ. ಮುಂಭಾಗ ಆನೆಯ ಮುಖದಂತಿದ್ದು ಹಿಂಭಾಗ ಮನುಷ್ಯನಂತಿರುವುದು.

ಇಡ ಗುಂಜಿ ಹೊನ್ನಾವರದ ಸಮೀಪವಿದೆ. ಭಟ್ಕಳದಿಂದ 26 ಕಿ.ಮೀ ದೂರದಲ್ಲಿದೆ. ಶ್ರೀ ಕ್ಷೇತ್ರ ಇಡ ಗುಂಜಿಯಲ್ಲಿ ಶಿವರಾತ್ರಿ ಸಮಯಲ್ಲಿ ಜನ ಅಪಾರವಾಗಿ ಸೇರುತ್ತಾರೆ. ಯಾಣ, ಗೋಕರ್ಣ, ಇಡಗುಂಜಿ ಇವು ಮೂರು ಪ್ರಸಿದ್ಧ ಶಿವ ಕ್ಷೇತ್ರಗಳೆಂದು ಖ್ಯಾತಿವೆತ್ತಿದೆ. ದೇವಾಲಯದ ಆಡಳಿತ ವರ್ಗ ಒಂದು ಸಂಸ್ಕೃತ ಪಾಠಶಾಲೆಯನ್ನೂ ನಡೆಸುತ್ತಿದೆ. ದೇವಾಲಯದಲ್ಲಿ ನಡೆ ಯುವ ಪೂಜೆಗಳು ಹಲವು. ಸತ್ಯ ಗಣಪತಿ ವ್ರತ, ಚಂದನಾಭಿಷೇಕ, ಗಣ ಹೋಮ, ತೆಂಗಿನ ಕಾಯಿಗಳ ತುಲಾಭಾರ ಇವು ಇಲ್ಲಿನ ಕೆಲವು ವಿಶೇಷಗಳು. ಕಾರ್ತಿಕ ಹುಣ್ಣಿಮೆಯಂದು ಲಕ್ಷ ದೀಪೋತ್ಸವ ನಡೆಯುವುದು.

**ಯಾಣ**

ಹಣ ಇದ್ದರೆ ಗೋಕರ್ಣ, ಸೊಕ್ಕಿದ್ದರೆ ಯಾಣ ಎಂಬ ಗಾದೆಯೇ

ಯಾಣವನ್ನು ಕುರಿತು ಹೇಳುತ್ತದೆ. ಯಾಣಕ್ಕೆ ಬರಲು ಯಾತ್ರಿಕರು ಸಾಹಸ ಮಾಡಬೇಕು. ಯಾಣದ ಸುತ್ತಮುತ್ತ ದಟ್ಟಡವಿ ಇದೆ. ಜನ ಸಂಚಾರ ಬಹು ಕಮ್ಮಿ. ಪ್ರಸಿದ್ಧ ಯಾತ್ರಾಸ್ಥಳ ಯಾಣದಲ್ಲಿ ಭಸ್ಮಾಸುರನನ್ನು ವಿಷ್ಣುವು ಕೊಂದನೆಂದೂ ಹೇಳುತ್ತಾರೆ. ಕುಮಟಾದಿಂದ ಸಿರಸಿಗೆ ಹೋಗುವ ಮಾರ್ಗದಲ್ಲಿ ಆನೆ ಗುಂದಿ ಎಂಬಲ್ಲಿ ಇಳಿದು ಯಾಣಕ್ಕೆ 12 ಕಿ.ಮೀ. ದೂರ ಬರಬೇಕು. ಆರೇಳು ಕಿ.ಮೀ. ರಸ್ತೆ ಇದ್ದು ವಾಹನದಲ್ಲಿ ಬರಬಹುದು.

ಯಾಣದಲ್ಲಿ ಗಣಪತಿ ದೇವಸ್ಥಾನ, ಜಗನ್ಮೋಹಿನಿ ಶಿಲಾ ಶಿಖರ ಅಥವಾ ದುರ್ಗಾ ದೇವಾಲಯುವಿದೆ. ಗಣಪತಿಯು ದರ್ಶನವಾದ ನಂತರವೇ ಯಾಣದ ದೈವ ಭೈರವೇಶ್ವರನ ದರ್ಶನ. ಜಗನ್ಮೋಹಿನಿ ಶಿಖರದಿಂದ ಮುಂದಕ್ಕೆ ಹೋದರೆ ಸಾವಿರ ಅಡಿಗಳಿಗೂ ಹೆಚ್ಚು ಎತ್ತರದ ಶಿಲೆಯು ಕಾಣಸುತ್ತದೆ. ಅಲ್ಲಿ ಒಂದು ಗುಹೆಯ ಮುಗ್ಗುಲನ್ನು ಬಲಗಡೆಯಲ್ಲಿ ಕೊರೆದು ಗರ್ಭಗುಡಿ ಮಾಡಿದ್ದಾರೆ. ಈ ಗುಹೆಯಲ್ಲಿ ಉದ್ಭವವಾಗಿರುವ ಭೈರವೇಶ್ವರನಿದ್ದಾನೆ. ಈ ಮೂರ್ತಿ ಎದುರು ದೊಡ್ಡದಾದ ಶಿವಲಿಂಗವಿದೆ. ಲಿಂಗದ ಮೇಲೆ ಸದಾ ಕಾಲ ನೀರಿನ ಧಾರೆಯು ಬೀಳುತ್ತಿರುತ್ತದೆ.

ಜಗನ್ಮೋಹಿನಿ ಶಿಖರದಿಂದ ಸ್ವಲ್ಪ ದೂರದಲ್ಲಿ ಗೋಪಾಲಕೃಷ್ಣನ ದೇವಾಲಯುವಿದೆ. ಪಾರ್ವತಿ, ನಾರಾಯಣ ದೇವಾಲಯುಗಳು ಇವೆ. ಶಿವ ರಾತ್ರಿ ಸಮಯದಲ್ಲಿ ಗೋಕರ್ಣದಲ್ಲಿನ ಆತ್ಮಲಿಂಗ ದರ್ಶನ ಪಡೆದು ಯಾಣ ದಲ್ಲಿ ಭೈರವೇಶ್ವರನನ್ನು ಪೂಜಿಸಿ ಇಡಗುಂಜಿಗೆ ಬಂದು ವಿನಾಯಕ ಸ್ವಾಮಿ ಯನ್ನು ನಮಿಸಿದರೆ ಎಲ್ಲ ಪಾಪಗಳೂ ನಾಶವಾಗಿ ಪುಣ್ಯ ಲಭಿಸುತ್ತದೆಂದು ಭಕ್ತರು ನಂಬುತ್ತಾರೆ. ಯಾಣದಲ್ಲಿ ಶಿವರಾತ್ರಿಯಂದು ದೊಡ್ಡ ಜಾತ್ರೆ ನಡೆಯುವುದು. 'ಕೌಶಿಕರಾಮಾಯಣ' ಎಂಬ ಕಾವ್ಯವನ್ನು ಬರೆದ ಬತ್ತಲೇ ಶ್ವರ ಕವಿ ಯಾಣದವನೆಂದು ಹೇಳುತ್ತಾರೆ.

## ಕುಮಟ ತಾಲ್ಲೂಕಿನ ದೇವಾಲಯಗಳು

ಕುಮಟ ಕಾರವಾರದಿಂದ 64 ಕಿ.ಮೀ ದಕ್ಷಿಣಕ್ಕೂ, ಹೊನ್ನಾವರದಿಂದ 16 ಕಿ.ಮೀ ಉತ್ತರಕ್ಕೂ ಇದೆ. ಇಲ್ಲಿನ ಕುಂಭೇಶ್ವರ ದೇವಾಲಯದಿಂದಾಗಿ

ಈ ಊರನ್ನು ಕುಂಬಟುಂ ಎಂದು ಕರೆಯುತ್ತಿದ್ದುದಾಗಿಯೂ ಅದರಿಂದ ಕುಮಟವೆಂಬ ಹೆಸರು ಬಂದಿತೆಂದು ಹೇಳುತ್ತಾರೆ. ಹಿಂದೆ ಇದೊಂದು ಜೈನ ಕೇಂದ್ರವಾಗಿತ್ತು.

ಕುಮಟದ ಶ್ರೀ ವೆಂಕಟರಮಣ ದೇವಸ್ಥಾನ ಪ್ರಸಿದ್ಧವಾದುದು. ನಗರದ ಪ್ರಾಚೀನ ದೇವಾಲಯವೂ ಹೌದು. ಶ್ರೀ ಮಠ ಎಂದೂ ಇದಕ್ಕೆ ಹೇಳುತ್ತಾರೆ. ಮೊದಲಿಗೆ ಇದು ಗೋಪಾಲಕೃಷ್ಣ ದೇವಾಲಯವಾಗಿತ್ತು. ಒಮ್ಮೆ ಒಬ್ಬ ಸನ್ಯಾಸಿ ಶ್ರೀ ವೆಂಕಟೇಶನ ಪ್ರತಿಮೆಯನ್ನು ಗೋಕರ್ಣಕ್ಕೆ ಒಯ್ಯುವ ಸಂದರ್ಭದಲ್ಲಿ ಕುಮಟದಿಂದ ಮುಂದಕ್ಕೆ ಹೋಗಲಾಗಲಿಲ್ಲ. ಜೊತೆಗೆ ಅವನ ಅವಸಾನ ಕಾಲವೂ ಸಮೀಪಿಸಿತು. ಕಡೆಗೆ ಮೂರ್ತಿಯನ್ನು ಗೋಪಾಲಕೃಷ್ಣನ ಪ್ರತಿಮೆಯ ಪಕ್ಕದಲ್ಲಿ ಇಟ್ಟು ನಿತ್ಯ ಪೂಜೆ ಮಾಡುವಂತೆ ದೇವಾಲಯದ ವ್ಯವಸ್ಥಾಪಕರಿಗೆ ಕನಸಿನಲ್ಲಿ ಅಪ್ಪಣೆಯಾಯಿತಂತೆ. ಸಾಧು ಕೊಟ್ಟ ವೆಂಕಟೇಶನ ಪ್ರತಿಮೆಯೇ ಇಂದು ದೇವಾಲಯದಲ್ಲಿದೆ. ಸನ್ಯಾಸಿ ಸಮಾಧಿ ಹೊಂದಿದ ಕಟ್ಟೆಯೊಂದು ಶ್ರೀ ಬಾಗಿಲ ಜಟಕೇಶ್ವರನ ಗುಡಿ ಎಂದು ಹೆಸರಾಗಿದೆ. ಶ್ರೀ ವೆಂಕಟರಮಣ ದೇವರ ಗುಡಿಯ ಗೋಡೆಗಳ ಮೇಲೆ ಪುರಾಣದ ಸನ್ನಿವೇಶ ಚಿತ್ರಗಳು ಕಂಡುಬರುತ್ತವೆ.

### ಶ್ರೀ ಕುಂಭೇಶ್ವರ ದೇವಾಲಯ

ಬಸ್ತಿಪೇಟೆ ಬಳಿ ಇದೆ. ಶ್ರೀ ಕುಂಭೇಶ್ವರ ಈ ಕ್ಷೇತ್ರದ ಅಧಿದೇವತೆ ದೇವಾಲಯಕ್ಕೆ ಪೌರಾಣಿಕ ಹಿನ್ನೆಲೆ ಇರುತ್ತದೆ.

### ಶ್ರೀ ಉಪ್ಪಿನ ಗಣಪತಿ ದೇವಾಲಯ

ನೆಲ್ಲಿಕೇರಿ ಬಸ್ ನಿಲ್ದಾಣದ ರಸ್ತೆಯ ಕೆಳ ಬದಿಗಿರುವ ಈ ದೇವಾಲಯದ ಗಣಪತಿ ಉಪ್ಪಿನ ಗಣಪತಿ ಎಂದು ಹೆಸರಾಗಿದೆ. ಉಪ್ಪು ಸಾಗಿಸುವ ವ್ಯಾಪಾರಿಗಳು ತಮ್ಮ ಅಪೇಕ್ಷೆ ನೀಡಿದ ನಂತರ ಗಣಪತಿಗೆ ಉಪ್ಪಿನ ಹರಕೆಯನ್ನು ನೀಡುತ್ತಿದ್ದುದರಿಂದ ಗಣಪತಿಗೆ ಉಪ್ಪಿನ ಗಣಪತಿ ಎಂಬ ಹೆಸರು ಬಂದಿತು. ದೇವಾಲಯದಲ್ಲಿ ನಡೆಯುವ ಹೂವಿನ ಮಂಟಪ ಪೂಜೆ ವಿಶೇಷವಾಗಿರುತ್ತದೆ.

**ಮಹಾಲಸಾ ನಾರಾಯಣಿ ಶಾಂತೇರಿ ದೇವಾಲಯ**

ನಾಲ್ಕು ನೂರು ವರ್ಷಗಳಿಗೂ ಹಿಂದಿನ ದೇವಾಲಯ. ದೇವಾಲಯದ ಸುತ್ತಲೂ ಕೆತ್ತಲಾದ ದಶಾವತಾರ, ಮಹಾಭಾರತ, ಸೂರ್ಯ ಮಂಡಲ, ಚಂದ್ರಮಂಡಲ ಮೊದಲಾದ ದೃಶ್ಯಗಳು ಸುಂದರವಾಗಿವೆ. ದೇವಿಯ ಮೂಲ ವಿಗ್ರಹ ಪಂಚಲೋಹದಿಂದ ತಯಾರಿಸಲ್ಪಟ್ಟದ್ದಾಗಿವೆ. ಶ್ರೀ ಶಾಂತೇರಿ, ಶ್ರೀ ಭಗವತಿ ಶ್ರೀ ದಾಡ ಶಂಕರ, ಶ್ರೀ ಗ್ರಾಮ ಪುರುಷ ಪರಿವಾರ ದೇವತೆಗಳು ಮೂಲ ವಿಗ್ರಹ ಚತುರ್ಭುಜದಿಂದಿದ್ದು ಮೇಲು ಬಲಗೈಯಲ್ಲಿ ತ್ರಿಶೂಲ ಕೆಳಗೈಯಲ್ಲಿ ಖಡ್ಗ ಹಾಗೂ ಮುಂಡಾಸುರನ ಶಿರ ಇದೆ. ಎಡಭಾಗದ ಮೇಲಿನ ಕೈಯಲ್ಲಿ ಅಮೃತಕಲಶ ಹಾಗೂ ಕೆಳ ಕೈಯಲ್ಲಿ ರಾಹುದೈತ್ಯ ಎಂಬುವನ ಶಿರವಿದೆ. ದೇವಿಯ ಎರಡೂ ಪಾದಗಳು ಚಂಡಾಸುರನನ್ನು ಮುಟ್ಟಿರುತ್ತವೆ.

**ಶ್ರೀಶಾಂತಿಕಾ ಪರಮೇಶ್ವರಿ ದೇವಾಲಯ**

ಕುಮಟಾದ ಗುಡಿಗಾರಗಲ್ಲಿಯ ಬಳಿ ಇದೆ. ಈ ಗ್ರಾಮದೇವತೆ ಪರಶುರಾಮ ಸೃಷ್ಟಿ ಎನ್ನುವರು. ಕುಂಭಾಸುರನನ್ನು ಕೊಂದ ಬಳಿಕ ಈ ಪ್ರದೇಶದಲ್ಲಿ ಶಾಂತಿ ನೆಲಸಿದುದರಿಂದ ದೇವಿಗೆ ಶಾಂತಿಕಾಪರಮೇಶ್ವರಿ ಎಂಬ ಹೆಸರು ಬಂದಿತೆನ್ನಲಾಗಿದೆ.

**ಶ್ರೀ ಶಾಂತೇರಿ ಕಾಮಾಕ್ಷಿ ರಾಮನಾಥ ಲಕ್ಷ್ಮಿ ನಾರಾಯಣ ದೇವಸ್ಥಾನ**

ಈ ದೇವಾಲಯ ಅತ್ಯಂತ ಸುಂದರವಾಗಿರುತ್ತದೆ. ಶಾಂತೇರಿದೇವಿಯ ಮೂಲ ವಿಗ್ರಹ ಪಂಚಲೋಹದ್ದಿದೆ. ವರ್ಷವಿಡೀ ದೇವಾಲಯದಲ್ಲಿ ಹಲವು ಉತ್ಸವಗಳು ನಡೆಯುತ್ತವೆ.

**ಶ್ರೀ ರಾಯೇಶ್ವರ ಕಾಪೂರ ಕಾಮಾಕ್ಷಿ ಕಾಳಭೈರವ ದೇವಾಲಯ**

ರಾಯೇಶ್ವರ, ಕಾಳಭೈರವ, ಬ್ರಹ್ಮ ಮೊದಲಾದ ದೇವರುಗಳಿರುವ ವಿಶಾಲದೇವಾಲಯ.

ಬಸ್ಸಿಪೇಟೆಯ ಹತ್ತಿರವಿರುವ ಶ್ರೀ ಶಂಕರನಾರಾಯಣ ದೇವಾಲಯ, ಪಾರ್ಶ್ವನಾಥ ದೇವ ಬಸದಿ (ಜೈನ ದೇವಾಲಯ), ಚಿತ್ರಾಗಿ ಮಠ ಅಥವಾ

ಶ್ರೀರಾಮ ಚಂದ್ರ ದೇವಾಲಯ ಇವು ಕುಮಟೆಯ ಇತರ ದೇವಾಲಯಗಳಾಗಿವೆ. ಕುಮಟಾದಿಂದ ಒಂದೂವರೆ ಕಿ.ಮೀ. ದೂರದಲ್ಲಿ ಹೆರವಟ್ಟಾ ಗ್ರಾಮದಲ್ಲಿ ಶ್ರೀ ದೇವಕಿ ಕೃಷ್ಣ ಮಹಾಲಕ್ಷ್ಮೀರವಳನಾಥ ದೇವಾಲಯವಿದೆ.

**ರಾಮತೀರ್ಥ**

ರಾಮತೀರ್ಥ ಹೊನ್ನಾವರದಿಂದ ಮೂರು ಕಿ.ಮೀ ದೂರದಲ್ಲಿರುವ ನಿಸರ್ಗರಮಣೀಯ ಪ್ರದೇಶ. ಇಲ್ಲಿ ಗುಡ್ಡವೊಂದರ ಒಳಗಿನಿಂದ ಎರಡು ಝರಿಗಳು ಎರಡು ಬದಿಯಲ್ಲಿ ಮೇಲಿನಿಂದ ಕೆಳಕ್ಕೆ ಬೀಳುತ್ತವೆ. ಸಣ್ಣ ಝರಿಗೆ ಲಕ್ಷ್ಮಣ ತೀರ್ಥ ಎಂದೂ ದೊಡ್ಡದಾದ ಝರಿಗೆ ರಾಮ ತೀರ್ಥ ಎನ್ನುವರು. ಈ ನೀರು ಯಾವಾಗಲೂ ಬೆಚ್ಚಗೆ ಇರುವುದು ವೈಶಿಷ್ಟ್ಯ. ಈಶ್ವರ ದೇವಾಲಯವೊಂದು ಇಲ್ಲಿ ಇದ್ದು ಅಲ್ಲಿ ದತ್ತಾತ್ರೇಯ, ನಂದಿ ವಿಗ್ರಹಗಳು ಇವೆ. ಝರಿ ನೀರು ಔಷಧ ಗುಣಗಳುಳ್ಳದ್ದೆಂದೂ ಈ ತೀರ್ಥದಲ್ಲಿ ಸ್ನಾನ ಮಾಡಿದರೆ ಚರ್ಮವ್ಯಾಧಿಗಳೂ ಹುಣ್ಣು ಗುಣವಾಗುವುದೆಂದೂ ಪ್ರತೀತಿ.

ಹೊನ್ನಾವರ ತಾಲ್ಲೂಕಿನ ಸಹ್ಯ ಪರ್ವತದ ಶಿಖರದ ಮೇಲೆ ಹೊನ್ನಾವರದಿಂದ 13 ಕಿ.ಮೀ ದೂರದಲ್ಲಿ ಕರಿಕಾನನ ಪರಮೇಶ್ವರಿ ದೇವಾಲಯವಿದೆ. ಜಗತ್ಕಂಟಕರಾದ ಮಲ್ಲಾಸುರ-ಭಂಗಾಸುರರೆಂಬ ರಾಕ್ಷಸರನ್ನು ನಾಶ ಮಾಡಿದ ದೇವಿಯು ಭಕ್ತರ ಪ್ರಾರ್ಥನೆಯ ಮೇರೆಗೆ ಇಲ್ಲಿ ನೆಲೆಸಿದ್ದಾಳೆಂದು ಪ್ರತೀತಿ ಇದೆ.

ಹೊನ್ನಾವರದಿಂದ 29 ಕಿ.ಮೀ ದೂರದಲ್ಲಿರುವ ಗುಂಡಬಾಳ ಹನುಮಂತ ದೇವಾಲಯದಿಂದ ಪ್ರಖ್ಯಾತವಾಗಿದೆ. ಇಲ್ಲಿ ಜೈನ ಗುಡಿ ಗೋಪುರಗಳೂ ಇವೆ. ಹೊನ್ನಾವರದ ಉತ್ತರಕ್ಕೆ 8 ಕಿ.ಮೀ ದೂರದಲ್ಲಿರುವ ಹಳದೀಪುರದಲ್ಲಿ ಅನೇಕ ದೇವಾಲಯಗಳಿವೆ.

ಗೇರಸೊಪ್ಪೆ ಹೊನ್ನಾವರ ತಾಲ್ಲೂಕಿನ ಒಂದು ಗ್ರಾಮ. ಹಿಂದೆ ಇದು ರಾಜಧಾನಿಯಾಗಿ ಮೆರೆದಿತ್ತು. ಆ ಕಾಲಕ್ಕೆ ಇಲ್ಲಿ ಒಂದು ಸಾವಿರ ಬಸದಿಗಳಿದ್ದವೆಂದು ತಿಳಿಯಲಾಗಿದೆ. ಇಂದು ಇಲ್ಲಿ ಕಾಣಸಿಗುವ ಚತು

ಮುಖ ಬಸದಿ ಸುಂದರವಾಗಿದೆ. ಪಾರ್ಶ್ವನಾಥ, ವರ್ಧಮಾನ, ನೇಮಿನಾಥ ಬಸದಿಗಳು ಸುಂದರ ವಿಗ್ರಹಗಳನ್ನು ಹೊಂದಿವೆ. ಚತುರ್ಮುಖ ಬಸದಿ ಎತ್ತರದಲ್ಲಿದ್ದು ರಮಣೀಯವಾಗಿದೆ. ಬಸದಿಗೆ ನಾಲ್ಕು ಮುಖಗಳು, ಎಲ್ಲಾ ಮುಖಗಳು ಒಂದೇ ರೀತಿಯವಿದ್ದು ನಾಲ್ಕೂ ಕಡೆಗಳಲ್ಲಿ ವಿಗ್ರಹಗಳನ್ನು ಒಂದೇ ತೆರನಾಗಿ ಪ್ರತಿಷ್ಠಾಪಿಸಲಾಗಿದೆ. ಬಸದಿಯೊಳಗಿನ ಕಂಬಗಳು ಆಕರ್ಷಕ ಕೆತ್ತನೆಯಿಂದ ಕೂಡಿವೆ. ಜ್ವಾಲಮ್ಮ ದೇವಾಲಯ ಗೇರಸೊಪ್ಪೆಯ ಒಂದು ಜಿನಾಲಯ. ಹಲವಾರು ವಿಗ್ರಹಗಳನ್ನು ಇಲ್ಲಿ ನೋಡಬಹುದು. ಮಧ್ಯದಲ್ಲಿ ಜಿನ ವಿಗ್ರಹವಿದ್ದು ಅದರ ಹಿಂದೆ ಶೋಭಿಸುವ ಶಿಲ್ಪವಿರುತ್ತದೆ. ಗರ್ಭಗುಡಿಯ ಹೊರಗೆ ವೀರಭದ್ರ, ಚೆನ್ನಭೈರವರಾಣಿ, ಕ್ಷೇತ್ರಪಾಲರ ವಿಗ್ರಹಗಳಿವೆ. ಗೇರಸೊಪ್ಪೆಯ ಹನುಮಂತ ದೇವಾಲಯ ಶರಾವತಿ ನದಿ ದಡದ ಮೇಲಿದೆ.

ಹೊನ್ನಾವರದಲ್ಲಿ ದುರ್ಗದ ಕೇರಿ ಲಕ್ಷ್ಮೀನಾರಾಯಣನ ಗುಡಿ, ಹನುಮಾನ್ ಮಂದಿರ, ವಿಠೋಬ-ರುಖುಮಾಯಿ ಮಂದಿರ, ರಾಮೇಶ್ವರ ದೇವಾಲಯ, ವೆಂಕಟರಮಣ ದೇವಾಲಯ ಇವೆ. ವೆಂಕಟರಮಣ ದೇವಾಲಯಕ್ಕೆ ಕೆಳದಿ ಶಿವಪ್ಪನಾಯಕನ ಮಗ ಭದ್ರಪ್ಪನಾಯಕ ಉಂಬಳಿ ಕೊಟ್ಟಿದ್ದನೆಂದು ಶಾಸನವೊಂದರಿಂದ ತಿಳಿದು ಬರುತ್ತದೆ.

ಹೊನ್ನಾವರದ ಕಾಸರಕೋಡ ತಿರುವಿನ ಬಳಿ ಕಾಸರಕೋಡ ರಸ್ತೆಯಿಂದ ಮುಂದೆ ಸಾಗಿದರೆ ಶ್ರೀ ಬಟ್ಟೆ ವಿನಾಯಕ ದೇವಾಲಯ ಸಿಗುವುದು. ದೇವಾಲಯದ ಪರಿಸರ ಆಕರ್ಷಕವಾಗಿದೆ. ಇತ್ತೀಚೆಗೆ ನಿರ್ಮಿಸಲಾದ ಈ ದೇವಳದಲ್ಲಿನ ವಿಗ್ರಹ ಪ್ರಾಚೀನವಾದುದೆಂದು ತಿಳಿಯಲಾಗಿದೆ. ನಾರದರು ಪ್ರತಿಷ್ಠಾಪಿಸಿದ ವಿಗ್ರಹವೆಂದೂ ಹೇಳುವವರು.

## ಸಂಗೀತಪುರ

ಭಟ್ಕಳದಿಂದ 20 ಕಿ.ಮೀ ದೂರದಲ್ಲಿರುವ ಹಾಡುವಳ್ಳಿಯೇ ಹಿಂದೆ ಸಂಗೀತಪುರ ಎಂದು ಹೆಸರಾಗಿದ್ದ ರಾಜಧಾನಿ ಊರು. ಇಲ್ಲಿ ಹಲವಾರ್

ಜಿನಾಲಯಗಳಿವೆ, ಬಸದಿಗಳಿವೆ. ಪದ್ಮಾವತಿ ದೇವಾಲಯ ಸುಂದರವಾಗಿದೆ. ಇಲ್ಲಿಯ ವಿಗ್ರಹಗಳು ತುಂಬಾ ಆಕರ್ಷಕ. ಹರಿ ಪೀಠದಲ್ಲಿ 24 ತೀರ್ಥಂಕರರನ್ನು ಒಂದೇ ಸಾಲಿನಲ್ಲಿ ಪ್ರತಿಷ್ಠಾಪಿಸಲಾಗಿದೆ. ಬಲಗಡೆಗೆ ಪದ್ಮಾವತಮ್ಮನವರ ವಿಗ್ರಹವೂ ಎಡ ಬದಿಗೆ ಶಾರದಾ ವಿಗ್ರಹವೂ ಇವೆ. ಈ ದೇವಾಲಯದ ಸಮೀಪ ಪಾರ್ಶ್ವನಾಥ ದೇವಾಲಯವಿದೆ. ಅಮೃತಶಿಲೆಯ ಮೂರ್ತಿ. ದೇವಾಲಯದೊಳಗಿನ ಕೆತ್ತನೆಯ ಕೆಲಸ. ಕಂಬಗಳಲ್ಲಿಯ ಅತಿ ಸುಂದರ ಕೆತ್ತನೆ ಮೆಚ್ಚಬೇಕಾದುದು. ಚಂದ್ರನಾಥ, ನೇಮಿನಾಥ ಮೊದಲಾದ ಇತರ ದೇವಾಲಯಗಳಿವೆ. ಪದ್ಮಾವತಿ ದೇವಾಲಯಕ್ಕೆ ಸ್ವಲ್ಪ ದೂರದಲ್ಲಿ ನೇಮಿನಾಥ ಸ್ವಾಮಿಯ ವಿಶಾಲವಾದ ಬಸದಿ ಇದೆ. ಚಂದ್ರನಾಥ ಬಸದಿಯ ವಿಗ್ರಹ ಸುಂದರವಾಗಿದೆ.

ಭಟ್ಕಳ ಅದೇ ಹೆಸರಿನ ತಾಲ್ಲೂಕಿನ ಆಡಳಿತ ಕೇಂದ್ರ. ಇಲ್ಲಿಯೇ ಹದಿಮೂರು ದೇವಾಲಯಗಳಿವೆ. ಇವುಗಳಲ್ಲಿ ಕೆಲವು ಜಿನಾಲಯಗಳು. ಅವಕ್ಕೆ ನಾರಾಯಣಸ್ವಾಮಿ ದೇವಾಲಯ. ಕಾಮಟ ನಾರಾಯಣ ದೇವಾಲಯ. ಕೇತಪ್ಪಯ್ಯ ಮತ್ತು ಚೋಳೇಶ್ವರ ದೇವಾಲಯ. ಜೋಶಿ ಶಂಕರ ನಾರಾಯಣ ದೇವಾಲಯಗಳು ನೋಡಬೇಕಾದವು ಅಡಕೆ ನಾರಾಯಣ ದೇವಾಲಯದ ಭುವನೇಶ್ವರಿಯಲ್ಲಿ ಕೆತ್ತಿರುವ ಅಷ್ಟದಿಕ್ಪಾಲಕ ವಿಗ್ರಹ ಸುಂದರ ಶಿಲ್ಪವಾಗಿದೆ. ಜಟ್ಟಪ್ಪ ನಾಯಕನ ಚಂದ್ರನಾಥೇಶ್ವರ ಬಸದಿ ದೊಡ್ಡ ಜೈನ ದೇವಾಲಯ. ಉದ್ದ 112 ಅಡಿ 50 ಅಡಿ ಅಗಲ ಇದೆ ಎರಡು ಅಂತಸ್ತಿನ ಈ ಬಸದಿಯಲ್ಲಿ ಅಂತಸ್ತಿಗೆ ಮೂರರಂತೆ ಆರು ಗರ್ಭಗೃಹಗಳಿವೆ. ಇಲ್ಲಿಯ ಮೂರ್ತಿಗಳು ಶಿಥಿಲವಾಗಿವೆ. ರಾಣಿ ಚೆನ್ನಭೈರಾದೇವಿಯ ಸೇನಾನಿಯಾಗಿದ್ದವನು ಜಟ್ಟಪ್ಪನಾಯಕ. ಬಸದಿಯ ಮುಂದೆ ಐದು ಕಂಬಗಳ ಮಾನಸ್ತಂಭವಿದೆ. ಕೇತಪ್ಪಯ್ಯ ದೇವಾಲಯದಲ್ಲಿರುವ ಪುತ್ರಕಾಮೇಷ್ಟಿ ಯಜ್ಞದ ಶಿಲ್ಪ ಅಪರೂಪದ್ದಾಗಿದೆ.

## ಅಂಕೋಲ ತಾಲ್ಲೂಕಿನ ದೇವಾಲಯಗಳು

ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಭಾಗದ ಒಂದು ತಾಲ್ಲೂಕು

ಅಂಕೋಲ. ಅಂಕೋಲ ಒಂದು ಐತಿಹಾಸಿಕ ಸ್ಥಳ. ಇಲ್ಲಿ ಕೋಟೇಶ್ವರ ಅಥವಾ ರುದ್ರೇಶ್ವರ ದೇವಾಲಯವಿದೆ. ಅಂಕೋಲದಿಂದ ಎಂಟು ಕಿ.ಮೀ ದಕ್ಷಿಣಕ್ಕಿರುವ ಅವರ್ಸಾ ಗ್ರಾಮದಲ್ಲಿ ಕಾತ್ಯಾಯಿನಿ ಬಾಣೇಶ್ವರ ದೇವಾಲಯವಿದೆ. ದೇವಿ ಆತಿಶಕ್ತಿಯಾಗಿದ್ದು ಆಕೆ ಕನ್ನಿಕೆಯಾಗಿರುವಳು. ಬಾಣೇಶ್ವರ ದೇವಾಲಯದ ಪ್ರವೇಶದ್ವಾರದಲ್ಲಿ ಮೂರು ಗಣಪತಿ ವಿಗ್ರಹಗಳಿವೆ. ಸ್ವಾರಸ್ಯವೆಂದರೆ ಇಲ್ಲಿ ಬಾಣೇಶ್ವರನಿಗೆ ಮೊದಲು ಪೂಜೆ ಸಲ್ಲಿಸಲಾಗುತ್ತದೆ. ಅಂಕೋಲದಿಂದ ದಕ್ಷಿಣಕ್ಕೆ ಎಂಟು ಕಿ.ಮೀ. ದೂರದಲ್ಲಿರುವ ಗಂಗಾವಳಿ ಗ್ರಾಮದಲ್ಲಿ ಗಂಗೆ ದೇವಾಲಯವಿದೆ. ಗಂಗಾಷ್ಟಮಿಯಂದು ಜಾತ್ರೆ ನಡೆಯುತ್ತದೆ.

ಅಂಕೋಲದ ಶ್ರೀ ಕುಂಡೋದರಿ ದೇವಾಲಯ ಖ್ಯಾತಿವೆತ್ತಿದೆ. ಅಂಕೋಲ ಬಸ್ ನಿಲ್ದಾಣದಿಂದ ಹನುಮಟ್ಟೆಗೆ ಹೋಗುವ ದಾರಿಯಲ್ಲಿ ಈ ದೇವಾಲಯವಿದೆ. ಇದೊಂದು ವೈಶಿಷ್ಟ್ಯಪೂರ್ಣ ಕಟ್ಟಡ. ಈ ದೇವಿಯು ಮೂಲತಃ ಗೋವಾದ ಕುಡತರಿ ಗ್ರಾಮದವಳು. ಕುಳಾವಿಗಳು ಕುಡತರಿಯಿಂದ ದೇವಿಯನ್ನು ತಂದು ಅಂಕೋಲದಲ್ಲಿ ಪ್ರತಿಷ್ಠಾಪಿಸಿದರೆನ್ನುವರು. ಈ ದೇವಾಲಯದ ಆವರಣದಲ್ಲಿ ಮಹಾಸತಿ, ಚಕ್ರಪೀಠ, ರವಳನಾಥಸ್ತಂಭ ವಹಾರಿಗಣ, ಭೂತಗಣ, ನಾಸ, ಶಮಿವೃಕ್ಷ ಮೊದಲಾದವುಗಳಿವೆ. ಹನುಮಟ್ಟೆ ರಸ್ತೆಯಲ್ಲಿ ಕಾಣಸಿಗುವ ಮತ್ತೊಂದು ದೇವಾಲಯ ಶ್ರೀ ಆರ್ಯದುರ್ಗಾ ದೇವಾಲಯ. ಈ ಗುಡಿ ಸ್ಥಾಪನೆಯಾಗಿ 400 ವರ್ಷಗಳಾಗಿವೆ. ಪೂರ್ವಾಭಿಮುಖವಾಗಿರುವ ದೇವಾಲಯದ ಪ್ರಾಕಾರದ ಮಹಾದ್ವಾರವು ಉತ್ತರ ದಿಕ್ಕಿಗೆ ಇರುವುದು. ದೇವಿಮೂರ್ತಿಯು ಪಂಚಲೋಹದ್ದಿದೆ. ನಿಂತ ಭಂಗಿಯ ಮೂರ್ತಿಗೆ ನಾಲ್ಕು ಕೈಗಳಿವೆ. ಚಕ್ರ, ಶಂಖ, ಖಡ್ಗ, ಢಾಲ ಈ ಕೈಗಳಲ್ಲಿವೆ. ಕೊರಳಲ್ಲಿ ವೈಜಯಂತಿ ಮಾಲೆ ಇದೆ. ದೇವಾಲಯದಲ್ಲಿ ನವರಾತ್ರಿ ಉತ್ಸವವು ವಿಜೃಂಭಣೆಯಿಂದ ನಡೆಯುತ್ತದೆ. ಆಗ ಒಂಭತ್ತು ಬಗೆಯ ಅಲಂಕಾರಗಳನ್ನು ಮಾಡಲಾಗುತ್ತದೆ.

ಹನುಮಟ್ಟೆ ಅಂಕೋಲ ತಾಲ್ಲೂಕಿನ ಸಮೀಪದ ಗ್ರಾಮ. ಹನುಮಂತ ಈ ಗ್ರಾಮದ ದೇವರು. ಇಲ್ಲಿ ಶ್ರೀ ಲಕ್ಷ್ಮೀನಾರಾಯಣ ಮಹಾಮಾಯಾ ದೇವಾಲಯವಿದೆ. ಗೌಡ ಸಾರಸ್ವತ ಸಮಾಜದವರಿಗೆ ಈ ದೇವಾಲಯ

ನೆಚ್ಚಿನದಾಗಿದೆ. ಇದೊಂದು ಆಕರ್ಷಕ ದೇವಾಲಯ. ಮಹಾಮಾಯಾ ಮೂರ್ತಿ ಬಂಗಾರದ್ದಾಗಿದೆ. ಶ್ರೀ ಮಹಾತೆಯೊಡನೆ ಭಾಗವತಿ, ಭಾರಾಂಗಣ ಈಶ್ವರಪಾರ್ವತಿ, ಭೂತನಾಥ, ರವಳನಾಥ ಮತ್ತು ಶಾಂತೇರಿ ದೇವತೆಗಳೂ ಇವೆ. ನವರಾತ್ರಿಯ ಉತ್ಸವ ಇಲ್ಲಿ ಅದ್ದೂರಿಯಾಗಿ ನಡೆಯುತ್ತದೆ. ಶ್ರೀ ಮಹಾಮಾಯಾ ಮತ್ತು ಶ್ರೀ ಭಗವತಿ ದೇವಿಯರ ಸಮ್ಮುಖದಲ್ಲಿ ನಾಂದಿವಾದ್ಯ ಎಂಬ ವಾದ್ಯವನ್ನು ಬಾರಿಸಲಾಗುತ್ತದೆ.

**ಸಿದ್ದಾಪುರ ತಾಲ್ಲೂಕು :**

ಸಿದ್ದಾಪುರ ತಾಲ್ಲೂಕು ಸ್ವಾತಂತ್ರ್ಯ ಸಂಗ್ರಾಮದ ಕರ ನಿರಾಕರಣೆ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿ ಪ್ರಸಿದ್ಧವಾಗಿದೆ. ಬಿಳಗಿ, ಇಟಗಿ ಈ ತಾಲ್ಲೂಕಿನ ಪ್ರಮುಖ ಸ್ಥಳಗಳಾಗಿವೆ. ಬಿಳಗಿಯ ಸಿದ್ಧಮ್ಮ ರಾಣಿಯ ಹೆಸರಿನ ಮೇಲೆ ಊರಿಗೆ ಸಿದ್ದಾಪುರ ಎಂದು ಹೆಸರಾಯಿತೆಂದು ಹೇಳುವರು.

ಬಿಳಗಿ ಗ್ರಾಮ ಸಿದ್ದಾಪುರಕ್ಕೆ ಪಶ್ಚಿಮದಲ್ಲಿ 8 ಕಿ.ಮೀ. ದೂರದಲ್ಲಿದೆ. ಕೋಟೆ ಮತ್ತು ಅರಮನೆ ಅವಶೇಷಗಳಿವೆ. ಬಿಳಗಿಯಲ್ಲಿ ಒಂದು ಪಾರ್ಶ್ವನಾಥ ಬಸದಿ ಇದೆ.

ಬಿಳಗಿ ಊರು ಪ್ರವೇಶಿಸುತ್ತಿದ್ದಂತೆ ಎತ್ತರದಲ್ಲಿ ಪೂರ್ವಕ್ಕೆ ಮುಖ ಮಾಡಿರುವ ಶ್ರೀ ಮಾರಿಕಾಂಬ ದೇವಾಲಯವಿದೆ. ಈಕೆಯನ್ನು ಸೀಮೆದೇವತೆ ಎಂದೂ ಹೇಳುವರು. ಹೈವನಾಡಿನ ಕ್ಷೇತ್ರವೇ ಬಿಳಗಿ ಸೀಮೆಯಾಗಿದೆ. ಎಂದು ಮಾರಿಕಾಂಬಳ ಪ್ರತಿಷ್ಠಾಪನೆಯಾಯಿತೆಂದು ತಿಳಿಯದು. ಕ್ರಿ.ಶ. 1900ರಲ್ಲಿ ಈಗಿದ್ದ ದೇವಾಲಯವನ್ನು ಕಟ್ಟಲಾಯಿತು. ಈಗ ಇಲ್ಲಿ ಪ್ರಾಣಿವಧೆ ನಿಷೇಧ 1926ರ ವರೆಗೂ ಜಾತ್ರೆಯಲ್ಲಿ ಪ್ರಾಣಿವಧೆ ಇತ್ತು.

ಸಿದ್ದಾಪುರದಿಂದ 19 ಕಿ. ಮೀ. ದೂರದಲ್ಲಿರುವ ಇಟಗಿ ಗ್ರಾಮದಲ್ಲಿ ರಾಮೇಶ್ವರ ದೇವಾಲಯವಿದೆ. ಇಲ್ಲಿ ರಾಮ ಹಾಗೂ ಈಶ್ವರ ದೇವರುಗಳಿವೆ. ಈ ದೇವಾಲಯವನ್ನು 1560ರಲ್ಲಿ ಬಿಳಗಿಯ ರಾಜನು ಕಟ್ಟಿಸಿದನೆನ್ನಲಾಗಿದೆ. ದೇವಾಲಯದ ಎಡಬದಿಯಲ್ಲಿ ಅಮ್ಮನವರ ಗುಡಿ ಇದೆ. ಮುಂದೆ ಕ್ಷೇತ್ರಪಾಲ ಬಲಗಡೆಗೆ ವಿಠ್ಠಲ ದೇವಾಲಯವಿದೆ. ದೇವಾಲಯವು 9ನೇ ಶತಮಾನದ್ದಾಗಿರಬೇಕೆಂದು ತಿಳಿಯಲಾಗಿದೆ.

ಇದೇ ತಾಲ್ಲೂಕಿನ ಮುತ್ತಿಗೆ ಗ್ರಾಮದಲ್ಲಿ ಭುವನಗಿರಿ ದೇವಾಲಯವಿದೆ. ಮುತ್ತಿಗೆ ಸಿದ್ದಾಪುರಕ್ಕೆ 9 ಕಿ.ಮೀ. ದೂರದಲ್ಲಿದೆ. ದೇವಸ್ಥಾನವು ಭುವನ-ಗಿರಿಯ ಮೇಲೆ ಇರುತ್ತದೆ. ಇದೊಂದು ನಿಸರ್ಗ ರಮಣೀಯ ತಾಣ. ದೇವಾಲಯದ ಎಡಬದಿಯಲ್ಲಿ ಗೋಪಾಲಕೃಷ್ಣ, ಎದುರಿನಲ್ಲಿ ಗಣಪತಿ ಬಲಬದಿಯಲ್ಲಿ ಈಶ್ವರ ದೇವಾಲಯವಿದೆ. ದೇವಾಲಯದಲ್ಲಿ ನಿತ್ಯ ಅಭಿಷೇಕ ಪೂಜೆಗಳು ನಡೆಯುತ್ತವೆ.

ಬಿಳಗಿಯ ರತ್ನತ್ರಯ ಬಸದಿ ಬಿಳಗಿಯ ಉಪರಸ್ತೆಯ ಬದಿಗಿದೆ. ಹಿಂದೆ ವಿಜಯನಗರದರಸರ ಕಾಲದಲ್ಲಿ ಬಿಳಗಿ ಒಂದು ಸಂಸ್ಥಾನದ ರಾಜಧಾನಿಯಾಗಿ ಮೆರೆದಿತ್ತು. ರತ್ನತ್ರಯ ಬಸದಿಯು ವ್ಯಾಕರಣಕಾರ ಭಟ್ಟಾಕಳಂಕರ ಪ್ರೇರಣೆಯಿಂದ ರಚನೆಯಾಯಿತೆಂದು ತಿಳಿದು ಬರುತ್ತದೆ. ಕ್ರಿ ಶ. 1604ರಲ್ಲಿ ನಿರ್ಮಾಣವಾದ ಬಸದಿಯ ಹೆಚ್ಚಿನ ಕೆಲಸವನ್ನು ಇಮ್ಮಡಿ ಘಟೇಂದ್ರ ದೊರೆ ಮಾಡಿಸಿದನೆನ್ನಲಾಗಿದೆ. ಬಸದಿಯನ್ನು ನಿರ್ಮಿಸಲು ಆರಂಭಿಸಿದವನು ಇವನ ತಂದೆ ರಂಗರಾಜ. ರತ್ನತ್ರಯ ಬಸದಿ ಶಿಲಾಮಯವಾಗಿದೆ. ರಂಗಮಂಟಪ, ಚಂದ್ರಶಾಲೆ ಇವೆ. ಈ ಬಸದಿಯನ್ನು ಒಬ್ಬನೇ ರಾಜ ನಿರ್ಮಿಸಿಲ್ಲ. ಹಂತ - ಹಂತವಾಗಿ ರಚಿತವಾಗಿ ಇಂದು ಭವ್ಯ ಕಟ್ಟಡವಾಗಿ ಕಂಗೊಳಿಸುತ್ತಿದೆ. ಬಸದಿಯ ಮೊದಲ ಬಾಗಿಲಲ್ಲಿ ಇಮ್ಮಡಿ ಘಟೇಂದ್ರನು ತನ್ನ ಅಜ್ಜ ವೀರಪ್ಪ ಒಡೆಯರಿಗೆ ಸ್ವರ್ಗ ಸಿಗಲೆಂದು ನೇಮಿನಾಥನ ಪ್ರತಿಮೆಯನ್ನೂ ತಂದೆ ರಂಗರಾಜನಿಗೆಂದು ಶ್ರೀ ಪಾರ್ಶ್ವನಾಥನ ಪ್ರತಿಮೆ ಹಾಗೂ ತಾಯಿಯ ಸಲು-ವಾಗಿ ಮತ್ತೊಂದು ಬಾಗಿಲಲ್ಲಿ ವರ್ಧಮಾನನ ಪ್ರತಿಮೆಯನ್ನು ಸ್ಥಾಪಿಸಿದನು. ರತ್ನತ್ರಯ ಬಸದಿಯು ಬಿಳಗಿಯ ರಾಜವಂಶವನ್ನು ನೆನಪಿಗೆ ತರುತ್ತದೆ.

### ಹಳಿಯಾಳ

ಹಳಿಯಾಳ ತಾಲ್ಲೂಕು ಕೇಂದ್ರ. ಈ ಊರಿಗೆ ಪಿಲ್ಲಿಯಾಳ ಎಂಬ ಹೆಸರೂ ಇದೆ. ಈ ಪಟ್ಟಣದಲ್ಲಿ ಒಂದು ವಿಠೋಬ ಮಂದಿರ, ಈಶ್ವರನಗುಡಿ, ದತ್ತಾತ್ರೇಯ, ಹನುಮಂತ, ವೆಂಕಟರಮಣ ದೇವರ ಮಂದಿರಗಳಿವೆ. ಇಲ್ಲಿನ ದೇಮವ್ವಾಳ ದೇವಾಲಯದಲ್ಲಿ ನವರಾತ್ರಿ ಹಬ್ಬವನ್ನು ಪಾಂಡವರ ವೇಷ

ಗಳೊಂದಿಗೆ ವಿಜೃಂಭಣೆಯಿಂದ ಆಚರಿಸುವರು. ಹಳಿಯಾಳ ತಾಲ್ಲೂಕಿನ ದಾಂಡೇಲಿ ಒಂದು ಕೈಗಾರಿಕಾ ಪಟ್ಟಣವಾಗಿ ಬೆಳೆದಿದೆ. ಕಾಳಿ ನದಿ ದಂಡೆಯ ಮೇಲಿರುವ ಈ ಊರಿನಲ್ಲಿ ಈಶ್ವರ ದೇವಾಲಯವಿದೆ. ದಾಂಡೇಲಿ ಸಮೀಪದ ಕಾವಳಾ ಗುಹೆಗಳು ನೋಡಬೇಕಾದವು. ಅಲ್ಲಿ ಸ್ಟಲ್ಲೈಟ್ ಶಿಲೆ ಗಳು ಲಿಂಗಾಕಾರ ತಾಳಿ ಶಿವ ಕ್ಷೇತ್ರವೆಂದು ಹೆಸರಾಗಿದೆ. ದಾಂಡೇಲಿಗೆ 18 ಕಿ.ಮೀ ದೂರದ ಅಂಬಿಕಾನಗರ ಕಾಳಿ ನದಿ ಜಲ ವಿದ್ಯುಚ್ಛಕ್ತಿ ಯೋಜನಾ ಪ್ರದೇಶ. ಇಲ್ಲಿ ಆಂಜನೇಯ ಹಾಗೂ ರಾಮರ ಗುಡಿಗಳಿವೆ. ದಾಂಡೇಲಿಯ ಬಂಗೂರನಗರದಲ್ಲಿ ದಸರಾ ಹಬ್ಬದ ಕಡೆ ದಿನದಂದು ರಾಮಲೀಲಾ ಉತ್ಸವ ನಡೆಯುತ್ತದೆ. ಇಲ್ಲಿ ಒಂದು ದತ್ತಮಂದಿರವೂ ಇದೆ. ದಾಂಡೇಲಿಗೆ ಎರಡು ಕಿ.ಮೀ ದೂರದ ಅಂಬೆವಾಡಿಯಲ್ಲಿ ಸುಂದರವಾದ ಗಣಪತಿ ಗುಡಿ ಇದೆ.

**ಕಾರವಾರ**

ವಿಶ್ವ ಕವಿ ರವೀಂದ್ರರನ್ನು ಸೆರೆ ಹಿಡಿದ ಊರು ಕಾರವಾರ ಹಾಗೂ ಅಲ್ಲಿಯ ಕಡಲ ತೀರ. ಕಾರವಾರ ಒಂದು ಬಂದರು. ಕಾರವಾರದ ಹತ್ತಿರವೇ ಸಮುದ್ರದಲ್ಲಿನ ಕೂರ್ಮಗಡ ನಡುಗಡ್ಡೆ ಸಮುದ್ರ ಮಟ್ಟದಿಂದ 60 ಮೀ ಎತ್ತರವಿದೆ. ಇಲ್ಲಿ ಪೂರ್ವಕ್ಕೆ ಒಂದು ನರಸಿಂಹ ದೇವಸ್ಥಾನವಿದೆ. ಈ ದೇವಸ್ಥಾನದ ಮೂರ್ತಿಯನ್ನು ಅರಬ್ಬರು ತಂದರೆಂದು ಪ್ರತೀತಿ ಇದೆ. ಡಿಸೆಂಬರ್ ತಿಂಗಳಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ.

ಕಾರವಾರದಿಂದ ಮೂರು ಕಿ.ಮೀ ದೂರದಲ್ಲಿ ಪ್ರಸಿದ್ಧ ಸಜ್ಜೇಶ್ವರ ದೇವಾಲಯವಿದೆ. ಕಾರವಾರದ ಕಡಲ ತೀರದ ಸೊಬಗಿಗೆ ದೇವಾಲಯದ ಆಕರ್ಷಣೆ ಕೂಡಿ ಸಜ್ಜೇಶ್ವರ ಭಕ್ತಾದಿಗಳನ್ನು ಆಕರ್ಷಿಸುತ್ತಿದೆ. ದೇವ ಸ್ಥಾನಕ್ಕೆ ಸುಂದರವಾದ ಗೋಪುರವಿದೆ. ದೇವಾಲಯದ ಒಳಗೆ ಮುಂದಕ್ಕೆ ಉದ್ಭವ ಲಿಂಗವಿದ್ದು ಅದರ ಹಿಂದೆ ಶ್ರೀ ಮಹಾಬಲೇಶ್ವರ ವಿಗ್ರಹವಿದೆ. ಗರ್ಭಗುಡಿಯ ಹೊರಗೆ ಗಣಪತಿಯ ವಿಗ್ರಹವಿದೆ. ಸಜ್ಜೇಶ್ವರ ಅಥವಾ ಗೆಜ್ಜೇಶ್ವರ ರಾವಣ ನಿರ್ಮಿತ ಶಿವಕ್ಷೇತ್ರವಾಗಿದೆ. ರಾವಣನು ಶಿವನನ್ನು ಬೇಡಿ ತಂದ ಆತ್ಮಲಿಂಗವನ್ನು ಒಂದು ಸಂಜೆ ತನ್ನ ಸಂಧ್ಯಾವಂದನೆ ಕಾರ್ಯ ನಿಮಿತ್ತ ಬ್ರಹ್ಮಚಾರಿ ವೇಷದಲ್ಲಿದ್ದ ಗಣಪತಿಗೆ ಕೊಟ್ಟ ಗಡುವಿನಲ್ಲಿ ಬರದ

ಕಾರಣ ವಿನಾಯಕನು ಆತ್ಮಲಿಂಗವನ್ನು ನೆಲದ ಮೇಲಿಟ್ಟುಬಿಟ್ಟನು. ಹಿಂತಿರುಗಿ ಬಂದ ರಾವಣನು ಸಿಟ್ಟಾಗಿ ಲಿಂಗದ ಬಳಿಗೆ ಬಂದು ಮಂಡಿ ಯೂರಿ ತನ್ನ ಸರ್ವಶಕ್ತಿಯಿಂದ ಅದನ್ನು ಕೀಳಲು ಹೆಣಗಾಡಿದನು. ಆಗ ಲಿಂಗವನ್ನು ತಂದ ಸಂಪುಟವು ಕೈಗೆ ಬಂದಿತು. ರಾವಣನು ಅದನ್ನು ಉತ್ತರ ದಿಕ್ಕಿಗೆ ಎಸೆದನು. ಅದು ಸಂಪುಟೇಶ್ವರ ಎಂದು ವಿಖ್ಯಾತವಾಗಿ ಕಾರವಾರದ ಬಳಿ ಪವಿತ್ರ ಕ್ಷೇತ್ರ ಎನಿಸಿತು. ಕ್ರಮೇಣ ಅದೇ ಸಜ್ಜೇಶ್ವರ ಎಂದು ಹೆಸರಾಯಿತು.

## ಶ್ರೀ ಕ್ಷೇತ್ರ ಮಂಜಗುಣಿ

ಮಂಜಗುಣಿ ಸಿರಸಿಯಿಂದ ಕುಮಟಾಕ್ಕೆ ಬರುವಾಗ ಸಿಗುತ್ತದೆ. ಇಲ್ಲಿ ಕದಂಬ, ಕೆಳದಿ, ಸಾಳವ, ಸೋದೆ ಮೊದಲಾದ ಎಲ್ಲ ರಾಜಮನೆತನದ ವರ ಆಶ್ರಯ ಪಡೆದ ಶ್ರೀ ವೆಂಕಟೇಶ್ವರ ದೇವಾಲಯವಿದೆ. ಕದಂಬರ ಮಯೂರವರ್ಮ, ಕೀರ್ತಿವರ್ಮರು ಈ ದೇವಾಲಯಕ್ಕೆ ದಾನ ನೀಡಿರು ತ್ತಾರೆ. ಇಲ್ಲಿನ ರಥ, ಗೋಡೆಗಳ ಮೇಲೆ ಕದಂಬರ ಲಾಂಛನಗಳಾದ ಸಿಂಹ, ಎತ್ತು, ಕಪಿಗಳು ಕಂಡು ಬರುತ್ತವೆ, ದೇವಾಲಯದಲ್ಲಿ ಹಲವು ಕೆತ್ತನೆಗಳಿದ್ದು ಇವು ಸೋದೆಯ ಅರಸರ ಪ್ರೋತ್ಸಾಹದಿಂದಾದವು ಎಂದು ಗುರುತಿಸಬಹುದಾಗಿದೆ.

ಇಲ್ಲಿನ ವೆಂಕಟೇಶ್ವರ ಮೂರ್ತಿಯನ್ನು ದೇವರ ಅಪೇಕ್ಷೆಯಂತೆ ದೇವರೇ ಸೂಚಿಸಿದ ಸ್ಥಳದಲ್ಲಿ ತಿಮ್ಮಲ ಎಂಬ ವೈಶ್ಯನು ದೇವಾಲಯವನ್ನು ಕಟ್ಟಿಸಿ ಸ್ಥಾಪಿಸಿದನೆಂದು ತಿಳಿದುಬರುತ್ತದೆ. ಮಹಿಷಾಸುರ ಮರ್ಧಿನಿ, ಭೈರವ, ಪಂಚಲಿಂಗ, ಪಾರ್ವತಿ ಗಣಪತಿ ಇಲ್ಲಿನ ಇತರ ಮೂರ್ತಿಗಳು ಇಲ್ಲಿ ಗೋಕರ್ಣದ ಕೋಟಿ ತೀರ್ಥವನ್ನು ಹೋಲುವ ವಿಶಾಲವಾದ ಕೆರೆ ಇದೆ. ಅದರ ಮುಂದೆ ದೇವಾಲಯ, ಎದುರಿಗೆ ಪಾಷಾನಸ್ತಂಭ ಇರುತ್ತದೆ. ದೇವಾಲಯದ ಪರಿಸರವೆಲ್ಲ ಅರಣ್ಯಮಯ. ಗರ್ಭಗುಡಿಯ ಸುತ್ತಲೂ ಕಲ್ಲಿನ ಗೋಡೆಗಳಿದ್ದು ಅವುಗಳ ಕಂಬಗಳ ಮೇಲಿನ ಶಿಲ್ಪ ಭವ್ಯವಾಗಿದೆ. ಈ ಶಿಲ್ಪ ಹಲವು ಪ್ರಣಯ ಭಂಗಿಗಳನ್ನೊಳಗೊಂಡಿದೆ. ಶಿಲಾಬಾಲಿಕೆಯರು,

ಮದನಿಕೆಗಳ ವಿವಿಧ ಭಂಗಿಗಳು ಇವೆಲ್ಲ ಬೇಲೂರು ಹಳೆಬೀಡು ದೇವಾಲಯಗಳ ಶಿಲಾಬಾಲಿಕೆಯರ ನೆನಪು ತರುತ್ತವೆ.

ದೇವಾಲಯದಲ್ಲಿರುವ ಭವ್ಯವಾದ ರಥ ಹಲವು ಚಿತ್ರಗಳನ್ನು ಕುಸುರಿನ ಕೆಲಸವನ್ನು ಹೊಂದಿರುತ್ತದೆ. ಯಾನಸ್ತಂಭ ಸುಂದರ ಕೆತ್ತನೆಯಿಂದಾಗಿದೆ. ದೇವಾಲಯದ ಮುಂದಿರುವ ಮುಖಮಂಟಪದಲ್ಲಿರುವ ಕಂಬಗಳ ಕೆತ್ತನೆ ಪ್ರವಾಸಿಗಳನ್ನು ಆಕರ್ಷಿಸುತ್ತದೆ. ದೇವಾಲಯದ ಕೆತ್ತನೆಗಳಲ್ಲಿ ವಿಷ್ಣುವಿನ ಹಲವು ರೂಪ, ಅವತಾರಗಳನ್ನು ರಾಮಾಯಣದ ಕೆಲವು ಸನ್ನಿವೇಶಗಳನ್ನು ಕಾಣುತ್ತೇವೆ.

ಇಲ್ಲಿ ನಡೆಯುವ ರಥೋತ್ಸವಕ್ಕೆ ಬರುವವರು ಕಬ್ಬು ತಿನ್ನುತ್ತಾ ಬರುವುದು ರೂಢಿ. ಹೀಗಾಗಿ ಮಂಜುಗುಣಿಯ ಹಬ್ಬವನ್ನು ಕಬ್ಬಿನ ಹಬ್ಬವೆಂದು ಹೇಳುತ್ತಾರೆ. ಕಾರ್ತೀಕ ಹುಣ್ಣಿಮೆಯಂದು ದೀಪೋತ್ಸವ ನಡೆಯುತ್ತದೆ. ರಥದ ಮೇಲಿನ ಕಾಷ್ಠಶಿಲ್ಪ ಗಣನೀಯ.

## ರಾವಣ ನಿರ್ಮಿತ ಪಂಚ ಕ್ಷೇತ್ರಗಳು

ಉತ್ತರ ಕನ್ನಡ ಜಿಲ್ಲೆಯಲ್ಲಿ ರಾವಣನು ಆತ್ಮಲಿಂಗ ಬೇರೂರುವಂತೆ ಮಾಡಿದ ಸ್ಥಳ ಗೋಕರ್ಣ. ಬಹು ಪ್ರಯಾಸದಿಂದ ಘೋರವಾದ ತಪಸ್ಸನ್ನು ಮಾಡಿ ರಾವಣನು ಶಿವನಿಂದ ಆತ್ಮಲಿಂಗವನ್ನು ಪಡೆದು ತಂದಿದ್ದನು. ಅಗ್ನಿ ಕುಂಡದಲ್ಲಿ ತನ್ನ ತಲೆಗಳನ್ನ ಒಂದೊಂದಾಗಿ ಕಡಿದು ರುದ್ರನಿಗೆ ಆಹುತಿ ಮಾಡಿಕೊಂಡಿದ್ದನು. ಹತ್ತನೆಯ ರುಂಡವನ್ನು ಕತ್ತರಿಸಿ ಆಹುತಿ ನೀಡಬೇಕೆಂದು ಸಿದ್ಧವಾದಾಗಲೇ ಶಿವ ಕರುಣಿಸಿದ್ದನು. ವಟುರೂಪಿ ಗಣಪತಿಯ ನೆರವಿನಿಂದ ದೇವತೆಗಳು ಆತ್ಮಲಿಂಗವನ್ನು ಪುಣ್ಯಸ್ಥಳ ಗೋಕರ್ಣದಲ್ಲಿ ಸ್ಥಾಪಿಸುವಂತೆ ಮಾಡಿದರು. ರಾವಣನಿಗೆ ಅಸಾಧ್ಯ ಕೋಪ ಬಂದು ನೆಲದಲ್ಲಿ ಊರಿದ ಲಿಂಗವನ್ನು ಕೀಳಲು ಯತ್ನಿಸಿದಾಗ ಲಿಂಗವನ್ನು ತಂದ ಸಂಪುಟವೇ ಕೈಗೆ ಬಂದಿತು ಅದನ್ನು ರಾವಣ ಉತ್ತರ ದಿಕ್ಕಿಗೆ ಎಸೆದನು. ಅದು ಸಂಪುಟೇಶ್ವರ ಸಜ್ಜೇಶ್ವರ ಎಂದು ಹೆಸರಾಯಿತು. ಸಂಪುಟದ ಮೇಲ್ಭಾಗವನ್ನು ದಕ್ಷಿಣ ದಿಕ್ಕಿಗೆ ಒಗೆದನು. ಅದು ಗುಣೇಶ್ವರ ಅಥವಾ ಗುಣವಂತೇಶ್ವರ ಎಂಬ ಹೆಸರಿನಿಂದ ಪುಣ್ಯಕ್ಷೇತ್ರ

ವಾಯಿತು. ಗುಣವಂತೆ ಗೋಕರ್ಣಕ್ಕೆ 4 ಕಿ.ಮೀ. ದೂರದಲ್ಲಿಯೂ ಹೊನ್ನಾ-ವರಕ್ಕೆ ಸಮೀಪದಲ್ಲಿಯೂ ಇದೆ. ಇಲ್ಲಿ ಈಶ್ವರ ಶಂಭುಲಿಂಗೇಶ್ವರನೆಂದು ಖ್ಯಾತನಾಗಿದ್ದಾನೆ. ಇದು ಪಂಚರುದ್ರದಲ್ಲಿ ಒಂದಾದ ಅಘೋರಲಿಂಗ ಎಂದು ತಿಳಿಯಲಾಗಿದೆ. ಮೂಲಲಿಂಗ ಪೀಠಗಳ ಕೆಳಗೆ ಜಲದಲ್ಲಿದೆ. ದೇವಾಲಯದ ಪರಿಸರ ಸಹಜ ಸುಂದರವಾಗಿದೆ. ನಿಸರ್ಗ ರಮಣೀಯವಾಗಿದೆ. ಇದರ ಸಮೀಪದ ಅಪ್ಸರ ಕುಂಡದಲ್ಲಿ ಅಂಬಿಕೆ ವಾಸವಾಗಿರುವಳೆಂದು ತಿಳಿವಳಿಕೆ ಇದೆ. ಉಮಾ ಮಹೇಶ್ವರ ಗುಡ್ಡವಿದ್ದು ಅದರ ಗರ್ಭದಲ್ಲಿ ಪಾಂಡವರ ಗುಹೆ, ಮೂಡ ಗಣಪತಿ ಮೊದಲಾದ ಸ್ಥಳಗಳಿವೆ. ಗುಣವಂತೆ ದೇವಾಲಯದ ಮುಂದೆ ಒಂದು ಕೆರೆ ಇದ್ದು ಇದಕ್ಕೆ ಪುಷ್ಕರಣೀ ತೀರ್ಥ ಎಂದು ಹೇಳುವರು. ಈ ಕೆರೆ ಸದಾ ಸಮೃದ್ಧವಾಗಿರುತ್ತದೆ. ದೇವಾಲಯದ ಪೂರ್ವಕ್ಕೆ ಇಡಗುಂಜಿ ಕ್ಷೇತ್ರ ಇದೆ. ರಾವಣನು ಆತ್ಮಲಿಂಗದ ಸಂಪುಟಕ್ಕೆ ಕಟ್ಟಿದ ವಸ್ತ್ರವನ್ನು ಮುರಿದು ಎಸೆದನು. ಆ ಸ್ಥಳವೇ ಮೃಡೇಶ್ವರ ಎಂದು ಹೆಸರಾಗಿದೆ.

ಸಂಪುಟದ ವಸ್ತ್ರಕ್ಕೆ ಕಟ್ಟಿದ ದಾರವನ್ನು ರಾವಣ ದಕ್ಷಿಣಕ್ಕೆ ಒಗೆದನು. ಆ ಸ್ಥಳ ಧಾರೇಶ್ವರ ಎಂದು ಖ್ಯಾತಿವೆತ್ತಿದೆ. ಧಾರೇಶ್ವರ ಕ್ಷೇತ್ರ ಗೋಕರ್ಣ ದಿಂದ 32 ಕಿ.ಮೀ. ದೂರಕ್ಕಿದೆ. ಧಾರೇಶ್ವರ ದೇವಾಲಯದ ಮುಂದೆ ಸುಂದರವಾದ ಕೆರೆ ಇದ್ದು ಯಾವಾಗಲೂ ನೀರು ತುಂಬಿರುತ್ತದೆ. ಈ ದೇವಾಲಯವು ಹಲವು ದೇವರುಗಳ ಸ್ಥಾನವೂ ಆಗಿದೆ. ಧಾರೇಶ್ವರ, ಗಣಪತಿ ವೆಂಕಟೇಶ, ಅಮ್ಮನವರು, ನಂದಿ ಮೊದಲಾದ ಮೂರ್ತಿಗಳಿವೆ. ದೇವಾ-ಲಯದ ಹೊರಗೋಪುರ ಆಕರ್ಷಕವಾಗಿದೆ. ಒಳಗಿನ ಶಿಲ್ಪಕಲೆ ಗಮನೀಯ. ದೇವಾಲಯ ಕರಾವಳಿಯ ರಾಷ್ಟ್ರೀಯ ಹೆದ್ದಾರಿಯ ಮೇಲೆ ಇರುವುದರಿಂದ ಭಕ್ತಾದಿಗಳನ್ನು ತನ್ನತ್ತ ಸೆಳೆದುಕೊಳ್ಳುತ್ತದೆ.

## ಶ್ರೀವನ ದುರ್ಗಾ ದೇವಾಲಯ

ಶ್ರೀವನ ದುರ್ಗಾ ದೇವಾಲಯ ಹೆಸರೇ ಸೂಚಿಸುವಂತೆ ಅಡವಿಯ ಪರಿಸರದಲ್ಲಿದೆ. ವನದೇವತೆ ಎಂದೂ ಸ್ತುತಿಸಲ್ಪಟ್ಟಿರುವ ದುರ್ಗೆ ನೀಲಕೋಡ ಗ್ರಾಮ ನಿವಾಸಿ. ಕುಮಟಾದಿಂದ 7 ಕಿ.ಮೀ. ದೂರದಲ್ಲಿ ಖೈರಿ ಸೇತುವೆ

ಸಮೀಪದ ರಸ್ತೆ ಹಿಡಿದು ಕಾಡಿನೊಳಗೆ ಸಾಗಿದರೆ ನೀಲಕೋಡಗ್ರಾಮ ಸಿಗುತ್ತದೆ. ಇದೊಂದು ಶಾಂತ ಪ್ರದೇಶ. ನಿಸರ್ಗದ ವನಸಿರಿ ಶ್ರೀಮಂತ ವಾಗಿದೆ. ಈ ಸ್ಥಳವನ್ನು ಆದಿದೇವತೆಯ ಗುತ್ತ ಎಂದೂ ಕರೆಯುವರು. ವನದುರ್ಗಾದೇವಿಗೆ ಅರಳಕ್ಕಿ ದೇವತೆ ಎಂಬ ಹೆಸರೂ ಇದೆ. ಹಿಂದೆ ಅರ್ಚಕರು ಅಕ್ಕಿ ತೊಳೆದು ನೀರು ಹಾಕಿ ಒಬ್ಬೆಬಟ್ಟೆಯನ್ನು ಬಿಟ್ಟಿ ಪಾತ್ರೆಯಲ್ಲಿ ನೋಡಿ ದಾಗ ಅನ್ನವಾಗಿರುತ್ತಂತೆ ಆದುದರಿಂದ ದೇವಿಗೆ 'ಅರಳಕ್ಕಿ ದೇವತೆ, ಎಂಬ ಹೆಸರೂ ಇದೆ.

## ಶಂಕರ ನಾರಾಯಣ ದೇವಾಲಯ, ಸೋದೆ

ಕರಾವಳಿ ಜಿಲ್ಲೆಗಳೆರಡು ಇದ್ದು, ಎರಡೂ ಜಿಲ್ಲೆಗಳು ಶಂಕರನಾರಾಯಣ ದೇವಾಲಯವನ್ನು ಹೊಂದಿರುವುದು ವೈಶಿಷ್ಟ್ಯ. ದಕ್ಷಿಣ ಕನ್ನಡ ಜಿಲ್ಲೆಯ ಶಂಕರನಾರಾಯಣ ಪುಣ್ಯಕ್ಷೇತ್ರ. ಅಲ್ಲಿ ಶಂಕರನಾರಾಯಣ ದೇವಾಲಯವಿದೆ. ಇನ್ನು ಉತ್ತರ ಕನ್ನಡ ಜಿಲ್ಲೆಯಲ್ಲಿನ ಸೋದೆ ದಟ್ಟಡವಿಯ ನಡುವೆ ಒಂದು ಶಂಕರನಾರಾಯಣ ದೇವಾಲಯವನ್ನು ಹೊಂದಿದೆ. ಈ ದೇವಾಲಯ ಸುಂದರ ವಾಗಿದೆ. ಇದೊಂದು ಚಿಕ್ಕ ದೇವಾಲಯ. ಇಲ್ಲಿನ ಪೂಜಾವಿಗ್ರಹ 6 ಅಡಿ ಎತ್ತರವಿರುವ ಅಭಯಹಸ್ತ ಚಾಚಿದ ಶ್ರೀ ಶಂಕರನಾರಾಯಣ ಮೂರ್ತಿ. ಇಡೀ ದೇವಾಲಯ ಶಿಲಾ ರಚನೆಯಾಗಿದೆ ರಾಮಾಯಣ, ಮಹಾಭಾರತ, ವಿಷ್ಣುಪುರಾಣ (ಭಾಗವತ) ಕಥಾನಕಗಳ ಕೆತ್ತನೆಗಳು ಅಪೂರ್ವವೆನಿಸಿವೆ. ಕಲ್ಲಿನ ಗೋಡೆಗಳಲ್ಲಿ ಹಾಗೂ ಕಂಬಗಳಲ್ಲಿ ಗೂಡುಗಳನ್ನು ನಿರ್ಮಿಸಿ ಅಲ್ಲೆಲ್ಲ ದೇವತಾಮೂರ್ತಿ ಮೊದಲಾದವನ್ನು ಕೆತ್ತಲಾಗಿದೆ. ದೇವಾಲಯದ ಗೋಡೆ ಗಳ ಗೂಡುಗಳ ಮಂಟಪದಲ್ಲಿ ಹೆಣ್ಣಿನ ಚಿತ್ರಗಳನ್ನು ಕೆತ್ತಲಾಗಿದೆ. ಹೊರಗಿನ ಹಾಗೂ ಒಳಗೋಡೆಗಳ ಮೇಲೆ ಮತ್ತು ಕಂಬಗಳ ಮೇಲೆ ಸುಂದರಿಯರ ಕನ್ಯೆಯರ ನಾಯಕಿಯರ ಚಿತ್ರಗಳನ್ನು ಕೆತ್ತಲಾಗಿದೆ. ಇವು ಬೇಲೂರು ಚೆನ್ನಕೇಶವ ದೇವಾಲಯದಲ್ಲಿ ಕಾಣುವ ಶಿಲಾಬಾಲಿಕೆಯರನ್ನು ನೆನಪಿಗೆ ತರುತ್ತವೆ. ಸ್ತ್ರೀ ಶಿಲ್ಪಗಳಲ್ಲಿ ಕಾಣ ಸಿಗುವ ಆಭರಣಲಂಕಾರಗಳು, ಮುಖಾ ಲಂಕಾರಗಳು ವೈಶಿಷ್ಟ್ಯಪೂರ್ಣವಾಗಿವೆ. ದೇವಾಲಯವಲ್ಲ ಕೆಲವು ಅಪ ರೂಪದ ವಿಗ್ರಹಗಳಿವೆ. ನಾಟ್ಯಲಕ್ಷ್ಮಿ ವಿಗ್ರಹ ಗಮನ ಸೆಳೆಯುತ್ತದೆ.

ಅಭಯ, ಚಕ್ರ, ಪದ್ಮ, ಸ್ವರ್ಗ, ಶಂಖ, ಫಲ, ಲಂಬ ಹಾಗೂ ದಾಸ ಹಸ್ತಗಳಿಂದ ಈ ವಿಗ್ರಹಶೋಭಿಸುತ್ತದೆ. ಸ್ತ್ರೀಯರ ನೃತ್ಯ ಭಂಗಿಗಳಲ್ಲಿ ವೈವಿಕ ಕ್ರಮವನ್ನು ಗುರುತಿಸಬಹುದಾಗಿದೆ ಗಿಣಿ, ಆನೆ, ಹಾವು ಮೊದಲಾದ ಶಿಲ್ಪಗಳೂ ಇಲ್ಲಿವೆ.

ದೇವಾಲಯದ ಸೊಬಗನ್ನು ಕಂಡಾಗ ಅದನ್ನು ಇನ್ನೂ ಚೆನ್ನಾಗಿ ಉಳಿಸಿಕೊಳ್ಳಬೇಕಾಗಿತ್ತು ಎನ್ನಬಹುದಾಗಿದೆ. ದೇವಾಲಯ ಹಲವು ವರ್ಷಗಳಿಂದ ಜೀರ್ಣೋದ್ಧಾರವಾಗದಿರುವುದೂ ತಿಳಿದು ಬರುತ್ತದೆ. 1764ರಲ್ಲಿ ಹೈದರಾಲಿಯು ಸೋದೆಯನ್ನು ಮುತ್ತಿ ಅರಸ ಸದಾಶಿವ ನಾಯಕನನ್ನು ಸೋಲಿಸಿದಾಗ ಇಡೀ ಸಂಸ್ಥಾನ. ಸೋದೆ ಹೈದರಾಲಿಯ ವಶವಾಯಿತು. ದೇವಾಲಯದತ್ತ ಗಮನಹರಿಸುವವರು ಇಲ್ಲದಾಯಿತು. ದೇವಾಲಯವನ್ನು ನೋಡಿದಾಗ ಸೋದೆಯ ಅರಸರಿಗೆ ಶಿಲ್ಪಕಲಾ ಸೌಂದರ್ಯಕ್ಕೆ ದೇವಸ್ಥಾನ ಹೆಸರಾಗಿದೆ.

## ಶ್ರೀ ಶಾಂತಿಕಾಂಬಾ ದೇವಾಲಯ

ಶ್ರೀ ಶಾಂತಿಕಾಂಬಾ ದೇವಾಲಯವು ಕುಮಟ ತಾಲ್ಲೂಕಿನ ಹೆಗಡೆ ಊರಿನಲ್ಲಿದೆ. ದೇವಿಯು ಗ್ರಾಮದೇವತೆಯೇ ಆಗಬೇಕು. ಬೀರ ದೇವರು, ಕೆಂಡದ ಮಹಾಸತಿ, ವೀರಭದ್ರ, ಹುಲಿದೇವರು ಮೊದಲಾದವು ಶ್ರೀ ದೇವಿಯ ಪರಿವಾರ ಆಗಿವೆ, ಹೆಗಡೆಯಲ್ಲಿ ನಡೆಯುವ ಜಾತ್ರೆ ಹಲವು ವೈಶಿಷ್ಟ್ಯಗಳಿಂದ ಕೂಡಿದ್ದು ಜನಪ್ರಿಯವಾಗಿದೆ. ಹೆಗಡೆ ಜಾತ್ರೆ ದಿನ ವೈಭವದ ರಥೋತ್ಸವ ನಡೆಯುತ್ತದೆ. ದೇವಾಲಯದ ಒಳಗಡೆ ಹೋಮ ಹವನಗಳು ಜರುಗುತ್ತವೆ. ತುಲಾಭಾರದ ಹರಕೆ, ಆರತಿ ಮಕ್ಕಳ ಹರಕೆ, ಹೋರಿಗಳನ್ನು ಓಡಿಸುವುದು, ಕೆಂಪು ಹೂವು ಧರಿಸಿರುವ ಹೂವಿನ ಮಕ್ಕಳು ಇವು ದೇವಾಲಯದ ರಥೋತ್ಸವ ಕಾಲದ ವಿಶೇಷಗಳು.

## ಶ್ರೀ ಹನುಮಂತ ದೇವಾಲಯ, ಚಂದಾವರ

ಚಂದಾವರ ಗ್ರಾಮ ಕುಮಟದಿಂದ 8 ಕಿ. ಮೀ. ದೂರದಲ್ಲಿದೆ. ಸಮರ್ಥ ರಾಮದಾಸರು ಸುಮಾರು 300 ವರ್ಷಗಳ ಹಿಂದೆ ಇಲ್ಲಿನ

ದೇವಾಲಯದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿದರೆಂದು ತಿಳಿಯಲಾಗಿದೆ ಹನುಮಂತ ದೇವರ ಎದುರಿಗೆ ಬಾಗಿಲ ಜಟಕ, ಎಡಬದಿಗೆ ವಾಸ್ತು, ಬಲ ಬದಿಗೆ ಚವಡಿ ಮತ್ತು ತುಳಸಿ ಮೊದಲಾದ ಪರಿವಾರ ದೇವತೆಗಳಿವೆ. ಇಲ್ಲಿನ ಹನುಮಂತ ದೇವರಿಗೆ ಸಿಂಧೂರ ಸೇವೆ ವಿಶೇಷ. ಈ ಸೀಮೆಯ ಹಾಲಕ್ಕಿ, ನಾಡವರು, ಪಟಗಾರ, ನಾಮಧಾರಿ ಮೊದಲಾದ ವರ್ಗದವರು ಹನುಮ ದೇವರ ಸೇವೆಯಲ್ಲಿ ಭಾಗವಹಿಸುವರು. ಅರ್ಚಕರು ಕೋಟ ಬ್ರಾಹ್ಮಣರು. ಚಂದಾವರ ದೇವರ ವಿಶೇಷವೆಂದರೆ ಸೀಮೆಯಲ್ಲಿ ದೇವರು ಸವಾರಿಗೆ ಹೋಗುವುದು. ಅದಕ್ಕೆಂದೆ ಒಂದು ಮೂರ್ತಿ ಇದೆ. ಈ ಸವಾರಿ ಮಾಡುವುದು ಮಾರ್ಗಶಿರದಿಂದ ಆಷಾಢ ಶುದ್ಧ ದಶಮಿಯವರೆಗೆ ನಡೆಯುತ್ತದೆ. ಆಷಾಢ ಶುದ್ಧ ಏಕಾದಶಿಗೆ ದೇವರು ಚಂದಾವರ ದೇವಾಲಯದಲ್ಲಿರಬೇಕೆಂಬ ನಿಯಮವಿದೆ. ಮಿರ್ಜಾನ, ಹೆಗಡೆ, ಹೊನ್ನಾವರ, ಯುಗ್ಗ ಮೊದಲಾದ ಊರುಗಳಲ್ಲಿ ಈ ದೇವರು ಸಂಚರಿಸುವುದು. ಆ ಸಂದರ್ಭದಲ್ಲಿ ಜನರ ಕೋರಿಗಳು ಈಡೇರುವುದು ಎಂಬ ನಂಬಿಕೆ ಇದೆ.

## ಕಾಂಚಿಕಾ ಪರಮೇಶ್ವರಿ ದೇವಾಲಯ, ಬಾಡ

ಗುಡೇ ಅಂಗಡಿ ಗ್ರಾಮ ಕುಮಟದಿಂದ ಎಂಟು ಕಿ. ಮೀ. ದೂರದಲ್ಲಿದ್ದು ಈ ಹಳ್ಳಿ ಬಾಡ ಎಂಬ ಗ್ರಾಮಕ್ಕೆ ಸನಿಹದಲ್ಲಿಯೂ ಇದೆ. ಈ ಗ್ರಾಮದಲ್ಲಿ ಕಾಂಚಿಕಾ ಪರಮೇಶ್ವರಿ ಅಥವಾ ಬಾಡಮ್ಮನ ದೇವಾಲಯವಿದೆ. ಈ ದೇವಾಲಯ ನಿಸರ್ಗರಮಣೀಯ ಪ್ರದೇಶದಲ್ಲಿದ್ದು ಅತ್ಯಂತ ಆಕರ್ಷಣೀಯದಾಗಿದೆ. ದೇವಸ್ಥಾನಕ್ಕೆ ಮೆಟ್ಟಲುಗಳಿವೆ. ಪೌರಾಣಿಕವಾಗಿಯೂ ಐತಿಹಾಸಿಕವಾಗಿಯೂ ದೇವಾಲಯ ಪ್ರಸಿದ್ಧವಾಗಿದೆ. ಈ ದೇವಾಲಯದ ದೇವಿಯ ಮೂರ್ತಿಯು ಕಾಂಚೀಪುರದ ಕಂಚಿಮಠದಲ್ಲಿ ದೊರೆತುದರಿಂದ ಇಲ್ಲಿಯ ಮೂರ್ತಿಗೆ ಕಾಂಚಿಕಾ ಪರಮೇಶ್ವರಿ ಎಂಬ ಹೆಸರು ಬಂದಿದೆ. ಇದನ್ನು ಕಡಲ ತೀರದ ಗುಡೇ ಅಂಗಡಿಯಲ್ಲಿ ಕಲಭ ಋಷಿಗಳು ಪ್ರತಿಷ್ಠಾಪಿಸಿದರು. ಇಲ್ಲಿ ಪ್ರತಿ ವರ್ಷ ಚೈತ್ರ ಶುದ್ಧ ದ್ವಾದಶಿಯಿಂದ ಐದು ದಿನಗಳ

ವರೆಗೆ ಹುಣ್ಣಿಮೆ ಪಾಡ್ಯ ಬಹುಳದವರೆಗೆ ದೇವಿಯ ತೇರು ವೈಭವದಿಂದ ನಡೆಯುತ್ತದೆ. ನವರಾತ್ರಿ ಕಾಲವಲ್ಲಿ ವಿಶೇಷ ಉತ್ಸವ ನಡೆಯುತ್ತದೆ.

## ಶ್ರೀ ದೇವಕೀ ಕೃಷ್ಣಮಹಾಲಕ್ಷ್ಮೀರವಳನಾಥ ದೇವಾಲಯ

ಕುಮಟದಿಂದ ಸುಮಾರು ಎರಡು ಕಿ.ಮೀ ದೂರದ ಹೆರವಟ್ಟಾ ಗ್ರಾಮದಲ್ಲಿ ಈ ದೇವಾಲಯವಿದೆ. ಕುಳಾದಿಗಳು ಇಲ್ಲಿನ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ದೇವಳದಲ್ಲಿ ಶ್ರೀ ದೇವಕೀಕೃಷ್ಣ, ಭೂಮಿಕಾ, ಮಹಾ ಲಕ್ಷ್ಮೀರವಳನಾಥ, ಮಲ್ಲಿನಾಥ, ನಾರಾಯಣ, ಶ್ರೀ ಭಗವತಿ ಮೊದಲಾದ ದೇವತಾ ಮೂರ್ತಿಗಳಿವೆ. ದಾಯ ಭಗತ್, ಪಾಯ ಭಗತ್, ಲಕ್ಕುಮ ಭಗತ್, ಬೀಡೆ ಭಗತ್, ಮಹಾಮೂರ್ತಿ ಎಂದು ಗರ್ಭಗೃಹದ ಪೀಠದಲ್ಲಿ ಲೋಹದ ಪ್ರತಿಮೆಗಳಿವೆ. ದೇವರ ಸಮೀಪವಲ್ಲಿ ಬ್ರಹ್ಮದೇವರ ಹಾಗೂ ಹನುಮಂತರ ವಿಗ್ರಹಗಳಿವೆ. ಶ್ರಾವಣ ಮಾಸದಲ್ಲಿ ಇಲ್ಲಿ ಜರುಗುವ ಹೂವಿನ ಅಲಂಕಾರ ಆಕರ್ಷಣೀಯವಾಗಿರುತ್ತದೆ.

## ಕರಿಕಾನಮ್ಮ ದೇವಾಲಯ

ಕರಿಕಾನಮ್ಮ ದೇವಾಲಯ ಒಂದು ಜಾಗ್ರತ ಸ್ಥಳ. ತಮ್ಮ ಅಶೋತ್ತರಗಳು ಈಡೇರುವುದೆಂದು ಭಕ್ತರು ಈ ದೇವಿಗೆ ಹರಕೆ ಹೊರುತ್ತಾರೆ. ದೇವಿಗೆ ಭಕ್ತರು ಬಳೆಗಳನ್ನು ನೀಡುವುದು ಮಾಲೆ ಮಾಡಿ ಹಾಕುವುದು ಇಲ್ಲಿ ಒಂದು ವಿಶೇಷ. ಕರಿಕಾನಮ್ಮ ದೇವಾಲಯ ಕುಮಟದಿಂದ ಹೊನ್ನಾವರಕ್ಕೆ ಹೋಗುವ ಮಾರ್ಗದಲ್ಲಿ ಸಿಗುವ ಅರೇ ಅಂಗಡಿ ಗ್ರಾಮದ ಬಳಿ ಇದೆ. ಗುಡ್ಡದ ಮೇಲಿರುವ ದೇವಾಲಯ ಅಲ್ಲಿಯ ರಮ್ಯವಾದ ಪ್ರಕೃತಿ ಸೌಂದರ್ಯದಿಂದಾಗಿ ಕಂಗೊಳಿಸುತ್ತದೆ. ದೇವಾಲಯದಲ್ಲಿ ಭೂಮಿಯೊಳಗಿಂದ ಮೂಡಿ ಬಂದ ರೋಹಿಣಿ ಇದ್ದು ದೇವಿಯ ವಿಗ್ರಹವಿದೆ.

## ಶಂಭುಲಿಂಗೇಶ್ವರ ದೇವಾಲಯ, ಕತಗಾಲ

ಕುಮಟದಿಂದ ಹನ್ನೆರಡು ಕಿ.ಮೀ ದೂರದಲ್ಲಿರುವ ಕತಗಾಲದಲ್ಲಿದೆ.

ಇಲ್ಲಿರುವ ಗಣಪತಿ ವಿಗ್ರಹ ಹಳೆಯದು. ಇದು ಶಂಕರಾಚಾರ್ಯರ ಕಾಲದ್ದೆಂದು ತಿಳಿಯಲಾಗಿದೆ. ಹೊಸ ಮೂರ್ತಿಯೊಂದನ್ನು ಕಡೆಯಲಾಗಿದೆ. ಗಣಪತಿ ವಿಗ್ರಹದ ಎಡ ಬದಿಯಲ್ಲಿ ಮಹಿಷಾಸುರ ಮರ್ಧಿನಿ ವಿಗ್ರಹವಿದೆ. ಈ ವಿಗ್ರಹದಲ್ಲಿ ಮಹಿಷಾಸುರನ ಮೇಲೆ ದೇವಿ ತನ್ನ ಎರಡೂ ಕಾಲನ್ನು ಇಟ್ಟಿರುವುದು ಗಮನಾರ್ಹವಾಗುತ್ತದೆ. ಶಂಭುಲಿಂಗೇಶ್ವರ ಲಿಂಗ ಒಳಗಿರುತ್ತದೆ. ಶಿವರಾತ್ರಿಯಂದು ಇಲ್ಲಿ ವಿಶೇಷ ಉತ್ಸವ ನಡೆಯುತ್ತದೆ.

## ಶ್ರೀ ಗಣಪತಿರವಳನಾಥ ಮಹಾಮಾಯಾದೇವಾಲಯ, ಅಸ್ನೋಟಿ

ಅಸ್ನೋಟಿ ಕಾರವಾರದಿಂದ ಸದಾಶಿವಗಡದಾರಿಯಲ್ಲಿ ಎಂಟು ಕಿ.ಮೀ ದೂರದಲ್ಲಿದೆ. ಇಲ್ಲಿನ ಭಗತವಾಡ ಪ್ರದೇಶದಲ್ಲಿ ಗಣಪತಿರವಳನಾಥನ ದೇವಾಲಯವಿರುತ್ತದೆ. ಗೋಮಾಂತಕ (ಗೋವಾ)ದ 'ತಸಲವಾಡಿ ಎಲ್ಲೆವ್' ಇದು ಈ ದೇವರ ಮೂಲಸನ್ನಿಧಿಯಾಗಿದೆ. ದೇವಾಲಯದ ಸುತ್ತಲ ನಿಸರ್ಗ ಸೌಂದರ್ಯ ನಿಸರ್ಗ ಆರಾಧಕರನ್ನು ಸೆರೆ ಹಿಡಿದುಬಿಡುತ್ತದೆ. ಶಿಲಾ ವಿಗ್ರಹವಾಗಿರುವ ಶ್ರೀ ಗಣಪತಿರವಳನಾಥ ದೇವರಿಗೆ ಹತ್ತು ಕೈಗಳಿವೆ. ಶ್ರೀ ಲಕ್ಷ್ಮೀನಾರಾಯಣ, ಶ್ರೀ ಪೂರ್ವಾಚಾರಿ, ಶ್ರೀ ಲಕ್ಷ್ಮೀನರಸಿಂಹ, ವನದೇವಿ, ಶ್ರೀ ರವಳನಾಥ, ಶ್ರೀ ಭೂತನಾಥ ಇವು ಪರಿವಾರ ದೇವತೆಗಳು.

ಭಾದ್ರಪದ ಚೌತಿಯಂದು ಗಣೇಶೋತ್ಸವವು ವೈಭವದಿಂದ ಜರುಗುವುದು. ಯಜ್ಞ ಮಂಟಪ, ಅತಿಥಿಗೃಹ ದೇವಾಲಯದ ವೈಶಿಷ್ಟ್ಯಗಳಾಗಿವೆ.

## ಮಹಾಲಕ್ಷ್ಮೀ ರವಳನಾಥ ದೇವಾಲಯ, ಹಿರೇಗುತ್ತಿ

ಈ ದೇವಾಲಯದ ಮೂರ್ತಿ ಪ್ರಾಚೀನವಾದುದೆಂದು ತಿಳಿಯಲಾಗಿದೆ. ಕುಮಟಾದಿಂದ ಅಂಕೋಲಕ್ಕೆ ಹೋಗುವ ಮಾರ್ಗದಲ್ಲಿ ಈ ದೇವಾಲಯ ಹಿರೇಗುತ್ತಿ ಗ್ರಾಮದಲ್ಲಿ ರಸ್ತೆಯ ಬದಿಗೇ ಇದೆ. ನವರಾತ್ರಿಯಲ್ಲಿ ಇಲ್ಲಿ ಪ್ರತಿ ದಿನವೂ ಉತ್ಸವಗಳು ಜರುಗುತ್ತವೆ.

ಕುಮುಟಾದಿಂದ 12 ಕಿ. ಮಿ. ದೂರದ ಕಾಗಾಲ ಎಂಬಲ್ಲಿರುವ ದೇವಕೀ ಕೃಷ್ಣ ದೇವಾಲಯದ ಮೂರ್ತಿಯೂ ಪ್ರಾಚೀನವಾದುದೆಂದು ತಿಳಿಯಲಾಗಿದೆ. ದೇವಕೀ ಕೃಷ್ಣಮೂರ್ತಿಗೆ ಬದಿಯಲ್ಲಿ ಎಡ ಬದಿಗೆ ಮಲ್ಲಿನಾಥ, ಬಲಬದಿಗೆ ಗಣಪತಿ, ಭೂಮಿಕಾದೇವಿಯ ಮೂರ್ತಿಗಳಿವೆ. ಅನತಿ ದೂರದಲ್ಲಿ ದಾಡ ಶಂಕರ ದೇವಾಲಯವಿದೆ. ಹಿರೇಗುತ್ತಿ, ಕಾಗಾಲಗಳ ಈ ದೇವಾಲಯಗಳನ್ನು ಹೆಚ್ಚು ಕಡಿಮೆ ಒಂದೇ ಕಾಲಕ್ಕೆ ಸ್ಥಾಪನೆಗೊಂಡವಾಗಿವೆ.

ದೇವಕೀ ಕೃಷ್ಣ ದೇವಾಲಯದಲ್ಲಿ ಮಾರ್ಗಶಿರ ತ್ರಯೋದಶಿಯಂದು ಅಗಸರ ಹಬ್ಬವನ್ನು ಆಚರಿಸುವರು. ಈ ಉತ್ಸವದಲ್ಲಿ ಅಗಸಗಿತ್ತಿಯರು ತಲೆಯ ಮೇಲೆ ಹಣತೆ ಇಟ್ಟು ದೇವರ ಸೇವೆ ಮಾಡುವರು.

## ನಗಿರೆ

ಗೇರ ಸೊಪ್ಪೆಗೆ ನಗಿರೆ, ಹೇಮಪುರ, ಭಲ್ಲಾತಕೀ ಪುರ ಎಂಬ ಹೆಸರುಗಳೂ ಇವೆ. ಹಿಂದಿನ ಅವಶೇಷಗಳನ್ನು ನೋಡಲು ನಗಿರೆಗೆ ಹೋಗಬೇಕು. ನಗಿರೆಯಲ್ಲಿ ಚತುರ್ಮುಖ ಬಸದಿ, ಜ್ವಾಲಾಯೊಲಿನಿ ದೇವಾಲಯ, ಪಾರ್ಶ್ವನಾಥ ಬಸದಿಗಳು ಪ್ರೇಕ್ಷಣೀಯ.

ಹೊನ್ನಾವರದಲ್ಲಿ ಶರಾವತಿ ದಂಡೆಯ ಮೇಲೆಯೇ ಇರುವ ಸಂತ ಸಾಲ್ವಾದೋರರ ಇಗರ್ಜಿ ಇದೆ. ಕ್ರೈಸ್ತರ ಆರಾಧನಾ ಮಂದಿರಗಳು, ಮಹಮದೀಯರ ಪ್ರಾರ್ಥನಾ ಸ್ಥಳಗಳು ಜಿಲ್ಲೆಯ ತುಂಬ ಇವೆ. ಯಲ್ಲಾಪುರದ ದುರ್ಗಾದೇವಾಲಯ ನೋಡತಕ್ಕುದಾಗಿದೆ.

## ಹೆಚ್ಚಿನ ಮಾಹಿತಿಗಳು

ಉತ್ತರ ಕನ್ನಡ ಜಿಲ್ಲೆಯ ಪುಣ್ಯ ಕ್ಷೇತ್ರಗಳೆಂದರೆ ಗೋಕರ್ಣ, ಇಡಗುಂಜಿ, ಯಾಣ, ಸಿರಸಿ, ಮುರ್ಡೇಶ್ವರ, ಸೋದೆ ಈ ಕ್ಷೇತ್ರಗಳು ಪ್ರವಾಸಿಗಳನ್ನು ದಿನ ನಿತ್ಯವೆಂಬಂತೆ ಬರಮಾಡಿಕೊಳ್ಳುತ್ತವೆ. ಇಲ್ಲಿ ಕಾರ್ತಿಕ ಮಾಸದಲ್ಲಿ ಪ್ರಾತಃಕಾಲಕ್ಕೆ ಕೋಟಿ ತೀರ್ಥದಲ್ಲಿ ಸ್ನಾನ ಮಾಡಿ ಲಿಂಗಪೂಜೆ ಮಾಡಿದವನು ಅನಂತ ಫಲವನ್ನು ಪಡೆಯುವನೆಂಬ ಪ್ರತೀತಿ ಇದೆ. ಗೋಕರ್ಣ

ಬಿಲ್ವ ಪತ್ರೆ, ಮಹಾಬಲಿ ಲಿಂಗ, ಶಿವರಾತ್ರಿ ಕಾಲ ಇವು ನಾಲ್ಕೂ ಸಿಗುವುದು ಪುಣ್ಯ ವಿಶೇಷ ಎನ್ನುವರು. ಶಿವರಾತ್ರಿ ಸಮಯದಲ್ಲಿ ಮಾಡಿದ ದಾನವು ಕೋಟಿ ಫಲ ನೀಡುವುವೆಂದು ತಿಳಿಯಲಾಗಿದೆ.

ಸಿರಸಿಯಲ್ಲಿ ದ್ರಾವಿಡ ಶೈಲಿಯಲ್ಲಿ ತ್ರಯಂಬಕೇಶ್ವರ ದೇವಾಲಯವನ್ನು ಹೊಸದಾಗಿ ಕಟ್ಟಿಸಲಾಗಿದೆ. ಸಿರಸಿ ಮಾರಿಕಾಂಬಳ ದಯೆಯಿಂದಲೇ ಕಾಲರಾ, ಪ್ಲೇಗಿನಂತಹ ರೋಗಗಳು ಕಡಿಮೆಯಾಗಿಹೋಗಿವೆ ಎಂದು ಜನ ನಂಬುತ್ತಾರೆ. ಮಾರಿಕಾಂಬಾ ದೇವಿ ಹಿಂದೂ ದೇವತೆಯಾದರೂ ಎಲ್ಲ ಜನಾಂಗದವರಿಗೂ ಆರಾಧ್ಯ ದೈವವಾಗಿರುತ್ತಾಳೆ. ಇಲ್ಲಿ ಹಿಂದು, ಮುಸ್ಲಿಂ, ಕ್ರೈಸ್ತರೆಂಬ ಭೇದ ಭಾವವಿಲ್ಲದೆ ಜನ ಬರುವರು. ಮಾರಿಕಾಂಬಾ ದೇವಿ ಜಾತ್ರೆ ಈ ಸುತ್ತಮುತ್ತಲಲ್ಲಿ ಅತ್ಯಂತ ಪ್ರಸಿದ್ಧಿ. ಭಕ್ತರು ಜಾತ್ರೆಯನ್ನು ಭಕ್ತಿ ಗೌರವಗಳಿಂದ ಆಚರಿಸುವರು. ಜಾತ್ರೆಯು ಹೆಚ್ಚಾಗಿ ಮಂಗಳವಾರ ನಡೆಯುತ್ತದೆ. ಸಿರಸಿ ಪ್ರವಾಸಿ ಕೇಂದ್ರವೂ ಆಗಿದೆ.

ಮುರ್ಡೇಶ್ವರ ಇಂದು ಸಾವಿರಾರು ಪ್ರವಾಸಿಗಳನ್ನು ತನ್ನತ್ತ ಬರಮಾಡಿಕೊಳ್ಳುತ್ತಿದೆ. ಮುರ್ಡೇಶ್ವರದವರೇ ಆದ ಶ್ರೀ ಆರ್. ಎನ್. ಶೆಟ್ಟಿಯವರು ದೇವಸ್ಥಾನದ ನವೀಕರಣ ಮಾಡಿಸಿದ್ದಾರೆ. ದೇವಾಲಯದ ಕಟ್ಟಡವನ್ನು ಆರ್.ಸಿ.ಸಿ. ಕಟ್ಟಡವಾಗಿ ಪರಿವರ್ತಿಸಿದ್ದಾರೆ. ಕನ್ಯಾಕುಮಾರಿಯ ವಿವೇಕಾನಂದ ಸ್ಮಾರಕ ರಚಿಸಿದ ತಮಿಳುನಾಡಿನ ಶಿಲ್ಪಿಗಳನ್ನು ಕರೆಯಿಸಿ ಭವ್ಯವಾದ ದೇವಾಲಯವನ್ನು ನಿರ್ಮಿಸಿದ್ದಾರೆ. ಭಕ್ತಾದಿಗಳನ್ನು ಮೃಡೇಶ್ವರನು ಸುಖವಾಗಿಡುವನು ಎಂಬ ನಂಬಿಕೆ ಇದೆ. ಕಡಲ ತೀರದಲ್ಲಿ ಕಡಲ ಮಧ್ಯೆಯೇ ಕಂಗೊಳಿಸುವ ಕರಾವಳಿ ಪುಣ್ಯ ಕ್ಷೇತ್ರ ಮುರ್ಡೇಶ್ವರ. ಈ ದೇವಾಲಯದ ಸುತ್ತಲೂ ಪವಿತ್ರವಾದ ತೀರ್ಥಗಳಿವೆ. ಇಲ್ಲಿನ ಒಂದು ವಿಶಾಲವಾದ ಕೆರೆಯಲ್ಲಿ ನಡೆಯುವ ತೆಪ್ಪೋತ್ಸವ ಆಕರ್ಷಕ. ಮುರ್ಡೇಶ್ವರ ಒಂದು ಪ್ರಮುಖ ಪ್ರವಾಸೀ ಕೇಂದ್ರವಾಗಿ ರೂಪುಗೊಂಡಿದೆ.

ಭೈರವ ಕ್ಷೇತ್ರ ಯಾಣಕ್ಕೆ ಆ ಹೆಸರು ಬಂದುದೇ ಒಂದು ಸ್ವಾರಸ್ಯ. ಸೊಕ್ಕಿದ್ದರೆ ಯಾಣ ಎನ್ನುವ ಗಾದೆಯಂತೆ ಯಾಣಕ್ಕೆ ಬರಲು ಕಲ್ಲಿನ

ವರ್ಗವನ್ನು ಹತ್ತಿ ಬರಬೇಕಾದ್ದರಿಂದ ಮೊದಲು ಈ ಪ್ರದೇಶಕ್ಕೆ ಕಲ್ಲಿನ ಏಣಿ ಎಂಬ ಹೆಸರು ಇತ್ತು. ಕ್ರಮೇಣ ಅದು ಕಲ್ಲೇಣಿ, ಕಲ್ಯಾಣ ಎಂದು ಆಗಿ ಕಡೆಗೆ 'ಯಾಣ' ಎಂಬ ಹೆಸರು ಉಳಿದುಕೊಂಡಿದೆ. ಯಾಣ ಪ್ರದೇಶದ ಕಪ್ಪುಮಣ್ಣಿನಲ್ಲಿ ಭಸ್ಮಾಸುರನ ಭಸ್ಮ ಕೂಡಿವೆ ಎಂದು ಜನ ನಂಬುವರು. ಯಾಣ ಪುರಾಣ ಪ್ರಸಿದ್ಧವಾದ ಯಾತ್ರಾಸ್ಥಳ.

ಇಡಗುಂಜಿ ಪರಶುರಾಮ ಕ್ಷೇತ್ರ, ಯಾತ್ರಾಸ್ಥಳ. ಈ ಕ್ಷೇತ್ರದಲ್ಲಿ ಮದುವೆ, ಮುಂಜಿಗಳು ನಡೆಯುತ್ತವೆ. ಇದೊಂದು ಸಿದ್ಧಿ ಕ್ಷೇತ್ರ. ಇಲ್ಲಿನ ಗಣೇಶ ವಿಶ್ವ ಸ್ವರೂಪಿ, ವಿಶ್ವ ವ್ಯಾಪಿ. ಉತ್ತರ ಕನ್ನಡ ಜಿಲ್ಲೆಯ ಎರಡು ದ್ವಿಭುಜ ಗಣಪತಿಗಳಲ್ಲಿ ಇದೂ ಒಂದು. ಸಿದ್ಧಿ ವಿನಾಯಕನ ಉತ್ಸವಮೂರ್ತಿ ಪಂಚಲೋಹದಿಂದ ನಿರ್ಮಿತವಾಗಿದ್ದು ಬಲಮುರಿ ಸೊಂಡಿಲಲ್ಲಿ ಅಮೃತ ಪಾತ್ರೆ ಇದೆ. ಇಲ್ಲಿ ಸುಪ್ರಸಿದ್ಧ ಜಾತ್ರೆ ಮಾಘ ಶುದ್ಧ ಬಿದಿಗೆಯಿಂದ ನವಮಿಯವರೆಗೆ ನಡೆಯುತ್ತದೆ. ಪ್ರತಿ ದಿನ ದೇವರಿಗೆ ಪಂಚಕಜ್ಜಾಯ ನೈವೇದ್ಯವಿದೆ.

ಸೋದೆ ವಾದಿರಾಜ ಸ್ವಾಮಿಗಳು ನೆಲಸಿದ ತಾಣ. ಇವರು ಸೋದೆಯ ಅರಸನಾದ ಅರಸಪ್ಪ ನಾಯಕನಿಗೆ ಧೈರ್ಯ ತುಂಬಿದವರು. ಮುಂದೆ ಜಯಶಾಲಿಯಾದ ನಾಯಕ ವಾದಿರಾಜರ ಪರಮ ಭಕ್ತನಾಗಿ ನಡೆದುಕೊಂಡನು. ಸೋದೆಯ ತ್ರಿವಿಕ್ರಮ ದೇವಾಲಯದೆದುರು ತೇರು ಬೀದಿಯ ಪೂರ್ವದಲ್ಲಿ ಇರುವ ದೊಡ್ಡ ಕೆರೆ ಹಯಗ್ರೀವ ಸಮುದ್ರವೆಂದು ಪ್ರಸಿದ್ಧಿ ಪಡೆದಿದೆ. ವಾದಿರಾಜರು ಇಲ್ಲಿ ಸಶರೀರರಾಗಿ ಬೃಂದಾವನ ಪ್ರವೇಶ ಮಾಡಿದರು. ಬೃಂದಾವನಸ್ಥರಾಗಿ ಮುನ್ನೂರ ಎಪ್ಪತ್ತು ವರ್ಷಗಳೇ ಕಳೆದಿವೆ. ಸೋದೆಯಲ್ಲಿ ಪಂಚಬೃಂದಾವನವಿದೆ. ವಾದಿರಾಜರಿಗೆ ತಮ್ಮ ಅವಸಾನಕಾಲ ಪ್ರಾಪ್ತವಾದಾಗ ಅರಸಪ್ಪನಾಯಕನನ್ನು ಕರೆಯಿಸಿ ಬೃಂದಾವನದ ವ್ಯವಸ್ಥೆಗೊಳಿಸಿದರಂತೆ. ರಾಜ ಬೃಂದಾವನವನ್ನು ರಚಿಸಿ ಸುತ್ತಲೂ ಬ್ರಹ್ಮ, ವಿಷ್ಣು, ಮಹೇಶ್ವರ, ವಾಯುದೇವರ ಬೃಂದಾವನಗಳನ್ನು ಸಿದ್ಧ ಮಾಡಿದನು. ಕ್ರಿ.ಶ 1600ರಲ್ಲಿ ವಾದಿರಾಜರು ಬೃಂದಾವನಸ್ಥರಾದರು. ಸಶರೀರರಾಗಿ ಬೃಂದಾವನ ಪ್ರವೇಶ ಮಾಡಿದ ಯತಿಗಳಲ್ಲಿ ವಾದಿರಾಜರೇ ಮೊದಲನೆಯವರು.

ಉತ್ತರ ಕನ್ನಡ ಜಿಲ್ಲೆಯಲ್ಲಿ ಕಾಣಸಿಗುವ ಶಾಸನಗಳು ವೀರಗಲ್ಲುಗಳು ರಾಜ ಮಹಾರಾಜರುಗಳು ದೇವಾಲಯಗಳಿಗೆ ದಾನದತ್ತಿ ನೀಡಿದುದರ ಬಗ್ಗೆ ತಿಳಿಸುತ್ತವೆ ಹಾಗೂ ವೀರರ ಸ್ಮೃತಿ ನೀಡುತ್ತವೆ.

ಕ್ಷತ್ರಿಯರನ್ನೆಲ್ಲ ಸದೆ ಬಡಿಯಬೇಕೆಂಬ ಛಲದಿಂದಲೂ ಬ್ರಾಹ್ಮಣರನ್ನು ಸಂರಕ್ಷಿಸಬೇಕೆಂಬ ಉದ್ದೇಶದಿಂದಲೂ ಕಾರ್ಯೋನ್ಮುಖನಾದ ಪರಶುರಾಮನಿಗೆ ಬ್ರಾಹ್ಮಣರಿಂದಲೇ ಪಿಷ್ಟ ಒದಗಿತು. ಅವನೊಡನೆ ಇರಲು ಅವರಾರೂ ಬಯಸಲಿಲ್ಲ. ಆಗ ಪರಶುರಾಮ ಸಹ್ಯಾದ್ರಿ ಬೆಟ್ಟದ ಮೇಲೆ ನಿಂತು ಸಮುದ್ರದ ಕಡೆಗೆ ಬಾಣ ಬಿಡಲಾಗಿ ಪಶ್ಚಿಮ ಕಡಲ ತೀರ ನಿರ್ಮಾಣವಾಯಿತು ಈ ಪ್ರದೇಶಗಳು ಹೈಗ ಹಾಗೂ ತುಳುವ ಪ್ರದೇಶಗಳೆನಿಸಿದುವು ಹೈಗನಾಡೇ ಉತ್ತರ ಕನ್ನಡ ಸೀಮೆ. ಈ ಸೀಮೆಯನ್ನು ಪರಶುರಾಮನ ಸೃಷ್ಟಿ ಎಂದೂ ಹೇಳುತ್ತಾರೆ.

ಜಿಲ್ಲೆಯ ಬನವಾಸಿಯನ್ನು ಅಂದಗೊಳಿಸಿ ಉತ್ತಮ ಪ್ರವಾಸಾನುಕೂಲಗಳನ್ನು ಕಲ್ಪಿಸಿ ಹಿಂದಿನ ಸಾಮ್ರಾಜ್ಯದ ಸೊಬಗನ್ನು ಅಲ್ಲಿ ಉಂಟು ಮಾಡಿಕೊಡಬಹುದು. ಗೋಕರ್ಣ, ಸ್ವಾದಿ ಕ್ಷೇತ್ರಗಳನ್ನು ಪ್ರವಾಸಾಕರ್ಷಣೆಯ ಕೇಂದ್ರಗಳಾಗಿ ರೂಪಿಸಿ ಪ್ರವಾಸೋದ್ಯಮವನ್ನು ಅಭಿವೃದ್ಧಿಗೊಳಿಸಲೂ ಸಾಧ್ಯವಿದೆ.

ಸಂಗ್ರಾಹ್ಯ ಅಂಶಗಳು

1. ಬನವಾಸಿ ಮಧುಕೇಶ್ವರ ದೇವಾಲಯದಲ್ಲಿರುವ ಕಲ್ಲಿನ ಮಂಚದಲ್ಲಿ 16 ಗಿಳಿಗಳು, ಎಂಟು ಜೋಡಿ ಆನೆ ಮತ್ತು ಸಿಂಹದ ಯಾಳಿ, ಹದಿನೈದು ಕಮಲದ ಹೂಗಳು, 34 ಬೇತಾಳನ ಮುಖಗಳಿವೆ.

2. ದಾಂಡೇಲಿಯಿಂದ 2 ಕಿ.ಮೀ ದೂರದಲ್ಲಿರುವ ಕೇರವಾಡ ಗ್ರಾಮದಲ್ಲಿ ವಿಜಯದಶಮಿ ದಿನ ನಡೆಯುವ 'ದಾಂಡೇಲಿ ಅಪ್ಪ' ಜಾತ್ರೆಗೆ ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಕಿಕ್ಕಿರಿದ ಜನಸಂದಣಿ ಇರುತ್ತದೆ.

3. ಮುರ್ಡೇಶ್ವರ ದೇವಾಲಯದ ಮೇಲೆ ಸಂಪೂರ್ಣರಾಮಾಯಣ ವನ್ನು ಚಿತ್ರಲಾಗಿದೆ. ದೇವಾಲಯದ ಬಳಿಯೇ ತೇಲುವ ರೆಸ್ಟೋರೆಂಟ್ ಇದೆ.

4. ಚಾರಣ ಪ್ರಿಯರಿಗೆ ನಿಸರ್ಗ ರೂಪಿಸಿದ ತಾಣ ಯಾಣ.

5. ತುಡು ಗುಣಗ್ರಾಮದ ಶ್ರೀ ಮಾರಿಕಾಂಬಾದೇವಿಯನ್ನು ಶಿರಸಿ ಮಾರಿಕಾಂಬಾಳ ಸೋದರಿ ಎಂದು ತಿಳಿಯಲಾಗಿದೆ.

6. ಭಟ್ಕಳ ಮಸೀದಿಗಳ ನಗರ ಎಂದು ಖ್ಯಾತಿವೆತ್ತಿದೆ. ಇಲ್ಲಿ 42ಕ್ಕೂ ಹೆಚ್ಚು ಮಸೀದಿಗಳಿದ್ದು ಸಾವಿರ ಜನರಿಗೊಂದರಂತೆ ಮಸೀದಿ ಇದೆ. ಏಕೆಂದರೆ ಇಲ್ಲಿನ ಜನಸಂಖ್ಯೆ 45000.



# ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳು

ಮಲೆನಾಡು ಜಿಲ್ಲೆಗಳಲ್ಲಿ ಚಿಕ್ಕಮಗಳೂರು ಒಂದು. ಕರ್ನಾಟಕದಲ್ಲಿ ಪಶ್ಚಿಮ ಘಟ್ಟಗಳ ಸಾಲು ಕಣ್ಮನ ತಣಿಸುವ ಬೆಟ್ಟ-ಗುಡ್ಡಗಳ ಮಹಾಕೂಟ. ಈ ಸಾಲಿನ ಮಲೆನಾಡ ಜಿಲ್ಲೆ ಚಿಕ್ಕಮಗಳೂರು. ಈ ಜಿಲ್ಲೆಯಷ್ಟು ಎತ್ತರವಾದ ಬೆಟ್ಟಗಳನ್ನು ಪಡೆದ ಜಿಲ್ಲೆ ಬೇರೊಂದಿಲ್ಲ. ನಿಸರ್ಗ ಸಂಪತ್ತಿಗೂ ಹೆಸರಾಗಿದೆ. ಗಿರಿವನಗಳ ಜಿಲ್ಲೆಯಾದ ಚಿಕ್ಕಮಗಳೂರು ಏಳು ತಾಲ್ಲೂಕುಗಳನ್ನು ಹೊಂದಿದೆ. ಚಿಕ್ಕಮಗಳೂರು, ಕಡೂರು, ತರೀಕೆರೆ, ಶೃಂಗೇರಿ, ನರಸಿಂಹರಾಜ ಪುರ, ಮೂಡಿಗೆರೆ ಮತ್ತು ಕೊಪ್ಪ. ಈ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ಮಹತ್ವ ಪಡೆದಿರುತ್ತದೆ. ಜಗದ್ಗುರು ಶಂಕರಾಚಾರ್ಯರು ಈ ಜಿಲ್ಲೆಯ ಪುರಾಣ ಪ್ರಸಿದ್ಧವಾದ ಶೃಂಗೇರಿಯ ಸುತ್ತಲ ಪ್ರಕೃತಿಗೆ ಮನಸೋತು ಅಲ್ಲಿಯೇ ಉಳಿದದ್ದು ಜನಜನಿತವಾದ ಸಂಗತಿ. ಶೃಂಗೇರಿ ಪುಣ್ಯ ಪವಿತ್ರ ಕ್ಷೇತ್ರ. ಇಲ್ಲಿನ ದೇವಾಲಯಗಳು ಅಖಿಲಭಾರತ ಖ್ಯಾತಿವೆತ್ತಿವೆ.

ಚಿಕ್ಕಮಗಳೂರು ನಗರ ಒಂದು ಕಾಲಕ್ಕೆ ಜೈನ ಕೇಂದ್ರವಾಗಿದ್ದಿತು. ಈ ನಗರದ ಒಂದು ಭಾಗವೇ ಆಗಿರುವ ಹಿರೇಮಗಳೂರಿನಿಂದ ಬಸವನ ಹಳ್ಳಿಯ ವರೆಗೆ ಸುಮಾರು ಎಂಟು ಕಿ ಮೀ. ಉದ್ದದ ಸಾರ್ವಜನಿಕ ರಸ್ತೆ ಇದ್ದು ಈ ರಸ್ತೆಯ ಒಂದು ಭಾಗವಾದ ಬಜಾರು ಪೇಟೆಯಲ್ಲಿ ರಾಮೇಶ್ವರ, ಕಟ್ಟೆ ಮಾರಮ್ಮ ದೇವಸ್ಥಾನಗಳಿವೆ. ಕಟ್ಟೆ ಮಾರಮ್ಮ ದೇವಾಲಯದ ಪೂಜಾರರು ಹರಿಜನರು. ಇತ್ತೀಚೆಗೆ ಕಟ್ಟಲಾದ ಕನ್ನಿಕಾ ಪರಮೇಶ್ವರ, ರುಕ್ಮಾಯಿ, ಪಾಂಡುರಂಗ ದೇವಸ್ಥಾನಗಳು ಸುಂದರವಾಗಿವೆ. ಹಿರೇಮಗಳೂರಿನಲ್ಲಿ

ಕೋದಂಡ ರಾಮ ಮತ್ತು ಪರಶುರಾಮ ದೇವಾಲಯಗಳಿವೆ. ಕೋದಂಡ ರಾಮ ದೇವಾಲಯದ ಗರ್ಭಗುಡಿ, ಸುಕನಾಸಿ ಹೊಯ್ಸಳ ಶೈಲಿಯವಾಗಿದ್ದು ಉಳಿದ ಭಾಗಗಳು ದ್ರಾವಿಡ ಶೈಲಿಯವು. ಗರ್ಭಗೃಹದಲ್ಲಿನ ಶ್ರೀ ರಾಮನ ವಿಗ್ರಹ ನಾಲ್ಕುವರೆ ಅಡಿ ಎತ್ತರವಿದೆ. ದೇವಾಲಯದ ಪ್ರಾಕಾರದಲ್ಲಿ ಯೋಗಾನರಸಿಂಹ, ಸುಗ್ರೀವ, ಆಳ್ವಾರರು, ಮಾಧವ ಮೊದಲಾದ ಮೂರ್ತಿಗಳನ್ನೊಳಗೊಂಡ ಸಣ್ಣ ಗುಡಿಗಳಿವೆ. ಈಶ್ವರ, ಕಾಳೀ ದೇವಾಲಯಗಳೂ ಇಲ್ಲಿವೆ. ಈಶ್ವರ ದೇವಾಲಯದ ಎದುರಿಗೆ ಯೂಪಸ್ತಂಭವಿದೆ. ಚಿಕ್ಕ-ಮಗಳೂರಿನ ಸಂಗೇನ್ ಮಸೀದಿ ಒಂದು ಕಲ್ಲು ಕಟ್ಟಡ. ಬಹು ಹಳೆಯದು.

ಅಂಬಳೆ ಚಿಕ್ಕಮಗಳೂರಿಗೆ 8 ಕಿ.ಮೀ. ದೂರದಲ್ಲಿರುವ ಗ್ರಾಮ. ಇಲ್ಲಿ ಚೆನ್ನಿಗರಾಯ, ಲೋಕೇಶ್ವರ, ವೀರಭದ್ರ ಹಾಗೂ ಗೋಪಾಲ ಕೃಷ್ಣ ದೇವಾಲಯಗಳಿವೆ. ಚೆನ್ನಿಗರಾಯ ದೇವಾಲಯವನ್ನು ಎರಡನೆ ಬಲ್ಲಾಳ ಕ್ರಿ.ಶ 1178ರಲ್ಲಿ ಕಟ್ಟಿಸಿದನೆನ್ನುತ್ತಾರೆ. ಲೋಕೇಶ್ವರ ದೇವಸ್ಥಾನದ ನವರಂಗದಲ್ಲಿ ಗಣೇಶ, ಶಿವ, ಪಾರ್ವತಿ, ಷಣ್ಮುಖ, ಸೂರ್ಯ ವಿಗ್ರಹಗಳಿವೆ.

ಚಿಕ್ಕಮಗಳೂರಿಗೆ ಎಂಟು ಕಿ.ಮೀ. ದೂರದಲ್ಲಿನ ದೇವೀರಮ್ಮ ದೇವಾ-ಲಯ ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಈ ಊರಿನ ಕೊಪ್ಪಲದ ಕೈಮರದಲ್ಲಿ ನಿರ್ವಾಣ ಸ್ವಾಮಿ ಎಂಬ ಪವಾಡ ಪುರುಷರ ಮಠ ಹಾಗೂ ಗದ್ದಿಗೆ ಇವೆ ಮಠದ ಗೋಡೆಗಳ ಮೇಲೆ ಸಂತರ ಜೀವನದ ಘಟನೆಗಳನ್ನು ಚಿತ್ರಿಸಲಾಗಿದೆ.

ಬಾಬಾಬುಡನ್ ಗಿರಿ ಒಂದು ಗಿರಿಧಾಮ. ಇಲ್ಲಿ ಇಳಿಜಾರು ಪ್ರದೇಶವೆಲ್ಲ ಕಾಫಿ ಗಿಡಗಳಿಂದ ಕಂಗೊಳಿಸುತ್ತದೆ. ಹಿಂದೆ ಇಲ್ಲಿ ಬಾಬಾಬುಡನ್ ಎಂಬ ಮುಸಲ್ಮಾನ ಫಕೀರರು ವಾಸಿಸುತ್ತಿದ್ದುದರಿಂದ ಗಿರಿಗೆ ಈ ಹೆಸರಿದೆ. ಇಲ್ಲಿನ ಒಂದು ಖ್ಯಾತ ಗವಿಯಲ್ಲಿ ಪ್ರಾಚೀನ ದತ್ತಾತ್ರೇಯ ಪೀಠದಲ್ಲಿ ಇವರ ಸಮಾಧಿ ಇವೆ ಎಂದು ಮುಸ್ಲಿಮರೂ, ಅಲ್ಲಿ ದತ್ತಾತ್ರೇಯನ ಪೀಠವಿದೆ ಎಂದು ಹಿಂದುಗಳು ನಂಬಿದ್ದಾರೆ. ಇಬ್ಬರಿಗೂ ಇದು ಪವಿತ್ರ ಸ್ಥಳವಾಗಿದೆ. ಬಾಬಾಬುಡನರೇ ಮೋಚಾ ಎಂಬಲ್ಲಿಂದ ಕಾಫಿ ಬೀಜಗಳನ್ನು ತಂದು ಕಾಫಿ ಬೆಳೆಯನ್ನು ಇಲ್ಲಿ ರೂಢಿಸಿದರೆಂದು ಹೇಳುತ್ತಾರೆ.

**ಬೆಳವಾಡಿ**

ಚಿಕ್ಕಮಗಳೂರಿಗೆ 29 ಕಿ.ಮೀ. ದೂರದ ಈ ಹಳ್ಳಿಯಲ್ಲಿ ಗಣಪತಿ ದೇವಾಲಯವಿದ್ದು ಮೂರ್ತಿಯನ್ನು ಹುತ್ತದ ಗಣಪತಿ, ಉದ್ಭವ ಗಣಪತಿ ಮತ್ತು ವರದ ಗಣಪತಿ ಎಂದು ಕರೆಯುತ್ತಾರೆ. ಇಲ್ಲಿಗೆ ಸಮೀಪದಲ್ಲಿ ಆಂಜನೇಯ ದೇವಾಲಯವಿದೆ. ಬೆಳವಾಡಿಯ ವೀರನಾರಾಯಣ ದೇವಾಲಯ ಹೊಯ್ಸಳ ವಾಸ್ತುಶಿಲ್ಪಕ್ಕೊಂದು ಉತ್ತಮ ಉದಾಹರಣೆ. ಇಲ್ಲಿ ಮೂರು ದೇವಸ್ಥಾನಗಳಿದ್ದು ಇದು ತ್ರಿಕೂಟಾಚಲ ದೇವಸ್ಥಾನ ಎನ್ನಿಸಿದೆ. ವೀರ ನಾರಾಯಣ, ವೇಣುಗೋಪಾಲ ಹಾಗೂ ಯೋಗಾನರಸಿಂಹ ಇವೇ ಆ ದೇವಸ್ಥಾನಗಳು. ವೀರನಾರಾಯಣ ದೇವಸ್ಥಾನ ಕ್ರಿ.ಶ. 1206ಕ್ಕೂ ಹಿಂದಿನದು. ನವರಂಗದ ದ್ವಾರದಲ್ಲಿ ಗಜಲಕ್ಷ್ಮಿ ಹಾಸುಗಲ್ಲಿದೆ. ನವರಂಗದ ದೊಡ್ಡವಲ್ಲದೆ ಗಂಟೆಯಾಕಾರವಲ್ಲಿದೆ. ಗರ್ಭಗೃಹದ ದ್ವಾರದಲ್ಲಿ ದೊಡ್ಡ ಮೂರ್ತಿ ಶಿಲ್ಪಗಳಿವೆ. ವೀರನಾರಾಯಣನ ವಿಗ್ರಹ ಸುಮಾರು ಏಳು ಅಡಿ ಎತ್ತರವಿದೆ. ಮೂರ್ತಿಗೆ ನಾಲ್ಕು ಕೈಗಳಿದ್ದು ಪದ್ಮಾಸನ ಭಂಗಿಯಲ್ಲಿ ನಿಂತಿದೆ. ಪ್ರಭಾವಳಿ ಸುಂದರ ಕೆತ್ತನೆಯಿಂದ ಕೂಡಿದೆ. ವೇಣುಗೋಪಾಲನ ದೇವಸ್ಥಾನ ದಲ್ಲಿ ಸುಂದರವಾದ ವೇಣುಗೋಪಾಲನ ಮೂರ್ತಿ ಇದೆ.

ಚಿಕ್ಕಮಗಳೂರಿಗೆ 19 ಕಿ.ಮೀ. ದೂರದಲ್ಲಿ ಕುಡುವಳ್ಳಿ ಎಂಬಲ್ಲಿಗೆ 8 ಕಿ.ಮೀ. ದೂರದಲ್ಲಿ ಗೌತಮೇಶ್ವರ ಎಂಬ ಹಳ್ಳಿ ಇದ್ದು ಇಲ್ಲಿ ಒಂದು ಕೊಳದ ದಡದ ಮೇಲೆ ಗೌತಮೇಶ್ವರ ದೇವಾಲಯವಿದೆ. ಇದು ಹೊಯ್ಸಳ ದೇವಾಲಯ. ದೇವಾಲಯ ಗೌತಮೇಶ್ವರನಿಗೆ ಅರ್ಪಿತ. ಕಾಲ ಭೈರವ ಮತ್ತು ಸಪ್ತ ಮಾತೃಕೆಯರ ಮೂರ್ತಿಗಳೂ ಇಲ್ಲಿವೆ.

**ಕಳಸಾಪುರ**

ಚಿಕ್ಕಮಗಳೂರಿನ ಆಗ್ನೇಯಕ್ಕೆ 22 ಕಿ.ಮೀ. ದೂರದಲ್ಲಿದೆ. ಇಲ್ಲಿನ ಚೆಲುವ ನಾರಾಯಣ ದೇವಾಲಯ ಹಳೆಯದು. ದೇವಾಲಯ ಪೂರ್ವಾಭಿ- ಮುಖವಾಗಿದೆ. ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪ ಗಳನ್ನು ಹೊಂದಿದೆ. ಚೆಲುವ ನಾರಾಯಣನ ವಿಗ್ರಹ ಏಳಡಿ ಇದೆ. ಇದೇ ಹಳ್ಳಿಯ ಮಲ್ಲಿಕಾರ್ಜುನ ದೇವಾಲಯ ಹೊಯ್ಸಳ ಶೈಲಿಯ ರಚನೆಯದಾಗಿದೆ

ರಂಗಪ್ಪನಾಯಕನೆಂಬ ಪಾಳೇಗಾರ ಕಟ್ಟಿಸಿದ. ಲಕ್ಷ್ಮೀರಂಗನಾಥ ದೇವಸ್ಥಾನ ಹಾಗೂ ದೊಡ್ಡಮ್ಮ ಮತ್ತು ಕರಾಲಮ್ಮ ದೇವಾಲಯಗಳೂ ಇಲ್ಲಿವೆ.

ಮರಲೆ

ಚಿಕ್ಕಮಗಳೂರಿಗೆ 12 ಕಿ.ಮೀ. ದೂರದಲ್ಲಿದೆ. ಇಲ್ಲಿ ಹಲವು ದೇವಸ್ಥಾನಗಳಿವೆ. ಹಳೆ ಕೆರೆಯೊಂದರ ವಾಯುವ್ಯ ಪಾರ್ಶ್ವಕ್ಕೆ ಎತ್ತರವಾದ ಭೂಮಿಯ ಮೇಲೆ ಕಲಾತ್ಮಕವಾಗಿ ಕಟ್ಟಲಾಗಿರುವ ಚೆನ್ನಕೇಶ್ವರ ದೇವಾಲಯ ಹಾಗೂ ಸಿದ್ಧೇಶ್ವರ ದೇವಾಲಯಗಳಿವೆ.

ಚೆನ್ನಕೇಶ್ವರ ದೇವಾಲಯವನ್ನು ಹೊಯ್ಸಳ ರಾಜ ವಿಷ್ಣುವರ್ಧನನ ಸೇನಾನಿಯಾಗಿದ್ದ ರಾಯಣ ದಂಡನಾಥ ಕಟ್ಟಿಸಿದ್ದ. ಇದರ ಗೋಡೆಗಳ ಮೇಲು ಭಾಗ ಕಲಾತ್ಮಕವಾಗಿದೆ. ಗರ್ಭಗುಡಿಯ ಒಳಗೆ ಸುಮಾರು ಐದು ಅಡಿ ಎತ್ತರದ ಚನ್ನಕೇಶವ ಮೂರ್ತಿ ಇದೆ. ಪ್ರಭಾವಳಿಯ ಮೇಲೆ ವಿಷ್ಣುವಿನ ದಶಾವತಾರಗಳನ್ನು ಕಡೆಯಲಾಗಿದೆ. ದೇವಾಲಯದ ನವರಂಗ ನಾಲ್ಕು ಕಂಬಗಳನ್ನು ಹೊಂದಿದೆ. ಶಿಥಿಲವಾದ ಕಯಾತೇಶ್ವರ, ಭೈರವ, ಕರಾಲಮ್ಮ ದೇವೀರಮ್ಮ ದೇವಸ್ಥಾನಗಳು ಇಲ್ಲಿನ ಇತರ ದೇವಾಲಯಗಳು. ಭೈರವ ದೇವಾಲಯದ ಮುಂದೆ ವೀರಗಲ್ಲುಗಳು, ಉಯ್ಯಾಲೆ ಕಂಬ ಇದೆ.

ಚಿಕ್ಕಮಗಳೂರು ತಾಲ್ಲೂಕಿನ ಹಲಸು ಬಾಳುವಿನ ದೇವೀರಮ್ಮ ಮತ್ತು ಮಲ್ಲದೇವರ ದೇವಾಲಯಗಳು ಕೂಡುವಳ್ಳಿಯಲ್ಲಿ ಹೆಂಚಿನ ಚಾವಣಿಗಳನ್ನು ಹೊಂದಿರುವ ಓನೇಶ್ವರ, ರಾಮೇಶ್ವರ, ಹರಿಹರೇಶ್ವರ ಹಾಗೂ ಸೋಮೇಶ್ವರ ದೇವಾಲಯಗಳಿವೆ. ಮತ್ತಾವರ ಚಿಕ್ಕಮಗಳೂರಿಗೆ ಐದು ಕಿ.ಮೀ. ದೂರ ದಲ್ಲಿದೆ. ಇಲ್ಲಿ ಪಾರ್ಶ್ವನಾಥನ ಬಸದಿ, ಚೌಡೇಶ್ವರ ದೇವಾಲಯ ಮತ್ತಿತರ ದೇವಾಲಯಗಳಿವೆ. ಹಂಪಾಪುರ, ಮತ್ತಿನಪುರ, ಪಂಡರವಳ್ಳಿ, ಸಿಂದಿಗೆರೆ, ತೇಗೂರು. ಉಪ್ಪಳ್ಳಿ, ಕೋಟೆ ಊರು, ಬಿಸಗ್ನಿಮಠ ಇಲ್ಲೆಲ್ಲ ದೇವಸ್ಥಾನ ಗಳಿರುತ್ತವೆ. ಬಾಬಾಬುಡನ್ ಗಿರಿಯ ಮೇಲಿರುವ ಇನಾಮ್ ದತ್ತಾತ್ರೇಯ ಪೀಠವನ್ನು ಹಜರತ್ ದಾದಾ ಹಯಾತ್ ಮೀರ್ ಖಲಂದರ್ ಮತ್ತು ಇತರ ಸಂತರು ಪವಿತ್ರಗೊಳಿಸಿರುತ್ತಾರೆ. ಈ ಪರ್ವತ ಶ್ರೇಣಿಯ ಮುತ್ತಿನ ಪುರದಲ್ಲಿ ಶ್ರೀ ಗುರು ದತ್ತಾತ್ರೇಯಅದಿ ಗದ್ದುಗೆ ಇನಾಮ್ ಬಿಸಗ್ನಿ ಮಠವೆಂಬ ವೀರಶೈವ

ಮಠವಿದೆ. ಇದರ ಆವರಣದಲ್ಲಿ ಶಿವಾಲಯವಿದೆ.

**ಲಕ್ಷ್ಮೀಕಾಂತ ದೇವಾಲಯ, ದೇವನೂರು**

ಜೈಮಿನಿ ಭಾರತವನ್ನು ಬರೆದ ಲಕ್ಷ್ಮೀಶ ಕವಿ ವಾಸಿಸುತ್ತಿದ್ದ ಊರು ದೇವನೂರು. ಇಲ್ಲಿ ಶ್ರೀ ಲಕ್ಷ್ಮೀಕಾಂತ ದೇವಾಲಯವಿದೆ. ಕಡೂರಿಗೆ 20ಕಿ.ಮೀ. ದೂರದ ದೇವನೂರು ಹಲವು ಹತ್ತು ಗುಡಿಗಳ ಬೀಡೂ ಆಗಿದೆ.

ಲಕ್ಷ್ಮೀಕಾಂತ ದೇವಾಲಯ ಹದಿನೆಂಟು ಅಂಕಣ ವಿಸ್ತಾರವಾದ ಮುಖ-ಮಂಟಪವನ್ನು ಹೊಂದಿದೆ. ಗರ್ಭಗೃಹ, ಸುಕನಾಸಿ, ಕೈಸಾಲೆಗಳಿವೆ. ಪಕ್ಕದಲ್ಲಿ ಲಕ್ಷ್ಮಿಗುಡಿ ಇದೆ. ಮುಖ್ಯ ದೇವಾಲಯದಲ್ಲಿ ವೈಕುಂಠ ನಾರಾಯಣ ಶ್ರೀದೇವಿ, ಭೂದೇವಿ ಮೂರ್ತಿಗಳಿವೆ. ಕುಳಿತ ಭಂಗಿಯಲ್ಲಿರುವ ಆಳ್ವಾರರ ವಿಗ್ರಹಗಳೂ ಇವೆ.

ಬನಶಂಕರಿ, ಸಿದ್ಧೇಶ್ವರ, ಆಂಜನೇಯ, ವೀರಭದ್ರ, ಅಂತರಘಟ್ಟಮ್ಮ ಇವು ದೇವನೂರಿನ ಇತರ ದೇವಾಲಯಗಳು. ಶ್ರೀ ಸಿದ್ಧೇಶ್ವರ ದೇವಾಲಯದ ಶಿಲ್ಪಕಲೆ ಗಮನಾರ್ಹವಾಗಿದೆ.

ತಾಲ್ಲೂಕು ಕೇಂದ್ರವಾದ ಕಡೂರಿನಲ್ಲಿ ಪ್ರಸನ್ನ ಗಂಗಾಧರೇಶ್ವರ, ಆಂಜನೇಯ ದೇವಸ್ಥಾನಗಳಿವೆ. ಆಂಜನೇಯ ಗುಡಿಯ ಕಂಬಗಳಲ್ಲಿ ರಾಷ್ಟ್ರ-ಕೂಟರ ಕಾಲದ ಕೆತ್ತನೆಗಳಿವೆ. ಕೋಟೆಯಲ್ಲಿ ಶ್ರೀಲಕ್ಷ್ಮೀ ಚೆನ್ನಕೇಶವ ಸ್ವಾಮಿ ದೇವಸ್ಥಾನವಿದೆ. ಇಲ್ಲಿಯ ವಿಗ್ರಹ ಸುಂದರ ಕೆತ್ತನೆಯಿಂದ ಕೂಡಿದೆ.

ಶ್ರೀ ಕನ್ನಿಕಾ ಪರಮೇಶ್ವರಿ ದೇವಸ್ಥಾನ, ವೀರಭದ್ರ ಸ್ವಾಮಿ, ಕಂಚಾಂಬ, ವಿಠಲ, ಶ್ರೀ ಗುರು ರಾಘವೇಂದ್ರ ಸ್ವಾಮಿಗಳ ಬೃಂದಾವನ ಇವು ಕಡೂರಿನ ಇನ್ನಿತರ ಗುಡಿಗಳು.

ಕಡೂರಿಗೆ 20 ಕಿ.ಮೀ. ದೂರದಲ್ಲಿನ ಅಸಂದಿಯಲ್ಲಿ ಹಲವು ಶಿವ ದೇವಾಲಯಗಳಿವೆ. ಇಲ್ಲಿನ ವೀರಭದ್ರ ದೇವಸ್ಥಾನವನ್ನು ಕ್ರಿ.ಶ. 1205ರಲ್ಲಿ ಹೊಯ್ಸಳ ರಾಜರ ಮಂತ್ರಿಯೊಬ್ಬ ಕಟ್ಟಿಸಿದನೆನ್ನಲಾಗಿದೆ. ಈ ದೇವಾಲಯ ದಲ್ಲಿ ವೀರಭದ್ರ ದೇವರೇ ಅಲ್ಲದೆ ಕೇಶವ, ಸದಾಶಿವ, ಜನಾರ್ಧನ ಮೊದಲಾದ ವಿಗ್ರಹಗಳಿವೆ. ಚಂಡಿಕೇಶ್ವರ, ಗಂಗೇಶ್ವರ, ಬ್ರಹ್ಮೇಶ್ವರ, ರೇವಣ ಸಿದ್ಧೇಶ್ವರ

ಬೀರ ಲಿಂಗೇಶ್ವರ ಮೊದಲಾದ ದೇವಾಲಯಗಳು ಇಲ್ಲಿದ್ದು ಇಲ್ಲಿನ ಕೆಲವು ದೇವಾಲಯಗಳಲ್ಲಿ ಬಾದಾಮಿ ದೇವಾಲಯದ ಶಿಲ್ಪ ಕಲೆಯನ್ನು ಹೋಲುವ ಕೆತ್ತನೆ ಕೆಲಸಗಳನ್ನು ಕಾಣಬಹುದಾಗಿದೆ. ಆಸಂದಿಯಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ಬೀರ ಲಿಂಗೇಶ್ವರ ಜಾತ್ರೆ ನಡೆಯುತ್ತದೆ. ಇಲ್ಲಿ ವೀರಭದ್ರ ಸ್ವಾಮಿಗೆ ನಡೆಯುವ ಕೆಂಡದರ್ಶನೆ ವಿಶಿಷ್ಟವಾದುದು.

ಕಡೂರಿಗೆ ಸಮೀಪದಲ್ಲಿರುವ ಬ್ರಹ್ಮ ಸಮುದ್ರ ಎಂಬ ಹಳ್ಳಿಯಲ್ಲಿನ ನಾರಾಯಣ ದೇವಸ್ಥಾನ ಕ್ರಿ.ಶ. 1172ರಲ್ಲಿ ಹೊಯ್ಸಳ ರಾಜನ ಪ್ರಧಾನಿಯಾಗಿದ್ದ ಆಚಿರಾಜನು ಕಟ್ಟಿಸಿದ್ದೆನ್ನಲಾಗಿದೆ. ದೇವಾಲಯದ ಕೆತ್ತನೆ ಕೆಲಸಗಳು ಅತ್ಯುತ್ತಮವಿದ್ದು ಗರುಡ ಪೀಠದ ಮೇಲೆ ನಿಂತಿರುವ ಆರು ಅಡಿ ಎತ್ತರದ ಲಕ್ಷ್ಮೀ ನಾರಾಯಣ ವಿಗ್ರಹ ಅತ್ಯಂತ ಸುಂದರವಾಗಿದೆ. ಇದಲ್ಲದೆ ಹೊಯ್ಸಳ ಶಿಲ್ಪಕ್ಕೆ ಉತ್ತಮ ಉದಾಹರಣೆ ಎನ್ನಬಹುದಾದ ವೇಣುಗೋಪಾಲ, ಯೋಗಾನರಸಿಂಹ, ಗಣಪತಿ ಮೊದಲಾದ ಮೂರ್ತಿಗಳಿವೆ.

ಕಡೂರಿನ ಪೂರ್ವಕ್ಕೆ ಎರಡೂ ಕಿ.ಮೀ. ದೂರದಲ್ಲಿರುವ ಮಲ್ಲೇಶ್ವರ ಗ್ರಾಮದಲ್ಲಿ ಮಲ್ಲಿಕಾರ್ಜುನ ಹಾಗೂ ಸ್ವರ್ಣಾಂಬ ದೇವಸ್ಥಾನಗಳಿವೆ. ಸ್ವರ್ಣಾಂಬ ದೇವಸ್ಥಾನದ ಗರ್ಭಗುಡಿ ಮತ್ತು ವೈಕುಂಠದ್ವಾರ ಗಮನಾರ್ಹ. ಈ ದೇವರಿಗೆ ಮಲ್ಲೇಶ್ವರದಮ್ಮ ಎಂದೂ ಹೆಸರಿದೆ. ಇದೇ ದೇವಸ್ಥಾನದ ಎದುರಿಗೆ ಕೆಂಚಮ್ಮ, ಚೌಡಮ್ಮ ಹಾಗೂ ದುರ್ಗಮ್ಮರ ಗುಡಿಗಳಿವೆ. ಮಚೇರಿಯ ಕೇಶವ ಹಾಗೂ ಯೋಗಾ ನರಸಿಂಹ, ತುರುವಿನ ಹಳ್ಳಿಯ ಕಾಲ ಭೈರವೇಶ್ವರ ದೇವಸ್ಥಾನ, ಹಿರಿಯಂಗಳದ ಆರು ಅಡಿ ಎತ್ತರದ ಬೃಹತ್ ಲಿಂಗವಿರುವ ಶಿವಾಲಯ, ಹಿರೇನಲ್ಲೂರಿನ ಮಲ್ಲಿಕಾರ್ಜುನ ದೇವಾಲಯ, ಪಟ್ಟಗೆರೆ ಗ್ರಾಮದ ದೇವಾಲಯಗಳು, ಯಗಟಿಯ ವೀರ ನಾರಾಯಣ, ಬಸವೇಶ್ವರ, ಗಣಪತಿ ಗುಡಿಗಳು, ಯಳ್ಳಂಬಳಸೆಯ ಕೇಶವ ದೇವಸ್ಥಾನ, ಸಖರಾಯ ಪಟ್ಟಣದ ಶಕುನಿ ರಂಗನಾಥಸ್ವಾಮಿ ಹಾಗೂ ಚತುರ್ಭುಜ ರಾಮ ವಿಗ್ರಹಗಳಿರುವ ದೇವಾಲಯ, ಪುರಗ್ರಾಮದ ಪ್ರಸನ್ನ ಮಲ್ಲಿಕಾರ್ಜುನ ಸ್ವಾಮಿ ದೇವಾಲಯ ಇವು ಕಡೂರು ತಾಲ್ಲೂಕಿನ ಇತರ ಪ್ರಮುಖ ದೇವಾಲಯಗಳು.

ನಗರಾವತಿ ಕಡೂರಿಗೆ ಏಳು ಕಿ.ಮೀ. ದೂರದಲ್ಲಿದ್ದು ಇಲ್ಲಿ ನಗರೇಶ್ವರ, ಯೋಗಾನರಸಿಂಹ, ಬಳ್ಳಕ್ಕಿ ನರಸಿಂಹ, ವೇಣುಗೋಪಾಲ ಮೊದಲಾದ ವಿಜಯನಗರ ಹಾಗೂ ಹೊಯ್ಸಳರ ಕಾಲಕ್ಕೆ ಸೇರಿದ ದೇವಾಲಯಗಳಿವೆ.

ಬೀರೂರು ಕಡೂರು ತಾಲ್ಲೂಕಿನ ಎರಡನೆಯ ಮುಖ್ಯ ಪಟ್ಟಣ. ಐತಿಹಾಸಿಕವಾಗಿಯೂ ಈ ಊರು ಹೆಸರಾಗಿದೆ. ಹೊಯ್ಸಳರ ಕಾಲದಲ್ಲಿ ಇದು ಮುಖ್ಯ ಸ್ಥಳವಾಗಿದ್ದಿತು. ಈ ಊರಿನಲ್ಲಿ ಕನ್ನಿಕಾಪರಮೇಶ್ವರಿ, ರಾಮ ದೇವರು, ವೀರಭದ್ರ, ಆಂಜನೇಯ, ಜೈನ ದೇವಾಲಯಗಳಿವೆ. ಇಲ್ಲಿ ಪ್ರತಿ ವರ್ಷ ನಡೆಯುವ ವೀರಭದ್ರಸ್ವಾಮಿ ಜಾತ್ರೆ ಹೆಸರಾದುದು. ಅಂತರ ಘಟ್ಟಮ್ಮ, ಮೈಲಾರ ಲಿಂಗ ಇಲ್ಲಿನ ಇತರ ದೇವಾಲಯಗಳು.

ಪಂಚನಹಳ್ಳಿ ಚಿಕ್ಕಮಗಳೂರು, ಹಾಸನ, ತುಮಕೂರು ಮತ್ತು ಚಿತ್ರದುರ್ಗ ಈ ನಾಲ್ಕೂ ಜಿಲ್ಲೆಗಳ ಗಡಿಗಳನ್ನು ಸಂಧಿಸುವ ಗ್ರಾಮವಾಗಿದ್ದು ಇಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಈಶ್ವರ ದೇಗುಲಗಳಿವೆ. ಪಂಚ ಲಿಂಗೇಶ್ವರ, ಬೀರ ಲಿಂಗೇಶ್ವರ, ದುರ್ಗಾಂಬ ಹಾಗೂ ಬಸವಣ್ಣ ದೇವಸ್ಥಾನ ಗಳೂ ಇವೆ.

ಸಖರಾಯ ಪಟ್ಟಣ (ಸಕ್ರೆಪಟ್ನ)ಕ್ಕೆ ಸಮೀಪದಲ್ಲಿ ಕಲ್ಲು ಮಠದೇಶ್ವರ ಸ್ವಾಮಿ ದೇವಸ್ಥಾನವಿದ್ದು ಈ ಸ್ಥಳದಲ್ಲಿ ಖ್ಯಾತ ಶಿವಶರಣರಾಗಿದ್ದ ಅಯ್ಯಯ್ಯ ಸ್ವಾಮಿ ಸಮಾಧಿ ಇರುತ್ತದೆ. ಅಯ್ಯನ ಕೆರೆ ಸಕ್ರೆ ಪಟ್ನಕ್ಕೆ ಐದು ಕಿ.ಮೀ, ದೂರದಲ್ಲಿರುವ ಸುಂದರ ವಿಹಾರ ಸ್ಥಳ. ಇದೊಂದು ಜಲಾಶಯ, ಕೆರೆ ಏರಿಯ ಗುಡ್ಡದ ಮೇಲೆ ಪ್ರಸನ್ನ ಬಲ್ಲಾಳೇಶ್ವರ (ಬಳ್ಳೇಶ್ವರ) ದೇವಾಲಯವಿದೆ. ಈ ಗುಡಿಯ ಸನಿಹದಲ್ಲಿ ಗಣಪತಿ, ಸೂರ್ಯ, ಕೇಶವ ಹಾಗೂ ಪಾರ್ವತಿಯರ ವಿಗ್ರಹಗಳಿವೆ. ಕಡೂರು ಬಾಣಾವರ ಮಧ್ಯೆ ಸಿಗುವ ಕೆರೆ ಸಂತೆ ಗ್ರಾಮದ ವಿಷ್ಣು ಸಮುದ್ರಕೆರೆ ಪಕ್ಕದ ಹೇಮಗಿರಿಯ ಮೇಲೆ ಶಿವಾಲಯವಿದೆ. ಇಲ್ಲಿನ ಮೂರ್ತಿಗೆ ದಕ್ಷಿಣಾಮೂರ್ತಿ ಎಂದು ಕರೆಯುತ್ತಾರೆ. ಇಲ್ಲಿಯೇ ವೀರಭದ್ರ, ಜನಾರ್ಧನ ಹಾಗೂ ಶಂಭುಲಿಂಗೇಶ್ವರ ಮೂರ್ತಿಗಳಿರುವ ದೇವಾಲಯಗಳೂ ಇವೆ.

ಕಡೂರು ತಾಲ್ಲೂಕಿನ ದೊಡ್ಡ ಗ್ರಾಮವಾದ ಚಾಳು ಹಿರಿಯೂರಿನಲ್ಲಿ ಹೊಯ್ಸಳರ ಕಾಲದ ಸೋಮೇಶ್ವರ, ಭೋಗ ನಂದೀಶ್ವರ, ಕಲ್ಲೇಶ್ವರ ದೇವಸ್ಥಾನಗಳು ಹಾಗೂ ಕರೀಮ್ ಷಾವಲಿ ಮತ್ತು ಬುಡನ್ ಷಾವಲಿಯುವರ ದುರ್ಗಾಗಳಿವೆ. ತಂಗಲಿ ಎಂಬ ಅಗ್ರಹಾರ ಗ್ರಾಮದ ಕೇಶವ, ಯೋಗ ನರಸಿಂಹ ವಿಗ್ರಹಗಳಿರುವ ದೇವಾಲಯು ನೋಡತಕ್ಕುದಾಗಿದೆ.

## ಕಳಸೇಶ್ವರ ದೇವಸ್ಥಾನ, ಕಳಸ

ಕಳಸ ಮೂಡಿಗೆರೆಯು ಪಶ್ಚಿಮಕ್ಕೆ 60 ಕಿ.ಮೀ. ದೂರದಲ್ಲಿದೆ. ಇದು ಭದ್ರಾ ನದಿ ದಂಡೆಯು ಮೇಲಿರುವ ಐದು ಪುಣ್ಯ ಕ್ಷೇತ್ರಗಳಲ್ಲಿ ಒಂದು. ಕಲಶದಿಂದ ಉದ್ಭವಿಸಿದ ಅಗಸ್ತ್ಯ ಋಷಿಗಳು ಇಲ್ಲಿ ನದಿ ದಡದ ಮೇಲೆ ಒಂದು ಗುಡಿಸಲನ್ನು ಕಟ್ಟಿಕೊಂಡು ವಾಸಿಸುತ್ತಿದ್ದರೆನ್ನಲಾಗಿದೆ. ಸಾಂತಾರರ ರಾಣಿ ಕಾಳಲ ಮಹಾದೇವಿ ಕಳಸನಾಥನಿಗೆ ಭಕ್ತಳಾಗಿದ್ದಳು. ಈ ಸಮಯುದಲ್ಲಿ ಕಳಸವನ್ನು ಸಾಸಿರಸೀಮೆ ಎಂದು ಕರೆಯುತ್ತಿದ್ದರು.

ಇಲ್ಲಿ ಕಳಸೇಶ್ವರ ದೇವಸ್ಥಾನ ಊರಿನ ಪೂರ್ವದ ಒಂದು ಸಣ್ಣ ಗುಡ್ಡದ ಮೇಲಿದೆ. ಈ ಗುಡಿಯನ್ನು ಸಾಂತಾರರ ದೊರೆ ಜೀರ್ಣೋದ್ಧಾರ ಮಾಡಿದನೆನ್ನಲಾಗಿದೆ. ಉತ್ತರದ ಕಡೆಗೆ ಓರೆಯಾಗಿರುವ ಲಿಂಗವೊಂದು ಗರ್ಭ ಗುಡಿಯಲ್ಲಿದೆ. ದೇವಾಲಯದ ಮುಖ್ಯ ಕಟ್ಟಡ ವಿಜಯನಗರ ವಾಸ್ತು ಶೈಲಿಯುದು. ಸುಂದರ ಕೆತ್ತನೆ ಇರುವ ಭುವನೇಶ್ವರಿ ಗಮನ ಸೆಳೆಯುತ್ತದೆ. ದೇವಾಲಯದ ದ್ವಾರದಲ್ಲಿ ಗಣಪತಿಯು ಸಣ್ಣ ಗುಡಿಯೊಂದು ಇದ್ದು ಹೊಯ್ಸಳ ವಾಸ್ತು ಶೈಲಿಯುದಾಗಿದೆ. ಪಕ್ಕದಲ್ಲಿ ಕ್ಷೇತ್ರಪಾಲ ದೇವಸ್ಥಾನವಿದ್ದು ಇದರ ಸುತ್ತ ಪ್ರಾಣಿಗಳ ಶಿಲ್ಪದ ಸಾಲಿದೆ.

ಕ್ಷೇತ್ರಪಾಲ ದೇವಸ್ಥಾನದ ಎದುರಿಗೆ ಸರ್ವಜ್ಞ ಸುಂದರಿ ಅಮ್ಮನವರು ಎನ್ನಲಾಗುವ ಪಾರ್ವತಿ ಗುಡಿ ಇದೆ. ಕಳಸದಲ್ಲಿ ಬಿಂದು ಮಾಧವ ದುರ್ಗ, ಕಾಲ ಭೈರವೇಶ್ವರ, ಗಂಗಾಧರೇಶ್ವರ ಅಂಜನೇಯ, ವೀರ ನಾರಾಯಣ, ಗೋಪಾಲ ಕೃಷ್ಣ, ಚಂದ್ರನಾಥ ಬಸದಿ ಮೊದಲಾದ ದೇವಾಲಯಗಳೂ ಇವೆ.

ಭದ್ರಾ ನದಿಯಲ್ಲಿ ಬಂಡೆಗಳ ನಡುವೆ ಒಂದು ದೊಡ್ಡ ಚೌಕಾಕಾರದ ಕಲ್ಲನ್ನು ಮಧ್ವಾಚಾರ್ಯರ ಬಂಡೆ ಅಥವಾ ಭೀಮನ ಕಲ್ಲು ಎಂದು ತೋರಿಸುತ್ತಾರೆ. ಆಚಾರ್ಯರು ಒಂದೇ ಕೈಯಲ್ಲಿ ಈ ಕಲ್ಲನ್ನು ಹಿಡಿದು ತಂದು ಕೂರಿಸಿದರೆನ್ನುತ್ತಾರೆ.

ಕಳಸದಿಂದ ಆರು ಕಿ.ಮೀ. ದೂರದಲ್ಲಿ ಹೊರನಾಡು ಒಂದು ಪುಣ್ಯ ಕ್ಷೇತ್ರ, ಇಲ್ಲಿ ಪುರಾತನ ಕಾಲದ ಅನ್ನಪೂರ್ಣೇಶ್ವರಿ ದೇವಸ್ಥಾನವಿದೆ. ತಾವರೆ ಹೂವಿನ ಮೇಲೆ ಎದ್ದು ನಿಂತ ಹಾಗೆ ಕಲ್ಲಿನಲ್ಲಿ ಈಚೆಗೆ ಕಟ್ಟಲಾದ ದೇವಸ್ಥಾನವಿದೆ. ಹಳೆಯ ದೇವಸ್ಥಾನ ಶಿಥಿಲವಾದ್ದರಿಂದ ನೂತನವಾಗಿ ಗುಡಿ ನಿರ್ಮಿಸಲಾಗಿದೆ. ಗರ್ಭಗುಡಿಯಲ್ಲಿರುವ ಅನ್ನಪೂರ್ಣೇಶ್ವರಿ ವಿಗ್ರಹ ಸುಂದರವಾಗಿದೆ. ದೇವಿಯ ತಲೆಯ ಮೇಲೆ ಏಳು ಹೆಡೆ ನಾಗೇಂದ್ರನು ತನ್ನ ಹೆಡೆ ಬಿಚ್ಚಿರುವ ಹಾಗಿರುವ ಶಿಲ್ಪ ಕುತೂಹಲಕಾರಿ. ಪ್ರತಿನಿತ್ಯ ಇಲ್ಲಿ ಭಕ್ತಾದಿಗಳಿಗೆ ಅನ್ನದಾನ ನಡೆಯುತ್ತದೆ.

## ವಾಸಂತಿಕಾ ದೇವಾಲಯ, ಅಂಗಡಿ

ಅಂಗಡಿ ಮೂಡಿಗೆರೆಗೆ 18 ಕಿ.ಮೀ. ದೂರದಲ್ಲಿರುವ ಈ ಊರು ಹೊಯ್ಸಳ ರಾಜರ ಮೂಲಸ್ಥಾನ ಎಂದು ತಿಳಿಯಲಾಗಿದೆ. ಸಳನೆಂಬುವನು ಸುದತ್ತಾಚಾರ್ಯ ಗುರುಗಳ ಆದೇಶದಂತೆ ಪರೀಕ್ಷಕವಾಗಿದ್ದ ಹುಲಿಯೊಂದನ್ನು ಕೊಂದದ್ದು ಈ ಊರಿನಲ್ಲೇ ಎಂದು ತಿಳಿಯಲಾಗಿದೆ. ಹೊಯ್ಸಳ ಎಂದು ಗುರುಗಳು ಹೇಳಿದ್ದರಿಂದ ಸಳನ ವಂಶ ಹೊಯ್ಸಳ ವಂಶವೆಂದು ಹೆಸರಾಯಿತೆನ್ನುತ್ತಾರೆ.

ಅಂಗಡಿಗೆ ಸೊಸೆವೂರು, ಶಶಕಪುರ ಎಂದೂ ಹೆಸರುಗಳಿದ್ದವು. ಈ ಊರಿನ ಮುಖ್ಯ ದೇವತೆ ವಾಸಂತಿಕಾ ಅಥವಾ ವಸಂತಮ್ಮ. ಹೊಯ್ಸಳರ ಮನೆ ದೇವರು ಈಕೆಯೇ ಎಂದು ತಿಳಿಯಲಾಗಿದೆ. ಇಲ್ಲಿರುವ ವಾಸಂತಿಕಾ ದೇವಾಲಯದ ಗರ್ಭಗುಡಿಯಲ್ಲಿ ಐದು ದೇವಿಯರ ದೊಡ್ಡ ಆಕೃತಿಗಳಿದ್ದು ನಡುವಿನ ದೇವತೆಯೇ ವಾಸಂತಿಕಾ. ದೇವತೆಯ ತಲೆಯ ಮೇಲೆ ಹೆಡೆ ಬಿಚ್ಚಿದ ಏಳು ಹೆಡೆ ಹಾವಿನಾಕೃತಿಯ ಪ್ರಭಾವಳಿ ಆಕರ್ಷಕವಾಗಿದೆ. ಈ ದೇವಾಲಯ ಹೆಂಚು ಹೊದಿಕೆಯಿಂದ ಕೂಡಿದೆ.

ಅಂಗಡಿಯ ಕೇಶವ ದೇವಾಲಯದ ಕೇಶವ ವಿಗ್ರಹ ಅತ್ಯಂತ ಸುಂದರ ವಾಗಿದೆ. ನಿಂತ ಭಂಗಿಯ ಈ ಮೂರ್ತಿ ಗಮನ ಸೆಳೆಯುತ್ತದೆ. ಇದೊಂದು ಅತ್ಯುತ್ತಮ ಹೊಯ್ಸಳ ಶಿಲ್ಪವಾಗಿರುತ್ತದೆ. ಇದಲ್ಲದೇ ಪಾತಾಳರುದ್ರೇಶ್ವರ ಮಲ್ಲೇಶ್ವರ ದೇವಾಲಯಗಳು, ಮಕರ ಜಿನಾಲಯ ಹಾಗೂ ನೇಮಿನಾಥ ಬಸದಿಗಳೂ ಈ ಊರಿನಲ್ಲಿವೆ. ನೇಮಿನಾಥ, ಚಂದ್ರನಾಥ, ಗೊಮ್ಮಟೇಶ್ವರ ಮೂರ್ತಿಗಳಿವೆ. ಅಷ್ಟದಿಕ್ಪಾಲಕರ ಆಕೃತಿಗಳು, ಯಕ್ಷಯಕ್ಷಿಯರ ಶಿಲ್ಪ ಗಳೂ ಇದ್ದು ಕುತೂಹಲ ಮೂಡಿಸುತ್ತವೆ.

**ಗೋಣಿಬೀಡು**

ಮೂಡಿಗೆರೆಯಿಂದ 12 ಕಿ.ಮೀ. ದೂರದ ಈ ಚಿಕ್ಕ ಊರಿನಲ್ಲಿ ಗೋಣಾಸುರ ಎಂಬ ರಾಕ್ಷಸನನ್ನು ಸುಬ್ರಹ್ಮಣ್ಯ ಸ್ವಾಮಿ ಕೊಂದನೆಂದು ಹೇಳುತ್ತಾರೆ. ಇಲ್ಲಿ ಹೊಯ್ಸಳರ ಕಾಲದಲ್ಲಿ ಕಟ್ಟಿದ ಸುಬ್ರಹ್ಮಣ್ಯೇಶ್ವರ ಸ್ವಾಮಿ ದೇವಸ್ಥಾನವಿದೆ. ಇದು ಗೋಣಬೀಡಿಗೆ 2 ಕಿ.ಮೀ. ದೂರದಲ್ಲಿದೆ. ಇಲ್ಲಿ ಹೇಮಾವತಿ ನದಿ ಹರಿಯುತ್ತದೆ.

ಮೂಡಿಗೆರೆಯ ವೇಣುಗೋಪಾಲ ಸ್ವಾಮಿ, ಪರಿಮಳಮ್ಮ ದೇವಸ್ಥಾನ ಗಳು, ದೇವರ ಮನೆ ಗ್ರಾಮದ ಭೈರವೇಶ್ವರ ದೇವಸ್ಥಾನ, ಬಳಸೆ ಗ್ರಾಮದ ರಾಮೇಶ್ವರ ಗುಡಿ, ದುರ್ಗದ ಹಳ್ಳಿಯ ಕಾಲಭೈರವ ದೇವಾಲಯ, ಮಲ್ಲೇ-ಶ್ವರ (ಕುದುರೆ ಮುಖ)ದಲ್ಲಿ ಹೊಸದಾಗಿ ಕಟ್ಟಲಾಗಿರುವ ರಾಧಾಕೃಷ್ಣ ಮಂದಿರ ಫಲ್ಗುಣಿಯಲ್ಲಿನ ಕಾಲನಾಥೇಶ್ವರ ದೇವಾಲಯ ಇವು ಮೂಡಿಗೆರೆ ತಾಲ್ಲೂಕಿನ ಇತರ ದೇವಾಲಯಗಳಾಗಿವೆ. ಫಲ್ಗುಣಿ, ಕಳಸಗಳಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಆಗ ರಥೋತ್ಸವಗಳಾಗುತ್ತವೆ. ಹಳಸೆ ರಾಮೇಶ್ವರ ಗುಡಿ ಯನ್ನು ನವೀಕರಿಸಲಾಗಿದ್ದು ಗೋಪುರ ಆಕರ್ಷಕವಾಗಿರುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿ ಮುಗ್ಗಲಮ್ಮ, ಮೇಣಸಮ್ಮ, ಬಾಸಮ್ಮ, ಮಾರಮ್ಮ ಮೊದ-ಲಾದ ಗ್ರಾಮೀಣ ದೇವತೆಗಳ ಗುಡಿಗಳಿದ್ದು ಈ ದೇವತೆಗಳಿಗೆ ವರ್ಷಾಕಾಲ ಪೂಜೆ ನೈವೇದ್ಯಗಳು ನೆರವೇರುತ್ತವೆ.

## ನರಸಿಂಹ ರಾಜಪುರ

ಚಿಕ್ಕಮಗಳೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಇಲ್ಲಿನ ಅಗ್ರ-ಹಾರದಲ್ಲಿ ಸುಬ್ರಹ್ಮಣ್ಯ ಮತ್ತು ಉಮಾ ಮಹೇಶ್ವರ ದೇವಾಲಯಗಳಿವೆ. ಗುತ್ತಮ್ಮ ಹಾಗೂ ವೀರಭದ್ರ ದೇವಾಲಯಗಳು ಈ ಊರಿನ ಇತರ ಗುಡಿಗಳು. ಊರಿನ ರಸ್ತೆಯ ತುದಿಗೆ ಇರುವ ಸಿಂಹನ ಗದ್ದೆ ಜೈನರ ಪವಿತ್ರ ಯಾತ್ರಾ ಸ್ಥಳ. ಇಲ್ಲಿ ಮೂರು ಜೈನ ಬಸದಿಗಳೂ ಒಂದು ಜೈನ ಮಠ ಇವೆ. ಚಂದ್ರನಾಥ ಬಸದಿಯಲ್ಲಿ ಸುಮಾರು ಎರಡುವರೆ ಅಡಿ ಎತ್ತರದ ಅಮೃತ ಶಿಲೆಯ ಚಂದ್ರನಾಥ ಸ್ವಾಮಿ ಮೂರ್ತಿ ಹಾಗೂ ಸರಸ್ವತಿ ಗಂಧರ ಪಾದ ಮತ್ತು ಶ್ರುತ ಈ ಲೋಹ ವಿಗ್ರಹಗಳಿವೆ. ಚಂದ್ರನಾಥ ಯೋಗ ಮುದ್ರೆಯ ಭಂಗಿಯಲ್ಲಿರುವ ವಿಗ್ರಹ. ಪಕ್ಕದಲ್ಲಿರುವ ಶಾಂತೇಶ್ವರ ಬಸದಿಯಲ್ಲಿ ಹೊಯ್ಸಳ ಮಾದರಿಯ ಶಾಂತಿನಾಥ ಸ್ವಾಮಿಯ ವಿಗ್ರಹವಿದೆ. ಇನ್ನೊಂದು ಬಸದಿಯಲ್ಲಿ ಯಕ್ಷ ಮತ್ತು ಜ್ವಾಲಾಮಾಲಿನಿಯರ ವಿಗ್ರಹಗಳಿವೆ. ಸುಖಾಸನದಲ್ಲಿ ಕುಳಿತಿರುವ ಈ ಮೂರ್ತಿಗಳು ಅತ್ಯಂತ ಸುಂದರವಾಗಿವೆ. ಜ್ವಾಲಮಾಲಿನಿ ವಿಗ್ರಹ ವಿಜಯನಗರದರಸರ ಕಾಲದ್ದೆಂದು ತಿಳಿಯಲಾಗಿದೆ.

## ಬಾಳೆಹೊನ್ನೂರು

ಭದ್ರಾನದಿ ಪಶ್ಚಿಮ ದಂಡೆಯ ಮೇಲಿರುವ ಬಾಳೆಹೊನ್ನೂರಿನ ಸಮೀಪದ ಬಾಳೆಹಳ್ಳಿಯಲ್ಲಿ ವೀರಶೈವ ಪಂಚಾಚಾರ್ಯರಲ್ಲಿ ಪ್ರಮುಖರಾದ ರೇಣುಕಾಚಾರ್ಯರ ಸ್ಥಾಪಿಸಿದ ಮಠವಿದ್ದು ಇದನ್ನು ರಂಭಾಪುರಿ ಜಗದ್ಗುರುಗಳ ಮಠ ಎಂದೂ ಕರೆಯುತ್ತಾರೆ. ಇದೇ ಮಠಕ್ಕೆ ಹೊಂದಿಕೊಂಡಂತೆ ವೀರಭದ್ರ ದೇವರ ದೇವಸ್ಥಾನವಿದೆ. ದ್ರಾವಿಡ ಶೈಲಿಯ ದೇವಸ್ಥಾನ ದೊಡ್ಡ ಪ್ರಾಕಾರವನ್ನು ಹೊಂದಿದೆ. ನವರಂಗದ ಎರಡು ಕಡೆಗಳಲ್ಲೂ ಗರ್ಭಗೃಹಗಳಿವೆ. ನವರಂಗದಲ್ಲಿನ ಕಂಬಗಳು ದಪ್ಪನಾಗಿದ್ದು ಚೌಕ ಆಕಾರವಾಗಿವೆ. ಕಂಬಗಳ ಮೇಲ್ಭಾಗದಲ್ಲಿ ನಂದಿಯ ಕೆತ್ತನೆ ಇದೆ. ಬಲಭಾಗದ ಗರ್ಭ ಗೃಹದಲ್ಲಿ ಹಾಗೂ ಎಡಭಾಗದ ಗರ್ಭ ಗೃಹದಲ್ಲಿ ಗಣಪತಿ ಹಾಗೂ ಶೂಲ ಬ್ರಹ್ಮನ ವಿಗ್ರಹಗಳಿವೆ. ನವರಂಗದಲ್ಲಿ ಲೋಹದ ವೀರಭದ್ರ ಹಾಗೂ ಭದ್ರಕಾಳಿಯ ಮೂರ್ತಿಗಳಿವೆ. ಇವುಗಳನ್ನು ವರ್ಷಕ್ಕೊಮ್ಮೆ ಉತ್ಸವ ಸಮಯದಲ್ಲಿ ಹೊರ

ತೆಗೆಯುತ್ತಾರೆ. ಫಾಲ್ಗುಣ ಮಾಸದಲ್ಲಿ ಜರುಗುವ ವೀರಭದ್ರಸ್ವಾಮಿ ರಥೋತ್ಸವ ವಿಜೃಂಭಣೆಯಿಂದ ಕೂಡಿರುತ್ತದೆ.

**ಖಾಂಡ್ಯ**

ಚಿಕ್ಕಮಗಳೂರು ತಾಲ್ಲೂಕಿನಲ್ಲಿರುವ ಒಂದು ಪ್ರಾಚೀನ ಗ್ರಾಮ ನರಸಿಂಹರಾಜ ಪುರಕ್ಕೆ ಎಂಟು ಕಿ. ಮೀ. ದೂರದಲ್ಲಿ ಭದ್ರಾ ನದಿ ದಡದ ಮೇಲಿದೆ. ಖಾಂಡ್ಯ ದೇವ ದಾನ ಹಳ್ಳಿಯ ಒಂದು ಪಾಳಯ, ದೇವದಾನ ಎಂದರೆ ದೇವಸ್ಥಾನವೊಂದಕ್ಕೆ ದಾನವಾಗಿ ಕೊಟ್ಟ ಹಳ್ಳಿ ಎಂದು ಅರ್ಥ. ಖಾಂಡ್ಯದಲ್ಲಿ ಹಿಂದೆ ಮೃಕಂಡು ಮುನಿಗಳು ತಪಸ್ಸು ಮಾಡಿದ್ದರಿಂದ ಈ ಪ್ರದೇಶಕ್ಕೆ ಖ್ಯಾಂಡ್ಯ ಎಂದು ಹೆಸರಿದೆ. ಮಾರ್ಕಂಡೇಯನ ಸ್ಮರಣಾರ್ಥ ವಾಗಿ ಇಲ್ಲಿ ಜನಾರ್ಧನ ಮತ್ತು ಮಾರ್ಕಂಡೇಶ್ವರ ದೇವಾಲಯಗಳು ನಿರ್ಮಾಣವಾಗಿವೆ. ಮಾರ್ಕಂಡೇಶ್ವರ ದೇವಾಲಯ ಅರಣ್ಯದ ನಡುವೆ ಇದ್ದು ದೇವಾಲಯವನ್ನು 16ನೇ ಶತಮಾನದಲ್ಲಿ ಕೆಳದಿ ನಾಯಕರ ಕಾಲ ದಲ್ಲಿ ಕಟ್ಟಿರಬಹುದು ಎನ್ನಲಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ನವ ರಂಗ ನಾಲ್ಕು ಕಣ ಶಿಲೆಯ ಕಂಬಗಳನ್ನು ಹೊಂದಿದ್ದು ಅವುಗಳ ಮೇಲೆ ಗರುಡ, ಭೈರವ, ಹನುಮಂತ ಮೊದಲಾದ ದೇವರುಗಳ ಮೂರ್ತಿಯನ್ನು ಕೆತ್ತಲಾಗಿದೆ. ಖಾಂಡ್ಯದಲ್ಲಿ ಬಿಕೇಶ್ವರ, ನರಸಿಂಹ ಮೊದಲಾದ ದೇವಾಲಯ ಗಳೂ ಇವೆ. ಈ ಊರು ಪವಿತ್ರ ಸ್ಥಳವಾಗಿದ್ದು ಸುತ್ತಮುತ್ತಲ ಪ್ರದೇಶ ಗಳ ಜನ ಈಗಲೂ ಸತ್ತವರ ಅಸ್ಥಿಯನ್ನು ತಂದು ಭದ್ರಾ ನದಿಯಲ್ಲಿ ವಿಸರ್ಜಿಸುವುದುಂಟು.

**ಹೆಬ್ಬೆ**

ಭದ್ರಾ ಜಲಾಶಯ ನಿರ್ಮಾಣದ ಅನಂತರ ಅದರ ಹಿನ್ನೀರಿನಲ್ಲಿ ಈ ಗ್ರಾಮವು ಮುಳುಗಡೆಯಾಯಿತು. ಆದರೂ ಬೇಸಿಗೆಯಲ್ಲಿ ಹಿನ್ನೀರು ಇಲ್ಲದಿರುವುದರಿಂದ ಇಲ್ಲಿನ ಸುಂದರ ದೇವಾಲಯವಾದ ಭವಾನಿ ಶಂಕರೇಶ್ವರ ದೇವಾಲಯವನ್ನು ನೋಡಬಹುದು. ಇದು ಭದ್ರಾ ನದಿಯ ದಡದಲ್ಲಿರುವ ಪಂಚ ಕ್ಷೇತ್ರಗಳಲ್ಲಿ ಒಂದು ಆಗಿದೆ. ಈ ಕ್ಷೇತ್ರವನ್ನು ಹೇರಂಬ ಕ್ಷೇತ್ರ ಎಂದೂ ಹೇಳುತ್ತಾರೆ.

**ಕೊಪ್ಪ**

ಚಿಕ್ಕ ಮಂಗಳೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಈ ಪಟ್ಟಣ ಹಿಂದೆ ಮೇಲುಕೊಪ್ಪ, ಕೆಳಕೊಪ್ಪ, ಮತ್ತು ಬಾಳಗಡಿ ಎಂಬ ಮೂರು ಭಾಗಗಳಿಂದ ಕೂಡಿತ್ತು. ಇಲ್ಲಿಂದ ಹತ್ತು ಕಿ.ಮೀ. ದೂರವಲ್ಲಿರುವ ಹರಿಹರ ಪುರದಲ್ಲಿ ದಕ್ಷ ಯಜ್ಞ ಮಾಡುತ್ತಿದ್ದಾಗ ಆಹ್ವಾನವಿಲ್ಲದೆ ಅಪಮಾನಿತನಾದ ಶಿವ ವೀರಭದ್ರನನ್ನು ಯಜ್ಞವನ್ನು ನಾಶಮಾಡಲು ಕಳುಹಿಸಿದ. ಅಂತೆಯೇ ನಡೆದುಕೊಂಡ ವೀರಭದ್ರ ಮಹಾಕೋಪದಿಂದ ಬಂದು ನೆಲೆಸಿದ ಊರೇ ಕೊಪ್ಪ ಎನ್ನಲಾಗಿದೆ. ಮೊದಲು ಈ ಊರಿಗೆ ಇದ್ದ ಹೆಸರು ಕೋಪ.

ಮೇಲುಕೊಪ್ಪದಲ್ಲಿ ವೀರಭದ್ರನ ದೇವಾಲಯವಿದ್ದು ಗರ್ಭಗೃಹ, ಸುಕನಾಸಿ ಮತ್ತು ಮುಖಮಂಟಪಗಳಿವೆ. ಹೊರ ಗೋಡೆ ಶಿವನ ಲೀಲೆಗಳ ಕೆತ್ತನೆಗಳಿಂದ ಅಲಂಕೃತವಾಗಿದೆ. ದಕ್ಷಿಣದ ಗೋಡೆಗಳಲ್ಲಿ ಈಶ್ವರ ತ್ರಿಪುರ ಗಳನ್ನು ನಾಶಮಾಡಿದ ಕೆತ್ತನೆ ಇದೆ. ಶಿವನ ಬಲಗಡೆ ಮಯೂರದ ಮೇಲಿ ರುವ ಸುಬ್ರಹ್ಮಣ್ಯನ ಚಿತ್ರ ಹಾಗೂ ಉತ್ತರದ ಗೋಡೆಯ ಮೇಲೆ ಈಶ್ವರ-ಪಾರ್ವತಿಯರು ನಂದಿಯ ಮೇಲಿರುವ ಚಿತ್ರ ಇದೆ.

**ಜಂಬಿಟ್ಟಿಗೆ**

ಕೊಪ್ಪ ತಾಲ್ಲೂಕಿನಲ್ಲಿ ಹರಿಹರಪುರದಿಂದ 2 ಕಿ. ಮೀ. ದೂರವಲ್ಲಿರುವ ಈ ಹಳ್ಳಿ ನೀಲಕಂಠೇಶ್ವರ ದೇವಾಲಯದಿಂದ ಹೆಸರಾಗಿದೆ. ಚಿಕ್ಕ ದೇವಾಲಯ ವಾದರೂ ಶಿಲ್ಪ ಕಲೆ ಗಮನಾರ್ಹ. ದೇವಾಲಯದ ಉದ್ದ ಕೇವಲ 10 ಅಡಿ ಅಗಲ ಎಂಟು ಅಡಿ. ಗರ್ಭಗುಡಿ, ಸುಕನಾಸಿ ಮತ್ತು ಎರಡು ಕಂಬಗಳುಳ್ಳ ಮುಖಮಂಟಪ ಇವೆ. ಶಿಖರ ಚಿಕ್ಕದು. ಗುಡಿ ದ್ರಾವಿಡ ಶೈಲಿಯದ್ದು ಒರಟು ಕಲ್ಲಿನ ಮೇಲೆ ಶಿಲ್ಪಗಳನ್ನು ಕೆತ್ತಿರುವುದು ಗಮನ ಸೆಳೆಯುತ್ತದೆ. ದೇವಾಲಯದ ದಕ್ಷಿಣ ಮತ್ತು ಪಶ್ಚಿಮ ಭಾಗದ ಗೋಡೆಗಳಲ್ಲಿ ರಾಮಾಯಣ ಮತ್ತು ಮಹಾಭಾರತದ ಕಥೆಗಳ ಶಿಲ್ಪಗಳಿವೆ. ಅಲ್ಲದೆ ಭಾಗವತ ಪುರಾಣ ತಿಳಿಸುವ ಶಿಲ್ಪಗಳು, ಶಿವಲೀಲೆ, ಯಮಲೋಕದಲ್ಲಿ ನೀಡಲಾಗುವ ಹಿಂಸೆ ಗಳನ್ನು ತೋರಿಸುವ ಶಿಲ್ಪಗಳೂ ಇವೆ. ಸುಕನಾಸಿಯ ದ್ವಾರದ ಎಡಕ್ಕೆ

ದುರ್ಗಾ, ಚಂದ್ರ ಹಾಗೂ ಸೂರ್ಯನಾರಾಯಣರ ಮೂರ್ತಿಗಳಿವೆ. ಬಲಕ್ಕೆ ಗಣಪತಿ. ಸೂರ್ಯ ಮತ್ತು ಗೋಪಾಲರ ಮೂರ್ತಿಗಳಿದ್ದು ಈ ಇಡೀ ದೇವಾಲಯದ ಶಿಲ್ಪಗಳು ಗಮನ ಸೆಳೆಯುತ್ತವೆ.

**ಹರಿಹರಪುರ**

ತುಂಗಾನದಿಯ ದಡದ ಮೇಲಿರುವ ಈ ಊರಿನಲ್ಲಿ ನರಸಿಂಹಸ್ವಾಮಿ ಹಾಗೂ ಶಾರದಾ ದೇವಸ್ಥಾನಗಳಿವೆ. ಈ ಗ್ರಾಮಕ್ಕೆ ಹತ್ತಿರದಲ್ಲೇ ಸೋಮೇಶ್ವರ ದೇವಾಲಯವಿದೆ. ಈ ಊರಿನಲ್ಲಿ ಸ್ಮಾರ್ತರ ಒಂದು ಮಠವಿದ್ದು ಅದಕ್ಕೆ ಹೊಂದಿಕೊಂಡೇ ದೇವಾಲಯಗಳಿವೆ. ಹರಿಹರಪುರಕ್ಕೆ 8 ಕಿ.ಮೀ. ದೂರದ ಬಂಡಿಗಡಿಯಲ್ಲಿ ಗೋಪಾಲ ಕೃಷ್ಣ ದೇವಾಲಯವಿದೆ.

## ತರೀಕೆರೆ ತಾಲ್ಲೂಕಿನ ದೇವಾಲಯಗಳು

ತರೀಕೆರೆಯ ಕೇಶವ ದೇವಾಲಯ ಹೊಯ್ಸಳ ವಾಸ್ತು ಶೈಲಿಯದಾಗಿದೆ. ಕೇಶವ ವಿಗ್ರಹದ ಎತ್ತರ ಸುಮಾರು 5 ಅಡಿಗಳು. ಇಲ್ಲಿರುವ ಮತ್ತೊಂದು ದೇವಾಲಯ ಸುಬ್ರಹ್ಮಣ್ಯ ಗುಡಿ. ತಾಲ್ಲೂಕನ್ನಾಳಿದ ಸರ್ಜಾ ಹನುಮಂತಪ್ಪ ನಾಯಕರ ಕಾಲದಲ್ಲಿ ಕಟ್ಟಲಾದ ಈ ಗುಡಿಯಲ್ಲದೆ ಊರಿನ ದಕ್ಷಿಣಕ್ಕಿರುವ ಎಣ್ಣೆ ಹೊಳೆ ದಡದ ಅಕ್ಕ ನಾಗಮ್ಮನವರ ಗದ್ದುಗ ಇದೆ. ಚಿಕ್ಕ ಕೆರೆಯ ಪಕ್ಕದಲ್ಲಿ ಸಂತ ಸಿದ್ಧವೀರ ಸ್ವಾಮಿಗಳ ಗದ್ದುಗೆ ಇದೆ.

ತರೀಕೆರೆಗೆ 22 ಕಿ ಮೀ. ದೂರದಲ್ಲಿರುವ ಅಜ್ಜಂಪುರ ಇತಿಹಾಸ ಪ್ರಸಿದ್ಧವಿದ್ದು ಇಲ್ಲಿ ಆಂಜನೇಯ, ಸೋಮೇಶ್ವರ ದೇವಾಲಯಗಳಿವೆ.

ಅಮೃತಪುರ, ತಾಲ್ಲೂಕಿನ ಒಂದು ಹೋಬಳಿ ಕೇಂದ್ರ. ಇಲ್ಲಿನ ಅಮೃತೇಶ್ವರ ದೇವಾಲಯ ನೋಡಬೇಕಾದುದು. ಇದನ್ನು ಕ್ರಿ.ಶ. 1196ರಲ್ಲಿ ಎರಡನೆಯ ವೀರ ಬಲ್ಲಾಳನ ಸೇನಾನಿಯಾಗಿದ್ದ ಅಮೃತೇಶ್ವರ ನಾಯಕನು ಕಟ್ಟಿಸಿದನೆಂದು ತಿಳಿಯಲಾಗಿದೆ. ಹಾಸನ ಜಿಲ್ಲೆಯ ಬೇಲೂರು, ಹಳೇಬೀಡು ದೇವಾಲಯಗಳ ಮಾದರಿಯ ಈ ದೇವಾಲಯದ ಹೊರಭಾಗದ ಪೀಠದಲ್ಲಿ ನೂರಾರು ಗೋಪುರಗಳನ್ನು ಬಿಡಿಸಲಾಗಿದೆ. ಶುಕನಾಸಿಯ ಮೇಲೆ ಬಿಡಿಸಿರುವ

ಹೊಯ್ಸಳ ಲಾಂಛನ, ಮಹಿಷ ಮರ್ದಿನಿ, ಗಜಾಸುರ ಸಂಹಾರ, ಗಣೇಶ, ಶ್ರೀ ಕೃಷ್ಣನ ಪ್ರತಿಮೆಗಳು ಗಮನ ಸೆಳೆಯುತ್ತವೆ. ಕೆಲವೊಂದು ಗೋಪುರಗಳ ಮೇಲ್ಭಾಗದಲ್ಲಿ ಹುಬ್ಬೆಟ್ಟು ಗಾತ್ರದ ಬಸವನನ್ನು ಕೆತ್ತಿರುವುದು ಶಿಲ್ಪಿಗಳ ಚಾತುರ್ಯವನ್ನು ಹೇಳುತ್ತದೆ. ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿ ಕಾಣಲಾಗುವ ಶಿಲಾಬಾಲಿಕೆಯರಂತೆ ಈ ದೇವಾಲಯದಲ್ಲಿಯೂ ತಾಳಮದ್ದಲೆ ನುಡಿಸುವ ಸುಂದರಿಯರು, ದರ್ಪಣ ಸುಂದರಿಯರು, ಸ್ನಾನ ಮಾಡಿ ಬಟ್ಟೆ ಧರಿಸುತ್ತಿರುವ ಸುಂದರಿಯ ವಸ್ತ್ರವನ್ನು ಕಪಿ ಸೆಳೆಯುತ್ತಿರುವುದು ಮೊದಲಾದ ಬಾಲಿಕೆಯರ ವಿಗ್ರಹಗಳ ಕೆತ್ತನೆಗಳನ್ನು ಕಾಣಬಹುದು. ದೇವಾಲಯದ ದಕ್ಷಿಣ ಕಟಾಂಜನದ ನವರಂಗದ ಗೋಡೆಯಿಂದ ಪೂರ್ವದ ಕಡೆಗೆ ಶ್ರೀ ಕೃಷ್ಣನ ವಿವಿಧ ಲೀಲೆಗಳನ್ನು ಕೆತ್ತಲಾಗಿದೆ. ಇದೊಂದು ಅಪರೂಪದ ಶಿಲ್ಪ ಸಮೂಹ. ಉತ್ತರ ದ್ವಾರದಲ್ಲಿ ಮಹಾಭಾರತಕ್ಕೆ ಸಂಬಂಧಪಟ್ಟ ಕಥೆಗಳ ಬಗ್ಗೆಯೂ ಕೆತ್ತನೆಗಳಿವೆ.

ಗರ್ಭಗುಡಿಯ ಎದುರಿಗೆ ಇರುವ ನಾಟ್ಯಮಂಟಪದಲ್ಲಿ ರುದ್ರಾಣಿ, ವಾರಾಹಿ ರುಕ್ಮಿಣಿ, ಭೈರವಿ, ನಾಗದಂಪತಿಗಳು ಮೊದಲಾದ ವಿಗ್ರಹಗಳಿದ್ದು ಗರ್ಭ-ಗುಡಿಯ ದ್ವಾರದಲ್ಲಿ ರತಿ ಮನ್ಮಥರ ಕೆತ್ತನೆಗಳನ್ನು ಕಾಣಹುದು. ಅಮೃತೇ-ಶ್ವರ ದೇವಾಲಯಗಳಲ್ಲಿರುವ ಲಿಂಗವನ್ನು 'ಅಗ್ನಿ ಸಾಲಿಗ್ರಾಮ ಶಿಲೆ' ಎಂದು ಕರೆಯುತ್ತಾರೆ. ಪ್ರತಿ ಶಿವರಾತ್ರಿ ದಿನ ಸೂರ್ಯೋದಯದ ಮೊದಲ ರಶ್ಮಿ ಶಿವಲಿಂಗದ ಮೇಲೆ ಬೀಳುವುದು ಕುತೂಹಲ ಉಂಟು ಮಾಡುತ್ತದೆ. ನವ-ರಂಗದ ಅಲಂಕಾರ ಬಳ್ಳಿಯಲ್ಲಿ ಕಾಮಸೂತ್ರದಲ್ಲಿ ಹೇಳಲಾಗಿರುವ ಭಂಗಿಗಳನ್ನು ಕೆತ್ತಲಾಗಿದೆ. ಒಂದು ಕೆತ್ತನೆಯಂತೂ ಗಮನಾರ್ಹ. ಕಮಲದ ದಳಗಳ ನಡುವೆ ಶಿವಲಿಂಗ ಹಾಗೂ ನವಗ್ರಹಗಳು, ದ್ವಾದಶರಾಶಿಗಳು ಮತ್ತು ಇದನ್ನು ಎಳೆಯುತ್ತಿರುವ ಸಪ್ತ ಅಶ್ವಗಳು.

ಪ್ರತಿ ವರ್ಷ ಏಪ್ರಿಲ್ ತಿಂಗಳಲ್ಲಿ ಇಲ್ಲಿ ನಡೆಯುವ ಜಾತ್ರೆ ವಿಶಿಷ್ಟ ವಾದುದಾಗಿರುತ್ತದೆ.

### ಬಗ್ಗವಳ್ಳಿ

ತರೀಕೆರೆಯಿಂದ 24 ಕಿ.ಮಿ. ದೂರದಲ್ಲಿದೆ. ಇಲ್ಲಿ ತ್ರಿಕೂಟಾಚಲ

ವಣಾದರಿಯ ಹೊಯ್ಸಳ ಶೈಲಿಯ ಯೋಗಾನರಸಿಂಹ ದೇವಾಲಯವಿದೆ. ದೇವಾಲಯ ಮೂರು ಗರ್ಭಗುಡಿಗಳನ್ನು ಹೊಂದಿದೆಯಾದರೂ ಶಿಖರ ಒಂದೇ.

ಪ್ರವೇಶಿಸಿದಾಗಲೇ ಶ್ರೀ ಚೆನ್ನಕೇಶವಸ್ವಾಮಿ ವಿಗ್ರಹ, ಎಡಭಾಗದಲ್ಲಿ ವಿನಾಯಕ, ಬಲಭಾಗದಲ್ಲಿ ಲಕ್ಷ್ಮೀನಾರಾಯಣ ವಿಗ್ರಹ ಇವೆ ಹಾಗೂ ಬ್ರಹ್ಮನ ವಿಗ್ರಹಗಳಿದ್ದು ಇದು ಅಪರೂಪ ಎನಿಸಿದೆ. ಒಳಗೆ ನಾಲ್ಕು ಅಡಿ ಎತ್ತರದ ಲಕ್ಷ್ಮಿ ವಿಗ್ರಹವಿದ್ದು ಈ ಗರ್ಭಗುಡಿಯ ಎದುರಿಗೆ ದಶಾವತಾರ ಚಿತ್ರಗಳಿರುವ ಪ್ರಭಾವಳಿ ಹೊತ್ತು ಇರುವ ಯೋಗ ಮುದ್ರೆಯಲ್ಲಿ ಕುಳಿತ ಯೋಗಾನರಸಿಂಹನ ವಿಗ್ರಹವಿದೆ.

ಹಿಂದೆ ಬಗ್ಗವಳ್ಳಿ ಭಾರ್ಗವನ ಆಶ್ರಯವಾಗಿತ್ತೆನ್ನಲಾಗಿದೆ. ಇಲ್ಲಿ ರೇಣುಕಾಂಬೆಯ ಗುಡಿಯೂ ಇದ್ದು ಪ್ರತಿ ವರ್ಷ ಏಪ್ರಿಲ್ ತಿಂಗಳಲ್ಲಿ ಜಾತ್ರೆ ನಡೆಯುತ್ತದೆ. ಲಕ್ಷ್ಮೀ ವಿಗ್ರಹ ತುಂಬಾ ಕಲಾತ್ಮಕವಾಗಿದೆ.

**ಮುಂದಿಗೆರೆ**

ತರೀಕೆರೆಯ ಪೂರ್ವದಲ್ಲಿ 30 ಕಿ.ಮೀ. ದೂರದಲ್ಲಿನ ಈ ಗ್ರಾಮದಲ್ಲಿ ಸಿಂಗೇಶ್ವರ ದೇವಾಲಯವಿದೆ. ಗರ್ಭಗುಡಿಯಲ್ಲಿ ದುಂಡನೆಯ ಪೀಠದ ಮೇಲೆ ಶಿವಲಿಂಗವಿದೆ. ನವರಂಗದಲ್ಲಿ ಚೇಳೊಂದರ ಮೇಲೆ ತ್ರಿಭಂಗಿಯಲ್ಲಿ ನಿಂತಿರುವ ಭೈರವಮೂರ್ತಿ ಇದೆ. ಹರಿಹರ, ಲಕ್ಷ್ಮಿ, ಪಾರ್ವತಿ, ನಂದಿ ಹಾಗೂ ಗರುಡರ ಮೂರ್ತಿಗಳೂ ಈ ಗುಡಿಯಲ್ಲಿವೆ. ಈ ಊರಿನಲ್ಲಿರುವ ಮತ್ತೊಂದು ದೇವಾಲಯ ಲಕ್ಷ್ಮೀನಾರಾಯಣ ದೇವಾಲಯ.

ಹಣ್ಣೆ ಗುಡ್ಡದ ಶ್ರೀ ರಂಗನಾಥಸ್ವಾಮಿ ದೇವಾಲಯ, ಬುಕ್ಕಾಂಬುದಿಯಲ್ಲಿ ಬುಕ್ಕರಾಯ ಸ್ಥಾಪಿಸಿದ ಪಂಚಲಿಂಗೇಶ್ವರ ಗುಡಿ ಹಾಗೂ ಚೆನ್ನಕೇಶವ, ಮರುಳ ಸಿದ್ಧೇಶ್ವರ, ಕಾಲಭೈರವ, ಸಿದ್ಧಲಿಂಗೇಶ್ವರ ಗುಡಿಗಳೂ ಲಿಂಗದಹಳ್ಳಿಯ ವೀರಭದ್ರ ದೇವಾಲಯ, ಹಾದಿಕೆರೆಯ ಚೆನ್ನಕೇಶವ ದೇವಾಲಯ, ಗೋಪಾಲ ಗ್ರಾಮದ ಬಲ್ಲಾಳೇಶ್ವರ ಹಾಗೂ ಓಬಳೇಶ್ವರ ದೇವಾಲಯಗಳೂ,

ಸೋಮಪುರದ ಪ್ರಸನ್ನ ಸೋಮೇಶ್ವರ ದೇವಾಲಯ, ಮುಂಡ್ರೆಯಲ್ಲಿನ ಶಿವ ದೇವಾಲಯ, ಕಲ್ಲತ್ತಿ ಗಿರಿಯ ಒಂದೇ ಬಂಡೆಯಲ್ಲಿ ಕೊರೆದಿರುವ ಶ್ರೀ ವೀರಭದ್ರ ದೇವಾಲಯ ಇವು ತರೀಕೆರೆ ತಾಲ್ಲೂಕಿನ ಇತರ ದೇವಾಲಯಗಳಾಗಿವೆ. ಸೋಮಪುರ ಭದ್ರಾ ನದಿ ದಂಡೆಯ ಮೇಲಿರುವ ಐದು ಕ್ಷೇತ್ರಗಳಲ್ಲಿ ಒಂದಾಗಿದೆ. ಪ್ರಸನ್ನ ಸೋಮೇಶ್ವರ ದೇವಾಲಯದಲ್ಲಿ ಗರ್ಭಗೃಹ ಸುಕನಾಸಿ, ನವರಂಗ ಮತ್ತು ಮುಖ ಮಂಟಪಗಳಿದ್ದು ನವರಂಗದ ಕಂಬಗಳಲ್ಲಿ ಸುಂದರ ಕಲಾತ್ಮಕ ಚಿತ್ರನೆಗಳಿವೆ. ಇಲ್ಲಿಯ ಲಿಂಗದಲ್ಲಿ ಒಂದು ರಂಧ್ರವಿದ್ದು ಅದರ ಮೂಲಕ ನೋಡಿದಾಗ ದತ್ತಾತ್ರೇಯ ಮೂರ್ತಿ ಗೋಚರಿಸುತ್ತದೆ.

ಕಲ್ಹತ್ತಿಗಿರಿಯಲ್ಲಿ ಕಂಡು ಬರುವ ಶ್ರೀ ವೀರಭದ್ರಸ್ವಾಮಿಯದು ಒಂದು ಗುಹಾಲಯ. ಈ ಆಲಯಕ್ಕೆ ಹೊಂದಿಕೊಂಡಂತೆ ಆನೆಯ ಶಿರವುಳ್ಳ ಬಂಡೆ, ದತ್ತಾತ್ರೇಯ, ಬಸವ ಹಾಗೂ ದುರ್ಗಿ ಚಿತ್ರನೆಗಳಿವೆ.

### ಶೃಂಗೇರಿ

ಪ್ರಮುಖವಾಗಿ ಶೃಂಗೇರಿ ತುಂಗಾ ತೀರದ ಒಂದು ಯಾತ್ರಾಸ್ಥಳ ಹಾಗೂ ಧಾರ್ಮಿಕ ಕ್ಷೇತ್ರ. ಇದೊಂದು ತಾಲ್ಲೂಕು ಕೇಂದ್ರವೂ ಆಗಿದೆ. ಶಾರದಾಂಬಾ ದೇವಸ್ಥಾನ ಹಲವು ಕಾಲಗಳಲ್ಲಿ ವಿಸ್ತರಿಸಲ್ಪಟ್ಟ ದೇವಾಲಯವಾಗಿದೆ. ಕ್ರಿ.ಶ. ಎಂಟನೆಯ ಶತಮಾನದಲ್ಲಿ ವೈದಿಕ ಧರ್ಮದ ಪುನರುತ್ಥಾನಕ್ಕಾಗಿ ಭಾರತದಾದ್ಯಂತ ಪ್ರವಾಸ ಕೈ ಕೊಂಡಿದ್ದಾಗ ಆದಿ ಶಂಕರಾಚಾರ್ಯರು ಶೃಂಗೇರಿಗೂ ಬಂದಿದ್ದರು. ಅವರು ಹಿಂದೂ ಧರ್ಮದ ಪುನರುತ್ಥಾನಕ್ಕಾಗಿ ಸ್ಥಾಪಿಸಿದ ನಾಲ್ಕು ಆಮ್ನಾಯ ಪೀಠಗಳಲ್ಲಿ ಶೃಂಗೇರಿಯೂ ಒಂದು.

ಶೃಂಗೇರಿ ಶಾರದಾಂಬಾ ದೇವಸ್ಥಾನ ಶಂಕರ ಮಠದ ಆವರಣದಲ್ಲೇ ಇದೆ. ಈ ದೇವಸ್ಥಾನದ ನಿರ್ಮಾಣ ಕಾರ್ಯದಲ್ಲಿ ತಂಜಾವೂರು, ಬೊಂಬಾಯಿ ಹಾಗೂ ರಜ ಪುತಾಣಗಳಿಂದ ಕುಶಲಕರ್ಮಿಗಳು ಬಂದು ಭಾಗವಹಿಸಿದ್ದರೆನ್ನಲಾಗಿದೆ. ದೇವಾಲಯ ದ್ರಾವಿಡ ಶೈಲಿಯಲ್ಲಿದ್ದು ಗರ್ಭಗುಡಿ, ಸುಕನಾಸಿ, ನವರಂಗಗಳನ್ನೊಳಗೊಂಡಿದೆ.

ನವರಂಗ ವಿಸ್ತಾರವಾಗಿದೆ. ನಾಲ್ಕು ಕಂಬಗಳ ಎರಡು ಸಾಲುಗಳಿವೆ. ಎರಡು ಕಂಬಗಳ ಹೊರತು ಉಳಿದ ಕಂಬಗಳ ಮೇಲೆ ಮಹಿಷ ಮರ್ದಿನಿ, ರಾಜರಾಜೇಶ್ವರಿ, ಶ್ರೀ ದೇವಿ, ಪದ್ಮಪಾಣಿ ಮೊದಲಾದ ಸ್ತ್ರೀ ಆಕೃತಿಗಳಿವೆ. ದೇವಾಲಯದ ಮುಂದೆ ಏಕ ಶಿಲಾ ಸ್ತಂಭವಿದೆ. ಎತ್ತರ 35 ಅಡಿಗಳು. ಹಿಂಭಾಗದ ಪ್ರಾಕಾರದಲ್ಲಿ ಶಕ್ತಿ ಗಣಪತಿ ದೇವಾಲಯವಿದೆ. ಬಲಭಾಗದಲ್ಲಿ ತುಂಗಾನದಿ ದಂಡದ ಮೇಲೆ ಷಣ್ಮುಖ ಸ್ವಾಮಿ ದೇವಾಲಯವಿದೆ.

ಮಠದ ಪಕ್ಕದಲ್ಲಿ ಅಪೂರ್ವವಾದ ವಿದ್ಯಾಶಂಕರ ದೇವಾಲಯವಿದೆ. ಇದು ಕಣ ಶಿಲೆಯಲ್ಲಿ ಕಟ್ಟಲಾದ ಸುಂದರ ದೇವಾಲಯ. ಹೊಯ್ಸಳ, ಚಾಳುಕ್ಯ, ದ್ರಾವಿಡ ಹಾಗೂ ಇಂಡೋ ಆರ್ಯನ ಶೈಲಿಗಳ ಸಂಮಿಶ್ರ ಶೈಲಿಯ ಈ ದೇವಾಲಯಕ್ಕೆ ಆರು ದ್ವಾರಗಳಿವೆ. ಪ್ರತಿದ್ವಾರದಲ್ಲಿ ದ್ವಾರ ಪಾಲಕ ಮೂರ್ತಿಗಳಿವೆ. ಮೂರು ಅಡಿ ಎತ್ತರದ ವೇದಿಕೆಯ ಮೇಲೆ ಈ ದೇವಾಲಯವಿದೆ. ಈ ವೇದಿಕೆಯಲ್ಲಿ ಆನೆ, ಕುದುರೆ, ಒಂಟೆ, ಸಿಂಹ, ಯಕ್ಷ-ಯಕ್ಷಿಣಿಯರು ಪುರಾಣ ಕಥೆಗಳು ಇವುಗಳ ಕೆತ್ತನೆ ಇವೆ.

ಪೂರ್ವಾಭಿಮುಖವಾಗಿರುವ ಈ ದೇವಾಲಯದ ಇಂದ್ರ, ಲಕ್ಷ್ಮೀ, ಗರುಡ, ಕಲ್ಕಿ, ಬುದ್ಧ ಮೊದಲಾದ 104 ದೊಡ್ಡ ಪ್ರಮಾಣದ ವಿಗ್ರಹ ಗಳನ್ನು ಕಡೆದು ನಿಲ್ಲಿಸಲಾಗಿದೆ.

ಪ್ರವೇಶ ದ್ವಾರದ ಬಳಿ ಬಲಗಡೆ ವ್ಯಾಸರ ಪ್ರತಿಮೆ ಎದುರಿಗೆ ಶಂಕರ ಆಚಾರ್ಯರ ವಿಗ್ರಹ ಇವೆ. ದೇವಸ್ಥಾನದ ನವರಂಗ ಭವ್ಯವಾಗಿದ್ದು ಇಲ್ಲಿನ 12 ಕೆತ್ತನೆಯ ಕಂಬಗಳು ಗಮನ ಸೆಳೆಯುತ್ತವೆ. ಸ್ವಾರಸ್ಯದ ಸಂಗತಿ ಯೆಂದರೆ ಕಂಬಗಳಲ್ಲಿ ಕೆತ್ತಿರುವ ಸಿಂಹಗಳ ಬಾಯಿಯಲ್ಲಿ ತಿರುಗಿಸಬಹು ದಾದ ಗುಂಡುಗಳಿವೆ. 12 ಕಂಬಗಳಲ್ಲಿ ಒಂದೊಂದರ ಮೇಲೂ ಹನ್ನೆರಡೂ ರಾಶಿಗಳಲ್ಲಿ ಒಂದೊಂದನ್ನೂ ಕೆತ್ತಲಾಗಿದೆ. ದ್ವಾದಶರಾಶಿ ಕಂಬ ಎಂದೇ ಇವಕ್ಕೇ ಹೆಸರು. ಈ ಕಂಬಗಳ ಜೋಡಣೆ ಅಪೂರ್ವ ಎನಿಸುತ್ತದೆ. ಸೌರಮಾಸಗಳ ಅನುಕ್ರಮದಲ್ಲಿ ಸೂರ್ಯ ಕಿರಣವು ಆಯಾ ತಿಂಗಳು ಆಯಾ ರಾಶಿ ಕಂಬದ ಮೇಲೆಯೇ ಬೀಳುವಂತೆ ಇರುವುದು ಗಮನಾರ್ಹ. ಈ ರಾಶಿ ಕಂಬಗಳ ನೆರಳು ಸರಿಯಾಗಿ ಬೀಳುವಂತೆ ನವರಂಗದ ಕೆಳಗೆ ಗೆರೆ

ಗಳನ್ನು ಕೆತ್ತಲಾಗಿದೆ. ನವರಂಗದಲ್ಲಿ ಕಮಲದ ಕೆತ್ತನೆ ಇದ್ದು ಸುಂದರ ವಾಗಿದೆ.

ವಿದ್ಯಾ ಶಂಕರ ಎನ್ನಲಾಗುವ ಲಿಂಗವು ಗರ್ಭಗುಡಿಯಲ್ಲಿದ್ದು ಇದರ ಎತ್ತರ ಸುಮಾರು ಒಂಮೂ ಕಾಲಡಿ ಇರುತ್ತದೆ. ಅಲ್ಲದೆ ವಿದ್ಯಾ ಗಣಪತಿ, ಬ್ರಹ್ಮ, ವಿಷ್ಣು, ಶಂಕರ ಹಾಗೂ ದುರ್ಗೆಯರಿಗೆಂದು ಐದು ಗೂಡುಗಳಿವೆ.

ಮಲ್ಲಿಕಾರ್ಜುನ ದೇವಾಲಯ ಶೃಂಗೇರಿಯ ಶೃಂಗ ಗಿರಿ ಬೆಟ್ಟದ ಮೇಲಿದೆ. ಇಲ್ಲಿನ ಲಿಂಗ ಸುಮಾರು ನಾಲ್ಕು ಅಡಿ ಎತ್ತರವಿದೆ. ಆ ಲಿಂಗಕ್ಕೆ ಮಲಹಾನಿಕರೇಶ್ವರ ಎಂಬ ಹೆಸರೂ ಇದೆ. ಈ ಗುಡಿಯ ಪೂರ್ವಕ್ಕೆ ಹೊನ್ನೆ ದೇವಸ್ಥಾನವಿದ್ದು ಇದೊಂದು ಸುಂದರ ರಚನೆ. ಸಮೀಪ ದಲಿ ನೀಲಕಂಠೇಶ್ವರ ದೇವಾಲಯವಿದೆ. ಹೊನ್ನೆ ಗುಡಿಯಲ್ಲಿ ವಿಶ್ವೇಶ್ವರ ಲಿಂಗ ಇರುತ್ತದೆ.

ವಿದ್ಯಾಶಂಕರ ದೇವಾಲಯದ ಉತ್ತರಕ್ಕಿರುವ ಜನಾರ್ಧನ ದೇವಾ ಲಯ ಸಣ್ಣದಾದರೂ ಗಮನಾರ್ಹ. ಕ್ರಿ.ಶ. 14ನೇ ಶತಮಾನದ ಈ ಗುಡಿ ಯಲ್ಲಿ ಗರ್ಭಗುಡಿ, ಸುಕನಾಸಿ ಹಾಗೂ ಚಿಕ್ಕ ನವರಂಗ ಇವೆ. ಜನಾರ್ಧನ ವಿಗ್ರಹ 4 ಅಡಿ ಎತ್ತರ ಇದೆ.

ಶೃಂಗೇರಿಯಲ್ಲಿ ತಂಗಿದ್ದ ಶಂಕರಾಚಾರ್ಯರು ಮಠದ ರಕ್ಷಣೆಗೆಂದು ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ದೇವರುಗಳನ್ನು ಪ್ರತಿಷ್ಠಿಸಿದ್ದರೆನ್ನ ಲಾಗಿದೆ. ಕಾಲಭೈರವ, ದುರ್ಗಾ, ಹನುಮಂತ ಹಾಗೂ ಕಾಳಿಕಾ ಇವು ಆ ಮೂರ್ತಿಗಳೆಂದು ಹೇಳುತ್ತಾರೆ.

ವಿದ್ಯಾ ಶಂಕರ ದೇವಾಲಯದ ಹಿಂದೆ ಸಮಾಧಿ ಗುಡಿಗಳು, ಸಮೀಪದಲ್ಲಿ ಕೋದಂಡ ರಾಮ, ಶಂಕರನಾರಾಯಣ, ಸಚ್ಚಿದಾನಂದ ಭಾರತಿ ಬ್ರಹ್ಮ ರಾಕ್ಷಸ ಮೊದಲಾದ ದೇವಾಲಯಗಳಿವೆ.

ಶೃಂಗೇರಿ ಜೈನ ಕೇಂದ್ರವೂ ಆಗಿದ್ದುದು ಗಮನಾರ್ಹ. ಇಲ್ಲಿ ಪಾರ್ಶ್ವ ನಾಥ ತೀರ್ಥಂಕರರ ಬಸದಿ ಇದೆ. ಪಾರ್ಶ್ವನಾಥ, ಅನಂತನಾಥ ಸ್ವಾಮಿ, ಚಂದ್ರನಾಥ ಸ್ವಾಮಿ ಆ ಮೂರು ವಿಗ್ರಹಗಳು ಇಲ್ಲಿರುತ್ತದೆ. ಇದು ಕ್ರಿ.ಶ. 1150ರಲ್ಲಿ ಕಟ್ಟಲ್ಪಟ್ಟ ಮಂದಿರ ಇದ್ದಿರಬಹುದು. ಜೋಡಿ ಸರ್ಪ

ಗಳು ಏಳು ಹೆಡೆಯಿಂದ ತೀರ್ಥಂಕರನನ್ನು ಸುತ್ತುವರಿದಿವೆ. ಪದ್ಮಾವತಿ ಅಮ್ಮನವರ ಮೂರ್ತಿ ಹಾಗೂ ಇಪ್ಪತ್ತ ನಾಲ್ಕು ತೀರ್ಥಂಕರರ ಕಂಚಿನ ವಿಗ್ರಹಗಳೂ ಇಲ್ಲಿವೆ.

ಶೃಂಗೇರಿಗೆ ಒಂದೂವರೆ ಕಿ.ಮೀ. ದೂರದಲ್ಲಿರುವ ವಿದ್ಯಾರಣ್ಯಪುರ ದಲ್ಲಿ ಶಂಕರಾಚಾರ್ಯರ ಗುಡಿ ಇದೆ. ಇಲ್ಲಿ ಶಂಕರರ ಪ್ರತಿಮೆ ಯೋಗ ದಲ್ಲಿ ಕುಳಿತ ಭಂಗಿಯದಾಗಿದೆ. ಶೃಂಗೇರಿಯ ಉಪ ಗ್ರಾಮವಾದ ಸಚ್ಚಿದಾ ನಂದ ಪುರದಲ್ಲಿ ಸಚ್ಚಿದಾನಂದೇಶ್ವರ ಗುಡಿ ಇದೆ.

ಶೃಂಗೇರಿಗೆ ಹತ್ತು ಕಿ.ಮೀ. ದೂರದಲ್ಲಿರುವ ಕಿಗ್ಗ ಅಥವಾ ಋಷ್ಯ ಶೃಂಗಪುರದಲ್ಲಿ ಋಷ್ಯ ಶೃಂಗೇಶ್ವರ ದೇವಾಲಯವಿದೆ. ಗರ್ಭಗುಡಿ ದ್ವಾರದ ಎರಡೂ ಬದಿಗಳಲ್ಲಿ ಗಣಪತಿ ಹಾಗೂ ಮಹಿಷಮರ್ದಿನಿ ದೇವರುಗಳಿರುವ ಚಿಕ್ಕಗುಡಿಗಳಿವೆ. ನವರಂಗದ ಕಂಬಗಳ ಮೇಲೆ ಕಾಳಿಂಗ ಮರ್ದನ, ನರ್ತಕಿ ಯರು ಅಂಗದೇಶಕ್ಕೆ ಋಷ್ಯ ಶೃಂಗನನ್ನು ಕರೆದೊಯ್ಯುತ್ತಿರುವ ಶಿಲ್ಪ, ಉಗ್ರನರಸಿಂಹ ಈ ಮೊದಲಾದ ಶಿಲ್ಪಗಳಿವೆ.

ಗರ್ಭಗೃಹದಲ್ಲಿ ಶಿವಲಿಂಗ ನಾಲ್ಕು ಅಡಿಗಳಷ್ಟು ಎತ್ತರವಿದೆ. ಸ್ವಾರಸ್ಯ ವೆಂದರೆ ಅದರ ಮೇಲೆ ಮೂರು ಕೋಡುಗಳು ಇವೆ. ಒಂದು ಋಷ್ಯ ಶೃಂಗನ ಹೆಂಡತಿ ಶಾಂತಳನ್ನು ಮತ್ತೆರಡು ಅವನ ಶೃಂಗಗಳನ್ನೂ ಸಂಕೇತಿ ಸುತ್ತವೆ.

ಶೃಂಗೇರಿ ತಾಲ್ಲೂಕಿನ ಸಿಂಹಗಿರಿ ಅಥವಾ ಹಳೆ ಶೃಂಗೇರಿಯಲ್ಲಿನ ವಿದ್ಯಾ ಶಂಕರ ಗುಡಿ, ಬೆಟ್ಟ ಗೆರೆ ಗ್ರಾಮದ ತನಿಕೋಡು ಎಂಬಲ್ಲಿನ ಶಂಕರ ನಾರಾಯಣ ದೇವಾಲಯ ತಾಲ್ಲೂಕಿನ ಇತರ ದೇವಾಲಯಗಳಾಗಿದೆ. ವಿದ್ಯಾಶಂಕರ ಗುಡಿಯಲ್ಲಿ ವಿದ್ಯಾ ತೀರ್ಥ, ಭಾರತಿ ತೀರ್ಥ ಹಾಗೂ ವಿದ್ಯಾ ರಣ್ಯರ ವಿಗ್ರಹಗಳಿವೆ.

ಚಿಕ್ಕ ಮಗಳೂರು ಜಿಲ್ಲೆಯ ಅಂತೂರು, ಭೈರವನ ಕೋಟೆ, ಮತ್ತು ಅವರ, ಸಂಸ್ಥೆ, ಮಲ್ಲೇಶ್ವರ, ಉಲಸೆ, ಜಯಪುರ ಮೊದಲಾದ ಕಡೆಗಳಲ್ಲಿ ಜಿನ ಬಸದಿಗಳಿರುತ್ತವೆ. ಮೇಗುಂದ (ಕೊಪ್ಪ ತಾಲ್ಲೂಕು)ದಲ್ಲಿ ಶಾಂತಿ ತೀರ್ಥಂಕರರ ಪ್ರಾಚೀನ ಬಸದಿ ಇದೆ.

ಗಂಗಾ ಮೂಲ ಮೂಡಿಗೆರೆಗೆ 16 ಕಿ.ಮೀ. ದೂರದಲ್ಲಿದೆ. ಇಲ್ಲಿ ವರಾಹ ಪರ್ವತದಲ್ಲಿ ತುಂಗಾ ಭದ್ರಾ ಹಾಗೂ ನೇತ್ರಾವತಿ ನದಿಗಳು ಹುಟ್ಟುತ್ತವೆ. ಭಗವತಿ ಕಾಡಿನ ನಡುವೆ ಭಗವತೀ ದೇವಾಲಯವಿದ್ದು ಇಲ್ಲಿನ ಗುಹೆಯಲ್ಲಿ ವರಾಹ ಮೂರ್ತಿಯ ವಿಗ್ರಹವಿದೆ. ಇದನ್ನು ಗಂಗಾ ಮೂಲ ಎನ್ನುವರು. ಇಲ್ಲಿ ಸುಬ್ರಹ್ಮಣ್ಯೇಶ್ವರ ದೇವಾಲಯವಿದ್ದು ದೇವಾಲಯದ ಕಂಬವೊಂದರಲ್ಲಿ ಉದ್ಭವ ಗಣಪತಿ ಇದೆ.

ಚಿಕ್ಕ ಮಗಳೂರು ಜಿಲ್ಲೆಯಲ್ಲಿ ಶೃಂಗೇರಿಯನ್ನು ಪ್ರತಿಯೊಬ್ಬ ಭಾರತೀಯನೂ ನೋಡಲೇಬೇಕಾದ ಕ್ಷೇತ್ರ, ವಿದ್ಯಾರಣ್ಯರ ನೆಲೆವೀಡೂ, ಆದಿಶಂಕರರ ಕಾರ್ಯ ಕ್ಷೇತ್ರವೂ, ತಪಸ್ವಿಗಳ ತವರೂರು ಆದ ಶೃಂಗೇರಿ ಋಷ್ಯಶೃಂಗರ ತಪೋ ಭೂಮಿಯೂ ಆಗಿದ್ದಿತು. ಇಲ್ಲಿ ವರ್ಷಪೂರ್ತಿ ಯಾವುದಾದರೂ ಉತ್ಸವ ಜರುಗುತ್ತಲೇ ಇರುತ್ತದೆ. ಶ್ರೀ ಶಂಕರ ಜಯಂತಿ ಉತ್ಸವ, ಗಿರಿಜಾ ಕಲ್ಯಾಣ, ಶಾರದೋತ್ಸವ, ಮಲಹಾನಿಕರೇಶ್ವರ ರಥೋತ್ಸವ, ಗುರುಗಳ ಆರಾಧನೆ ಪ್ರಮುಖವಾದವು. ಇಡೀ ಭರತ ಖಂಡದಲ್ಲಿಯೇ ಶೃಂಗೇರಿ ಹಿಂದು ಶ್ರೇಷ್ಠ ಕ್ಷೇತ್ರವಾಗಿದೆ.



# ಶಿವಮೊಗ್ಗ ಜಿಲ್ಲೆಯ ದೇವಾಲಯಗಳು

ಶಿವಮೊಗ್ಗ ಜಿಲ್ಲೆಯನ್ನು ಮಲೆನಾಡು, ಅರೆ ಮಲೆನಾಡು ಹಾಗೂ ಮೈದಾನ ಪ್ರದೇಶದೆಂದು ವಿಂಗಡಿಸಬಹುದು. ಈ ಜಿಲ್ಲೆಯ ಒಂಬತ್ತು ತಾಲ್ಲೂಕುಗಳಲ್ಲಿ ಜಿಲ್ಲೆಯ ಮುಖ್ಯ ಭಾಗವನ್ನಾವರಿಸಿರುವ ತೀರ್ಥಹಳ್ಳಿ, ಹೊಸನಗರ, ಸಾಗರ ಮತ್ತು ಸೊರಬ ತಾಲ್ಲೂಕುಗಳು ಮಲೆನಾಡು ಪ್ರದೇಶ. ಶಿವಮೊಗ್ಗ, ಭದ್ರಾವತಿ ಹಾಗೂ ಶಿಕಾರಿಪುರ ತಾಲ್ಲೂಕುಗಳು ಅರೆ ಮಲೆನಾಡು ಪ್ರದೇಶ, ಜಿಲ್ಲೆಯ ಪೂರ್ವ ಭಾಗದಲ್ಲಿರುವ ಹೊನ್ನಾಳಿ ಮತ್ತು ಚನ್ನಗಿರಿ ತಾಲ್ಲೂಕುಗಳು ಮೈದಾನ ಇಲ್ಲವೇ ಬಯಲು ಸೀಮೆ ಪ್ರದೇಶದಲ್ಲಿದೆ.

ವೈವಿಧ್ಯಕ್ಕೆ ಹೆಸರಾದ ಜಿಲ್ಲೆ ಶಿವಮೊಗ್ಗ. ನಿತ್ಯ ಹರಿದ್ವರ್ಣ ಕಾಡುಗಳುಳ್ಳ ವಿಪುಲ ಪ್ರಾಣಿ ಸಂಪತ್ತನ್ನೂ ಪಡೆದ ಈ ಜಿಲ್ಲೆ ಪುರಾಣ ಪ್ರಸಿದ್ಧವೂ ಇತಿಹಾಸ ಪ್ರಸಿದ್ಧವೂ ಆಗಿದೆ. ಹಲವಾರು ಸಂಪನ್ಮೂಲಗಳ ಈ ಮಲೆನಾಡು ಜಿಲ್ಲೆ ಹಲವು ಪ್ರಸಿದ್ಧ ದೇವಾಲಯಗಳನ್ನೊಳಗೊಂಡಿದ್ದು ಪ್ರವಾಸೋದ್ಯಮ ಆಕರ್ಷಣೀಯವೂ ಆಗಿದೆ. ವಿಶ್ವವಿಖ್ಯಾತ ಜೋಗ ಜಲಪಾತ, ಭಾರತದ ಪ್ರಸಿದ್ಧ ಅಣೆಕಟ್ಟು ಲಿಂಗನಮಕ್ಕಿ ಅಣೆಕಟ್ಟು, ಕೈಗಾರಿಕಾನಗರ ಭದ್ರಾವತಿ, ಇತಿಹಾಸ ಪ್ರಸಿದ್ಧ ಬಳ್ಳಿಗಾವೆ, ಧಾರ್ಮಿಕ ಕ್ಷೇತ್ರ ಹೊಂಬುಜ, ಪ್ರವಾಸಿ ಕೇಂದ್ರ ಚಂದ್ರಗುತ್ತಿ ಇವೆಲ್ಲ ಈ ಜಿಲ್ಲೆಯಲ್ಲಿಯೇ ಇರುತ್ತವೆ.

ಶಿವಮೊಗ್ಗ ಜಿಲ್ಲಾ ಕೇಂದ್ರವೂ ಹೌದು ತಾಲ್ಲೂಕು ಕೇಂದ್ರವೂ ಹೌದು. ಕಲೆ, ಸಂಸ್ಕೃತಿಗಳ ಸಂವರ್ಧನೆಗೆ ಶಿವಮೊಗ್ಗ ಹಿಂದಿನಿಂದಲೂ ಅವಕಾಶ ಮಾಡಿಕೊಟ್ಟಿದೆ. ಶಿವಮೊಗ್ಗದಲ್ಲಿ ಕೋಟೆ ಸೀತಾರಾಮಾಂಜನೇಯ

ದೇವಸ್ಥಾನವಿದೆ. ಇದು ಮೊದಲಿಗೆ ಕೋಟೆಯ ಒಂದು ಭಾಗವಾಗಿತ್ತು. ಕೋಟೆ ಈಗ ಇಲ್ಲ. ದೇವಸ್ಥಾನದ ಗರ್ಭಗೃಹ, ನವರಂಗ, ದ್ವಾರಗಳು ಮತ್ತು ಸ್ತಂಭಗಳು ಹೊಯ್ಸಳ ಶೈಲಿಯದಾಗಿದೆ. ಭೀಮೇಶ್ವರ, ಲಕ್ಷ್ಮಿ ನಾರಾಯಣ, ಗಡ್ಡೇ ಕಲ್ಲು ಸಿದ್ದೇಶ್ವರ ಮೊದಲಾದ ಹಳೆಯ ದೇವಾಲಯ ಗಳೂ ಇಲ್ಲಿವೆ. ಕೋಟೆ ಆಂಜನೇಯ ದೇವಸ್ಥಾನದ ಗರ್ಭಗುಡಿಯಲ್ಲಿ ಮಲಗಿರುವ ಭಂಗಿಯಲ್ಲಿರುವ ಬುದ್ಧನ ವಿಗ್ರಹ ಕುತೂಹಲ ಕೆರಳಿಸುತ್ತದೆ. ಶಿವಮೊಗ್ಗದಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ಎರಡು ಮೃತ್ತಿಕಾ ಬೃಂದಾವನಗಳಿವೆ.

ಕುಂಸಿ ಈ ತಾಲ್ಲೂಕಿನ ಒಂದು ಸಣ್ಣ ಪಟ್ಟಣ. ಇಲ್ಲಿ ಪಕ್ಷಿರಂಗನಾಥ ಸ್ವಾಮಿ ದೇವಸ್ಥಾನವಿದ್ದು ಗರುಡನ ಮೇಲೆ ವಿಷ್ಣು ಕುಳಿತಿರುವ ವಿಗ್ರಹ ಇಲ್ಲಿ ಗಮನಾರ್ಹ.

'ಕೂಡಲಿ' ತುಂಗಾ, ಭದ್ರಾ ಎಂಬ ಎರಡು ನದಿಗಳು ಸಂಗಮಿಸುವ ಸ್ಥಳ. ಇಲ್ಲಿ ಶಂಕರಾಚಾರ್ಯರ ಪರಂಪರೆಗೆ ಸೇರಿದ ಒಂದು ಮಠವಿದೆ. ಇಲ್ಲಿ ಬ್ರಹ್ಮೇಶ್ವರ, ನರಸಿಂಹ ಹಾಗೂ ರಾಮೇಶ್ವರ ಎಂಬ ಮೂರು ಪ್ರಾಚೀನ ದೇವಾಲಯುಗಳಿವೆ. ಸಂಸ್ಕೃತ ವಿದ್ಯಾಭ್ಯಾಸಕ್ಕೆ ಹೆಚ್ಚು ಅವಕಾಶ ಮಾಡಿಕೊಟ್ಟಿರುವ ಮತ್ತೂರು ಶಿವಮೊಗ್ಗಕ್ಕೆ 9 ಕಿ.ಮೀ. ದೂರದಲ್ಲಿದೆ. ಇಲ್ಲಿ ಲಕ್ಷ್ಮೀನಾರಾಯಣ, ಆಂಜನೇಯ, ಸೋಮನಾಥೇಶ್ವರ ಮತ್ತು ದುರ್ಗಮ್ಮ ದೇವಾಲಯುಗಳಿವೆ. ಮತ್ತೂರಿನಂತೆ ಹೊಸಹಳ್ಳಿ ಒಂದು ಅಗ್ರಹಾರ ಪಟ್ಟಣ. ಇಲ್ಲಿಯೂ ಸಂಸ್ಕೃತ ಅಧ್ಯಯನ ಹಿಂದಿನಿಂದಲೂ ಇದೆ. ಇಲ್ಲಿನ ಚನ್ನಕೇಶವ ದೇವಾಲಯು ಗಮನ ಸೆಳೆಯುತ್ತದೆ.

ಓಳ್ಳಂಗೆರೆ ಶಿವಮೊಗ್ಗಕ್ಕೆ 9 ಕಿ.ಮೀ. ದೂರದಲ್ಲಿ ತುಂಗಾನದಿ ದಡದ ಮೇಲಿರುವ ಗ್ರಾಮ ಇಲ್ಲಿನ ಬೆಟ್ಟವೊಂದರ ಮೇಲೆ ವೆಂಕಟರಮಣ ಹಾಗೂ ರಂಗನಾಥ ದೇವಾಲಯುವಿದೆ. ವರ್ಷಕ್ಕೊಮ್ಮೆ ಇಲ್ಲಿ ಶ್ರೀ ವೆಂಕಟರಮಣ ದೇವರ ಜಾತ್ರೆ ನಡೆಯುತ್ತದೆ.

**ಕೆಳದಿ - ಇಕ್ಕೇರಿ :**

ಸಾಗರ ತಾಲ್ಲೂಕಿನ ಎರಡು ಗ್ರಾಮಗಳು ಕೆಳದಿ ಮತ್ತು ಇಕ್ಕೇರಿ. ಇವೆರಡೂ ಇತಿಹಾಸ ಪ್ರಸಿದ್ಧ. ಕೆಳದಿ ನಾಯಕರ ಕೇಂದ್ರಸ್ಥಳವೇ ಕೆಳದಿ. ಇಕ್ಕೇರಿ ಕೆಳದಿಯ ಎರಡನೇ ರಾಜಧಾನಿ.

ಕೆಳದಿ ಸಾಗರದಿಂದ 9 ಕಿ.ಮೀ. ದೂರದಲ್ಲಿದೆ. ಇಲ್ಲಿ ಶ್ರೀರಾಮೇಶ್ವರ. ಪಾರ್ವತಾಂಬ ಹಾಗೂ ವೀರಭದ್ರ ದೇವಾಲಯಗಳಿದ್ದು ಇವು ಶಿಲ್ಪಕಲೆಯ ಆಗರವಾಗಿವೆ. ಕೆಳದಿ ದೇವಾಲಯ ವಿಜಯನಗರದ ದೇವಾಲಯವನ್ನನು ಸರಿಸಿದೆ.

ರಾಮೇಶ್ವರ ದೇವಾಲಯ ಮಧ್ಯೆ ಇದ್ದರೆ ಎಡಕ್ಕೆ ಪಾರ್ವತಿ ಹಾಗೂ ಬಲಕ್ಕೆ ವೀರಭದ್ರ ದೇವಾಲಯಗಳಿವೆ. ರಾಮೇಶ್ವರ ದೇವಾಲಯವನ್ನು ಕೃಷ್ಣದೇವರಾಯನಿಂದ ಕೆಳದಿಯ ನಾಯಕತ್ವ ವಹಿಸಿಕೊಂಡ ಚೌಡಪ್ಪನಾಯಕ ಕಟ್ಟಿಸಿದನೆನ್ನಲಾಗಿದೆ. ಇವನ ವಂಶದವರು ಕೆಳದಿಯ ಅರಸರಾಗಿ ಆಳಿದರೆನ್ನುತ್ತಾರೆ.

ರಾಮೇಶ್ವರ ದೇವಾಲಯದಲ್ಲಿ ಹೊಯ್ಸಳ, ದ್ರಾವಿಡ ಹಾಗೂ ಇಸ್ಲಾಮಿ ವಾಸ್ತುಶೈಲಿಗಳ ಮಿಶ್ರಣವನ್ನು ಕಾಣಬಹುದು. ಚೌಕಾಕಾರದ ಗರ್ಭಗೃಹ, ಪ್ರದಕ್ಷಿಣ ಪಥ, ಮುಂದೆ ಎರಡು ಕಂಬಗಳಿಂದ ಕೂಡಿದ ರಂಗ ಮಂಟಪ ಹಾಗೂ ದೊಡ್ಡ ಮುಖಮಂಟಪ ಇವೆ. ಗರ್ಭಗೃಹದ ಮೇಲೆ ಚೌಕಾಕೃತಿಯ ಶಿಲಾಗೋಪುರ. ಅದರ ನಾಲ್ಕು ಮೂಲೆಗಳಲ್ಲಿ ನಂದಿ, ತುದಿ ಯಲ್ಲಿ ಲೋಹದ ಕಲಶ ಇವೆ. ಗರ್ಭಗೃಹದಲ್ಲಿ ಎರಡೂವರೆ ಅಡಿ ಎತ್ತರದ ಲಿಂಗವಿದ್ದು ಅದರ ಮೈ ಹೊಳೆಯುತ್ತದೆ. ಈ ದೇವಾಲಯದಲ್ಲಿ ಬೇಡರ ಕಣ್ಣಪ್ಪ, ಗರುಡ–ಹನುಮರ ಕದನ, ಒಂಟೆ, ಆನೆ, ಮೊದಲಾದ ಉಬ್ಬುಶಿಲ್ಪ ಗಳನ್ನೂ. ಗಣಪತಿ, ಮಹಿಷಮರ್ದಿನಿಗಳ ಮೂರ್ತಿಗಳನ್ನೂ ಕಾಣಬಹುದು. ಗರ್ಭಗುಡಿಯ ಬಾಗಿಲ ಮೇಲೆ ರಾಮೇಶ್ವರನ ಮೂರ್ತಿ ಇದೆ.

ವೀರಭದ್ರ ದೇವಾಲಯದಲ್ಲಿ ಹೆಚ್ಚು ಶಿಲ್ಪಗಳಿದ್ದು, ಒಂದು ಮೂರ್ತಿ ಶಿಲ್ಪ ತುಂಬಾ ವಿಚಿತ್ರವಾಗಿದೆ. ಈ ಶಿಲ್ಪ ಪುರುಷಾಕೃತಿಯದಾಗಿದೆ. ಆನೆಯ ಕಾಲುಗಳನ್ನು ಹೋಲುವ ದಪ್ಪ ಕಾಲುಗಳು, ಆನೆಯ ಸೊಂಡಲಿನಂತಹ

ಕೈಗಳು, ಪಕ್ಷಿಯ ಬೆನ್ನಿನಂತಹ ದೇಹ, ಸಿಂಹದ ಮುಖ, ನೀಳಗಡ್ಡ ಇರುವ ಈ ಮೂರ್ತಿಯ ಸುತ್ತ ಮಿಥುನ ಶಿಲ್ಪಗಳು ಇವೆ. ಕೆಲವು ಮೂರ್ತಿಶಿಲ್ಪಗಳೂ ಇವೆ. ಮುಖಮಂಟಪದ ಪಶ್ಚಿಮದ ಗೋಡೆಗೆ ಸೇರಿದ್ದಂತೆ ದಕ್ಷಬ್ರಹ್ಮ ಮತ್ತು ನರಸಿಂಹ ಮೂರ್ತಿಗಳಿವೆ. ಈ ವಿಗ್ರಹಗಳು ಭವ್ಯವಾಗಿವೆ. ಗಂಡಭೇರುಂಡ ಇರುವ ಭುವನೇಶ್ವರಿ ನಯನ ಮನೋಹರ. ಪಾರ್ವತಿಯ ಗುಡಿ ಚಿಕ್ಕದಿದ್ದು ಮಂಟಪದ ಒಳಭಾಗದ ಮರದ ಕೆತ್ತನೆ ಗಮನಾರ್ಹ. ವೀರಭದ್ರ ದೇವಾಲಯದ ವೀರಭದ್ರ ಮೂರ್ತಿ ಗಮನ ಸೆಳೆಯುತ್ತದೆ.

ಕೆಳದಿಯಲ್ಲಿ ಆಂಜನೇಯ, ವೆಂಕಟರಮಣ, ಗೋಪಾಲಕೃಷ್ಣ, ವೀರಭದ್ರ ಮೊದಲಾದ ದೇವಾಲಯಗಳೂ ಇವೆ.

ಇಕ್ಕೇರಿಯಲ್ಲಿ ಇಕ್ಕೇರಿ ನಾಯಕರ ಕಾಲದಲ್ಲಿ ಕಟ್ಟಲಾದ ಅಘೋರೇಶ್ವರ ದೇವಾಲಯವಿದೆ. ದೇವಾಲಯದ ಹಾಸುಗಲ್ಲಿನ ಮೇಲೆ ಇರುವ ಭದ್ರ ವಿಗ್ರಹಗಳು, ಸದಾಶಿವನಾಯಕ ಹಾಗೂ ಭದ್ರಪ್ಪನಾಯಕರದೆಂದು ತಿಳಿಯಲಾಗಿದೆ.

ಅಘೋರೇಶ್ವರ ದೇವಾಲಯ ಆರು ಅಡಿ ಎತ್ತರದ ಜಗತಿಯ ಮೇಲಿದೆ. ಕೆಳಗಿನ ದಿಂಡಿನ ಮೇಲೆ ಒಂದರಲ್ಲಿ ಕೀರ್ತಿಮುಖಗಳ ಹಾಗೂ ಇನ್ನೊಂದರ ಮೇಲೆ ಸಿಂಹಸಾಲುಗಳ ಅಲಂಕಾರವಿದೆ. ದೇವಾಲಯ ಹೊಯ್ಸಳ ಮತ್ತು ದ್ರಾವಿಡ ಮಿಶ್ರಣ ಶೈಲಿಯಲ್ಲಿದೆ. ಬಸವ ಮಂಟಪ ಹಾಗೂ ಮುದ್ದಾದ ಎರಡು ಆನೆಗಳು (ಕಲ್ಲಿನ) ಮಹಾದ್ವಾರಗಳಲ್ಲಿಯೇ ಪ್ರವಾಸಿಗಳನ್ನು ಸ್ವಾಗತಿಸುವಂತಿವೆ.

ಗುಡಿಭಾಗದಲ್ಲಿ ಒಂದು ಚತುರಸ್ರಾಕಾರದ ಗರ್ಭಗೃಹ, ಸುಕನಾಸಿ, 25 ಅಂಕಣಗಳ ಮಂಟಪವಿದೆ. ಮಂಟಪದ ಹೊರಗೋಡೆಯ ಮೇಲ ಉಬ್ಬುಶಿಲ್ಪಗಳ ಅಲಂಕರಣವಿದೆ. ಹಲವು ಶಿಲ್ಪಗಳ ಸಾಲು ಚಕಿತಗೊಳಿಸುತ್ತದೆ. ಸುಕನಾಸಿಯಿಂದ ಗರ್ಭಗೃಹವನ್ನು ಸುತ್ತಿಬರಲು ಪ್ರದಕ್ಷಿಣಾ ಪಥವಿದೆ. ದೇವಾಲಯದ ಜಾಲರಂಧ್ರಗಳು ಕಲಾಚಾತುರ್ಯದಿಂದ ಕೂಡಿವೆ. ನಂದಿ ಮಂಟಪದಲ್ಲಿರುವ ನಂದಿ ವಿಗ್ರಹ ಬೆರಗುಗೊಳಿಸುತ್ತದೆ. ನುಣುಪು ಮೈಯ ನಂದಿ ಆಕರ್ಷಕ.

ಅಘೋರೇಶ್ವರ ದೇವಾಲಯದ ಪಶ್ಚಿಮಕ್ಕಿರುವ ಪಾರ್ವತಿ ಗುಡಿಯ ಮುಂದೆಯೂ ನಂದಿ ಮಂಟಪವಿದೆ. ಟಂಕಸಾಲೆ ಗಣಪತಿ ಗುಡಿ ಇಕ್ಕೇರಿಯ ಇನ್ನೊಂದು ದೇವಾಲಯ.

ಸಾಗರ ಪಟ್ಟಣದಲ್ಲಿ ಮಾರಿಕಾಂಬ ದೇವಾಲಯ ಪ್ರವಾಸಿಗಳ ಗಮನ ಸೆಳೆಯುತ್ತದೆ. ರಥದ ಮಾದರಿಯಲ್ಲಿ ನಿರ್ಮಿಸಲಾಗಿರುವ ಮಾರಿಕಾಂಬ ದೇವಾಲಯವೂ ಅತ್ಯಂತ ಆಕರ್ಷಕವಾಗಿದೆ. ಸತ್ಯನಾರಾಯಣ, ಸಿದ್ಧಿ ವಿನಾಯಕ, ಕಾಳಿಂಗಮರ್ದನ ಮತ್ತು ಗೋಪಾಲಕೃಷ್ಣ, ಶಿವದೇವಾಲಯಗಳು ಈ ಪಟ್ಟಣದಲ್ಲಿವೆ. ಮೂರು ವರ್ಷಗಳಿಗೊಮ್ಮೆ ಸಾಗರದಲ್ಲಿ ಜರುಗುವ ಮಾರಿಜಾತ್ರೆ ಪ್ರಸಿದ್ಧ.

ಸಾಗರದ ಈಶಾನ್ಯದಲ್ಲಿ 10 ಕಿ.ಮೀ. ದೂರದಲ್ಲಿರುವ ನಾಡಕಳಸಿಯಲ್ಲಿ ಹೊಯ್ಸಳರ ಕಾಲದ ಎರಡು ಸುಂದರ ದೇವಾಲಯಗಳಿವೆ. ಮಲ್ಲಿಕಾರ್ಜುನ, ಬಲ್ಲೇಶ್ವರ, ನೀಲಕಂಠೇಶ್ವರ ದೇವಾಲಯಗಳು ಶಿಲ್ಪಕಲಾಚಾತುರ್ಯದಿಂದ ಕೂಡಿದ್ದು ಪ್ರೇಕ್ಷಣೀಯವಾಗಿವೆ. ಸಾಗರದ ಆಗ್ನೇಯಕ್ಕೆ 24 ಕಿ.ಮೀ. ದೂರದಲ್ಲಿರುವ ಆನಂದಪುರದಲ್ಲಿ ಶಿವ (ಸುಂದರ ಶಿವಲಿಂಗಮೂರ್ತಿ), ಆಂಜನೇಯ ಹಾಗೂ ರಂಗನಾಥ ದೇವಾಲಯಗಳಿದ್ದು ಇವು ಇತ್ತೀಚಿನ ನಿರ್ಮಾಣಗಳಾಗಿವೆ. ಇಲ್ಲಿಂದ ಮೂರು ಕಿ.ಮೀ. ದೂರದಲ್ಲಿ ಚಂಪಕಸರಸ್ಸಿನಲ್ಲಿ ಮಹಂತರ ಮಠವಿದೆ. ಸಾಗರದ ದಕ್ಷಿಣಕ್ಕೆ 11 ಕಿ.ಮೀ. ದೂರದಲ್ಲಿರುವ ಆವಿನ ಹಳ್ಳಿ ಕೆಳದಿನಾಯಕರ ಕಾಲದಲ್ಲಿ ಪ್ರಾಮುಖ್ಯತೆ ಪಡೆದಿದ್ದ ಸ್ಥಳ. ಇಲ್ಲಿ ಕೆಲವು ದೇವಾಲಯಗಳಿವೆ.

ಸಾಗರ ತಾಲ್ಲೂಕಿನಲ್ಲಿರುವ ವರದಹಳ್ಳಿ ಅಥವಾ ವರದಪುರ ಒಂದು ಆಧ್ಯಾತ್ಮಿಕ ಕ್ಷೇತ್ರ, ಸಾಗರದಿಂದ ಆರು ಕಿ.ಮೀ. ದೂರದಲ್ಲಿದೆ. ನಿಸರ್ಗ ಸಂಪತ್ತಿನಿಂದ ಕೂಡಿದ ಈ ರಮ್ಯತಾಣ ಪ್ರವಾಸಿಗಳಿಗೆ ಕೆಲಕಾಲ ನೆಮ್ಮದಿಯನ್ನು ತಂದುಕೊಡುತ್ತದೆ. ಇಲ್ಲಿ ಬೆಟ್ಟದ ಮೇಲೆ ಈಶ್ವರ ದೇವಾಲಯ ಇದೆ. ಮಹಿಷಾಸುರ ಮರ್ದಿನಿಯ ಸುಂದರ ಮೂರ್ತಿ ಇರುವ ದೇವಾಲಯ ಹಾಗೂ ತೀರ್ಥಕ್ಷೇತ್ರಗಳೂ ಇದೆ. ಮಹಾಯೋಗಿ ಶ್ರೀ ಶ್ರೀಧರಸ್ವಾಮಿಗಳು ತಪೋನಿರತರಾಗಿ ನಿರ್ವಾಣಗೊಂಡಿದ್ದು ಇಲ್ಲಿಯೇ. ಅವರ ಸಮಾಧಿ, ದೇವಾಲಯಗಳನ್ನು ಇಲ್ಲಿ ಕಾಣುತ್ತೇವೆ.

ವಿಶ್ವವಿಖ್ಯಾತ ಜೋಗ ಜಲಪಾತ ಇರುವ ಜೋಗದಲ್ಲಿ ಚಾಮುಂಡೇಶ್ವರಿ ದೇವಾಲಯವಿದೆ. ಮೈಸೂರು ಅರಮನೆಯಿಂದ ಕಳುಹಿಸಲ್ಪಟ್ಟ ಚಾಮುಂಡೇಶ್ವರಿ ವಿಗ್ರಹವು ಈ ದೇವಾಲಯದಲ್ಲಿ ಪ್ರತಿಷ್ಠಾಪನೆಗೊಂಡಿದೆ ಎನ್ನಲಾಗಿದೆ. ಈ ಅಪೂರ್ವ ವಿಗ್ರಹ ಎರಡೂ ಬದಿಯಲ್ಲಿ ಕೆತ್ತಲ್ಪಟ್ಟಿರುವುದಾಗಿದ್ದು ದೇವಿಯ ಸೌಮ್ಯ ರೂಪವೂ ರೌದ್ರರೂಪವೂ ಇದರಲ್ಲಿ ಕಲಾತ್ಮಕವಾಗಿ ಒಂದೊಂದು ಕಡೆ ಮೂಡಿ ನಿಂತಿದೆ. ದೇವಾಲಯಕ್ಕೆ ಹೋಗಲು ಮೆಟ್ಟಿಲುಗಳಿವೆ. ನವರಾತ್ರಿ ಸಮಯದಲ್ಲಿ ಇಲ್ಲಿ ವಿಶೇಷ ಪೂಜೆ ಇರುತ್ತದೆ. ಜೋಗದಲ್ಲಿ ಹೊಸದಾಗಿ ಕಟ್ಟಲಾಗಿರುವ ಗಣಪತಿ ದೇವಾಲಯವಿದೆ. ಸಾಗರ ತಾಲ್ಲೂಕಿನ ಪ್ರತಿ ಹಳ್ಳಿಯಲ್ಲಿ ಗ್ರಾಮದೇವತೆಗೆಂದು ಕಟ್ಟಲಾದ ಪುಟ್ಟ ಗುಡಿಗಳೂ ಇರುತ್ತವೆ. ತಾಳಗುಪ್ಪ, ಶಿರವಂತೆ ಗ್ರಾಮಗಳಲ್ಲಿಯೂ ದೇವಾಲಯಗಳಿವೆ. ಕಾರ್ಗಲ್‌ನಲ್ಲಿ ಗಣಪತಿ ಹಾಗೂ ಅಯ್ಯಪ್ಪ ದೇವಾಲಯಗಳೂ ಶ್ರೀರಾಮ ಮಂದಿರವೂ ಇದೆ. ಜಂಬಾನ್ ಗ್ರಾಮದಲ್ಲಿ ಕ್ರಿ.ಶ. 4ನೇ ಶತಮಾನದ ದ್ವಿಭುಜ ಗಣೇಶ ಬಿಂಬ ಇರುವ ದೇವಾಲಯವಿದೆ. ಗೌಜ ಗ್ರಾಮದಲ್ಲಿರುವ ಸೂರ್ಯ ದೇವಾಲಯದ ಮೂರ್ತಿ ಸುಮಾರು ನಾಲ್ಕು ಅಡಿ ಎತ್ತರವಿದ್ದು ನಾಲ್ಕು ಕೈಗಳಿಂದ ಕೂಡಿದೆ.

ವರದಾಮೂಲವೆಂಬಲ್ಲಿ ಅನೇಕ ತೀರ್ಥಗಳೂ ದೇವಾಲಯಗಳೂ ಇವೆ. ಇಲ್ಲಿರುವ ಧ್ವಜ ಸ್ತಂಭವು ಒಂದು ಶಿಲೆಯ ಭಾಗ ಎನ್ನಲಾಗಿದೆ. ಇಕ್ಕೇರಿಯ ಅಘೋರೇಶ್ವರ ದೇವಾಲಯ ನಿರ್ಮಾಣ ಕಾಲದಲ್ಲಿ ಒಂದೇ ಶಿಲೆಯು ಬಹು ಉದ್ದವೆನಿಸಿದ್ದರಿಂದ ಅದನ್ನು ಮರೆಮಾಚಿಡಲಾಗಿದೆ. ಯಾವ ಕಾರಣದಿಂದಲೋ ಅದು ಮೂರು ತುಂಡುಗಳಾಯಿತೆಂದೂ ಒಂದು ಭಾಗವನ್ನು ಸಾಗರದ ಗಣಪತಿ, ಇನ್ನೊಂದು ಕೆಳದಿಯ ದೇವಾಲಯದಲ್ಲಿಯೂ, ಅಂತ್ಯ ಭಾಗವನ್ನು ವರದಾ ಮೂಲದಲ್ಲಿಯೂ ಸ್ಥಾಪಿಸಲಾಯಿತೆನ್ನಲಾಗಿದೆ. ಇಲ್ಲಿ ಶಿವ ದೇವಾಲಯ, ಗಜ ಪೃಷ್ಠಾಕೃತಿ ವಿನ್ಯಾಸವುಳ್ಳದ್ದಾಗಿದೆ. ಇಲ್ಲಿನ ಗಜ ಲಕ್ಷ್ಮಿಯ ಎರಡು ಪಾರ್ಶ್ವಗಳಲ್ಲಿ ಅಭಿಷೇಕಕ್ಕೆ ಅಮೃತ ಕಲಶಗಳನ್ನು ಹಿಡಿದಿರುವ ಐದೈದು ಆನೆಗಳಿವೆ.

# ಹೊಸ ನಗರ ತಾಲ್ಲೂಕಿನ ದೇವಾಲಯಗಳು

ತಾಲ್ಲೂಕು ಕೇಂದ್ರವಾದ ಹೊಸ ನಗರದಲ್ಲಿ ವಿಜಯ ನಗರ ಶಿಲ್ಪದ ವೀರೇಶ್ವರ ದೇವಾಲಯವಿದೆ. ಇದು ಮೊದಲು ವೀರಭದ್ರಾಪುರದಲ್ಲಿತ್ತು. ಈ ಊರು ಮುಳುಗಡೆಯಾದ್ದರಿಂದ ಇಲ್ಲಿ ತಂದು ಕಟ್ಟಲಾಗಿದೆ. ಇಲ್ಲಿ ಗಣಪತಿ, ಜನಾರ್ಧನ, ಮಾರಿಕಾಂಬ ದೇವಾಲಯಗಳೂ ಇವೆ. ಶ್ರೀ ರಾಘವೇಂದ್ರಸ್ವಾಮಿಗಳ ಮಠವೊಂದಿದೆ. ಹೊಸ ನಗರಕ್ಕೆ ಎಂಟು ಕಿ.ಮಿ. ದೂರದಲ್ಲಿರುವ ಕಾರು ಗಡಿಯಲ್ಲಿ ವಿನಾಯಕ ದೇವಾಲಯವಿದ್ದು ಇದನ್ನು ಸಿದ್ಧಿ ಕ್ಷೇತ್ರ ಎನ್ನುತ್ತಾರೆ.

ಬಿದನೂರು ಎಂದು ಹೆಸರಿದ್ದ ನಗರ ತಾಲ್ಲೂಕಿನ ಒಂದು ಪ್ರಮುಖ ಸ್ಥಳ ಐತಿಹಾಸಿಕವಾಗಿ ನಗರ ಪ್ರಸಿದ್ಧವಾಗಿದೆ. ಇಲ್ಲಿನ ಕೋಟೆ ಇಂದಿಗೂ ಕಾಣಬಹುದು. ಶಿವಪ್ಪನಾಯಕನ ಕಾಲದಲ್ಲಿ ನಗರದ ವೈಭವ ಮನೆ ಮಾತಾಗಿತ್ತು. ನಗರದ ಒಳಭಾಗದ ರಚನೆ ಯೋಜನಾ ಉದ್ದೇಶವಾಗಿತ್ತು. ಹೈದರಾಲಿ ಈ ಊರನ್ನು ಹೈದರ್ ನಗರ ಎಂದು ಕರೆದಿದ್ದ. ನಗರ ಹಲವು ದೇವಾಲಯಗಳನ್ನೊಳಗೊಂಡಿದೆ. ನೀಲಕಂಠೇಶ್ವರ, ಪಾರ್ವತಿ, ಗುಡ್ಡದ ವೆಂಕಟರಮಣ, ನಗರೇಶ್ವರ, ಬಸವಣ್ಣ, ಗಣಪತಿ ದೇವಾಲಯಗಳು ಊರೊಳಗಿದ್ದರೆ ಪಂಚಮುಖಿ ಆಂಜನೇಯ, ರೇಣುಕಾ ದೇವಿ ಗುಡಿಗಳು ಊರ ಹೊರಗಿವೆ. ನಗರೇಶ್ವರ ದೇವಾಲಯವನ್ನು ಹಿಂದೆ ನಗರದಲ್ಲಿ ಒಂದು ಲಕ್ಷ ಮನೆಗಳಿದ್ದ ನೆನಪಿಗಾಗಿ ಕಟ್ಟಿಸಿದ್ದನ್ನಲಾಗಿದೆ.

ಹೊಸ ನಗರದಿಂದ 6 ಕಿ.ಮಿ. ದೂರದಲ್ಲಿರುವ ರಾಮಚಂದ್ರಾಪುರ ಒಂದು ವೈದಿಕ ಕ್ಷೇತ್ರ. ಇಲ್ಲಿ ಹವ್ಯಕ ಬ್ರಾಹ್ಮಣರ ಮಠವಿದೆ. ರಾಮ ಚಂದ್ರ ಮತ್ತು ಚಂದ್ರಮಹೌಳೇಶ್ವರ ದೇವರುಗಳನ್ನು ಇಲ್ಲಿ ಆರಾಧಿಸು ತ್ತಾರೆ. ಹೊಸನಗರ ಆನಂದಪುರ ರಸ್ತೆಯಲ್ಲಿ ಹರತಾಳು ಗ್ರಾಮವಿದ್ದು ಇಲ್ಲಿ ಸುಬ್ರಹ್ಮಣ್ಯ, ಉಮಾಮಹೇಶ್ವರ, ಗಣಪತಿ, ಸತ್ಯನಾರಾಯಣ ಹಾಗೂ ನವಗ್ರಹಗಳ ಆಧುನಿಕ ದೇವಾಲಯಗಳಿವೆ. ನಗರ ಮತ್ತು ಕೊಲ್ಲೂರಿನ ರಸ್ತೆಯಲ್ಲಿ ನಿಟ್ಟೂರಿನ ಬಳಿ ಸುಳಗೋಡು ಎಂಬಲ್ಲಿ ಪರಮೇಶ್ವರ ದೇವಾ ಲಯವಿದೆ. ಇದು ಪರಮ ದೇವ ಕವಿಯ ಜನ್ಮಸ್ಥಳವಾಗಿದೆ.

## ಪ್ರಸಿದ್ಧ ಜೈನ ಕ್ಷೇತ್ರ ಹೊಂಬುಚ

ಹೊಂಬುಚ ಅಥವಾ ಹೊಂಬುಜ (ಹುಂಚ) ಜೈನರ ಪವಿತ್ರ ಕ್ಷೇತ್ರ. ಸಾಂತಾರರ ರಾಜಧಾನಿಯಾಗಿದ್ದ ಸ್ಥಳ. ಹೊಂಬುಜದಲ್ಲಿ ಪಾರ್ಶ್ವನಾಥ ಬಸದಿ, ಮಠದ ಬಸದಿ, ಮಕ್ಕಳ ಬಸದಿ, ಬೋಗಾರ ಬಸದಿ, ಪದ್ಮಾವತಿ ಅಮ್ಮನವರ ಮಂದಿರಗಳಿದ್ದು ಇವು ಶಿಲ್ಪಕಲಾ ಕೃತಿಗಳಾಗಿವೆ. ಇಲ್ಲಿ ಈಗ ಜೈನ ಧರ್ಮಿಯರ ದಿಗಂಬರ ಪಂಥದ ಧರ್ಮಪೀಠವಿದೆ. ಕ್ರಿ.ಶ. 1077ರಲ್ಲಿ ಕಟ್ಟಲಾದ ಪಂಚ ಬಸದಿಯಲ್ಲಿ ಐವರು ತೀರ್ಥಂಕರರ ತಪೋ ಭಂಗಿಯ ಐದು ಮೂರ್ತಿಗಳಿರುವ ಪ್ರತ್ಯೇಕ ಐದು ಗರ್ಭಗೃಹಗಳಿವೆ. ಗರ್ಭಗೃಹದ ಎದುರಿನ ಮಂಟಪದಲ್ಲಿ ಪದ್ಮಾವತಿ, ಸರಸ್ವತಿ ಮತ್ತು ಧರಣೇಂದ್ರ ಯಕ್ಷರ ಮನೋಹರವಾದ ಮೂರ್ತಿಗಳಿವೆ. ಹೊರ ಬಾಗಿಲಿನಲ್ಲಿ ಎರಡೂವರೆ ಅಡಿ ಎತ್ತರದ ದ್ವಾರ ಪಾಲಕರ ಸುಂದರವಾದ ಶಿಲಾ ಮೂರ್ತಿಗಳಿವೆ. ಮುಂಭಾಗದಲ್ಲಿ ಮಾನಸ್ತಂಭವಿದೆ. ಮಾನಸ್ತಂಭದ ವೇದಿಕೆ, ವೇದಿಕೆಯ ಸ್ತರ ಹಾಗೂ ಅವರ ಸುತ್ತ ಇರುವ ಕೆತ್ತನೆಗಳು ಸುಂದರವಾಗಿವೆ. ಇವೆಲ್ಲ ಚಾಲುಕ್ಯ ಮತ್ತು ಹೊಯ್ಸಳ ಶಿಲ್ಪಗಳು. ಪಂಚ ಬದಿಯ ಆವರಣದೊಳಗೆ ಚಂದ್ರನಾಥ ಬಸದಿ ಇದ್ದು ಇಲ್ಲಿ ಚಂದ್ರಪ್ರಭ ತೀರ್ಥಂಕರರ ಯಕ್ಷ ಯಕ್ಷಿ ಸಹಿತವಾದ ಪ್ರತಿಮೆ ಇದೆ. ಚಂದ್ರನಾಥ ಬಸದಿ ಬಲಭಾಗಕ್ಕಿದ್ದರೆ ಎಡ ಭಾಗಕ್ಕೆ ಪಾರ್ಶ್ವನಾಥ ಬಸದಿ ಇದೆ. ಇಲ್ಲಿ ಒಂದೂವರೆ ಅಡಿ ಎತ್ತರದ ಪಾರ್ಶ್ವನಾಥ ತೀರ್ಥಂಕರರ ಮೂರ್ತಿ ಇದೆ. ಮಕ್ಕಳ ಬಸದಿಯಲ್ಲಿ ನಾಲ್ಕು ಅಡಿ ಎತ್ತರದ ಪಾರ್ಶ್ವನಾಥಸ್ವಾಮಿಯ ವಿಗ್ರಹವಿದೆ.

ಶ್ರೀಮಠದ ಬಸದಿ ಪಕ್ಕದಲ್ಲಿರುವ ಪಾರ್ಶ್ವನಾಥ ಬಸದಿ ಹೊಂಬುಜದ ಬಸದಿಗಳಲ್ಲೆಲ್ಲ ಪ್ರಮುಖವಾದುದು. ಇದರಲ್ಲಿ ಪದ್ಮಾಸನ ಹಾಕಿ ಕುಳಿತಿರುವ ಪಾರ್ಶ್ವನಾಥ ತೀರ್ಥಂಕರರ ಮೂರ್ತಿ ಇದೆ. ನಾಲ್ಕೂವರೆ ಅಡಿ ಎತ್ತರದ ಈ ಮೂರ್ತಿ ಸುಂದರವಾಗಿದೆ. ಪಾರ್ಶ್ವನಾಥ ಬಸದಿಯ ಆವರಣದಲ್ಲಿರುವ ತುಲಾಭಾರ ಒಂದು ಸುಂದರ ಶಿಲ್ಪ. ಈ ಬಸದಿಯ ಎಡಭಾಗದಲ್ಲಿ ಪದ್ಮಾ

ವತಿದೇವಿಯ ಪ್ರಸಿದ್ಧವಾದ ಮಂದಿರವಿದೆ. ಇದರ ಹಿಂಬದಿಯಲ್ಲಿ ನೂರಾರು ವರ್ಷಗಳಿಂದಲೂ ಚಿಗುರುತ್ತಿರುವ ಲಕ್ಕಿಮರ ಇಂದಿಗೂ ಹಸುರಾಗಿದೆ.

ಬೋಗಾರ ಬಸದಿ ಶಾಂತಮಯ ವಾತಾವರಣದಲ್ಲಿವೆ. ಗುಡ್ಡದ ಬಸದಿ, ಸೂಳೆ ಬಸದಿ, ಮಠದ ಬಸದಿ ಇವು ಇತರ ಬಸದಿಗಳು. ಹೊಂಬುಜ ಕೇವಲ ಜೈನರಿಗೇ ಅಲ್ಲದೆ ಸರ್ವಧರ್ಮಗಳ ಜನರಿಗೂ ಯಾತ್ರಾಸ್ಥಳವಾಗಿದೆ. ಇಲ್ಲಿ ಕೆರೆಕೋಡಿ ಈಶ್ವರ, ಕಮಠೇಶ್ವರ, ಬನಶಂಕರಿ, ವೀರಭದ್ರ, ಆಂಜನೇಯ, ಗಣಪತಿ, ಏಕನಾಥೇಶ್ವರಿ ಇವೇ ಮೊದಲಾದ ವೈದಿಕ ದೇವಾಲಯಗಳೂ ಇವೆ.

ಹೊಂಬುಜದಿಂದ ಐದು ಕಿ.ಮೀ. ದೂರದಲ್ಲಿ ನಾಗರಹಳ್ಳಿ ಇದ್ದು ಇಲ್ಲಿ ಸುಬ್ರಹ್ಮಣ್ಯ ದೇವಾಲಯವಿದೆ, ಒಂದು ಅಡಿ ಎತ್ತರದ ಮಾನವಾಕೃತಿಯ ಸುಬ್ರಹ್ಮಣ್ಯನ ಸುತ್ತ 77 ನಾಗರ ಹೆಡೆಗಳನ್ನು ವೃತ್ತಾಕಾರದಲ್ಲಿ ಕಲಾತ್ಮಕ ವಾಗಿ ಬಿಡಿಸಲಾಗಿದೆ. ಭಿಲ್ಲೇಶ್ವರ ಹೊಂಬುಜದ ಬಳಿಯ ಇನ್ನೊಂದು ಕ್ಷೇತ್ರ. ಇಲ್ಲಿ ಶ್ರೀ ರಾಮೇಶ್ವರ, ಶ್ರೀ ಲಕ್ಷ್ಮಣೇಶ್ವರ ದೇವಾಲಯಗಳಿವೆ. ಭಿಲ್ಲರ ನಾಯಕರ ಮನೆದೇವರಾಗಿ ಭಿಲ್ಲೇಶ್ವರ, ಭಿಲ್ಲರ ರಾಮೇಶ್ವರ ಎಂಬ ಹೆಸರು ಗಳಿವೆ. ಶ್ರೀ ಭಿಲ್ಲೇಶ್ವರ ಗುಡಿ, ವೀರಭದ್ರ, ಒಂದಂಕಣದ ಚಂಡಿಕೇಶ್ವರ ಗುಡಿಗಳು ಇಲ್ಲಿವೆ.

ರಿಪ್ಪನ್ ಪೇಟೆಯ ಸಿದ್ಧಿವಿನಾಯಕ ದೇವಾಲಯ ಚಕ್ರನಗರದ ಗಣೇಶನ ಗುಡಿ ಹೊಸನಗರ ತಾಲ್ಲೂಕಿನ ಇತರ ದೇವಾಲಯಗಳು. ದಕ್ಷಿಣ ಕನ್ನಡ ಜಿಲ್ಲೆ ಯಿಂದ ಹೊಸನಗರ ಪ್ರಾಂತಕ್ಕೆ ಬರಲು ಇರುವ ಘಾಟ್‌ಬಳಿ ಹುಲಿಕಲ್ ಗ್ರಾಮವಿದ್ದು ಇಲ್ಲಿ ನರಸಿಂಹ ದೇವಾಲಯವಿದೆ.

**ಚಂದ್ರಗುತ್ತಿ**

ಸೊರಬ ತಾಲ್ಲೂಕಿನ ಹಿಂದು ಪ್ರವಾಸಿ ಕೇಂದ್ರ ಹಾಗೂ ಯಾತ್ರಾ ಸ್ಥಳ. ಚಂದ್ರಗುತ್ತಿ ಗುಡ್ಡದ ಮೇಲಿರುವ ದೇವಾಲಯದಲ್ಲಿ ರೇಣುಕೆ (ಜಮ ದಗ್ನಿ ಋಷಿಗಳ ಪತ್ನಿ, ಪರಶುರಾಮನ ತಾಯಿ) ನೆಲಸಿದ್ದಾಳೆಂದು ನಂಬು ತ್ತಾರೆ. ಇಲ್ಲಿ ರೇಣುಕೆಯನ್ನು ಗುಹಾಂಬ, ಗುತ್ತಮ್ಮ ಎಂದೂ ಕರೆಯು ತ್ತಾರೆ. ಗುಹೆಯನ್ನು ಒಳಗೊಂಡಂತೆ ಕಟ್ಟಿದ ಪ್ರಾಚೀನ ದೇವಾಲಯವಿದ್ದು

ಗುಹೆಯ ಮುಂದೆ ಸುಕನಾಸಿ, ನವರಂಗಗಳಿವೆ. ಚಂದ್ರಗುತ್ತಿಯ ರೇಣುಕಾ ದೇವಾಲಯ ಖ್ಯಾತಿವೆತ್ತುದಾಗಿದೆ. ಇಲ್ಲಿಯೇ ಮಾತಂಗಿ, ಪರಶುರಾಮ ದಂಡಿನ ದುರ್ಗಿ, ಶೂಲದ ಬೀರಪ್ಪ ಮೊದಲಾದ ವಿಗ್ರಹಗಳಿವೆ. ಗುಡ್ಡದ ತುದಿಯಲ್ಲಿ ಚಂದ್ರಮೌಳೀಶ್ವರ ದೇವಾಲಯವಿದೆ.

ಸೊರಬ ತಾಲ್ಲೂಕಿನ ದೇವಾಲಯಗಳು ಹೆಚ್ಚಾಗಿ ಕದಂಬ, ಚಾಲುಕ್ಯ, ವಿಜಯನಗರ ಶಿಲ್ಪ ಸಂಪ್ರದಾಯವಾಗಿದೆ. ಸೊರಬದಲ್ಲಿ ಶ್ರೀ ರಂಗನಾಥ ದೇವಾಲಯವಿದೆ. ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ ಗಳುಳ್ಳ ಈ ದೇವಾಲಯ ಶಿಲ್ಪಕಲೆಯ ದೃಷ್ಟಿಯಿಂದ ಗಮನಾರ್ಹವಾಗಿದೆ. ಗರ್ಭಗುಡಿಯ ಮೇಲಿನ ಗೋಪುರದಲ್ಲಿ ಮಹಾಲಕ್ಷ್ಮಿಯ ಶಿಲ್ಪವಿದೆ. ದ್ವಾರ ದಲ್ಲಿ ಸುಂದರ ಆನೆಗಳು (ಶಿಲ್ಪ) ಇದ್ದರೆ ಮುಂಭಾಗದಲ್ಲಿ ಸ್ತಂಭವಿದೆ. ವಿಠಲ ಮಂದಿರ, ಆಂಜನೇಯನ ಗುಡಿ, ಸಮೀಪದ ರಾಮೇಶ್ವರ ಗುಡಿ ಸೊರಬದ ಇತರ ದೇವಾಲಯಗಳಾಗಿವೆ.

ಸೊರಬದಿಂದ 12 ಕಿ.ಮೀ. ದೂರದ 'ಪುರ'ದಲ್ಲಿ ಸೋಮೇಶ್ವರ ದೇವಾ ಲಯವಿದೆ. ಇಲ್ಲಿ ಹಲವು ಸೂಕ್ಷ್ಮ ಕೆತ್ತನೆಗಳು ಗೋಚರಿಸುತ್ತವೆ. ನವರಂಗ ದಲ್ಲಿ ಉಮಾಮಹೇಶ್ವರಿ, ಚಾಮುಂಡೇಶ್ವರಿ, ಸಪ್ತ ಮಾತೃಕೆಯರು ಹಾಗೂ ವಿಷ್ಣುಮೂರ್ತಿಗಳಿವೆ. ಗರ್ಭಗುಡಿಯಲ್ಲಿ ನಂದೀರೂಢನಾದ ಸೋಮೇಶ್ವರನ ವಿಗ್ರಹ ಸುಂದರವಾಗಿದೆ. ಶಿವ ಇಲ್ಲಿ ಚತುರ್ಭುಜನಾಗಿ ಡಮರು, ಕಪಾಲ, ತ್ರಿಶೂಲಗಳನ್ನು ಹಿಡಿದಿರುತ್ತಾನೆ.

ಹರಿಭಕ್ತ ಚಂದ್ರಹಾಸನ ಕುಂತಳ ನಗರ ಎಂದು ತಿಳಿಯಲಾಗಿರುವ ಕುಬಟೂರು ಸೊರಬದಿಂದ 30 ಕಿ.ಮೀ. ದೂರದಲ್ಲಿದೆ. ಇಲ್ಲಿ ಕಾಳಿಕಾ ದೇವಾಲಯವಿದ್ದು ಈ ದೇವಾಲಯದಲ್ಲಿಯೇ ಮಂತ್ರಿ ದುಷ್ಟಬುದ್ಧಿ ಮರಣ ಹೊಂದಿದನೆಂದು ಹೇಳುತ್ತಾರೆ. ಪಾರ್ಶ್ವನಾಥ ಬಸದಿ, ರಾಮೇಶ್ವರ ಹಾಗೂ ಚಿಂತಾಮಣಿ ನರಸಿಂಹ ದೇವಾಲಯಗಳು ಈ ಊರಿನಲ್ಲಿವೆ. ಪಾರ್ಶ್ವನಾಥ ಬಸದಿಯ ಗರ್ಭಗೃಹದಲ್ಲಿ ಕುಳಿತ ಭಂಗಿಯಲ್ಲಿರುವ ಜಿನ ವಿಗ್ರಹವಿದೆ. ಸೊರಬದಿಂದ 15 ಕಿ.ಮೀ. ದೂರದಲ್ಲಿರುವ ಕುಪ್ಪಗದ್ದೆಯ ರಾಮೇಶ್ವರ ದೇವಾಲಯ ನೋಡಬೇಕಾದುದು. ದೇವಾಲಯದಲ್ಲಿ ಗರ್ಭಗುಡಿ, ಸುಕನಾಸಿ,

5 ಅಂಕಣದ 24 ಸ್ತಂಭಗಳ ಸಭಾಮಂಟಪವಿದೆ. ಇಲ್ಲಿನ ಒಂದು ನಂದಿ ವಿಗ್ರಹ ಭವ್ಯವಾಗಿದೆ. ಸುಂದರ ಜಾಲಂದ್ರಗಳಿವೆ. ಈ ಊರಿನ ವೇಣು ಗೋಪಾಲ, ನರಸಿಂಹ ದೇವಾಲಯಗಳು ಗಮನಾರ್ಹವಾಗಿವೆ.

ಕೋಡಕಣಿಯ ಸಿದ್ಧೇಶ್ವರ ಗುಡಿ, ಉದ್ರಿ ಎಂಬಲ್ಲಿನ ಈಶ್ವರನ ಗುಡಿ ಕೋಟಿಪುರದ ಕೈಟಭೇಶ್ವರ ದೇವಾಲಯ, ಭಾರಂಗಿಯ ಕೆರೆ ಸಮೀಪದ ಕಲ್ಲೇಶ್ವರ ತ್ರಿಕೂಟಾಚಲ ದೇವಾಲಯ ಹಾಗೂ ಮಲ್ಲಿಕಾರ್ಜುನ ಮತ್ತು ಬನ ಶಂಕರಿ ದೇವಾಲಯಗಳು, ಬಂತಸಾಣದ ಹೊಳೆಲಿಂಗೇಶ್ವರ, ತಲಕಾಲಕೊಪ್ಪದ ಸೀತಾರಾಮಚಂದ್ರ ದೇವಸ್ಥಾನ ಇವು ಸೊರಬ ತಾಲ್ಲೂಕಿನ ಇತರ ದೇವಾಲ-ಯಗಳು. ಭಾರಂಗಿಯ ಕಲ್ಲೇಶ್ವರ ದೇವಾಲಯದಲ್ಲಿ ಶಿವಲಿಂಗವನ್ನು ಕಣ್ಣು ಹುಬ್ಬು, ಮೂಸೆಗಳೊಂದಿಗೆ ಕೆತ್ತಿರುವುದು ವಿಶೇಷ ಎನ್ನಬಹುದು. ಉಳವಿ ಎಂಬಲ್ಲಿಯೂ ಕೆಲವು ದೇವಾಲಯಗಳಿವೆ.

ತಾಲ್ಲೂಕು ಕೇಂದ್ರವಾದ ತೀರ್ಥಹಳ್ಳಿಯ ಪರಶುರಾಮ ತೀರ್ಥದ ದಡದ ಮೇಲಿರುವ ಶ್ರೀ ರಾಮೇಶ್ವರ ದೇವಾಲಯ ಒಂದು ಅತಿ ಪ್ರಾಚೀನವಾದ ದೇವಾಲಯ. ಇಲ್ಲಿ ಎತ್ತರವಾದ ಈಶ್ವರ ಲಿಂಗವಿದೆ. ಪ್ರತಿವರ್ಷ ಇಲ್ಲಿ ಮಾರ್ಗಶಿರ ಬಹುಳ ಅಮಾವಾಸ್ಯೆಯಂದು ಎಳ್ಳಮವಾಸ್ಯೆ ಜಾತ್ರೆ ನಡೆಯು ತ್ತದೆ. ತೀರ್ಥಹಳ್ಳಿಗೆ 32 ಕಿ.ಮೀ. ದೂರದ ಆಗುಂಬೆಯಲ್ಲಿ 14ನೆಯ ಶತ-ಮಾನದ ಶ್ರೀ ಗೋಪಾಲಕೃಷ್ಣ ಸ್ವಾಮಿ ದೇವಾಲಯವಿದ್ದು ಇಲ್ಲಿನ ವಿಗ್ರಹ ಹೊಯ್ಸಳ ಶೈಲಿಯನ್ನು ಹೋಲುತ್ತದೆ. ತೀರ್ಥಹಳ್ಳಿಗೆ ನಾಲ್ಕು ಕಿ.ಮೀ. ದೂರದ ದೂರ್ವಾಸಪುರದ ಭೀಮನ ಕಟ್ಟೆಯಲ್ಲಿ ದ್ವಾರಕಾಪೀಠಾಧೀಶರ ಮಠ ಹಾಗೂ ಶಿಥಿಲಗೊಂಡ ಕೆಲವು ದೇವಾಲಯಗಳಿವೆ. ಹಣಗರೆ ಎಂಬಲ್ಲಿ ಒಂದು ಮುಸ್ಲಿಮರ ದರ್ಗಾ ಇದೆ. ಭೂತಪ್ಪ ಚೌಡಪ್ಪ ಗುಡಿಗಳೂ ಇವೆ.

ಮೇಳಿಗೆ ಇದೇ ತಾಲ್ಲೂಕಿನ ಒಂದು ಚಿಕ್ಕ ಗ್ರಾಮ. ಇದೊಂದು ಜೈನ ಕ್ಷೇತ್ರ. ಇಲ್ಲಿ ಅನಂತ ಸ್ವಾಮಿ ಬಸದಿ ಇದ್ದು ಕ್ಷೇತ್ರಪಾಲ ಮತ್ತು ಯಕ್ಷ ವಿಗ್ರಹಗಳಿವೆ. ಯಕ್ಷ ಒಂದು ಆನೆಯ ಮೇಲೆ ಎರಡೂ ಕೈಗಳಿಂದಲೂ ಧರ್ಮ ಚಕ್ರವನ್ನು ಹಿಡಿದು ನಿಂತಿರುವ ವಿಗ್ರಹ ಆರು ಅಡಿ ಎತ್ತರಕ್ಕಿದ್ದು ಭವ್ಯದಾಗಿದೆ.

ಕವಲೇದುರ್ಗ ಇತಿಹಾಸ ಪ್ರಸಿದ್ಧವಾಗಿರುವ ಈ ಬೆಟ್ಟದ ತುದಿಯಲ್ಲಿ ಶ್ರೀ ಕಂಠೇಶ್ವರ ದೇವಸ್ಥಾನವಿದೆ. ಮೃಗವಧೆ ಎಂಬಲ್ಲಿನ ಕೆಳದಿ ನಾಯಕರ ಕಾಲದ ಶ್ರೀ ಮಲ್ಲಿಕಾರ್ಜುನ ಸ್ವಾಮಿ ದೇವಾಲಯ ಸುಮಾರು 800 ವರ್ಷ ಗಳಷ್ಟು ಹಳೆಯದು. ಈ ತಾಲ್ಲೂಕಿನ ಅಂಬುತೀರ್ಥ ಎಂಬಲ್ಲಿ ಶರಾವತಿ ಇಲ್ಲಿನ ರಾಮೇಶ್ವರ ದೇವಾಲಯದಲ್ಲಿ ಈಶ್ವರ ಲಿಂಗ, ಗಣಪತಿ ವಿಗ್ರಹ ಇವೆ.

## ಶಿಕಾರಿಪುರ ತಾಲ್ಲೂಕಿನ ದೇವಾಲಯಗಳು

ಈ ತಾಲ್ಲೂಕಿನ ಬಳ್ಳಿಗಾವೆ ಮತ್ತು ಬಂದಳಿಕೆ ಗ್ರಾಮಗಳು ಇತಿಹಾಸ ಪ್ರಸಿದ್ಧವಾದವು. ಕದಂಬ, ಚಾಳುಕ್ಯ, ಕಳಚೂರ್ಯ, ಹೊಯ್ಸಳ, ವಿಜಯ ನಗರ, ಕೆಳದಿ ಕಡೆಗೆ ಮೈಸೂರರಸರ ಆಳ್ವಿಕೆಗೆ ಒಳಪಟ್ಟಿದ್ದ ಬಳ್ಳಿಗಾವೆ ಯನ್ನು ದಕ್ಷಿಣ ಕೇದಾರ ಎಂದೂ ಕರೆಯುತ್ತಾರೆ. ಇಲ್ಲಿ ಕೇದಾರೇಶ್ವರ, ಪಂಚಲಿಂಗೇಶ್ವರ, ಕಾಳಿಕಾ, ಸೋಮೇಶ್ವರ, ತ್ರಿಪುರಾಂತಕೇಶ್ವರ ದೇವಸ್ಥಾನ ಗಳಿವೆ. ಇಲ್ಲಿನ ಸುಂದರ ಕೆತ್ತನೆಗಳು ಅಪೂರ್ವ ಎನಿಸುತ್ತವೆ.

ಕೇದಾರೇಶ್ವರ ತ್ರಿಕೂಟಾಚಲ ದೇವಾಲಯ. ಇದನ್ನೇ ಕೋಡೀ ಮಠ ಎನ್ನುತ್ತಾರೆ. ಇಲ್ಲಿನ ಮೂರು ಗರ್ಭಗುಡಿಗಳ ಮೇಲೆ ಗೋಪುರಗಳು ಇವೆ. ಹೊರಗೆ ಮಹಾದ್ವಾರದ ಎಡಗಡೆ ಸಣ್ಣ ಗುಡಿ ಇದ್ದು ಇದರಲ್ಲಿ ಒಂದು ನಿರ್ವಾಣವಾದ ವಿಗ್ರಹವಿದೆ. ಇದನ್ನು ಉಡುತಡಿಯಮ್ಮ ಎಂದೂ ಕಮಲ ಗಂಗವ್ವ ಎಂದೂ ಹೇಳುತ್ತಾರೆ. 'ತ್ರಿಪುರಾಂತಕೇಶ್ವರ' ಜೋಡಿ ದೇವಸ್ಥಾನ, ಉತ್ತರ ಭಾಗದಲ್ಲಿ ವಿಷ್ಣು ಮತ್ತು ಲಿಂಗ ಇವೆ ಇದು ಹನ್ನೊಂದನೆಯ ಶತಮಾನದ ದೇವಾಲಯವಾಗಿದೆ.

ತ್ರಿಪುರಾಂತಕೇಶ್ವರ ದೇವಸ್ಥಾನದ ಜಾಲಂಧ್ರಗಳು ಗಮನ ಸೆಳೆಯು ತ್ತವೆ. ಬ್ರಹ್ಮೇಶ್ವರ ದೇವಾಲಯ. ಗೊಗ್ಗೇಶ್ವರ ಗುಡಿ, ಸೋಮೇಶ್ವರ ಹಾಗೂ ವೀರಭದ್ರ ದೇವಾಲಯಗಳು, ಶ್ರೀ ಕಂಠೇಶ್ವರ ದೇವಾಲಯ ಇವು ಇನ್ನಿತರ ದೇವಾಲಯಗಳು ಕೋಡೀ ಮಠ ಹಿಂದೆ ಒಂದು ಶಿಕ್ಷಣ ಕೇಂದ್ರ ವಾಗಿತ್ತು. ಬಳ್ಳಿಗಾವೆಯಲ್ಲಿ ಒಂದು ಪ್ರಾಚ್ಯವಸ್ತು ಸಂಗ್ರಹಾಲಯವಿದ್ದು ಹಲವು ಶಿಲ್ಪಗಳನ್ನು ಇಲ್ಲಿ ಕಾಣಬಹುದು.

ಶಿಕಾರಿಪುರದಿಂದ 35 ಕಿ. ಮಿ. ದೂರದಲ್ಲಿರುವ ಬಂದಳಿಕೆಯನ್ನು ರಾಷ್ಟ್ರಕೂಟ, ಚಾಳುಕ್ಯ, ಹೊಯ್ಸಳ ವಿಜಯನಗರದರಸರು ಆಳಿರುತ್ತಾರೆ. ಇಲ್ಲಿ ಶ್ರೀ ಬನಶಂಕರಿ ಅಮ್ಮನವರ ದೇವಾಲಯ, ತ್ರಿಮೂರ್ತಿ ಗುಡಿಗಳಿವೆ. ಸೋಮೇಶ್ವರ ದೇವಾಲಯದ ಬಾಗಿಲಿನ ಜಾಲಂಧ್ರದಲ್ಲಿ ರಾಮಾಯಣ ಮಹಾಭಾರತದ ಕಥಾನಕಗಳ ಶಿಲ್ಪವಿದ್ದು ಗಮನ ಸೆಳೆಯುತ್ತದೆ. ಇಲ್ಲಿ ಒಂದು ಬಸದಿ ಇದ್ದು ವಿಶಾಲವಾಗಿದೆ. ಇದರಲ್ಲಿ ಶಾಂತಿನಾಥನ ಮೂರ್ತಿ ಇದೆ.

ಶಿಕಾರಿಪುರದ ಹುಚ್ಚರಾಯ ಸ್ವಾಮಿ ದೇವಾಲಯದಲ್ಲಿ ವೀರಾಂಜನೇಯ ಸ್ವಾಮಿ ಮೂರ್ತಿ ಇದೆ. ಈ ದೇವಾಲಯದ ಕಂಬಗಳು ದ್ರಾವಿಡ ಮತ್ತು ಹೊಯ್ಸಳ ಶೈಲಿಯಲ್ಲಿವೆ. ಉಡುತಡಿ ವಚನಗಾರ್ತಿ ಅಕ್ಕಮಹಾದೇವಿ ಜನ್ಮಸ್ಥಳ. ಇಲ್ಲಿ ಆಕೆಗೊಂದು ದೇವಸ್ಥಾನವಿದೆ.

ತಾಳಗುಂದ ಶಿಕಾರಿಪುರದಿಂದ 24 ಕಿ.ಮಿ. ದೂರದಲ್ಲಿದ್ದು ಇದೊಂದು ಇತಿಹಾಸ ಪ್ರಸಿದ್ಧ ಸ್ಥಳ, ಇಲ್ಲಿ ಕದಂಬ ಮನೆತನದ ಮೂಲ ಇತಿಹಾಸವನ್ನು ತಿಳಿಸುವ ಶಾಂತಿವರ್ಮನ ಸ್ತಂಭ ಶಾಸನವಿದೆ. ಇಲ್ಲಿನ ಪ್ರಣವೇಶ್ವರ ದೇವಾಲಯದಲ್ಲಿ ಆರು ಅಡಿ ಎತ್ತರದ ಮಹಾಲಿಂಗವಿದೆ. ಹಲವು ರಾಜರು ಈ ಲಿಂಗವನ್ನು ಪೂಜಿಸಿದ್ದಾರೆ. ಗಂಗಾಧರೇಶ್ವರ ಮತ್ತು ವೀರಭದ್ರ ದೇವಾಲಯಗಳೂ ಇಲ್ಲಿವೆ.

ಶಿರಾಳ ಕೊಪ್ಪದಲ್ಲಿ ಭಕ್ತ ಸಿರಿಯಾಳ ವಾಸಿಸಿದ್ದನೆಂದು ಹೇಳುತ್ತಾರೆ. ಇಲ್ಲಿ ಬಸವೇಶ್ವರ ಚಂದ್ರಮೌಳೀಶ್ವರ, ಆಂಜನೇಯ, ನಗರೇಶ್ವರ ದೇವಾಲಯಗಳಿದ್ದು ಇವು ಪ್ರಾಚೀನವಾದವುಗಳಾಗಿದೆ.

ತಡಗಣಿ ಗ್ರಾಮದ ಕೇದಾರೇಶ್ವರ, ಚೆನ್ನಮಲ್ಲಿಕಾರ್ಜುನ ಗುಡಿಗಳು, ತೊಗರಸೆಯ ಮಲ್ಲಿಕಾರ್ಜುನ ದೇವಾಲಯ, ಮುತ್ತಿಗೆ ಗ್ರಾಮದ ಸಿದ್ಧರಾಮೇಶ್ವರ ದೇವಾಲಯ, ಮಳವಳ್ಳಿಯ ರಾಮೇಶ್ವರ ದೇವಾಲಯ, ಇವು ಶಿಕಾರಿಪುರ ತಾಲ್ಲೂಕಿನ ಇತರ ದೇವಾಲಯಗಳು, ತಡಗಣಿ ಕೇದಾರೇಶ್ವರ ದೇವಾಲಯದ ಸುಕನಾಸಿಯ ಬಸವ ಒಳ್ಳೆ ಕೆತ್ತನೆಯ ಶಿಲ್ಪ, ತೊಗರಸೆ

ದೇವಾಲಯುದ ವಿಗ್ರಹಗಳಲ್ಲಿ ಉಮಾಮಹೇಶ್ವರ, ವಿನಾಯಕ, ಚಾಮುಂಡೇಶ್ವರಿ ಗಮನ ಸೆಳೆಯುತ್ತವೆ.

ಶಿಕಾರಿಪುರ ತಾಲ್ಲೂಕಿನ ಬಂದಳಿಕೆ, ಬಳ್ಳಿಗಾವೆ ದೇವಾಲಯುಗಳು ರಕ್ಷಿಸಲ್ಪಟ್ಟವುಗಳಾಗಿದ್ದು ಪ್ರತಿಯೊಬ್ಬ ಕನ್ನಡಿಗನೂ ನೋಡಬೇಕಾದ ದೇವಾಲಯುಗಳಾಗಿವೆ. ಗತ ವೈಭವದ ಕುರುಹುಗಳಾಗಿ ಇವು ಕಂಗೊಳಿಸುತ್ತಿವೆ.

ಹೊನ್ನಾಳಿಗೆ ಸಮೀಪದ ಹಿರೇ ಕಲ್ಮಠ ಪ್ರಸಿದ್ಧ ವೀರಶೈವ ಮಠವಾಗಿದ್ದು ಈ ಮಠಕ್ಕೆ ಹೊಂದಿಕೊಂಡಂತೆ ವೀರಭದ್ರಸ್ವಾಮಿ, ವೃಷಭೇಶ್ವರ. ಹಾಗೂ ಚೌಡಮ್ಮ ದೇವಾಲಯುಗಳಿವೆ. ಹಿರೇ ಕಲ್ಮಠಕ್ಕೆ ಐದು ಕಿ.ಮೀ. ದೂರದಲ್ಲಿರುವ ಮಾರಿಕೊಪ್ಪದಲ್ಲಿ ಹಳದಮ್ಮ ದೇವಾಲಯುವಿದೆ. ಹೊನ್ನಾವಳಿಗೆ ಆರು ಕಿ.ಮೀ. ದೂರದಲ್ಲಿ ಒಳ್ಳೇಶ್ವರ ದೇವಾಲವಿದ್ದು ಇದನ್ನು ಹೊಯ್ಸಳ ಬಲ್ಲಾಳ ರಾಜ ನಿರ್ಮಿಸಿದನೆನ್ನಲಾಗಿದೆ. ಈ ದೇವಸ್ಥಾನದ ಜಾಲಂಧ್ರಗಳು ಹಾಸನ ಜಿಲ್ಲೆಯು ಬೇಲೂರು ಹಳೆ ಬೀಡುಗಳ ದೇವಾಲಯು ರಚನೆಯುನ್ನು ಹೋಲುತ್ತದೆ. ಬಳ್ಳಲಿಂಗೇಶ್ವರ ಇಲ್ಲಿನ ದೇವರು ಇಲ್ಲಿ ಬಳಪದ ಕಲ್ಲಿನ ಕಂಬದ ಕೆತ್ತನೆಗಳು ಆಕರ್ಷಣೆಯಿಂದ ಕೂಡಿದೆ. ಇದೇ ಊರಿನಲ್ಲಿ ಪಾರ್ಶ್ವನಾಥ ಬಸದಿ ಇದೆ. ಹೊನ್ನಾಳಿಯು ಪೂರ್ವಕ್ಕೆ ಆರು ಕಿ.ಮೀ. ದೂರದಲ್ಲಿರುವ ಕಮ್ಮಾರ ಗಟ್ಟೆಯುಲ್ಲಿ ಆಂಜನೇಯು ದೇವಾಲಯುವಿದ್ದು ಪ್ರಸಿದ್ಧವಾಗಿದೆ. ಹೀಗೆಯೇ ಹೊನ್ನಾಳಿಯು ದಕ್ಷಿಣದಲ್ಲಿರುವ ವಡ್ಡಿನ ಕೇರಿಯುಲ್ಲಿ ದೊಡ್ಡ ಪ್ರಮಾಣದ ಆಂಜನೇಯುನ ದೇವಾಲಯುವಿದೆ. ವಿಗ್ರಹ ಅತ್ಯಂತ ಆಕರ್ಷಕವಿದೆ.

ತುಂಗಭದ್ರಾ ನದಿ ದಡದ ಮಲ್ಲಿಕೇಶ್ವರ ಪುಟ್ಟ ದೇವಾಲಯುವನ್ನು ಹೊಂದಿದೆ. ಗರ್ಭಗುಡಿಯುಲ್ಲಿ ಚಿಕ್ಕ ಲಿಂಗವಿದೆ. ವೀಣೆ ಹೊತ್ತಿರುವ ವೀರಭದ್ರ, ಗಣೇಶ, ಭೈರವ, ನಂದಿ ಹಾಗೂ ಸೂರ್ಯ ವಿಗ್ರಹಗಳೂ ಇವೆ.

ಹೊನ್ನಾಳಿ ತಾಲ್ಲೂಕಿನ ಬೆಳಗುತ್ತಿಯುಲ್ಲಿ ಸಿದ್ದೇಶ್ವರ ದೇವಾಲಯುವಿದ್ದು ಕಲ್ಲಿನ ಕಟ್ಟಡವಾಗಿದೆ. ಕುರುವದ ಗಡ್ಡೆ ಹೊನ್ನಾಳಿಯು ದಕ್ಷಿಣಕ್ಕಿದೆ. ಇದೊಂದು ಯಾತ್ರಾಸ್ಥಳ. ಇಲ್ಲಿ ತುಂಗಭದ್ರಾ ತೀರದಲ್ಲಿ ರಾಮೇಶ್ವರ ದೇವಾಲಯುವಿದೆ. ಇಲ್ಲಿನ ದೊಡ್ಡ ಲಿಂಗ ಪೂಜೆಗೊಳ್ಳುತ್ತಿದೆ. ದೇವಾ

ಲಯದ ಸೂರ್ಯ, ವೀರಭದ್ರ, ಗಣೇಶ, ದುರ್ಗಾ, ಮಹಿಷ ಮರ್ದಿನಿ, ಮೂರ್ತಿಗಳ ಶಿಲ್ಪ ಸೊಬಗಿನಿಂದ ಕೂಡಿದೆ. ಹೊನ್ನಾಳಿಗೆ 26 ಕಿ.ಮೀ. ದೂರದ ತೀರ್ಥ ರಾಮೇಶ್ವರ ಒಂದು ಯಾತ್ರಾಸ್ಥಳ. ಇಲ್ಲಿ ರಾಮೇಶ್ವರ ಲಿಂಗವಿರುವ ದೇವಾಲಯವಿದೆ. ಇಲ್ಲಿ ಬತ್ತದ ಚಿಲುಮೆ ಗಮನ ಸೆಳೆಯುತ್ತದೆ. ಇಲ್ಲಿ ಪೂಜೆಗೊಳ್ಳುತ್ತಿರುವ ಬ್ರಹ್ಮನ ವಿಗ್ರಹ ಕುತೂಹಲ ಮೂಡಿಸುತ್ತದೆ.

ಹೊನ್ನಾಳಿ ತಾಲ್ಲೂಕಿನಲ್ಲಿ ದ್ವಿತೀಯ ಬೃಂದಾವನ ಎಂದು ಪ್ರಸಿದ್ಧರಾಗಿರುವ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನವಿದೆ. ಇದೊಂದು ಇತಿಹಾಸ ಪ್ರಸಿದ್ಧ ಕ್ಷೇತ್ರವೂ ಆಗಿದ್ದು ಇಲ್ಲಿ ಆದಿಕೇಶವನ ಸುಂದರ ವಿಗ್ರಹವೊಂದಿದೆ.

ಅರೆ ಮಲೆನಾಡು ಪ್ರದೇಶವಾದ ಭದ್ರಾವತಿ ತಾಲ್ಲೂಕು ಹಲವು ದೇವಾಲಯಗಳ ನೆಲೆ. ಭದ್ರಾವತಿ ತಾಲ್ಲೂಕು ಕೇಂದ್ರ. ಭದ್ರಾ ನದಿ ದಡದ ಮೇಲಿದೆ. ಇಲ್ಲಿನ ಹಳೇ ನಗರದಲ್ಲಿ 13ನೆಯ ಶತಮಾನದ ಹೊಯ್ಸಳ ಶಿಲ್ಪ ಕಲೆಯ ತ್ರಿಕೂಟಾಚಲ ದೇವಾಲಯವಿದೆ. ಇದು ಶ್ರೀ ಲಕ್ಷ್ಮೀನರಸಿಂಹ ದೇವಾಲಯವಾಗಿದ್ದು ನಕ್ಷತ್ರಾಕಾರದ ಮಂಟಪದ ಮೇಲೆ ನಿರ್ಮಾಣವಾಗಿದೆ. ಗರ್ಭಗುಡಿಯಲ್ಲಿ ಶ್ರೀ ನರಸಿಂಹ ದೇವರಿದ್ದು ತೊಡೆಯ ಮೇಲೆ ಲಕ್ಷ್ಮೀದೇವಿ ಇರುವಂತೆ ವಿಗ್ರಹವಿದೆ. ಇದು ಮುಖ್ಯ ಗರ್ಭಗುಡಿಯ ದೇವರು. ಎಡ ಭಾಗದ ಗರ್ಭಗುಡಿಯಲ್ಲಿ ಪುರುಷೋತ್ತಮ ಅಥವಾ ಚನ್ನಕೇಶವಸ್ವಾಮಿ ವಿಗ್ರಹವಿದೆ. ವಿಷ್ಣುವಿನ ದಶಾವತಾರಗಳ ಕೆತ್ತನೆ ಇಲ್ಲಿ ಗಮನ ಸೆಳೆಯುತ್ತದೆ. ಬಲ ಭಾಗದ ಗರ್ಭಗುಡಿಯಲ್ಲಿ ವೇಣು ಗೋಪಾಲಸ್ವಾಮಿ ವಿಗ್ರಹವಿದೆ. ಇದರ ಪ್ರಭಾವಳಿಯಲ್ಲಿ ಗೋಪಿಕಾ ಸ್ತ್ರೀಯರು, ಗೋಪಾಲಕರೇ ಮೊದಲಾದ ಕೆತ್ತನೆಗಳಿರುತ್ತವೆ. ಈ ದೇವಾಲಯವನ್ನು ಹೊಯ್ಸಳರ ದೊರೆ ಇಮ್ಮಡಿ ವೀರನಾರಸಿಂಹ ಕಟ್ಟಿಸಿದನೆನ್ನಲಾಗಿದೆ. ಈ ಗುಡಿಯಲ್ಲಿಯೂ ಶಿಲಾಬಾಲಿಕೆಯರ, ಆಂಜನೇಯ, ಉಗ್ರನರಸಿಂಹ, ಕಾಳಿಂಗ ಮರ್ದನ, ಕೃಷ್ಣ ಮೊದಲಾದ ವಿಗ್ರಹಗಳ ಕೆತ್ತನೆ ಇದೆ. ಗರ್ಭಗುಡಿಯ ಎರಡು ಕಡೆ

ಗಳಲ್ಲಿಯೂ ಬೆಣ್ಣೆ ಗಣಪತಿ ಹಾಗೂ ಶಾರದಾ ದೇವಿಯರ ಸುಂದರವಾದ ಮೂರ್ತಿಗಳಿವೆ.

ಭದ್ರಾವತಿಯಲ್ಲಿ ಕೋಟೆ ಬಸವೇಶ್ವರ, ಬನಶಂಕರಿ, ವೀರಭದ್ರ, ಆಂಜನೇಯ, ರಾಮೇಶ್ವರ, ಕನ್ನಿಕಾ ಪರಮೇಶ್ವರಿ, ಗಣೇಶ, ಭೂತನ ಗುಡಿ, ನ್ಯೂಟೌನ್ ಮಾರಿಯಮ್ಮ, ಹುತ್ತಾಕಾಲೋನಿ ಆಂಜನೇಯ, ಪೇಪರ್ ಟೌನಿನ ಚಂದ್ರಾಲಯ ಮೊದಲಾದ ದೇವಾಲಯಗಳಿವೆ. ಮಹಮ್ಮದೀ ಯರ ಮಸೀದಿಗಳೂ ಕ್ರೈಸ್ತರ ಚರ್ಚುಗಳೂ ಇವೆ.

## ತಾಲ್ಲೂಕಿನ ಇತರ ದೇವಾಲಯಗಳು

ಆಂಜನೇಯ ದೇವಾಲಯ, ಸುಣ್ಣದ ಹಳ್ಳಿ, ರಂಗಸ್ವಾಮಿ ದೇವಾ ಲಯ, ಅಂತರ ಗಂಗೆ, ರಂಗನಾಥಸ್ವಾಮಿ ದೇವಾಲಯ, ಸಿದ್ಧರ ಕಲ್ಲುಹಳ್ಳಿ, ನಂಜುಂಡೇಶ್ವರ ದೇವಾಲಯ, ನಾಗಲೆ ಬೆಳಗಲು, ಕೆಂಚಮ್ಮನ ದೇವಾಲಯ, ಕೆಂಚಮ್ಮನ ಗಡ್ಡ, ಆಂಜನೇಯ ದೇವಾಲಯ, ಸಿದ್ಲಿಪುರ.

ಚನ್ನಗಿರಿ ತಾಲ್ಲೂಕು ಬಯಲು ಸೀಮೆ ಪ್ರದೇಶವಾದರೂ ನಿಸರ್ಗ ಸಂಪತ್ತಿನಿಂದಲೂ ಕೂಡಿದೆ. ಚನ್ನಗಿರಿಯಲ್ಲಿರುವ ಕಲ್ಲೇಶ್ವರ ದೇವಾಲಯ ಹೊಯ್ಸಳ ವಾಸ್ತು ಶೈಲಿಯ ಕಟ್ಟಡ. ಇದರಲ್ಲಿ ಎರಡು ಗರ್ಭಗೃಹ ಗಳಿದ್ದು ಒಂದು ದಕ್ಷಿಣಾಭಿಮುಖವಾಗಿದೆ. ಇದರಲ್ಲಿ ಐದಡಿ ಎತ್ತರದ ಕೇಶವ ವಿಗ್ರಹವಿದ್ದರೆ ಇನ್ನೊಂದು ಪೂರ್ವಾಭಿಮುಖವಾಗಿದ್ದು ಒಂದು ಲಿಂಗವನ್ನು ಹೊಂದಿದೆ. ಕಲ್ಲೇಶ್ವರ ಗುಡಿ, ಸಣ್ಣ ಬೆಟ್ಟದ ಮೇಲೆ ಕೋಟೆ ಯಲ್ಲಿದೆ. ಈ ಗುಡಿಯಲ್ಲಿ ಚಾಳುಕ್ಯರ ಕಾಲದ ಕಲಾತ್ಮಕ ಕಂಬ ಗಮನ ಸೆಳೆಯುತ್ತದೆ.

ಬೆಟ್ಟದ ತುದಿಯಲ್ಲಿ ಬೇಟೆ ರಂಗಸ್ವಾಮಿ ದೇವಸ್ಥಾನವಿದ್ದು ಮೂಲ ವಿಗ್ರಹ ಮೂರಡಿ ಎತ್ತರವಿದೆ. ಹೀಗೆಯೇ ಚನ್ನಗಿರಿ ತಾಲ್ಲೂಕಿನ ದೇವರ ಹಳ್ಳಿಯ ಉಲ ಮರಡಿ ಬೆಟ್ಟದ ಮೇಲೆಯೂ ರಂಗನಾಥ ಸ್ವಾಮಿ ದೇವಾ ಲಯವಿದೆ. ಇಲ್ಲಿಯ ದೇವರನ್ನು ಉಡಮರಡಿ ರಂಗನಾಥ ಸ್ವಾಮಿ ಎನ್ನು

ತ್ತಾರೆ. ಬೆಟ್ಟದ ಮೇಲೆ ಹೆಚ್ಚಿನ ಸಂಖ್ಯೆಯಲ್ಲಿ ಉಡಗಳಿದ್ದು ಯಾರೂ ಅವುಗಳ ತಂಟೆಗೆ ಹೋಗುವುದಿಲ್ಲ. ಇಲ್ಲಿನ ರಂಗನಾಥ ಸ್ವಾಮಿ ವಿಗ್ರಹ ಶಂಖ ಮತ್ತು ಚಕ್ರಾಯುಧದ ಕೆತ್ತನೆಯಿಂದ ಕೂಡಿರುತ್ತದೆ. ಇಲ್ಲಿ ಒಂದು ದುಂಡನೆಯ ಲಿಂಗವೂ ಇದೆ.

ಈ ತಾಲ್ಲೂಕಿನ ಬಸವಾ ಪಟ್ಟಣ ಇತಿಹಾಸ ಪ್ರಸಿದ್ಧವಿದೆ. ಇದು ಚತುರ್ಥ ಮ್ಯಠಾಲಯ ಎನಿಸಿದೆ. ದುರುಗಮ್ಮನ ದೇವಾಲಯವೊಂದಿದೆ. ಸಂತೆ ಬೆನ್ನೂರು ಎಂಬಲ್ಲಿ ಶಿಥಿಲವಾದ ಮಲ್ಲೇಶ್ವರ, ಹಿರೇ ಕೋಗಿಲು, ಕಲ್ಲೇಶ್ವರ ಗುಡಿಗಳಿವೆ. ಹೊಸದಾಗಿ ಕಟ್ಟಲಾಗಿರುವ ರಾಮಚಂದ್ರ ದೇವಾಲಯವೂ ಇದೆ.

ಸೂಳೆಕೆರೆ (ಶಾಂತಿ ಸಾಗರ) ಚನ್ನಗಿರಿಯಿಂದ ಇಪ್ಪತ್ತು ಕಿ.ಮೀ. ದೂರವಿದ್ದು ಈ ಕೆರೆಯನ್ನು ಸ್ವರ್ಗಾವತಿ ಪಟ್ಟಣದ ದೊರೆ ವಿಕ್ರಮರಾಯನ ಮಗಳು ಶಾಂತವ್ವೆ ಕಟ್ಟಿಸಿದಳೆಂದು ತಿಳಿಯಲಾಗಿದೆ. ಕೆರೆಯ ಪೂರ್ವದ ಕೊನೆಯಲ್ಲಿ ಶ್ರೀ ಸಿದ್ದೇಶ್ವರ ದೇವಸ್ಥಾನವಿದೆ. ಇದರ ನೈಋತ್ಯಕ್ಕೆ ದುರ್ಗಿ ಗುಡಿ ಇದೆ.

ಗುಡ್ಡದ ಬೆನಕನ ಹಳ್ಳಿಯಲ್ಲಿನ ಲಂಬಾಣಿಗರ ಕುಲ ದೈವ ಸೇವಭಾಮ ದೇವಸ್ಥಾನ, ಹೊಸಕೆರೆಯ ಶ್ರೀ ಸಿದ್ಧಲಿಂಗ ಶಿವಾಚಾರ್ಯರ ಸಮಾಧಿ, ನಲ್ಲೂರಿನ ಬಳಿ ಮಂಟರಗಟ್ಟೆ ಎಂಬಲ್ಲಿನ ಜುಂಜೇಶ್ವರ ಗುಡಿ ಮೊದಲಾದವು ಈ ತಾಲ್ಲೂಕಿನ ಇತರ ಗುಡಿಗಳಾಗಿವೆ.

ಒಟ್ಟಾರೆ ಶಿವಮೊಗ್ಗ ಜಿಲ್ಲೆ ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರ ಸಾಮ್ರಾಜ್ಯಗಳಲ್ಲಿ ಸೇರಿಕೊಂಡು ಆಯಾ ಅರಸರು ದೇವಾಲಯಗಳಿಗೆ ದತ್ತಿ ಬಿಟ್ಟು ಅವುಗಳ ಅಭಿವೃದ್ಧಿಗೆ ನೆರವಾದರು. ಅಲ್ಲಮ ಪ್ರಭು, ಅಕ್ಕಮಹಾದೇವಿ ಮೊದಲಾದ ಶಿವಶರಣ ಶರಣೆಯರು ಈ ಜಿಲ್ಲೆಯವರೇ ಆಗಿದ್ದು ವೀರಶೈವ ಧರ್ಮ ಪ್ರಸಾರವೂ ನಡೆಯಿತು. ಹೊಯ್ಸಳರ ಕಾಲದಲ್ಲಿಯೂ ಈ ಜಿಲ್ಲೆ ಸಮೃದ್ಧಿ ಕಂಡಿತು. ಹಲವು

ರಾಜ ಮನೆತನಗಳು ಈ ಜಿಲ್ಲೆಯ ಹಲವು ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಗಿದೆ. ಹುಮಚದ ಸಾಂತಾರರು ಸಾಂಸ್ಕೃತಿಕ ಪರಂಪರೆಗೆ ತಮ್ಮ ವಿಶಿಷ್ಟ ಕಾಣಿಕೆ ಸಲ್ಲಿಸಿದರು. ಕೆಳದಿ ಅರಸರು ಸಲ್ಲಿಸಿದ ಕಾಣಿಕೆ ಗಮನಾರ್ಹವಾದುದಾಗಿದೆ. ನೂರಾರು ದೇವಾಲಯಗಳ ನೆಲೆಯಾದ ಈ ಜಿಲ್ಲೆ ಪವಿತ್ರ ನದಿಗಳ ಬೀಡೂ ಆಗಿದೆ. ಹೀಗಾಗಿ ಪವಿತ್ರ ಯಾತ್ರಾ ಸ್ಥಳಗಳಿಂದ ಕಂಗೊಳಿಸುತ್ತಿದೆ.



# ಹಾಸನ ಜಿಲ್ಲೆಯ ದೇವಾಲಯಗಳು

ಪ್ರಕೃತಿ ಸೌಂದರ್ಯದ ನೆಲೆವೀಡಾದ ಮಲೆನಾಡಿನಲ್ಲಿ ಕಂಗೊಳಿಸುವ ಹಾಸನ ಜಿಲ್ಲೆ ಭಾರತೀಯ ಧರ್ಮ ಸಂಸ್ಕೃತಿಗಳ ಸಾಮರಸ್ಯದ ಪ್ರತೀಕ ಹಿಂದೂ ಧರ್ಮದ ಎಲ್ಲ ಶಾಖೆಗಳು ಇಲ್ಲಿ ಬಾಳಿದವು ವಾಸ್ತುಶಿಲ್ಪಕ್ಕೆ ಹೆಸರಾದ ವಿಶ್ವವಿಖ್ಯಾತ ಬೇಲೂರು ಹಳೆಬೀಡು ದೇವಾಲಯಗಳೂ, ಶ್ರವಣ ಬೆಳಗೊಳದ ಗೊಮ್ಮಟೇಶ್ವರ ಮೊದಲಾದ ವೈಶಿಷ್ಟ್ಯಗಳ ಜಿಲ್ಲೆ ಹಾಸನ, ಈ ಜಿಲ್ಲೆಯಲ್ಲಿ ಮಲೆನಾಡು ಮತ್ತು ಮೈದಾನ ಪ್ರದೇಶ ಎರಡೂ ಇವೆ. ಮಲೆನಾಡಿನ ಪಟ್ಟಣಗಳಲ್ಲಿ ಶಿವಮೊಗ್ಗವನ್ನು ಬಿಟ್ಟರೆ ದೊಡ್ಡ ಆಡಳಿತ ಮತ್ತು ಶಿಕ್ಷಣ ಕೇಂದ್ರ ಎನಿಸಿಕೊಂಡಿರುವ ಹಾಸನ ಪಟ್ಟಣ ತಾಲ್ಲೂಕಿನ ಆಡಳಿತ ಕೇಂದ್ರ ಹಾಸನ ಜಿಲ್ಲೆಯು ಒಟ್ಟು ಎಂಟು ತಾಲ್ಲೂಕುಗಳನ್ನು ಹೊಂದಿದ್ದು ಹಾಸನ, ಅರಕಲಗೂಡು, ಅರಸೀಕೆರೆ, ಆಲೂರು, ಚನ್ನರಾಯ ಪಟ್ಟಣ, ಹೊಳೆನರಸೀಪುರ, ಬೇಲೂರು ಮತ್ತು ಸಕಲೇಶಪುರ ಇವು ಈ ಎಂಟು ತಾಲ್ಲೂಕುಗಳಾಗಿವೆ.

ಹಾಸನ ಎಂಬ ಹೆಸರು ಸಿಂಹಾಸನಪುರ ಎಂಬ ಹೆಸರಿನಿಂದ ಬಂದಿದೆ ಎಂದು ತಿಳಿಯಲಾಗಿದೆ. ಅರ್ಜುನನ ಮೊಮ್ಮಗ ಜನಮೇ ಜಯ ಮಹಾ ರಾಜನ ಸ್ಥಳ ಇದಾಗಿತ್ತೆಂದೂ ಹೇಳುತ್ತಾರೆ. ಹಾಸನದಲ್ಲಿ ಹಾಸನಾಂಬ ದೇವಾಲಯ ಪ್ರಸಿದ್ಧವಾದುದು. ಈ ದೇವಾಲಯ ಪಾಳೆಯಗಾರರ ಕಾಲ ದಲ್ಲಿ ನಿರ್ಮಿತವಾದದ್ದೆನ್ನಲಾಗಿದೆ. ಹಾಸನಾಂಬ ದೇವಸ್ಥಾನದ ಮೂರ್ತಿ ಹುತ್ತದ ಆಕಾರದಲ್ಲಿದೆ. ಈ ದೇವಸ್ಥಾನವನ್ನು ವರ್ಷದಲ್ಲಿ ಅದೂ ಆಶ್ವಯುಜ ಮಾಸದ ಶುಕ್ಲ ಪಕ್ಷದಲ್ಲಿ ಒಂದು ವಾರ ಕಾಲ ಮಾತ್ರ ತೆರೆ

ದಿರಲಾಗುತ್ತದೆ. ಈ ಕಾಲವಲ್ಲಿ ರಥೋತ್ಸವ ನಡೆಯುತ್ತದೆ. ಈ ದೇವಾಲಯದ ಬಳಿಯೇ ಸಿದ್ದೇಶ್ವರ ದೇವಾಲಯವಿದೆ.

ಪಟ್ಟಣವ ಮಧ್ಯಭಾಗವಲ್ಲಿ ದೇವಿಗೆರೆ ಎಂಬ ಕೊಳವಿದ್ದು ಅದರ ದಡದಲ್ಲಿ ಕೊಳಲು ಗೋಪಾಲಕೃಷ್ಣ ಮತ್ತು ಗಂಗಾಧರೇಶ್ವರ ಮಂದಿರ ಅಲ್ಲದೆ ಹೊಯ್ಸಳ ದೊರೆ ಒಂದನೆಯ ನರಸಿಂಹನ ಕಾಲದಲ್ಲಿ ಪ್ರಧಾನ ಹೆಗ್ಗಡೆಲಕುಮಯ ಎಂಬುವನಿಂದ ಕಟ್ಟಲ್ಪಟ್ಟ ಚನ್ನಕೇಶವ ದೇವಾಲಯವಿದೆ.

ಸಿದ್ದೇಶ್ವರ ದೇವಾಲಯದ ಛಾವಣಿ ಮೇಲೆ ಮತ್ತು ಗೋಡೆಗಳ ಮೇಲೆ ಹಳೆಯ ವರ್ಣಚಿತ್ರಗಳಿದ್ದು ದೇವಾಲಯದಲ್ಲಿ ಮಡಿವಾಳ ಮಾಚಯ್ಯ ಹಾಗೂ ಕುಂಬಾರ ಗುಂಡಯ್ಯ ಈ ಶಿವಶರಣರ ಪ್ರತಿಮೆಗಳಿರುವುದು ವೈಶಿಷ್ಟ್ಯ. ಸುಮಾರು ನೂರು ವರ್ಷಗಳ ಹಿಂದೆ ವೆಂಕಟ ಕೃಷ್ಣಪ್ಪ ಎಂಬುವವರು ಕಟ್ಟಿಸಿದ್ದನ್ನಲಾದ ಮಲ್ಲೇಶ್ವರ ದೇವಾಲಯ, ಉತ್ತರ ಬಡಾವಣೆಯ ಸೀತಾರಾಮಾಂಜನೇಯ ದೇವಾಲಯ, ವಿದ್ಯಾರಣ್ಯರು ಜೀರ್ಣೋದ್ಧಾರ ಮಾಡಿದ್ದನ್ನಲಾದ ವಿರೂಪಾಕ್ಷ ದೇವಾಲಯ, ಪೇಟೆಯ ಕನ್ನಿಕಾ ಪರಮೇಶ್ವರಿ ಗುಡಿ, ಜೈನ ದೇವಾಲಯ ಇವು ಹಾಸನದ ಇತರ ದೇವಾಲಯಗಳು. ಜೈನ ಬಸದಿ ಸುಮಾರು 900 ವರ್ಷಗಳಷ್ಟು ಹಳೆಯದೆನ್ನಲಾಗಿದೆ. ಹಾಸನದಲ್ಲಿ ಶಂಕರ ಮಠವೊಂದಿದೆ.

ಹಾಸನದಿಂದ 18 ಕಿ.ಮೀ. ದೂರದಲ್ಲಿರುವ ದೊಡ್ಡ ಗದ್ದವಳ್ಳಿ ಗ್ರಾಮದಲ್ಲಿ ಲಕ್ಷ್ಮಿ ದೇವಾಲಯವಿದ್ದು ಇದನ್ನು ಕ್ರಿ.ಶ. 1113ರಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನ ವಣಿಕ ಶ್ರೇಷ್ಠನಾದ ಕುಲ್ಲಹಣರಾಹುತ ಮತ್ತು ಅವನ ಪತ್ನಿ ಸಹಜಾ ದೇವಿ ಕಟ್ಟಿಸಿದರೆಂದು ತಿಳಿಯಲಾಗಿದೆ. ಈ ದೇವಾಲಯದಿಂದ ಈ ಸ್ಥಳಕ್ಕೆ ಅಭಿನವ ಕೊಲ್ಲಾಪುರ ಎಂಬ ಹೆಸರೂ ಇತ್ತು. ದೇವಾಲಯದ ಸುತ್ತಲೂ ಏಳು ಅಡಿ ಎತ್ತರದ ಗೋಡೆಯಿದೆ. ಪೂರ್ವ ಮತ್ತು ಪಶ್ಚಿಮಗಳಲ್ಲಿ ಎರಡು ಮಹಾದ್ವಾರಗಳಿವೆ. ಪಶ್ಚಿಮದ ಮಹಾದ್ವಾರಕ್ಕೆ ಸೇರಿರುವಂತೆ ಇರುವ ಮಂಟಪದಲ್ಲಿ 16 ಕಂಬಗಳೂ ಏಳು ಭುವನೇಶ್ವರಿಗಳೂ ಇವೆ. ಭುವನೇಶ್ವರಿಗಳ ಕೆತ್ತನೆ ಕೆಲಸ ಅತ್ಯಂತ ಸುಂದರವಾಗಿದೆ. ಅದು ಅಷ್ಟದಿಕ್ಪಾಲಕರು, ತಾಂಡವೇಶ್ವರ ಮೊದಲಾದ ಮೂರ್ತಿ

ಗಳಿಂದ ಅಲಂಕೃತವಾಗಿದೆ. ಮಧ್ಯದಲ್ಲಿ ಲಕ್ಷ್ಮೀ ದೇವಾಲಯುವಿದೆ. ಪ್ರಧಾನ ದೇವಾಲಯವೂ ಸೇರಿದಂತೆ ಒಟ್ಟು ಇಲ್ಲಿ ಒಂಬತ್ತು ಶಿಖರಗಳಿದ್ದು ಎಲ್ಲ ಶಿಖರಗಳ ಮೇಲೂ ಹೊಯ್ಸಳ ಲಾಂಛನವಿದೆ. ಶಿಖರಗಳು ಕದಂಬನಾಗರ ಶೈಲಿಯವು. ದೇವಸ್ಥಾನದಲ್ಲಿ ವಿಷ್ಣುವರ್ಧನ, ಮೊದಲನೆಯ ನರಸಿಂಹ ಮೊದಲಾದವರ ಕಾಲದ ದಾನ ಶಾಸನಗಳಿವೆ. ಪ್ರಧಾನ ದೇವತೆ ಲಕ್ಷ್ಮೀ ವಿಗ್ರಹ ಒಂದು ಸುಂದರ ಶಿಲ್ಪ ನಿಂತ ಭಂಗಿಯಲ್ಲಿದೆ. ಮಹಾಲಕ್ಷ್ಮಿಯ ಮೂರ್ತಿ ಪ್ರವಾಸಿಗಳ ಗಮನ ಸೆಳೆಯುತ್ತದೆ. ದೇವಾಲಯ ಹೊಯ್ಸಳ ರೀತಿಯ ಕಟ್ಟಡಗಳಲ್ಲಿ ಒಂದು ಪ್ರಾಚೀನ ಕಟ್ಟಡ.

ಹಾಸನದಿಂದ ಸುಮಾರು 20 ಕಿ.ಮೀ. ದೂರದಲ್ಲಿ ಮುದುಗೆರೆ ಎಂಬ ಹಳ್ಳಿ ಇದ್ದು ಇಲ್ಲಿ ಹೊಯ್ಸಳ ಶೈಲಿಯ ಪ್ರಸಿದ್ಧ ಕಟ್ಟಡವಾಗಿದ್ದ ಈಶ್ವರ ದೇವಾಲಯ ಅವಶೇಷಗಳಿವೆ. ಯೋಗ ನರಸಿಂಹ ದೇವಾಲಯ ಇಲ್ಲಿನ ಇನ್ನೊಂದು ದೇವಾಲಯ ದುದ್ದ ಹೋಬಳಿಯ ಹೆರಗು ಎಂಬ ಗ್ರಾಮ ದಲ್ಲಿನ ಕೀರ್ತಿ ನಾರಾಯಣ ದೇವಸ್ಥಾನ ನೋಡಬೇಕಾದುದು. ದೇವಾ ಲಯದ ಕಲಶ ಸೊಗಸಾಗಿದೆ. ನವರಂಗ ಚಾವಣಿಗಳನ್ನು ಸುಂದರವಾಗಿ ಕೆತ್ತಲಾಗಿದೆ. ಹೊಯ್ಸಳ ಶೈಲಿಯ ಈ ದೇವಾಲಯ ಇಂದಿಗೂ ಸುಸ್ಥಿತಿ ಯಲ್ಲಿದೆ. ಕಮಟೇಶ್ವರ ದೇವಾಲಯ ಈ ಹಳ್ಳಿಯ ಇನ್ನೊಂದು ದೇವಾ ಲಯ ಈ ಹಳ್ಳಿಯ ಇನ್ನೊಂದು ದೇವಾಲಯ ಇಲ್ಲಿ ಪಾರ್ಶ್ವನಾಥ ಬಸದಿಯೂ ಇದೆ.

ಹಾಸನದ ಪೂರ್ವಕ್ಕೆ 13 ಕಿ.ಮೀ. ದೂರದಲ್ಲಿರುವ ಶಾಂತಿ ಗ್ರಾಮ ಇತಿಹಾಸ ಪ್ರಸಿದ್ಧ. ಇದನ್ನು ಹೊಯ್ಸಳ ವಿಷ್ಣುವರ್ಧನ ರಾಣಿ ಶಾಂತಲಾ ದೇವಿ ಸ್ಥಾಪಿಸಿದಳೆಂದು ತಿಳಿದು ಬರುತ್ತದೆ. ಈ ಊರಿನಲ್ಲಿ ಸೌಮ್ಯಕೇಶವ ದೇವಾಲಯ ದೊಡ್ಡದಾಗಿದ್ದು ಇಲ್ಲಿನ ಉತ್ಸವ ಮೂರ್ತಿಯನ್ನು ತಮಿಳು ನಾಡಿನ ತಿರುಗೆಲ್ವೇಲಿಯಿಂದ ತರಲಾಯಿತೆನ್ನಲಾಗಿದೆ. ಯೋಗ ನರಸಿಂಹ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖ ಮಂಟಪ ಗಳಿವೆ. ದೇವಾಲಯದ ಕುಸುರಿ ಕೆಲಸ ತುಂಬಾ ಸೂಕ್ಷ್ಮ. ಶಾಂತಿ ಗ್ರಾಮದ ವೀರಭದ್ರ ದೇವಾಲಯ ಎರಡು ಗುಡಿಗಳುಳ್ಳ ಅವಳಿ ದೇವಾಲಯ,

ಪೂರ್ವಾಭಿಮುಖವಾಗಿರುವ ಮುಖ್ಯ ಗುಡಿಯಲ್ಲಿ ವೀರಭದ್ರ ದೇವರಿದೆ. ಉತ್ತರಾಭಿಮುಖವಾಗಿರುವ ದೇವಾಲಯದಲ್ಲಿ ಮಹಾಕಾಳಿಯ ಮೂರ್ತಿ ಇದೆ.

ಇಲ್ಲಿನ ಜೈನ ಬಸದಿಯನ್ನು ಶಾಂತಲಾ ದೇವಿ ಶಾಂತಿನಾಥನಿಗೆ ಅರ್ಪಿಸಿದ್ದ ಳೆಂದು ತಿಳಿದು ಬಂದಿದೆ. ಈ ಊರಿಗೆ ಗ್ರಾಮ ಎಂದೂ ಹೆಸರಿದೆ. ಸಮೀಪದ ಮರ್ಕುಳಿಯಲ್ಲಿ ರಂಗನಾಥ ಸ್ವಾಮಿ ದೇವಾಲಯ ಸಾಧಾರಣವಿದ್ದು ಜೈನ ಬಸದಿ ಹೊಯ್ಸಳ ಶೈಲಿಯ ಒಂದು ಸುಂದರ ರಚನೆಯಾಗಿದೆ. ಇದನ್ನು ಎರಡನೇ ಬಲ್ಲಾಳ ದೊರೆಯ ಮಂತ್ರಿ ಬೂಚಿಮಯ್ಯ 1173ರಲ್ಲಿ ಕಟ್ಟಿಸಿದ ನೆಂದು ತಿಳಿಯಲಾಗಿದೆ.

ಹಾಸನಕ್ಕೆ ದಕ್ಷಿಣದಲ್ಲಿ 13 ಕಿ.ಮೀ. ದೂರದಲ್ಲಿ ಮೊಸಳೆ ಎಂಬ ಗ್ರಾಮದಲ್ಲಿ ನಾಗೇಶ್ವರ ಮತ್ತು ಚನ್ನಕೇಶವ ಎಂಬ ಎರಡು ಪ್ರಸಿದ್ಧ ದೇವಾಲಯಗಳಿವೆ. ಬಳಪದ ಕಲ್ಲಿನಿಂದ ರಚಿತವಾಗಿರುವ ಇವು ಅವಳಿ ದೇವಾಲಯಗಳು ದೇವಸ್ಥಾನದ ಭುವನೇಶ್ವರಿಗಳು ಸುಂದರ ರೇಖಾ ವಿನ್ಯಾಸ ಗಳನ್ನು ಹೊಂದಿವೆ. ನಾಗೇಶ್ವರ ದೇವಾಲಯ ಜಗತಿನ ಮೇಲೆ ನಿಂತಿದ್ದು ಕೆಳಗಿನಿಂದ ನಾಲ್ಕೂವರೆ ಅಡಿ ಎತ್ತರದವರೆಗೆ ಐದು ಪಟ್ಟಿಕೆಗಳಿವೆ. ಇವು ಗಳಲ್ಲಿ ಮೇಲಿನ ಎರಡು ಪಟ್ಟಿಕೆಗಳ ಮೇಲೆ ವಿವಿಧ ಸುಂದರ ಶಿಲ್ಪಗಳಿವೆ. ದೇವಾಲಯದ ಕಲಶ ಸುಂದರವಾಗಿದೆ. ಗರ್ಭಗೃಹದಲ್ಲಿ ಸುಂದರ ಲಿಂಗವಿದೆ.

ಚನ್ನಕೇಶವ ದೇವಾಲಯದಲ್ಲಿ ಪಟ್ಟಿಕೆಗಳ ಮೇಲೆ ಕೇಶವ, ಗರುಡ, ಅನಿರುದ್ಧ, ಅಚ್ಯುತ, ಲಕ್ಷ್ಮಿ, ಜನಾರ್ಧನ, ವೇಣುಗೋಪಾಲ ಮೊದಲಾದ ಸುಂದರ ಶಿಲ್ಪಗಳಿವೆ. ಶಿಖರದಲ್ಲಿ ವಿಷ್ಣುವಿನ ವಿವಿಧ ರೂಪಗಳ ಶಿಲ್ಪ ಗಳಿವೆ. ನವರಂಗದ ಬಾಗಿಲು ವಾಡದಲ್ಲಿಯೂ ಲಕ್ಷ್ಮಿ ಸರಸ್ವತಿ ಮೊದ ಲಾದ ಶಿಲ್ಪಗಳಿವೆ. ಇಲ್ಲಿ ಒಂಬತ್ತು ಭುವನೇಶ್ವರಿಗಳಿದ್ದು ಸುಕನಾಸಿಯ ಭುವನೇಶ್ವರಿಯಲ್ಲಿ ಉಗ್ರ ನರಸಿಂಹನ ಗರ್ಭಗುಡಿಯಲ್ಲಿ ಆರು ಅಡಿ ಎತ್ತರದ ಕೇಶವ ವಿಗ್ರಹ ಗಮನಾರ್ಹ ಈ ದೇವಾಲಯದ ವೈಶಿಷ್ಟ್ಯವೆಂದರೆ ಹಿಂಭಾಗದ ತೋರಣದಲ್ಲಿ ದಶಾವತಾರ ಶಿಲ್ಪಗಳಿರುವುದು.

ಹಾಸನದಿಂದ 11 ಕಿ.ಮೀ. ದೂರದಲ್ಲಿರುವ ಬಸ್ತಿ ಹಳ್ಳಿ ಜೈನರಿಗೆ ಪ್ರಸಿದ್ಧಿಯಾಗಿದೆ. ಹೊಯ್ಸಳ ಶೈಲಿಯ ಪಾರ್ಶ್ವನಾಥ ಬಸದಿಯಲ್ಲಿನ ಮಧ್ಯದ ಸಭಾ ಭವನದಲ್ಲಿ 14 ಕಂಬಗಳಿವೆ. ಇವು ಕರಿಶಿಲೆಯವು ಕೆತ್ತನೆಯ ಕೆಲಸ ಸುಂದರ ಮುಂದಿನ ಹಜಾರದಲ್ಲಿ 32 ಕಂಬಗಳಿವೆ. ಈ ಕಂಬಗಳು ವಿವಿಧ ಗಾತ್ರದವು. ಪ್ರವೇಶ ದ್ವಾರದಲ್ಲಿ ಎರಡೂ ಕಡೆ ಕಲ್ಲಿನ ಆನೆಗಳನ್ನು ನಿಲ್ಲಿಸಲಾಗಿದೆ. ಶಾಂತಿನಾಥ ಬಸದಿ ಇಲ್ಲಿನ ಇನ್ನೊಂದು ಮುಖ್ಯ ಬಸದಿ.

ಕೋರಮಂಗಲದ ಬೂಟೇಶ್ವರ ದೇವಾಲಯನ್ನು ಎರಡನೇ ಬಲ್ಲಾಳ ರಾಜನ ಮಂತ್ರಿ ಬೂಚಿಮಯ್ಯ ಸ್ಥಾಪಿಸಿದ್ದನ್ನಲಾಗಿದೆ. ಇಲ್ಲಿನ ಗಣಪತಿ ಮತ್ತು ಸರಸ್ವತಿ ವಿಗ್ರಹಗಳು ಸುಂದರವಿದೆ. ಇದು ಸಣ್ಣ ದೇವಾಲಯ ವಾದರೂ ರಚನೆ, ವಿನ್ಯಾಸ ಉತ್ತಮ, ದೇವಾಲಯದ ಹೊರ ಮುಖದಲ್ಲಿ 100ಕ್ಕೂ ಹೆಚ್ಚಿನ ಮೂರ್ತಿಗಳನ್ನು ಕೆತ್ತಲಾಗಿದೆ. ಇಲ್ಲಿನ ಇನ್ನೊಂದು ದೇವಾಲಯ ಆಂಜನೇಯ ದೇವಾಲಯ, ಕೋರಮಂಗಲ ಹಾಸನದಿಂದ 10 ಕಿ.ಮೀ. ದೂರದಲ್ಲಿದೆ.

ಹಾಸನದಿಂದ 17 ಕಿ.ಮೀ. ದೂರದಲ್ಲಿರುವ ಕೊಂಡಜ್ಜಿ ಗ್ರಾಮದಲ್ಲಿ ಚನ್ನಕೇಶವ ದೇವಾಲಯವಿದೆ. ಇದನ್ನು ಬಲ್ಲಾಳನಾಥನ ದೇವಾಲಯ ವೆಂದೂ ಹೇಳುವರು.

ಇಲ್ಲಿ 14 ಅಡಿ ಎತ್ತರದ ವಿಗ್ರಹವಿದ್ದು ಅದ್ಭುತವಾಗಿದೆ. ಹೇಮಾ ನದಿ ತೀರದ ಗೊರೂರು ಅಥವಾ ಗೋರೂರು ಪುರಾಣ ಪ್ರಸಿದ್ಧಿ ಕ್ಷೇತ್ರ ಇಲ್ಲಿ ಕ್ರಿ.ಶ. 1586ರಲ್ಲಿ ಕಟ್ಟಲಾದ ಯೋಗ ನರಸಿಂಹ ದೇವಾಲಯ ಹೇಮಾವತಿ ಎಡ ದಂಡೆಯ ಮೇಲಿದೆ. ಇಲ್ಲಿನ ಮೂಲ ವಿಗ್ರಹ ಹೊಯ್ಸಳರ ಕಾಲದ್ದಾಗಿದೆ. ಆರು ಅಡಿ ಎತ್ತರವಿರುವ ಈ ವಿಗ್ರಹ ಒಂದೂವರೆ ಅಡಿ ಪೀಠದ ಮೇಲಿರುತ್ತದೆ. ಈ ಊರಿನಲ್ಲಿ ವಿಜಯಾದಿತ್ಯ ಹೆಗ್ಗಡೆ ಎಂಬುವನು ತ್ರಿಕೂಟ ಲಿಂಗವನ್ನು ಸ್ಥಾಪಿಸಿದ. ಇಲ್ಲಿನ ತ್ರಿಕೂಟೇಶ್ವರ ದೇವಾಲಯ ಚಿಕ್ಕದಾದರೂ ಸುಂದರವಿದೆ. ಗರ್ಭ ಗೃಹದಲ್ಲಿ ಲಿಂಗ ಎದೆ. ನವರಂಗದಲ್ಲಿ ಹೊಯ್ಸಳ ಶೈಲಿಯ ಗಣಪತಿ, ಮಹಿಷಮರ್ದಿನಿ,

ಸೂರ್ಯ ಮತ್ತು ಸಪ್ತಮಾತೃಕೆಯರ ವಿಗ್ರಹಗಳಿವೆ. ಊರಿನ ಮಧ್ಯ ದಲ್ಲಿ ವಾಸುದೇವ ಗುಡಿ ಇದೆ. ಇದನ್ನು 16ನೆಯ ಶತಮಾನದಲ್ಲಿ ಕಟ್ಟಲಾಯಿತು. ದೇವಾಲಯದ ಮೂಲ ವಾಸುದೇವ ವಿಗ್ರಹವು ಹೊಯ್ಸಳ ಶೈಲಿಯ ಸುಂದರ ಶಿಲ್ಪವಾಗಿವೆ.

ಹಾಸನ ತಾಲ್ಲೂಕಿನ ದೇವಾಲಯಗಳು ಹೆಚ್ಚಾಗಿ ಹೊಯ್ಸಳ ಸಂಪ್ರ ದಾಯದವು. ಆ ಕಾಲದ ದೊರೆಗಳು ದೇವಾಲಯಗಳನ್ನು ಕಟ್ಟಿಸಲು ತೊಡಗಿ ದುದರಿಂದ ಆ ಶೈಲಿಯ ದೇವಾಲಯಗಳೇ ಹೆಚ್ಚು. ಇದೇ ತಾಲ್ಲೂಕಿನ ಬೂವನಹಳ್ಳಿಯಲ್ಲಿ ಚನ್ನಕೇಶವ, ಶ್ರೀದೇವಿ, ರಾಮದೇವರು, ಶಿವಲಿಂಗ ಸ್ವಾಮಿ ಮೊದಲಾದ ಆರು ದೇವಾಲಯಗಳಿವೆ.

ಹಾಸನದಿಂದ 30 ಕಿ.ಮಿ. ದೂರದಲ್ಲಿರುವ ಅರಕಲಗೂಡು ಒಂದು ತಾಲ್ಲೂಕು ಕೇಂದ್ರ. ಪುರಾಣ ಪ್ರಸಿದ್ಧವಾದ ಸ್ಥಳ. ಹಿಂದೆ ಇಲ್ಲಿ ಗೌತಮ ಋಷಿಗಳು ಸೂರ್ಯನನ್ನು ಕುರಿತು ತಪಸ್ಸು ಮಾಡಿದ್ದರಿಂದ ಊರಿಗೆ ಅರ್ಕಪುರಿ ಎಂಬ ಹೆಸರಿತ್ತು ಎನ್ನಲಾಗಿದೆ. ಅರಕಲ ಗೂಡಿನಲ್ಲಿ ಶಿಥಿಲ ವಾದ ಕೋಟೆಯೊಂದಿದ್ದು ಇದರ ಒಳಗೆ ಲಕ್ಷ್ಮೀನರಸಿಂಹ, ಅಮೃತೇಶ್ವರ, ಹಾಗೂ ವೀರಭದ್ರ ದೇವಾಲಯಗಳಿವೆ. ವಾಸ್ತು ಶಿಲ್ಪ , ಕಲೆಗಾರಿಕೆಯ ದೃಷ್ಟಿಯಿಂದ ಇವು ಅಷ್ಟೇನೂ ಮಹತ್ವ ಪಡೆದವುಗಳಲ್ಲ. ಅರಕಲಗೂಡಿಗೆ ಮೂರು ಕಿ.ಮಿ. ದೂರದಲ್ಲಿ ಕಾಶೀಪುರ ಒಂದು ಹಳ್ಳಿ. ಇಲ್ಲಿ ಒಂದು ಹಳೆಯದಾದ ಕಲ್ಲಿನ ಕೋಟೆ ಇದ್ದು ಸುತ್ತಲೂ ಮೂಲೆಯಲ್ಲಿ ಬುರುಜು ಗಳಿವೆ. ಈ ಪ್ರದೇಶದ ಪೂರ್ವಕ್ಕೆ ಎತ್ತರದ ಪ್ರಾಕಾರವಿದ್ದು ಒಳಗೆ ಶಿವ, ಪಾರ್ವತಿ ಮತ್ತು ರಾಮ ಈ ದೇವರುಗಳಿಗೆ ಅರ್ಪಿತವಾಗಿರುವ ದೇವಾಲಯ ಗಳಿರುವುದಾದರೂ ಇವೆಲ್ಲ ಜೀರ್ಣಾವಸ್ಥೆಯಲ್ಲಿವೆ.

ಅರಕಲ ಗೂಡಿಗೆ 24 ಕಿ.ಮಿ. ದೂರದಲ್ಲಿರುವ ಕೊಣನೂರಿನಲ್ಲಿರುವ ಕೊಳಲ ಗೋಪಾಲಸ್ವಾಮಿ ದೇವಾಲಯವಿದೆ. ಅರಕಲಗೂಡಿನ ಉತ್ತರಕ್ಕೆ 16 ಕಿ.ಮಿ. ದೂರದಲ್ಲಿನ ಹಾನಗಲ್ ಎಂಬಲ್ಲಿ ಪೆರುಮಾಳ್ ಸಮುದ್ರ ಕೆರೆಯ ಹೊರವಲಯದಲ್ಲಿ ಈಶ್ವರ ದೇವಾಲಯವಿದೆ. ಇದು ಶಿಥಿಲ ವಾಗಿದ್ದರೂ ದೇವಸ್ಥಾನದ ಉತ್ತಮ ವಾಸ್ತು ಕೆತ್ತನೆ ಗಮನಾರ್ಹ.

ಶಂಭುನಾಥಪುರ ಅರಕಲ ಗೂಡಿಗೆ ಮೂರು ಕಿ.ಮೀ. ದೂರದಲ್ಲಿದೆ. ಇಲ್ಲಿ ಸ್ವಯಂ ಭೂನಾಥೇಶ್ವರ ಅಥವಾ ಶಂಭುನಾಥೇಶ್ವರ ದೇವಾಲಯವಿದೆ. ಇದು ಸುಂದರವಾಗಿದೆ. ಇದು ದ್ರಾವಿಡ ಶೈಲಿಯದಾಗಿದ್ದು ಕ್ರಿ.ಶ. 1290 ರಲ್ಲಿ ಕಟ್ಟಿದ್ದಾಗಿದೆ. ದೇವಾಲಯದ ಹೊರಭಾಗವೆಲ್ಲ ಸುಂದರ ಕೆತ್ತನೆ ಗಳಿಂದ ಕೂಡಿದೆ. ಗೋಪುರ ಹಾಗೂ ಹೊರಗಿನ ನವರಂಗವನ್ನು ಪಾಳೆಯ ಗಾರರ ಕಾಲದಲ್ಲಿ ರಚಿಸಲಾಯಿತು. ಇಲ್ಲಿನ ದೇವರ ವಿಗ್ರಹ ಎರಡು ಅಡಿ ಎತ್ತರವಿದ್ದು ಮೂರ್ತಿಗೆ ನಾಲ್ಕು ಕೈಗಳಿವೆ. ಮೇಲಿನ ಕೈಗಳಲ್ಲಿ ಡಮರುಗ ಹಾಗೂ ತ್ರಿಶೂಲವಿದೆ, ಕೆಳಗಿನ ಎಡಗೈಯಲ್ಲಿ ಕಮಲವಿದೆ ಕೆಳಗಿನ ಬಲಗೈ ಅಭಯ ಹಸ್ತದ ಭಂಗಿಯದು.

ಅರಕಲ ಗೂಡಿನ ದಕ್ಷಿಣಕ್ಕೆ 23 ಕಿ. ಮೀ. ದೂರದಲ್ಲಿ ಬಸವಾ ಪಟ್ಟಣ ಕಾವೇರಿ ತೀರದ ಮೇಲಿದೆ. ಈ ಊರಿನಲ್ಲಿ ಶಾಂತೀಶ್ವರ, ಪ್ರಣ ತಾರ್ಥಿಹರೇಶ್ವರ ಮತ್ತು ಲಕ್ಷ್ಮೀಕಾಂತ ದೇವಾಲಯವಿದೆ. ಕಾವೇರಿ ನದಿ ತೀರದ ರುದ್ರ ಪಟ್ಟಣದಲ್ಲಿ ಈಶ್ವರ ದೇವಾಲಯವಿದೆ. ಈ ಹಳ್ಳಿಗಳು ನದಿಯ ಆಚೆ ಈಚೆ ದಡಗಳಲ್ಲಿದ್ದು ದೃಶ್ಯ ರಮಣೀಯವಿರುತ್ತದೆ.

ಅರಕಲ್ಲ ಗೂಡು ತಾಲ್ಲೂಕಿನ ರಾಮನಾಥ ಪುರ ದಕ್ಷಿಣಕಾಶಿ ಎಂದು ಪ್ರಸಿದ್ಧಿಯಾಗಿದೆ. ಕಾವೇರಿ ಇಲ್ಲಿ ಪಶ್ಚಿಮಾಭಿಮುಖವಾಗಿ ಹರಿಯುತ್ತದೆ. ರಾಮನಾಥ ಪುರ ಒಂದು ಪವಿತ್ರ ಯಾತ್ರಾ ಸ್ಥಳ. ಇಲ್ಲಿನ ಕಾವೇರಿ, ಗೋಗರ್ಭ, ವಹ್ನಿಪುಷ್ಕರಿಣಿ, ರುದ್ರಪಾದ, ಮೇನಕ ಶಿಲೆ, ಪವಿತ್ರ ದೇವಾ ಲಯಗಳು ಇಲ್ಲಿಗೆ ಬಂದವರ ಮನಸ್ಸನ್ನು ಸೂರೆಗೊಂಡಿವೆ. ಇದೊಂದು ರಮಣೀಯವಾದ ಊರು. ಇಲ್ಲಿ ಸುಬ್ರಹ್ಮಣ್ಯೇಶ್ವರ, ಪಟ್ಟಾಭಿರಾಮ ಚಂದ್ರ, ಅಗಸ್ತ್ಯೇಶ್ವರ, ಪ್ರಸನ್ನ ರಾಮೇಶ್ವರ, ಆಂಜನೇಯ, ಲಕ್ಷ್ಮಿ ನರಸಿಂಹ ಮತ್ತು ದುರ್ಗಾ ಪರಮೇಶ್ವರಿ ಎಂದು ಒಟ್ಟು ಏಳು ದೇವಾಲಯಗಳಿವೆ.

ಸುಬ್ರಹ್ಮಣ್ಯೇಶ್ವರ ದೇವಾಲಯ ದ್ರಾವಿಡ ಶೈಲಿಯಲ್ಲಿದೆ. ಇದೊಂದು ದೊಡ್ಡ ದೇವಾಲಯ, ಇಲ್ಲಿ ಏಳೆಹೆಡೆಗಳುಳ್ಳ ನಾಗ ವಿಗ್ರಹ ಸುಂದರವಾಗಿದೆ. ಪ್ರತಿ ವರ್ಷ ಮಾರ್ಗಶಿರ ಶುಕ್ಲ ಷಷ್ಠಿಯಂದು ಇಲ್ಲಿ ರಥೋತ್ಸವ, ಜಾತ್ರೆ ನಡೆಯುತ್ತದೆ. ಪಟ್ಟಾಭಿರಾಮ ಚಂದ್ರದೇವಾಲಯವೂ ದ್ರಾವಿಡ ಶೈಲಿ ಯದಾಗಿದೆ. ಈ ಗುಡಿಯಲ್ಲಿ ಶ್ರೀ ರಾಮಚಂದ್ರ ಕುಳಿತ ಭಂಗಿಯಲ್ಲಿದ್ದು

ಸೀತಾದೇವಿ ತೊಡೆಯ ಮೇಲಿರುವಂತೆ ಮೂರ್ತಿಯನ್ನು ಕಡೆಯಲಾಗಿದೆ. ಭರತ, ಶತೃಘ್ನ, ಹನುಮಂತರ ಮೂರ್ತಿಗಳೂ ಇವೆ. ಆದುದರಿಂದ ಈ ದೇವರಿಗೆ ಪಟ್ಟಾಭಿರಾಮ ಎಂಬ ಹೆಸರಿದೆ. ಈ ದೇವಾಲಯದ ಎದುರು ಲಕ್ಷ್ಮೀ ನರಸಿಂಹ ದೇವಾಲಯವಿದೆ. ಇಲ್ಲಿನ ವಿಗ್ರಹ ಚಿಕ್ಕ ದೇವರಾಜ ಒಡೆಯರ ಕಾಲದ್ದಾಗಿದ್ದು ಮೂರ್ತಿಯನ್ನು ಸುಂದರವಾಗಿ ಕೆತ್ತಲಾಗಿದೆ.

ಪ್ರಸನ್ನ ರಾಮೇಶ್ವರ ದೇವಾಲಯ ಹೊಯ್ಸಳ ಕಾಲದ ದೇವಾಲಯವಾದರೂ ವಿಜಯನಗರದ ಅರಸುಗಳ ಹಾಗೂ ಪಾಳೆಯಗಾರರ ಕಾಲದಲ್ಲಿ ವಿಸ್ತರಿಸಲ್ಪಟ್ಟಿದೆ. ಇದರ ಗೋಪುರ ಎತ್ತರವಾಗಿದೆ. ಐದು ಅಂತಸ್ತಿನಿಂದ ಕೂಡಿದೆ. ಶ್ರೀ ರಾಮ ದೇವರು ಪೂಜಿಸಿದುದರಿಂದ ದೇವರಿಗೆ ರಾಮೇಶ್ವರ ಎಂದು ಹೆಸರಿದೆ. ಇಲ್ಲಿಯ ರಾಮೇಶ್ವರ ಲಿಂಗದಿಂದಾಗಿಯೇ ಊರಿಗೆ ರಾಮನಾಥಪುರ ಎಂಬ ಹೆಸರು ಬಂದಿರಬೇಕೆಂಬ ಊಹೆಯೂ ಇದೆ. ದೇವಸ್ಥಾನದಲ್ಲಿ ನಂದಿಗಳ ಸಾಲು ವಿಗ್ರಹಗಳಿವೆ. ಇಲ್ಲಿಗೆ ಆದಿ ಶಂಕರ ಆಚಾರ್ಯರು ಬಂದಿದ್ದಾಗ ದೇವಾಲಯದಲ್ಲಿ ವಿಶಾಲಾಕ್ಷಿ ಅಮ್ಮನವರ ವಿಗ್ರಹವಿಲ್ಲದ್ದು ಕಂಡು ಅವರೇ ಇಲ್ಲಿ ಇಂದ್ರಾಕ್ಷಮ್ಮ ಎಂಬ ಹೆಸರಿನಲ್ಲಿ ದೇವಿಯನ್ನು ಪ್ರತಿಷ್ಠಾಪಿಸಿದರೆನ್ನುತ್ತಾರೆ.

ದುರ್ಗಾ ಪರಮೇಶ್ವರಿ, ಅಗಸ್ತ್ಯೇಶ್ವರ, ರಾಮನಾಥ ಪುರದ ಇತರ ದೇವಾಲಯಗಳಾಗಿವೆ.

ಆಲೂರು ತಾಲ್ಲೂಕಿನ ಕೆಂಚಮ್ಮನ ಹೊಸಕೋಟೆಯಲ್ಲಿ ಕೆಂಚಾಂಬ ದೇವಾಲಯವಿದೆ. ಕೆಂಚಾಂಬ ಸಪ್ತ ಮಾತೃಕೆಯರಲ್ಲಿ ಒಬ್ಬಳೆನ್ನಲಾಗಿದೆ. ಇದೇ ತಾಲ್ಲೂಕಿನ ಬೆಂಡೆ ಕೆರೆಯ ಗೋಪಾಲ ಕೃಷ್ಣ ಮತ್ತು ರಾಮೇಶ್ವರ ದೇವಾಲಯಗಳೂ ನವಿಲಹಳ್ಳಿಯ ಪಾರ್ವತಮ್ಮನ ಗುಡ್ಡದ ಮೇಲೆ ಇರುವ ಶಿವಾಲಯವೂ ಪ್ರಸಿದ್ಧವಾದವು. ಕೆಂಚಾಂಬ ದೇವಸ್ಥಾನದ ಪಕ್ಕದಲ್ಲಿರುವ ಉಯ್ಯಾಲೆ ಕಂಬ ಗಮನ ಸೆಳೆಯುತ್ತದೆ.

ಪಾಳ್ಯ ಗ್ರಾಮದಲ್ಲಿ ಜನಾರ್ಧನ, ರಾಮೇಶ್ವರ ಮತ್ತು ತ್ರಿಪುರಾಂತಕೇಶ್ವರ ದೇವಾಲಯಗಳಿವೆ. ಲಕ್ಷ್ಮೀ ಜನಾರ್ಧನ ದೇವಾಲಯವನ್ನು ಕ್ರಿ.ಶ 14ನೇಯ ಶತಮಾನದಲ್ಲಿ ಕಟ್ಟಿಸಿರಬಹುದೆನ್ನಲಾಗಿದೆ. ಈ ದೇಗುಲ

ನೋಡಲು ಸುಂದರವಾಗಿದೆ. ಪಾಳ್ಯದ ಹತ್ತಿರ ಒಂದು ಜೈನ ಬಸದಿ ಇದೆ. ಆಲೂರಿನ ಪುರಸಭಾ ಗಡಿಯೊಳಗೆ ಬರುವ ಮರಸು ಗ್ರಾಮದಲ್ಲಿ ಈಶ್ವರ ಮತ್ತು ಗಣಪತಿ ದೇವಸ್ಥಾನಗಳು ಉಲ್ಲೇಖನೀಯವಾಗಿವೆ.

ತಾಲ್ಲೂಕು ಕೇಂದ್ರವಾದ ಅರಸೀಕೆರೆಯಲ್ಲಿ ಹೊಯ್ಸಳ ಶೈಲಿಯ ಕತ್ತಮೇಶ್ವರ ದೇವಾಲಯವಿದೆ. ಹೊರ ಗೋಡೆಯ ಮೇಲೆ ಒಂದು ಸಾಲು ಮೂರ್ತಿ ಶಿಲ್ಪಗಳು ಗಮನ ಸೆಳೆಯುತ್ತವೆ. ದೇವಸ್ಥಾನದ ಎಡಭಾಗದಲ್ಲಿ ಎರಡು ಗರ್ಭ ಗೃಹಗಳುಳ್ಳ ದೇವಾಲಯವಿದೆ. ಅರಸೀಕೆರೆಯಲ್ಲಿ ಹೊಯ್ಸಳ ಶೈಲಿಯ ಸಹಸ್ರಕೂಟ ಜಿನಾಲಯವಿದೆ. ಇಲ್ಲಿ ಗಣಪತಿ ಮತ್ತು ಸುಂದರ ವಾದ ಸಾಯಿನಾಥ ದೇವಸ್ಥಾನಗಳಿವೆ.

ಈ ತಾಲ್ಲೂಕಿನ ಹಾರನಹಳ್ಳಿಯಲ್ಲಿ ಶಿಲ್ಪ ವೈಭವದಿಂದ ಕೂಡಿದ ಕೇಶವ ಹಾಗೂ ಸೋಮೇಶ್ವರ ದೇವಾಲಯಗಳಿವೆ. ಹುಲ್ಲೇಕೆರೆಯಲ್ಲಿ ಚನ್ನಕೇಶವ ದೇವಾಲಯವಿದ್ದು ಇದನ್ನು 1163ರಲ್ಲಿ ಮೊದಲನೆಯ ನರಸಿಂಹ ದೊರೆ ಕಟ್ಟಿಸಿದನೆನ್ನಲಾಗಿದೆ. ಇಲ್ಲಿ ಸುಂದರವಾದ ವಿಷ್ಣುವಿನ ಮೂರ್ತಿ ಇದೆ. ಇದೇ ಗ್ರಾಮದಲ್ಲಿ ಸಪ್ತ ಮಾತೃಕೆಯರ ದೇವಾಲಯ, ಈಶ್ವರ ಹಾಗೂ ಆಂಜನೇಯ ದೇವಾಲಯಗಳಿವೆ.

ಬಾಣಾವರದ ವೆಂಕಟರಮಣ, ಕೇಶವ ದೇವಾಲಯಗಳು, ಜಾವಗಲ್‌ನ ಹೊಯ್ಸಳ ಶೈಲಿಯ ಲಕ್ಷ್ಮಿ ನರಸಿಂಹ ದೇವಾಲಯ, ಗಂಗಾಧರೇಶ್ವರ, ವೀರಭದ್ರ, ಬನಶಂಕರಿ ದೇವಾಲಯಗಳೂ, ಮಾಲೇಕಲ್ ತಿರುಪತಿಯ ವೆಂಕಟರಮಣ ಮತ್ತು ಗೋವಿಂದರಾಜ ಸ್ವಾಮಿ ದೇವಾಲಯಗಳೂ ಮತ್ತು ಮಾವತ್ತನಹಳ್ಳಿಯ ಮಹಾಲಿಂಗೇಶ್ವರ ದೇವಾಲಯ ಅರಸೀಕೆರೆ ತಾಲ್ಲೂಕಿನ ಇತರ ದೇವಾಲಯಗಳಾಗಿವೆ. ಅರಸೀಕೆರೆ ಎಂಬಲ್ಲಿ ಪಲ್ಲವ ವಾಸ್ತುಶಿಲ್ಪ ಹೋಲುವ ರಾಮೇಶ್ವರ ದೇವಾಲಯವಿದೆ. ಇದರಲ್ಲಿನ ಸೂರ್ಯ ಮತ್ತು ವಿಷ್ಣು ವಿಗ್ರಹಗಳು ಗಮನ ಸೆಳೆಯುತ್ತವೆ. ಚನ್ನಕೇಶವ ದೇವಾಲಯವೊಂದು ಇಲ್ಲಿದೆ.

### ಜಗದ್ವಿಖ್ಯಾತ ಗೊಮ್ಮಟೇಶ್ವರ

ಚನ್ನರಾಯ ಪಟ್ಟಣ ತಾಲ್ಲೂಕಿನಲ್ಲಿ ಚನ್ನರಾಯ ಪಟ್ಟಣಕ್ಕೆ ಸಮೀಪ

ದಲ್ಲಿರುವ ಶ್ರವಣ ಬೆಳಗೊಳ ಲೋಕ ಪ್ರಸಿದ್ಧವಾದ ಗೊಮ್ಮಟ ಮೂರ್ತಿಯಿಂದಾಗಿ ಹೆಸರಾಗಿದೆ. ಜೈನರ ಪವಿತ್ರ ಕ್ಷೇತ್ರವಿದು.

ಭಾರತೀಯ ಶಿಲ್ಪ ಕಲೆಗೆ ಗೊಮ್ಮಟ ಮೂರ್ತಿಗಳು ಕರ್ನಾಟಕದ ಒಂದು ಕೊಡುಗೆ. ಗೊಮ್ಮಟೇಶ್ವರ ಎಂಬ ಹೆಸರು ಆದಿ ತೀರ್ಥಂಕರ ವೃಷಭನಾಥನ ಕಿರಿಯ ಮಗ ಬಾಹುಬಲಿಯನ್ನು ಕುರಿತದ್ದಾಗಿದೆ. ಬಾಹುಬಲಿ ಸುಂದರ ಕಾಯದವನಾಗಿದ್ದು ಪೌದನ ಪುರವನ್ನಾಳುತ್ತಿದ್ದ ದೊರೆ. ಈತನಿಗೆ ಮನ್ಮಥ ಎಂಬ ಹೆಸರೂ ಇತ್ತು. ಮನ್ಮಥ ಸುಂದರಾಂಗ, ಹೀಗಾಗಿ ಗೊಮ್ಮಟ ಪದದ ಔಚಿತ್ಯವನ್ನು ಊಹಿಸಬಹುದು. ಚಕ್ರ ರತ್ನವೊಂದರಿಂದಾಗಿ ಬಾಹುಬಲಿ ತಾನೇ ಗೆದ್ದರೂ ವಿರಕ್ತನಾಗಿ ತಪಸ್ಸಿಗೆ ಹೊರಟ. ಆದರೆ ಅವನಿಗೆ ಕೈವಲ್ಯ ಜ್ಞಾನ ಲಭಿಸಲಿಲ್ಲ. ತಾನು ಗೆದ್ದ ನೆಲದಲ್ಲಿಯೇ ತಪಸ್ಸಿಗೆ ನಿಂತಿದ್ದ ಬಾಹುಬಲಿಗೆ ಜ್ಞಾನೋದಯವುಂಟಾಯಿತು ಎನ್ನುತ್ತಾರೆ. ಬಾಹುಬಲಿಯ ಬಗ್ಗೆ ಜೈನರಲ್ಲಿ ಪ್ರಚಲಿತವಾಗಿರುವ ಕಥೆ ಇದು.

ಶ್ರವಣ ಬೆಳಗೊಳದ ಇಂದ್ರಗಿರಿ ಬೆಟ್ಟದ ತುದಿಯಲ್ಲಿ ಕೆತ್ತಲಾಗಿರುವ ಈ ಶಿಲ್ಪ ಒಂದೇ ಶಿಲೆಯ ಪೂರ್ಣ ಶಿಲ್ಪ. ಈ ಮೂರ್ತಿಯ ನಿರ್ಮಾಣವಾದ ಬಳಿಕವೇ ಬಾಹುಬಲಿಗೆ ಗೊಮ್ಮಟನೆಂಬ ಹೆಸರು ಬಂದಿತೆನ್ನಲಾಗಿದೆ. ಗಂಗರಾಜ ರಾಚಮಲ್ಲನ ಮಂತ್ರಿಯಾಗಿದ್ದ ಚಾಮುಂಡರಾಯ ತನ್ನ ತಾಯಿ ಕಾಳಲ ದೇವಿಯ ಸಲುವಾಗಿ ಇದನ್ನು ಮಾಡಿಸಿದನೆಂದು ಹೇಳುತ್ತಾರೆ. ಪ್ರತಿಮೆ ಎಷ್ಟು ದೊಡ್ಡದೋ ಅಷ್ಟೇ ಸುಂದರ ಮೂರ್ತಿಯ ಗಾಂಭೀರ್ಯ, ಮುಖಭಾವ ವರ್ಣನಾತೀತ. ಈ ಪ್ರತಿಮೆಯನ್ನು ನೋಡಿ ಬಯಸಿ ಬರುವ ಪ್ರವಾಸಿಗಳಿಗೆ ಮೌನದಿಂದ ದರ್ಶನ ಪಡೆಯಿರಿ ಎಂಬ ಸೂಚನೆ ಇದೆ. ಆದರೆ ಪ್ರವಾಸಿಗಳು ಈ ಮೂರ್ತಿಯನ್ನೇ ಕಂಡೇ ಮೌನವಾಗುವುದು ಸ್ವಾಭಾವಿಕವಾಗಿದೆ. ಇಲ್ಲಿ ಭವ್ಯತೆಯ ಸಾಕಾರವಾಗಿದೆ. ಈ ವಿಗ್ರಹ ಸ್ಥಾಪನೆಯಾಗಿಯೇ ಸಾವಿರ ವರ್ಷಗಳು ಕಳೆದಿವೆ.

ಇಲ್ಲಿನ ಚಂದ್ರಗಿರಿ ಬೆಟ್ಟದ ಮೇಲೆ ಭದ್ರಬಾಹು ಎಂಬ ಮುನಿಗಳು ತಪಸ್ಸು ಮಾಡಿದ್ದರೆನ್ನಲಾಗಿದೆ. ಇಲ್ಲಿ ಚಂದ್ರಗುಪ್ತನು ಧ್ಯಾನ ಮಾಡುತ್ತಿದ್ದನೆಂದು ಹೇಳಲಾದ ಬಸದಿಯನ್ನು 'ಚಂದ್ರಗುಪ್ತ ಬಸದಿ' ಎಂದು

ಕರೆಯುತ್ತಾರೆ. ವಾಸ್ತು ಕಲಾದೃಷ್ಟಿಯಿಂದ ಬಸದಿ ಗಮನಾರ್ಹ ಇಲ್ಲಿನ ಜಾಲಂಧ್ರಗಳಲ್ಲಿ ಭದ್ರಬಾಹು ಹಾಗೂ ಚಂದ್ರಗುಪ್ತ ಮೌರ್ಯರ ಜೀವನ ಚರಿತ್ರೆಯ ಸಂಗತಿಗಳು ನಿರೂಪಿತವಾಗಿದೆ. ಇಲ್ಲಿ ಶಾಂತಿನಾಥನ ಬಸದಿ, ಕತ್ತಲೆ ಬಸದಿ, ಚಾವುಂಡರಾಯ ಬಸದಿ, ಪಾರ್ಶ್ವನಾಥ ಬಸದಿ ಮೊದಲಾದ ಹದಿಮೂರು ಬಸದಿಗಳಿವೆ. ಶ್ರವಣ ಬೆಳಗೊಳದಲ್ಲಿ ಒಂದು ಜೈನ ಮಠ ಇದೆ. ಇದರ ಗೋಡೆಗಳ ಮೇಲೆ ಹಲವು ಸುಂದರ ಚಿತ್ರಗಳನ್ನು ಬಿಡಿಸಿರುವುದು ಗಮನಾರ್ಹವಾಗುತ್ತವೆ.

## ತಾಲ್ಲೂಕಿನ ಇತರ ದೇವಾಲಯಗಳು

ಚನ್ನರಾಯ ಪಟ್ಟಣದಲ್ಲಿನ ಚಂದ್ರಮೌಳೀಶ್ವರ ದೇವಾಲಯದಲ್ಲಿ ಈಶ್ವರ ಬೇಡರ ಕಣ್ಣಪ್ಪನಿಗೆ ದರ್ಶನ ಕೊಟ್ಟಿರುವ ದೃಶ್ಯ ಶಿಲ್ಪ ಅತ್ಯಂತ ಸುಂದರವಾಗಿದೆ. ಸಾತೇಶ್ವರ, ಗದ್ದೆ ರಾಮೇಶ್ವರ ಮೊದಲಾದ ದೇವಾಲಯಗಳೂ ಈ ಊರಿನಲ್ಲಿದೆ. ಗದ್ದೆ ರಾಮೇಶ್ವರನ ಗುಡಿಯಲ್ಲಿ ಎರಡು ತಲೆ ಬಸವನ ವಿಗ್ರಹ ಇರುತ್ತದೆ.

ನುಗ್ಗೇಹಳ್ಳಿ ಇತಿಹಾಸ ಪ್ರಸಿದ್ಧವಾದ ಊರು. ಇಲ್ಲಿ ಹೊಯ್ಸಳ ದೇವಾಲಯಗಳಿದ್ದು ಊರಿನ ಮಧ್ಯದಲ್ಲಿರುವ ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನ ಪ್ರಸಿದ್ಧವಾಗಿದೆ. ನವರಂಗ ದ್ವಾರದ ಮೇಲೆ ವೀಣಾಪಾಣಿ ಸರಸ್ವತಿ ಮೂರ್ತಿ ಇದೆ. ಮುಖ್ಯ ವಿಗ್ರಹ ಕೇಶವನೇ ಆದರೂ ಲಕ್ಷ್ಮೀ ನರಸಿಂಹ ಎಂದು ಪ್ರಸಿದ್ಧವಾಗಿದೆ. ದೇವಸ್ಥಾನ ಶಿಥಿಲವಾಗಿದೆ. ಗುಡ್ಡದ ಮೇಲೆ ಜಯಗೊಂಡೇಶ್ವರ ದೇವಸ್ಥಾನವಿದೆ.

ದಿಡಗ ಎಂಬಲ್ಲಿ ಚಾಳುಕ್ಯರ ಕಾಲದ ಬಲ್ಲೇಶ್ವರ ದೇವಸ್ಥಾನವಿದೆ. ಅಗ್ರಹಾರ ಬೆಳಗಲಿ ಗ್ರಾಮದಲ್ಲಿ ಸುಂದರ ದೇವಾಲಯಗಳಿವೆ. ಕೇಶವ, ಸೋಮೇಶ್ವರ ಹಾಗೂ ಅಮೃತೇಶ್ವರ ದೇವಾಲಯ ಇಲ್ಲಿ ಪ್ರಸಿದ್ಧವಾಗಿದೆ. ಆದರೆ ಇವು ಶಿಥಿಲವಾಗುತ್ತಿರುವುದು ದುರ್ದೈವದ ಸಂಗತಿ. ಈಗ ಇರುವಂತೆಯೂ ನೋಡಲು ಚೆನ್ನಾಗಿರುತ್ತವೆ.

ದಿಂಡಗೂರಿನ ಕೇಶವ ಮತ್ತು ಮಲ್ಲಿಕಾರ್ಜುನ ದೇವಾಲಯಗಳು,

ಕುಂದೂರಿನ ಚಾಮುಂಡೇಶ್ವರಿ. ರಂಗನಾಥ ಮತ್ತು ಸುಬ್ರಹ್ಮಣ್ಯ ದೇವಾಲಯು ಗಳು ಕುಂದೂರಿನ ಚಾಮುಂಡೇಶ್ವರಿ, ರಂಗನಾಥ ಮತ್ತು ಸುಬ್ರಮಣ್ಯ ದೇವಾಲಯುಗಳು, ಆನೆಕೆರೆಯ ಏಕಕೂಟ ಚೆನ್ನಕೇಶವ ದೇಗುಲ, ಶಂಭು ಲಿಂಗೇಶ್ವರ ದೇವಾಲಯುಗಳು. ಹಿರೀಸಾಸಿವೆಯ ದ್ರಾವಿಡ ಶೈಲಿಯ ಕೇಶವ ದೇವಾಲಯ, ಹೆಬ್ಬಾಳಲಿನ ಸಿಂಗೇಶ್ವರ ದೇವಾಲಯ ಇವು ತಾಲ್ಲೂಕಿನ ಇತರ ದೇವಾಲಯುಗಳು. ಹಳೆ ಬೆಳಗೊಳದಲ್ಲಿ ಪಾರ್ಶ್ವನಾಥ ಬಸದಿ ಜಿನನಾಥಪುರ ಶಾಂತಿನಾಥ ಮತ್ತು ಅರೆಗಲ್ಲು ಬಸದಿಗಳಿವೆ. ಜಿನನಾಥಪುರ ಶ್ರವಣಬೆಳಗೊಳದ ಸಮೀಪದಲ್ಲಿಯೇ ಇದೆ. ಶ್ರವಣಬೆಳಗೊಳದಲ್ಲಿಯೇ 32 ಜಿನಾಲಯುಗಳಿವೆ. ಇಲ್ಲಿನ ಬಸದಿಗಳೆಲ್ಲ ಕಲಾತ್ಮಕವಾಗಿದೆ.

ಸಕಲೇಶಪುರ ದೇವಾಲಯುದಿಂದಾಗಿ ಹೆಸರಾಗಿರುವ ಸಕಲೇಶಪುರ ತಾಲ್ಲೂಕು ಕೇಂದ್ರ. ಈ ತಾಲ್ಲೂಕಿನ ಮಂಜರಾಬಾದ್ ಮತ್ತು ಬಿಸಲೇಘಾಟ್ ಗಳು ಪ್ರಸಿದ್ಧವಾದ ಸ್ಥಳಗಳು. ಸಕಲೇಶಪುರಕ್ಕೆ ಆರು ಕಿ.ಮೀ. ದೂರದ ಹಳೇ ಬೇಲೂರಿನಲ್ಲಿ ಶಿಥಿಲಾವಸ್ಥೆಯಲ್ಲಿರುವ ಚನ್ನಕೇಶವ ದೇವಾಲಯವಿದೆ.

## ಬೇಲೂರು ಹಳೆಬೀಡು ದೇವಾಲಯಗಳು

ಹಾಸನ ಜಿಲ್ಲೆಯಲ್ಲಿ ಬೇಲೂರು ಒಂದು ತಾಲ್ಲೂಕು ಕೇಂದ್ರ. ಹಾಸನ ದಿಂದ ಬೇಲೂರು 38 ಕಿ.ಮೀ. ದೂರದಲ್ಲಿದೆ. ಯುಗಚಿ ನದಿ ದಡದ ಮೇಲಿ ರುವ ಬೇಲೂರು ಪುರಾಣ ಇತಿಹಾಸ ಪ್ರಸಿದ್ಧವಾದ ಚನ್ನಕೇಶವ ದೇವಾಲಯ ದಿಂದಾಗಿ ಹೆಸರಾಗಿದೆ. ಶಿಲ್ಪಿಗಳ ಅಪೂರ್ವ ಕಲಾಕೌಶಲ್ಯಕ್ಕೆ ಈ ದೇವಾಲಯು ಕ್ಕಿಂತ ಉತ್ತಮವಾದ ಉದಾಹರಣೆ ಇನ್ನೊಂದಿಲ್ಲ. ಜಗತ್ತಿನ ಅದ್ಭುತಗಳ ಸಾಲಿನಲ್ಲಿ ನಿಲ್ಲಬಲ್ಲ ಈ ದೇವಾಲಯು ಕರ್ನಾಟಕದ ಹೆಮ್ಮೆಯೂ ಆಗಿದೆ. ಇಡೀ ದಿನ ನೋಡಿದರೂ ಮುಗಿಯದ ವಿವರಗಳು ಇಲ್ಲಿ ದೊರಕುತ್ತವೆ. ಹೊಯ್ಸಳ ಶೈಲಿಯ ಕಟ್ಟಡಗಳಲ್ಲಿಯೇ ಅತ್ಯಂತ ಸುಂದರವಾದ ವಾಸ್ತು ರಚನೆ ಬೇಲೂರು ದೇವಾಲಯ.

ಬೇಲೂರು ಚೆನ್ನಕೇಶವ ದೇವಾಲಯವನ್ನು ಹೊಯ್ಸಳ ವಿಷ್ಣುವರ್ಧನ ಕಟ್ಟಿಸಿದನೆಂದು ಪ್ರತೀತಿ ಇದೆ. ನಕ್ಷತ್ರಾಕಾರದ ತಳವಿನ್ಯಾಸವಿರುವ ಒಂದು

ಗರ್ಭಗುಡಿ ಇರುವ ಸುಂದರವಾದ ಈ ದೇವಸ್ಥಾನಕ್ಕೆ ಮೂರು ದ್ವಾರಗಳಿವೆ. ದೇವಾಲಯದ ಎಡಪಕ್ಕಕ್ಕೆ ಕಪ್ಪೆ ಚೆನ್ನಿಗರಾಯನ ದೇವಸ್ಥಾನವಿದೆ. ಇದನ್ನು ವಿಷ್ಣುವರ್ಧನನ ರಾಣಿ ರಾಣಿ ಶಾಂತಲೆ ಕಟ್ಟಿಸಿದಳೆನ್ನಲಾಗಿದೆ. ಇದೇ ಪಕ್ಕಕ್ಕೆ ಸೌಮ್ಯ ನಾಯಕಿ ದೇವಸ್ಥಾನವೂ, ಹಿಂಬದಿಗೆ ವೀರನಾರಾಯಣ ದೇವಸ್ಥಾನ ವಿದೆ. ಬಲಬದಿಗೆ ಆಂಡಾಳ್ ಗುಡಿ ಇದೆ. ಇದೇ ಅಲ್ಲದೆ ಈ ಆವರಣದಲ್ಲಿ ಇನ್ನೂ ಅನೇಕ ದೇವಸ್ಥಾನಗಳಿವೆ. ಎತ್ತರವಾದ ಗೋಡೆಗಳಿರುವ ಹೊರಾಂಗ ಣದ ಉದ್ದ 396 ಅಡಿ. ಭಾರೀ ಪ್ರಮಾಣದ ದೇವಾಲಯ. ಚೆನ್ನಕೇಶವ ದೇವಾಲಯವೇ 176 ಅಡಿ ಉದ್ದ 156 ಅಡಿ ಅಗಲವಿದೆ. ಪೂರ್ವದಿಕ್ಕಿನಲ್ಲಿ ಇರುವ ಎರಡು ಹೆಬ್ಬಾಗಿಲುಗಳಲ್ಲಿ ದಕ್ಷಿಣದ ಬಾಗಿಲನ್ನು ಆನೆ ಬಾಗಿಲು ಎಂದು ಕರೆಯುತ್ತಾರೆ. ಗರ್ಭಗುಡಿಗೆ ನೇರ ಎದುರಿಗಿರುವ ಉತ್ತರ ಬಾಗಿಲ ಮೇಲೆ ದ್ರಾವಿಡ ಶೈಲಿಯ ಎತ್ತರವಾದ ಐದು ಅಂತಸ್ತುಗಳುಳ್ಳ ಇಟ್ಟಿಗೆ ಗಾರೆಗಳಿಂದ ನಿರ್ಮಿತವಾದ ಗೋಪುರ ಇದೆ. ಕೇಶವ ದೇವಾಲಯ ವಿಸ್ತಾರ ಹಾಗೂ ಶಿಲ್ಪಿಗಳ ದೃಷ್ಟಿಯಿಂದ ಪ್ರಧಾನವಾದುದು. ದೇವಾಲಯದಲ್ಲಿ ಗರ್ಭಗುಡಿ, ಸುಕನಾಸಿ, ಕಂಬಗಳಿಂದ ಕೂಡಿದ ಮಂಟಪ (ನವರಂಗ) ಇವೆ. ಜಗತಿಯಾಕಾರದ ನವರಂಗದ ಹೊರಗೋಡೆಗಳ ಮೇಲೆ ಬುಡದಿಂದ ಎಂಟು ಅಡ್ಡಪಟ್ಟಿಕೆಗಳಿವೆ. ಈ ಪಟ್ಟಿಕೆಗಳ ಮೇಲಿರುವ ಶಿಲ್ಪಗಳು ಶಿಲ್ಪಿಯ ಕಲಾ ಚಾತುರ್ಯಕ್ಕೆ ಕುರುಹಾಗಿವೆ. ಇವು ಹೀಗಿವೆ.

1. ವಿವಿಧ ಭಂಗಿಗಳಲ್ಲಿ ಚಲಿಸುತ್ತಿರುವ ಆನೆಗಳ ಸಾಲು. ಒಂದಿದ್ದಂತೆ ಮತ್ತೊಂದಿಲ್ಲ.

2. ಮಣಿಹಾರಗಳಿಂದ ಅಲಂಕೃತವಾದ ಪಟ್ಟಿಕೆಯ ಮೇಲೆ ಸಿಂಹ ಮುಖಗಳು.

3. ಲತಾಬಳ್ಳಿಗಳಿಂದ ರಚಿತವಾದ ವೃತ್ತಗಳ ಮಧ್ಯೆ ಮಾನವ, ಪ್ರಾಣಿ ಮತ್ತು ಪಕ್ಷಿಗಳ ಚಿತ್ರಗಳು

4. ಮಣಿಹಾರಗಳ ಅಲಂಕರಣ.

5. ಅಲಂಕೃತವಾದ ಗೂಡುಗಳಲ್ಲಿ ನೃತ್ಯ, ಸಂಗೀತ, ಹಾಗೂ ಪುರುಷ ವಿಗ್ರಹಗಳು ಮತ್ತು ಯಕ್ಷರು.

6. ಸ್ತ್ರೀ ವಿಗ್ರಹಗಳು.

7. ಸಿಂಹಮುಖಗಳ ಮಧ್ಯೆ ಇರುವ ಸಣ್ಣ ಶಿಖರಗಳು ಮತ್ತು ಮಾನವ ಶಿಲ್ಪಗಳು-

8. ಸಣ್ಣ ಜೋಡು ಕಂಬಗಳ ಮಧ್ಯೆ ಚಿತ್ರ ಶಿಲ್ಪಗಳು.

ನವರಂಗ ಗೋಡೆಗಳಲ್ಲಿ ಚಾವಣಿಗೆ ಆಧಾರವಾಗಿರುವ ನಲವತ್ತು ಕಂಬಗಳ ಬೋದಿಗೆಗಳ ಮೇಲೆ ಮುಂಬಾಗಿದಂತೆ ನಿಂತುಕೊಂಡಿರುವ ಮದನಿಕೆ ವಿಗ್ರಹಗಳು ಈ ದೇವಾಲಯುದ ವಿಶೇಷ. ನವರಂಗದ ಗೋಡೆಗಳ ಮೇಲರ್ಧದಲ್ಲಿರುವ ಒಂದಂಕಣದ ಪ್ರಮಾಣದ ವಿಶಾಲ ಫಲಕಗಳಲ್ಲಿರುವ ಉಬ್ಬು ಶಿಲ್ಪಗಳು ಸುಂವರವಾಗಿರುತ್ತವೆ.

ದೇವಾಲಯದ ಬಾಗಿಲಿನ ಮುಂದಿನ ಕುಸುರಿ ಕೆತ್ತನೆಯು ಕೆಲಸ ಅಪೂರ್ವ.

ದೇವಸ್ಥಾನದ ಹೊರಗೋಡೆಯಲ್ಲಿ ನಲವತ್ತು ಮದನಿಕೆಗಳೂ ಒಳ ಭಾಗದಲ್ಲಿ ನಾಲ್ಕು ಮದನಿಕೆಗಳೂ ಇವೆ. ಹೊರಗಿನ ನಲವತ್ತರಲ್ಲಿ ಮೂರು ಮಾತ್ರ ಪುರುಷಾಕೃತಿಗಳು. ಶಿಲಾಬಾಲಿಕೆಯರೆಂದು ಈ ವಿಗ್ರಹಗಳಿಗೆ ಹೇಳುತ್ತಾರೆ.

ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಳ್ಳುತ್ತಿರುವ ಚೆಲುವೆ, ತಿಲಕ ಸುಂದರಿ, ಶಿಲಕವಾಣಿ (ಬಲತೋಳಿನ ಮೇಲೆ ಗಿಣಿ ಕೂರಿಸಿಕೊಂಡಿರುವ ಸ್ತ್ರೀ) ಕಪಿಯಿಂದ ಪೀಡಿತಳಾದ ಚೆಲುವೆ, ಬೇಡಿತಿ, ತಲೆಬಾಚಿಕೊಳ್ಳುತ್ತಿರುವ ಚೆಲುವೆ, ನೃತ್ಯ ಭಂಗಿಯ ಚೆಲುವೆ, ವೇಣುವಾದಕ, ಮೋಹಿನಿ ನೃತ್ಯ, ರುದ್ರವೀಣಾಧಾರಿ, ಕೇಶ ಶೃಂಗಾರ ನಿರತ ಚೆಲುವೆ, ವರ್ಣಶಬರಿ, ನೃತ್ಯಗಾತಿ, ಚೇಳಿನಿಂದ ಪೀಡಿಸಲ್ಪಟ್ಟ ಚೆಲುವೆ, ಡಮರು ಬಾರಿಸುವ ಪುರುಷ ಮೊದಲಾದ ಈ ಮದನಿಕೆ ವಿಗ್ರಹಗಳ ಚೆಲುವನ್ನು ಹೇಳತೀರದು.

ದೇವಾಲಯದ ಕೆತ್ತನೆಗಳಲ್ಲಿ ಮಹಾಭಾರತ, ಭಾಗವತ ದೃಶ್ಯಗಳು ಅಪಾರ ಇವೆ. ಗರ್ಭಗೃಹದ ದಕ್ಷಿಣದ ಕಡೆಗಿರುವ ಸರಸ್ವತಿ ವಿಗ್ರಹ, ಕೆಳಗಿನ ವಿಷ್ಣು ಆಕೃತಿ ಇವೆಲ್ಲ ಶಿಲ್ಪ ಕಲೆಗೆ ಮೆರುಗು ಇಟ್ಟಂತಿವೆ.

ಚೆನ್ನಕೇಶವ ಮೂರ್ತಿ ಒಂಬತ್ತು ಅಡಿ ಎತ್ತರವಿದ್ದು ಹೊಯ್ಸಳ ಶಿಲ್ಪ ಕ್ಷೇತ್ರದಲ್ಲೇ ಇದೊಂದು ಸುಂದರ ಮೂರ್ತಿ ಎನ್ನಲಾಗಿದೆ. ಮುಖದಲ್ಲಿ ಸೌಮ್ಯ ಕಳೆ ಇರುತ್ತದೆ. ಬಲ ಎಡ ಪಾದಗಳ ಒಳ ಭೂದೇವಿ ಶ್ರೀದೇವಿಯರು ನಿಂತಿರುತ್ತಾರೆ. ದೇವಿಯರ ಹಿಂಬದಿಯಲ್ಲಿರುವ ಕಂಬಗಳ ಮೇಲೆ ಮಕರಗಳೂ, ಮೇಲೆ ಲತಾತೋರಣವೂ ಲತಾತೋರಣದಲ್ಲಿ ದಶಾವ ತಾರಗಳು, ದ್ವಾದಶ ಮೂರ್ತಿಗಳೂ, ಪ್ರಭಾವಳಿಯ ಅಂಚಿನಲ್ಲಿ ಅಷ್ಟ ದಿಕ್ಪಾಲಕರೂ ಇವೆ.

ಕಪ್ಪೆ ಚೆನ್ನಿಗರಾಯ ದೇವಸ್ಥಾನದಲ್ಲಿರುವ ಚೆನ್ನಿಗರಾಯನ ವಿಗ್ರಹ ಆರೂವರೆ ಅಡಿ ಎತ್ತರವಿದೆ. ಈ ದೇವಾಲಯದ ತಳ ವಿನ್ಯಾಸ ಕೇಶವ ದೇವಾಲಯದ ತಳ ವಿನ್ಯಾಸದಂತೆಯೇ ಇದೆ. ಹೊರ ಗೋಡೆಗಳ ಮೇಲೆ ಉಬ್ಬು ಶಿಲ್ಪಗಳ ಅಲಂಕಾರವಿಲ್ಲ. ಮೂಲವಿಗ್ರಹ ಒಂದು ಸುಂದರ ಶಿಲ್ಪ. ಇದರ ಪ್ರಭಾವಳಿಯಲ್ಲಿ ದಶಾವತಾರ. ಅಷ್ಟದಿಕ್ಪಾಲಕರ ಕೆತ್ತನೆಗಳಿರುತ್ತವೆ. ಕೇಶವ ದೇವಾಲಯದ ಹಿಂದೆ ವಿಜಯನಾರಾಯಣ ಗುಡಿಯಿದೆ. ಈ ಗುಡಿಯ ಹೊರ ಗೋಡೆಯ ಮೇಲೆ ದೊಡ್ಡ ದೇವತಾವಿಗ್ರಹಗಳ ಉಬ್ಬು ಶಿಲ್ಪಗಳಿವೆ. ಕೇಶವ ದೇವಾಲಯದ ನೈಋತ್ಯ ಮೂಲೆಯಲ್ಲಿ ಸೋಮನಾಯಕಿ ಅಮ್ಮನವರ ದೇವಾಲಯವಿದ್ದರೆ ವಾಯುವ್ಯ ಮೂಲೆಯಲ್ಲಿ ಆಂಡಾಳ್ ಗುಡಿಯಿದೆ. ಈ ಗುಡಿಯ ಪ್ರಾಕಾರದಲ್ಲಿ ಹಲವು ಸಣ್ಣ ಗುಡಿಗಳಿವೆ.

ಶಂಕರೇಶ್ವರ ಗುಡಿ, ನಂಜುಂಡೇಶ್ವರ ದೇವಾಲಯ, ಪಾತಾಳೇಶ್ವರ, ಅಮೃತೇಶ್ವರ ದೇವಾಲಯಗಳು ಬೇಲೂರಿನ ಇತರ ದೇವಾಲಯಗಳಾಗಿವೆ.

ಹಳೆಬೀಡು ಬೇಲೂರು ತಾಲ್ಲೂಕಿನ ಒಂದು ಗ್ರಾಮ, ಮಲೆನಾಡಿನ ಅಂಚಿನಲ್ಲಿದೆ. ಹಿಂದೆ ಇದಕ್ಕೆ ದೋರಸಮುದ್ರ ಎಂದು ಹೆಸರಿತ್ತು. ಇದೊಂದು ಇತಿಹಾಸ ಪ್ರಸಿದ್ಧ ಸ್ಥಳವೂ ಆಗಿದೆ. ಹೊಯ್ಸಳರು ಇಲ್ಲಿ ಆಳಿದರು.

ಈ ಊರಿನಲ್ಲಿ ಈಗ ಉಳಿದು ಬಂದಿರುವ ದೇವಾಲಯಗಳಲ್ಲೆಲ್ಲ ಹೊಯ್ಸಳೇಶ್ವರ ದೇವಾಲಯ ಅತ್ಯುತ್ತಮವಾದುದಾಗಿದೆ. ಇದೊಂದು ಜೋಡಿ ದೇವಾಲಯ. ಎರಡೂ ದೇವಾಲಯಗಳು ಒಂದರ ಪಕ್ಕದಲ್ಲಿ

ಒಂದಿದ್ದು ಎರಡರ ನವರಂಗಗಳನ್ನೂ ಒಂದು ಕೈಸಾಲೆಯ ಮೂಲಕ ಜೋಡಿಸಿ ಒಂದೇ ದೇವಾಲಯ ಎನ್ನುವಂತೆ ಜೋಡಿಸಲಾಗಿದೆ. ಒಂದೊಂದು ದೇವಾಲಯದಲ್ಲಿಯೂ ನಕ್ಷತ್ರಾಕಾರದ ಗರ್ಭಗೃಹ, ಸುಕನಾಸಿ ಹಾಗೂ ಚೌಕಾಕಾರದ ನವರಂಗ ಇವೆ. ದೇವಾಲಯವನ್ನು ಸುತ್ತುವರಿದು ಬಂದಿರುವ 700 ಅಡಿಗೂ ಹೆಚ್ಚು ಉದ್ದವಾಗಿರುವ ಹಲವಾರು ಪಟ್ಟಿಕೆಗಳು ಇವೆ. ಈ ಪಟ್ಟಿಕೆಗಳ ಮೇಲಿನ ಕೆತ್ತನೆಗಳು ಒಂದೆರಡಲ್ಲ. ಆನೆ, ಸಿಂಹ, ಕುದುರೆ, ಹಂಸಗಳ ಸಾಲು, ರಾಮಾಯಣ, ಮಹಾಭಾರತ, ಭಾಗವತಗಳ ಕಥಾನಕಗಳ ಪಟ್ಟಿಕೆಗಳು, ಮೂರ್ತಿ ಶಿಲ್ಪಗಳಾಗಮನ ಸೆಳೆಯುತ್ತವೆ. ದೇವಾಲಯದ ಎಲ್ಲ ಕಂಬಗಳೂ ಲೇಥ್ ಯಂತ್ರದಲ್ಲಿ ಕಡೆದವುಗಳಾಗಿದ್ದು ಕೆಲವಂತೂ ತುಂಬ ಹೊಳಪು ಪಡೆದಿವೆ. ಹೊಯ್ಸಳೇಶ್ವರ ದೇವಾಲಯದ ಭಿತ್ತಿ ಶಿಲ್ಪಗಳು ಅತ್ಯಂತ ಸುಂದರವಿದ್ದು ಇಲ್ಲಿಯ ಶಿಲ್ಪಕಲೆ ಹೊಯ್ಸಳ ಶಿಲ್ಪದಲ್ಲಿಯೇ ಅತ್ಯುತ್ತಮವಾದುದು. ದೇವಾಲಯದಲ್ಲಿನ ಲಿಂಗಗಳೂ ದೊಡ್ಡದಿವೆ, ಒಂದು ಹೊಯ್ಸಳೇಶ್ವರ ಮತ್ತೊಂದು ಶಾಂತಲೇಶ್ವರ.

ಕೇದಾರೇಶ್ವರ ಹಳೇ ಬೀಡಿನ ಮತ್ತೊಂದು ಗಮನಾರ್ಹ ದೇವಾಲಯ. ಇದನ್ನು ಹೊಯ್ಸಳ ದೊರೆ ಎರಡನೆಯ ಬಲ್ಲಾಳ 1219ರಲ್ಲಿ ಕಟ್ಟಿಸಿದ ನೆನ್ನಲಾಗಿದೆ. ಈ ದೇವಾಲಯದಲ್ಲಿ ಮೂರು ಕೋಣೆಗಳಿದ್ದು ಗರ್ಭಗುಡಿಯಲ್ಲಿ ಯಾವ ವಿಗ್ರಹವೂ ಇಲ್ಲ. ನಕ್ಷತ್ರಾಕಾರದ ತಳ ವಿನ್ಯಾಸ ಹೊಂದಿರುವ ಈ ದೇವಾಲಯವನ್ನೂ ಎತ್ತರವಾದ ಜಗತಿಯ ಮೇಲೆ ಕಟ್ಟಲಾಗಿದ್ದು ಅಲಂಕಾರ ಪಟ್ಟಿಕೆಗಳೂ ಇವೆ. ಸುಂದರ ಕೆತ್ತನೆಗಳಿಂದ ಕೂಡಿದ ಪಟ್ಟಿಕೆಗಳಲ್ಲಿ ಮಹಾಭಾರತ, ರಾಮಾಯಣ ಮತ್ತು ಭಾಗವತಗಳ ಕೆಲವು ಕಥೆಗಳನ್ನು ಬಿಡಿಸಲಾಗಿದೆ.

ಹಳೆಬೀಡಿನಲ್ಲಿ ವೀರಭದ್ರ ದೇವಾಲಯವಿದ್ದು ಇದು ಚಿಕ್ಕ ದೇವಾಲಯವಾಗಿದೆ, ಇದರ ಬಳಿ ರಂಗನಾಥಸ್ವಾಮಿ ದೇವಾಲಯವಿದೆ. ಹಳೆಬೀಡಿನಲ್ಲಿ ಕೆಲವು ಜಿನ ಬಸದಿಗಳಿವೆ. ಶಾಂತಿನಾಥ ಮತ್ತು ಪಾರ್ಶ್ವನಾಥ ಹಾಗೂ ಆದಿನಾಥ ಬಸದಿಗಳು ಗಮನ ಸೆಳೆಯುತ್ತವೆ. ಶಾಂತಿನಾಥ ಬಸದಿಯಲ್ಲಿನ ಮೂರ್ತಿ ಸುಮಾರು ಹತ್ತು ಅಡಿ ಎತ್ತರವಿದೆ. ಗರ್ಭಗೃಹ,

ಸುಕನಾಸಿ. ನವರಂಗಗಳನ್ನು ಈ ಬಸದಿಗಳಲ್ಲೂ ಕಾಣಬಹುದು. ಆದಿನಾಥ ಬಸದಿಯಲ್ಲಿ ಗರ್ಭಗೃಹ, ಸುಕನಾಸಿಗಳು ಮಾತ್ರ ಇವೆ. ಪಾರ್ಶ್ವನಾಥ ಬಸದಿಯ ನವರಂಗದ ವೈಶಿಷ್ಟ್ಯವೆಂದರೆ ಅತ್ಯಂತ ಹೊಳಪು ಇರುವ ಕಂಬಗಳು. ಮಧ್ಯದ ಕಂಬಗಳ ನಿಮ್ನೋನ್ನತ ಹಿನ್ನೆಲೆಯಲ್ಲಿ ಹೊಮ್ಮುವ ಪ್ರತಿಬಿಂಬಗಳು ವೈಶಿಷ್ಟ್ಯಪೂರ್ಣವಾದವು.

ಬೇಲೂರಿನ ಉತ್ತರಕ್ಕೆ 3 ಕಿ. ಮೀ ದೂರದಲ್ಲಿನ ಶೆಟ್ಟಿಗೆರೆಯಲ್ಲಿ ದೇವೀರಮ್ಮನ ಗುಡಿ ಇದೆ. ಬೇಲೂರಿನಿಂದ ಹತ್ತು ಕಿ. ಮೀ ದೂರ ದಲ್ಲಿರುವ ಕರಗಡ ಗ್ರಾಮದಲ್ಲಿ ಲಕ್ಷ್ಮೀದೇವಾಲಯವಿದೆ. ಹಳೇಬೀಡಿಗೆ ಸಮೀಪದ ಸಿದ್ಧಾಪುರ ಗ್ರಾಮದಲ್ಲಿ ಪುಷ್ಪಗಿರಿ ಶ್ರೀ ಮಲ್ಲಿಕಾರ್ಜುನ ದೇವಾಲಯವಿದೆ. ಬೇಲೂರು ಜಾವಗಲ್ಲು ಮಾರ್ಗದಲ್ಲಿರುವ ಚಟ ಚಟನ ಹಳ್ಳಿಯಲ್ಲಿ ಹೊಯ್ಸಳ ದೇವಾಲಯವಿದೆ. ಹಳೇಬೀಡಿನಿಂದ ನಾಲ್ಕು ಕಿ.ಮೀ ದೂರದಲ್ಲಿ ಈ ಹಳ್ಳಿ ಇದೆ. ಇಲ್ಲಿ ಚಟ್ಟೇಶ್ವರ ದೇವಾಲಯ ತ್ರಿಕೂಟಾಚಲ. ಇಲ್ಲಿ ಕೆಲವು ಶಿಲ್ಪಗಳನ್ನು ಕಾಣಬಹುದು. ಚಟ್ಟೇಶ್ವರ ಲಿಂಗವಿರುವ ಮುಖ್ಯ ಗರ್ಭಗೃಹ ನವರಂಗದ ಎಡಕ್ಕಿದೆ. ಗರ್ಭಗೃಹದ ಬಾಗಿಲ ಮೇಲೆ ದ್ವಾರಪಾಲ, ಗಜಲಕ್ಷ್ಮಿ ಮೂರ್ತಿಗಳಿವೆ. ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ನಿಂತಿರುವ ಆರಡಿ ಎತ್ತರದ ವಿಷ್ಣು ವಿಗ್ರಹವಿದೆ. ಆದರೆ ಇದು ಭಗ್ನವಾಗಿದೆ. ತೋರಣದಲ್ಲಿ ದಶಾವತಾರವನ್ನು ಕೆತ್ತಲಾಗಿದೆ. ಗರ್ಭಗೃಹ ದ್ವಾರದ ಒಳಗೆ ಅಪರೂಪದ ಸೂರ್ಯ ವಿಗ್ರಹವಿದೆ. ಇದರ ಪ್ರಭಾವಳಿ ಯಲ್ಲಿ ದ್ವಾದಶಾದಿತ್ಯರನ್ನು ಬಿಡಿಸಲಾಗಿದೆ. ಪೀಠದ ಮೇಲೆ ಸಪ್ತಾಶ್ವ ಗಳನ್ನು ಬಿಡಿಸಲಾಗಿದೆ, ಗರ್ಭಗೃಹದಲ್ಲಿ ವಿಷ್ಣುಮೂರ್ತಿ ಮತ್ತು ಚಾಮರ ಧಾರಿಣಿ ಸಹಿತವಾಗಿದೆ. ನೋಡಬೇಕಾದ ದೇವಾಲಯ.

ಹಾಸನ ಜಿಲ್ಲೆಯ ತುಂಬಾ ನಾವು ಹೊಯ್ಸಳ ದೇವಾಲಯಗಳನ್ನು ಕಾಣುತ್ತೇವೆ. ಹೊಯ್ಸಳರು ಈ ಪ್ರದೇಶವನ್ನು ಆಳಿದ ಮೇಲೆ ವಿಜಯನಗರದ ಅರಸರೂ ಮೈಸೂರು ಅರಸರು ಹೈದರ್ ಟಿಪ್ಪೂ

ಸುಲ್ತಾನರೂ. ಆಳಿದರು. ಹೊಯ್ಸಳರು ಬೇಲೂರು. ಹಳೇಬೀಡು. ಮೊಸಳೆ, ನುಗ್ಗೇಹಳ್ಳಿ, ದೊಡ್ಡ ಗದ್ದವಳ್ಳಿ ಮೊದಲಾದೆಡೆಗಳಲ್ಲಿ ಪ್ರಸಿದ್ಧ ದೇವಾಲಯಗಳನ್ನು ನಿರ್ಮಿಸಿ ವಾಸ್ತು ಶಿಲ್ಪದ ಔನ್ನತ್ಯಕ್ಕೆ ಕಾರಣರಾದರು. ಹೊಯ್ಸಳರ ಕಾಲದಲ್ಲಿ ವಾಸ್ತುಕಲೆಗೆ ಅಪಾರ ಪ್ರೋತ್ಸಾಹವೂ ಸಿಕ್ಕಿತು. ಬೇಲೂರು ಹಳೆಬೀಡಿನ ದೇವಾಲಯಗಳೇ ಇವಕ್ಕೆ ಸಾಕ್ಷಿ. ಹಾಸನ ಜಿಲ್ಲೆಯ ಅನೇಕ ಕಡೆ ಜೈನ ಮಂದಿರಗಳೂ ಇವೆ.



# ದಕ್ಷಿಣ ಕರ್ನಾಟಕ ಜಿಲ್ಲೆಯ ದೇವಾಲಯಗಳು

ಮನುಷ್ಯನ ದೇಹಕ್ಕೆ ಹೃದಯ ಹೇಗೆ ಪ್ರಧಾನವೋ ಪ್ರತಿಯೊಂದು ಊರಿಗೆ ದೇವಾಲಯವೂ ಅಷ್ಟೇ ಮುಖ್ಯ. ದೇವಾಲಯಗಳು ಜನರಲ್ಲಿ ಧಾರ್ಮಿಕ ಭಾವನೆಗಳು ಹೆಚ್ಚಲು ಸಹಕಾರಿಯಾಗುತ್ತವೆ. ದೇವಸ್ಥಾನಗಳು ನಾಡಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಂತೆ. ನಿರ್ಮಲ ಮನಸ್ಸನ್ನು ಪ್ರೇರಿಸಿ ಪವಿತ್ರ ವಾತಾವರಣವನ್ನು ಸೃಷ್ಟಿಸುವುದು ಇಲ್ಲಿನ ಉದ್ದೇಶ. ದೇವಾಲಯಗಳ ನಿರ್ಮಾಣ ಶತಶತಮಾನಗಳಿಂದ ನಡೆಯುತ್ತಿದ್ದಂತೆ ಇಂದೂ ಆ ಕಾರ್ಯ ನಿಂತಿಲ್ಲ. ಆಧುನಿಕ ಶೈಲಿಯಲ್ಲಿ ದೇವಾಲಯಗಳು ನಿರ್ಮಾಣವಾಗುತ್ತಿವೆ, ಪುರಾತನ ಪದ್ಧತಿಯಿಂದಲೂ ಕಟ್ಟಲಾಗುತ್ತಿದೆ, ದೇವಾಲಯವಿರುವುದು ಶುಭದ ಸಂಕೇತ. ಸತ್ಕಾರ್ಯ ಪ್ರೇರಕ.

ನಮ್ಮ ದೇವಾಲಯಗಳು ನೂರಾರು. ಕರ್ನಾಟಕ ದೇವಾಲಯಗಳ ಬೀಡು ಯಾತ್ರಾ ಸ್ಥಳಗಳು ಇಲ್ಲಿ ಹಲವು. ಒಂದೊಂದು ಯಾತ್ರಾ ಸ್ಥಳವೂ ದೇವಾಲಯಗಳಿಂದ ಕೂಡಿದ್ದು ಯಾತ್ರಿಕರಿಗೆ ಶಾಂತಿ ಮತ್ತು ನೆಮ್ಮದಿ ನೀಡುವ ತಾಣಗಳಾಗಿವೆ.

ಈಗ ತುಳು ನಾಡಿಗೆ ಬರೋಣ. ತುಳುವಿನಾಡು, ತುಳು ದೇಶ ಎಂದೆಲ್ಲ ಕರೆಯಲ್ಪಡುವ ತುಳುನಾಡು ಕರ್ನಾಟಕದ ಇಂದಿನ ದಕ್ಷಿಣ ಕನ್ನಡ ಜಿಲ್ಲೆ ಎಂದು ಹೇಳಬಹುದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಧಾರ್ಮಿಕ ಸಮನ್ವಯತೆಯನ್ನು ಕಾಣಬಹುದಾಗಿದೆ. ಇದಕ್ಕೆ ಇಲ್ಲಿನ ಹಿಂದೂ, ಜೈನ, ಕ್ರೈಸ್ತ ಹಾಗೂ ಇಸ್ಲಾಂ ಮತ ಪರಂಪರೆಯ ಹಲವು ದೇವಾಲಯಗಳಿರುವುದು

ಕುರುಹಾಗಿದೆ. ಇಲ್ಲಿನ ಒಂದೊಂದು ಸ್ಥಳವೂ ಪುಣ್ಯಸ್ಥಳಗಳಾಗಿವೆ. ಉಡುಪಿ, ಧರ್ಮಸ್ಥಳ, ಕದ್ರಿ, ಕೊಲ್ಲೂರು, ಸುಬ್ರಹ್ಮಣ್ಯ, ಕುಂಭಾಸಿ, ಮೂಡಬಿದಿರೆ, ಕಾರ್ಕಳ, ವೇಣೂರು ಮೊದಲಾದ ಕಡೆಗಳಲ್ಲಿ ಕಂಡು ಬರುವ ಅಸಂಖ್ಯಾತ ದೇವಾಲಯಗಳಿಂದ ತುಳುನಾಡು ಕಂಗೊಳಿಸುತ್ತಿದೆ. ದಕ್ಷಿಣ ಕನ್ನಡ ಜಿಲ್ಲೆಯ ಪ್ರದೇಶವನ್ನು ಹದಿನಾಲ್ಕನೆಯ ಶತಮಾನದವರೆಗೆ ಆಳಿದರೂ ಅನಂತರ ಜಿಲ್ಲೆಯು ಚಿಕ್ಕ ಚಿಕ್ಕ ಪ್ರದೇಶಗಳಾಗಿ ಮಾರ್ಪಟ್ಟು ಆ ಪ್ರದೇಶಗಳನ್ನು ಭೈರರಸರು, ಚೌಡರು, ಅಜಿಲರು, ಕೆಳದಿ ಅರಸರು ಆಳಿದರು. ಹದಿನೆಂಟನೆಯ ಶತಮಾನದಲ್ಲಿ ಈ ಜಿಲ್ಲೆ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಯಲ್ಲಿತ್ತು. ಈ ಜಿಲ್ಲೆಯನ್ನಾಳಿದ ಅರಸರು ಇಲ್ಲಿನ ದೇವಾಲಯಗಳ ನಿರ್ಮಾಣಕ್ಕೂ ಅಭಿವೃದ್ಧಿಗೂ ಕಾರಣರಾಗಿದ್ದಾರೆ. ದೇವಾಲಯಕ್ಕೆ ಉಂಬಳಿಯನ್ನೋ ದಾನ ದತ್ತಿಯನ್ನೋ ಬರೆದಿರುತ್ತಾರೆ. ದೇವಾಲಯಗಳ ಜೀರ್ಣೋದ್ಧಾರಕ್ಕೂ ನೆರವಾಗಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯನ್ನು ಆಡಳಿತಾನುಕೂಲಕ್ಕೆ ಎಂಟು ತಾಲ್ಲೂಕುಗಳನ್ನಾಗಿ ವಿಂಗಡಿಸಲಾಗಿದೆ. ಮಂಗಳೂರು, ಕುಂದಾಪುರ, ಪುತ್ತೂರು, ಬೆಳ್ತಂಗಡಿ; ಬಂಟವಾಳ, ಸುಳ್ಯ, ಉಡುಪಿ ಮತ್ತು ಕಾರ್ಕಳ ಇವು ಈ ಎಂಟು ತಾಲ್ಲೂಕುಗಳು.

## ಪ್ರಸಿದ್ಧ ದೇವಾಲಯಗಳು

ವೈಭವೋಪೇತ ಅರಣ್ಯರಾಶಿ, ಗಿರಿ ಕಂದರಗಳು, ಬೆಟ್ಟಗಳ ಇಳಿಜಾರಿನಿಂದ ಹರಿದು ಬರುವ ಲೆಕ್ಕವಿಲ್ಲದಷ್ಟು ತೊರೆಗಳು, ಸುಂದರ ಕಡಲ ತೀರಗಳು ಇವುಗಳೆಲ್ಲದರ ನಡುವೆ ಜಿಲ್ಲೆಯ ದೇವಾಲಯಗಳು ಇದ್ದು ಸಾವಿರಾರು ಭಕ್ತರನ್ನು ಆಕರ್ಷಿಸುತ್ತಿವೆ.

## ಕೊಲ್ಲೂರ ಮೂಕಾಂಬಿಕಾ ದೇವಾಲಯ

ತುಳುನಾಡಿನ ಸಪ್ತಕ್ಷೇತ್ರಗಳಲ್ಲಿ ಒಂದು ಕೊಲ್ಲೂರು. ಈಶಾನ್ಯಗಡಿಯ ಪಶ್ಚಿಮ ಘಟ್ಟಗಳ ತಪ್ಪಲಲ್ಲಿರುವ ಸುಂದರ ಗ್ರಾಮದ ಕೊಲ್ಲೂರಿಗೆ

ಮೂಕಾಂಬಿಕಾಪುರವೆಂದೂ ಹೆಸರಿದೆ. ಇಲ್ಲಿರುವ ದೇವಿಯು ಲಕ್ಷ್ಮಿ, ಸರಸ್ವತಿ, ಶಕ್ತಿಯ ಮೂಲರೂಪವಾಗಿರುವುದರಿಂದ ಈ ಕ್ಷೇತ್ರವನ್ನು ಶ್ರೀ ಕ್ಷೇತ್ರವೆಂದೂ ಕರೆಯುತ್ತಾರೆ. ಕುಂದಾಪುರ ತಾಲ್ಲೂಕಿಗೆ ಸೇರಿದ ಕೊಲ್ಲೂರು ಸೌಪರ್ಣಿಕಾ ನದಿ ತೀರದಲ್ಲಿದೆ. ಹಿಂದೆ ಈ ಪ್ರದೇಶದಲ್ಲಿ ಕಂಹಾಸುರ ಎಂಬ ರಾಕ್ಷಸನೊಬ್ಬನ ಕಾಟವನ್ನು ತಾಳಲಾರದೆ ಕೋಲ ಮಹರ್ಷಿಗಳ ನಾಯಕತ್ವದಲ್ಲಿ ಋಷಿಗಳು ಆದಿಪರ ಆಶಕ್ತಿಯನ್ನು ಮೊರೆ ಹೊಕ್ಕರು. ಅವರ ಭಕ್ತಿಗೆ ಪ್ರಸನ್ನಳಾದಳು ಪರ ಆಶಕ್ತಿ, ಈಶ್ವರನ ಭಕ್ತನಾದ ಕಂಹಾಸುರ ಆ ವೇಳೆಗೆ ಪರಮೇಶ್ವರನನ್ನು ಮೆಚ್ಚಿಸಿ ವರನನ್ನು ಕೇಳಲು ಉದ್ಯುಕ್ತನಾದನು. ಆಗ ಪರಾಶಕ್ತಿಯು ಅವನನ್ನು ಮೂಕನ್ನಾಗಿಸಿ ವರ ಬೇಡಲಾಗದಂತೆ ತಡೆದಳು. ಮೂಕಾಸುರನೆಂದು ಹೆಸರಾದ ಅವನನ್ನು ವಧಿಸಿ ಅವನು ಸಾಯುವ ಸಮಯದಲ್ಲಿನ ಕೋರಿಕೆಯಂತೆ ಕೋಲಾಪುರದಲ್ಲೇ ನೆಲಸಿದಳು. ಕೋಲ ಮಹರ್ಷಿಗಳಿಂದ ಊರಿಗೆ ಕೋಲಾಪುರ ಎಂಬ ಹೆಸರಾದರೆ ಮೂಕಾಸುರನಿಂದಾಗಿ ದೇವಿಗೆ ಮೂಕಾಂಬಿಕಾ ಎಂದು ಹೆಸರಾಯಿತು. ಕೋಲಾಪುರ ಎಂಬ ಹೆಸರೇ ಕಾಲಕ್ರಮದಲ್ಲಿ ಕೊಲ್ಲೂರು ಎಂದಾಗಿದೆ. ಕೊಲ್ಲೂರಿನ ಮೂಕಾಂಬಿಕಾ ದೇವಾಲಯವನ್ನು ಆದಿಶಂಕರ ಆಚಾರ್ಯರೂ ಸಂದರ್ಶಿಸಿದ್ದರೆನ್ನಲಾಗಿದೆ. ಮೂಕಾಂಬಿಕೆಯನ್ನು ಪೂಜಿಸಿದರಲ್ಲದೆ ದೇವಾಲಯದ ಪ್ರಶಾಂತ ಕೋಣೆಯಲ್ಲಿ ಕುಳಿತು ತಪಸ್ಸು ಮಾಡುತ್ತಿದ್ದರೆನ್ನಲಾಗಿದೆ. ಇಂದಿಗೂ ಮೂಕಾಂಬಿಕಾ ದೇವಾಲಯದಲ್ಲಿ ನಡೆಯುವ ಪ್ರತಿಯೊಂದು ಪೂಜಾಕ್ರಮವೂ ಶಂಕರಾಚಾರ್ಯರಿಂದ ನಿರ್ದೇಶಿಸಲ್ಪಟ್ಟಂತೆ ನಡೆದು ಬರುತ್ತಿದೆ.

ದೇವಸ್ಥಾನದ ಗೋಪುರದ ಮೇಲೆ ಒಂದು ಸಣ್ಣ ಕಳಸವಿದೆ. ಮುಖ್ಯ ದ್ವಾರದ ಎಡ-ಬಲಗಳಲ್ಲಿ ಜಗಲಿಗಳಿವೆ. ಆ ದ್ವಾರವನ್ನು ದಾಟಿ ಒಳ ಬಂದರೆ ಅಲ್ಲಿಯೂ ದ್ವಾರದ ಎರಡು ಪಕ್ಕದಲ್ಲೂ ವಿಶಾಲವಾದ ಜಗಲಿಗಳಿವೆ. ಬಲಗಡೆಯಿಂದ ಬಂದರೆ ವೀರಭದ್ರ ಸ್ವಾಮಿಯ ಒಂದು ಗುಡಿಯನ್ನು ಕಾಣುತ್ತೇವೆ. ಮುಂದೆ ಸುಬ್ರಹ್ಮಣ್ಯಸ್ವಾಮಿ ದೇವಾಲಯ ಹಾಗೂ ಸರಸ್ವತಿ ಮಂಟಪವಿದೆ. ಈ ಮಂಟಪದಲ್ಲಿಯೇ ಪ್ರತಿ ದಿನ ಮೂಕಾಂಬಿಕೆಯ ಉತ್ಸವ ಮೂರ್ತಿಯನ್ನು ತಂದು ಕೂರಿಸಲಾಗುತ್ತದೆ. ಅಂಗಳದ

ಜಗಲಿಯ ಮೇಲೆ ಎಡಭಾಗಕ್ಕೆ ನಾಲ್ಕು ಲಿಂಗಗಳಿವೆ. ಗರುಡಗಂಬ, ತುಳಸಿ ಬೃಂದಾವನ ಗೋಪಾಲಕೃಷ್ಣನ ದೇವಸ್ಥಾನಗಳಿದ್ದು ಮುಂದೆ ಇರುವ ಮತ್ತೊಂದು ಪ್ರಾಕಾರವನ್ನು ಪ್ರವೇಶಿಸುತ್ತಿದ್ದಂತೆ ಎದುರಾಗಿ ಮೂಕಾಂಬಿಕೆ ದೇವಿಯ ಗರ್ಭಗುಡಿಯನ್ನು ಕಾಣುತ್ತೇವೆ. ದೇವಿಯ ಪ್ರತಿಮೆ ಸ್ವಲ್ಪ ಎತ್ತರವಾದ ಪೀಠದ ಮೇಲೆ ಪದ್ಮಾಸನಸ್ಥವಾಗಿದೆ. ಈ ಬಿಂಬದ ಎದುರಿನಲ್ಲಿ ಸ್ವಯಂಭೂಜ್ಯೋತಿರ್ಲಿಂಗವಿದ್ದು ಪೂಜೆ, ನೈವೇದ್ಯ, ಅಭಿಷೇಕಗಳೆಲ್ಲ ಈ ಲಿಂಗಕ್ಕೇ ನಡೆಯುತ್ತದೆ.

ದೇವಳದ ಶಯನೋತ್ಸವ ಮಂಟಪದ ಬಳಿ ಇರುವ ದೇವಸ್ಥಾನ ಲೋಹದ ಪಂಚಮುಖಿ ಗಣಪತಿ ವಿಗ್ರಹದಿಂದ ಕೂಡಿದ್ದು, ಈ ಗಣಪತಿಗೆ ನಾಲ್ಕು ಕೈಗಳು ಮಾತ್ರ ಇವೆ. ಅದೇ ಇಲ್ಲಿರುವ ಮತ್ತೊಂದು ಗಣಪತಿ ಗುಡಿಯ ಗಣಪತಿ ಏಕಮುಖಿನಾದರೂ ಹತ್ತು ಕೈಗಳನ್ನು ಹೊಂದಿರುತ್ತಾನೆ. ಶಂಕರಾಚಾರ್ಯರೇ ಸ್ಥಾಪಿಸಿದರೆನ್ನುವ ಚಂದ್ರಮೌಳೀಶ್ವರ ಗುಡಿ,ಪಾರ್ಥೇಶ್ವರ ಸ್ವಾಮಿ ದೇವಾಲಯ, ಆಂಜನೇಯನ ಗುಡಿ ಇವು ಪ್ರಾಕಾರದ ಇನ್ನಿತರ ಗುಡಿಗಳು.

ಮೂಕಾಂಬಿಕಾ ದೇವಾಲಯದಲ್ಲಿ ಶ್ರೀಚಕ್ರವೂ ವೀರಭದ್ರಸ್ವಾಮಿಯೂ ಇರುವುದರಿಂದ ಭಕ್ತರು ಕೋರಿದ ವರ ಸಿದ್ಧಿಸುವುದೆಂದು ಹೇಳುತ್ತಾರೆ. ಹೀಗಾಗಿ ಕೊಲ್ಲೂರು ಸಿದ್ಧಿಕ್ಷೇತ್ರವೂ ಹೌದು. ಈಗಿರುವ ಶಿಲಾ ದೇವಾಲಯ ವನ್ನು ಬಂಕಿ ಅರಸರ ವಂಶದ ಸಂಕಣ್ಣ ಸಾಮಂತರ ಅಳಿಯ ವೆಂಕಣ್ಣ ಸಾಮಂತ ಕಟ್ಟಿಸಿದನೆಂದು ತಿಳಿಯಲಾಗಿದೆ. ಕೆಳದಿಯ ಅರಸರು ಮೂಕಾಂಬಿಕಾ ದೇವಿಯ ಪರಮ ಭಕ್ತರಾಗಿದ್ದು ದೇವಿಯ ಪೂಜೆಗೆ ಉಂಬಳಿಗಳನ್ನು ಕೊಟ್ಟಿದ್ದರು. ಮೂಕಾಂಬಿಕಾ ದೇವಿಯ ಮೈ ತುಂಬ ಹಲವಾರು ವಜ್ರ, ಬಂಗಾರ ಹಾಗೂ ರತ್ನಾಭರಣಗಳಿದ್ದು ಇವು ಅಮೂಲ್ಯವೂ, ಅಪೂರ್ವವೂ ಆಗಿದೆ.

ದೇವಾಲಯದ ಸುತ್ತಲಿನ ಪ್ರಕೃತಿ ಸೌಂದರ್ಯ ಹಾಗೂ ಸಮೀಪದ ಕೊಡಚಾದ್ರಿ ಬೆಟ್ಟ ಯಾತ್ರಿಕರಿಗೆ ಮುದ ನೀಡುತ್ತದೆ. ಕೊಡಚಾದ್ರಿಯ ಉತ್ತುಂಗ ಶಿಖರ ರಾಜಿಯಲ್ಲಿರುವ ಕೊಲ್ಲೂರು ಕೇರಳೀಯರ ಪುಣ್ಯಸ್ಥಳವೂ ಆಗಿದೆ.

## ಶಂಕರನಾರಾಯಣ ದೇವಾಲಯ

ಕರಾವಳಿ ಪ್ರದೇಶದ ಸಪ್ತ ಕ್ಷೇತ್ರಗಳಲ್ಲಿ ಶಂಕರನಾರಾಯಣವೂ ಒಂದು. 'ಹರಿ ಹರರೊಳು ಭೇದ ಎಣಿಸದ ನಾಡು ಕನ್ನಡ ನಾಡು' ಎಂಬ ಹೆಗ್ಗಳಿಕೆಗೆ ಕುರುಹಾಗಿರುವ ಈ ಕ್ಷೇತ್ರ ಕುಂದಾಪುರಕ್ಕೆ 28 ಕಿ.ಮೀ. ದೂರದಲ್ಲಿದೆ. ಶಂಕರನಾರಾಯಣಕ್ಕೆ ಮೊದಲು ಇದ್ದ ಹೆಸರು ಕ್ರೋಡಪುರ. ಹಿಂದೆ ಇಲ್ಲಿ ಹರಿಭಕ್ತರಾದ ಖರ ಮತ್ತು ರಟ್ಟ ಎಂಬ ಇಬ್ಬರು ರಾಜರು ತಮ್ಮ ರಾಜಧಾನಿಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದರು. ಪರಪೀಡಕರಾಗಿದ್ದ ಇವರು ಹರಿಹರ ಭೇದ ಕಲ್ಪಿಸಿ ಜಗಳವಾಡುತ್ತಿದ್ದರು. ಆಗ ಕ್ರೋಢರೆಂಬ ಋಷಿಗಳು ಹರಿ ಹರರೊಳು ಭೇದವಿಲ್ಲ ಎಂಬುದನ್ನು ಸಾರಲೋ ಎಂಬಂತೆ ಶ್ರೀ ಶಂಕರ ನಾರಾಯಣ ದೇವರನ್ನು ತಪಸ್ಸಿನಿಂದ ಒಲಿಸಿಕೊಂಡು ಖರ ಮತ್ತು ರಟ್ಟರ ಸಂಹಾರಕ್ಕೆ ಕಾರಣರಾದರು. ಕ್ರೋಢರಂತೆ ಜಮದಗ್ನಿ, ಲೋಮಶ, ಮಾಂಡವ್ಯ ಹಾಗೂ ಅಗಸ್ತ್ಯರ ತಪಸ್ಸಿಗೆ ಮೆಚ್ಚಿದ ಹರಿಹರರು ಏಕದೇಹಧಾರಿಗಳಾಗಿ ದರ್ಶನ ಕೊಟ್ಟರು. ಕ್ರೋಢಗಿರಿ ಮುಂದೆ ಶಂಕರನಾರಾಯಣ ಎಂದು ಹೆಸರಾಯಿತು. ಇಲ್ಲಿರುವ ದೇವಾಲಯವೇ ಶಂಕರನಾರಾಯಣ ದೇವಾಲಯ.

ಶಂಕರನಾರಾಯಣ ದೇವಾಲಯ ಹೊಯ್ಸಳ ಶೈಲಿಯ ಗೋಪುರವುಳ್ಳ ಒಂದು ಪ್ರಾಚೀನ ಗುಡಿ. ಗೋರಾಷ್ಟ್ರವನ್ನಾಳುತ್ತಿದ್ದ ಸುಲೋಚನ ಎಂಬ ರಾಜ ಇಲ್ಲಿ ದೇವಾಲಯವನ್ನು ನಿರ್ಮಿಸಿದ ಎನ್ನುತ್ತಾರೆ. ಈ ಗುಡಿಯ ಉದ್ಭವಲಿಂಗ ದೇವಾಲಯದ ಗರ್ಭಗುಡಿಯ ಮಧ್ಯೆ ಸಿದ್ಧಾಮಾತ ಎಂಬ ನಡುವೆ ನೆಲಮಟ್ಟಕ್ಕಿಂತ ಕೆಳಭಾಗದಲ್ಲಿದೆ. ಲಿಂಗದ ಬಲಭಾಗ ಶ್ವೇತ ವರ್ಣವಿದ್ದರೆ, ಎಡಭಾಗ ಕಪ್ಪು ಬಣ್ಣಕ್ಕಿದೆ. ಈ ದೇವಾಲಯವನ್ನು 1563ರಲ್ಲಿ ಇಕ್ಕೇರಿಯ ನಾಯಕರು ಜೀರ್ಣೋದ್ಧಾರ ಮಾಡಿಸಿದರೆಂದು ತಿಳಿಯಲಾಗಿದೆ. ದೇವಾಲಯದಲ್ಲಿರುವ ಬೆಳ್ಳಿಯ ಶಂಕರನಾರಾಯಣನ ವಿಗ್ರಹ ಅಪರೂಪದೆನ್ನಬಹುದು. ಇಲ್ಲಿನ ಪ್ರಾಚೀನ ಮರದ ಕೆತ್ತನೆಗಳಲ್ಲಿ ಭಾರತ ರಾಮಾಯಣ ಕಥೆಗಳನ್ನು ಮೂಡಿಸಿರುವುದು ಗುಡಿಯ ವೈಶಿಷ್ಟ್ಯ.

ದೇವಾಲಯದ ಪ್ರಾಕಾರದಲ್ಲಿ ಶ್ರೀ ಕೃಷ್ಣ ಪಾರ್ಥೇಶ್ವರ, ಆಂಜನೇಯರ

ಮೂರ್ತಿಗಳಿವೆ. ಯಾಗಶಾಲೆ ಸುಂದರ ರಚನೆಯಾಗಿದೆ. ವಾದಿರಾಜರು ಈ ಕ್ಷೇತ್ರವನ್ನು ಸಂದರ್ಶಿಸಿದ್ದರೆನ್ನಲಾಗಿದೆ.

ದೇವಾಲಯದಲ್ಲಿ ನೋಡಬೇಕಾದ ಅಪರೂಪದ ವಸ್ತು ಎಂದರೆ 60 ಮಣ ಭಾರದ ಗಂಟೆ. ಈ ಗಂಟೆಯ ಶಬ್ದ ಎಂಟು ಕಿ.ಮೀ. ದೂರ ಕೇಳ ಬಲ್ಲದು ಎನ್ನುತ್ತಾರೆ. ಇದನ್ನು ಪವಿತ್ರ ಎನ್ನಲಾಗಿದ್ದು ಈಗ ಬಾರಿಸುತ್ತಿಲ್ಲ. 1782ರಲ್ಲಿ ಟಿಪ್ಪುಸುಲ್ತಾನನು ದಕ್ಷಿಣ ಕನ್ನಡ ಜಿಲ್ಲೆಯನ್ನು ದಾಳಿ ಮಾಡಿದ ಸಂದರ್ಭದಲ್ಲಿ ಕರಾವಳಿಯ ಇಗರ್ಜಿಯೊಂದರಿಂದ ಅಪಹರಿಸಿದ ಗಂಟೆ ಇದೆನ್ನ ಲಾಗಿದೆ. ಹಾಗೆಯೇ ಟಿಪ್ಪುಸುಲ್ತಾನನು ಭೋಗಮಂಟಪದ ಕೆಳಸುತ್ತಿನಲ್ಲಿ ಗಂಡಭೇರುಂಡವನ್ನು ನಿರ್ಮಿಸಿಕೊಟ್ಟನೆನ್ನಲಾಗಿದೆ.

## ಧರ್ಮಸ್ಥಳದ ಮಂಜುನಾಥಸ್ವಾಮಿ

ಧರ್ಮಸ್ಥಳ ಬೆಳ್ತಂಗಡಿ ತಾಲ್ಲೂಕಿನಲ್ಲಿದ್ದು ಮಂಗಳೂರಿನ ಪೂರ್ವಕ್ಕೆ 75 ಕಿ.ಮೀ. ದೂರದಲ್ಲಿದೆ. ಶ್ರೀ ಕ್ಷೇತ್ರ ಧರ್ಮಸ್ಥಳದ ನೈರುತ್ಯದಲ್ಲಿ ನೇತ್ರಾವತಿ ನದಿ ಹರಿಯುತ್ತಿದ್ದು ಸುತ್ತಲೂ ಅರಣ್ಯಗಳಿಂದಾವರಿಸಿದ ಪ್ರಕೃತಿ ಸೌಂದರ್ಯದ ನಡುವೆ ಧರ್ಮದ ಬೀಡಾಗಿ ಧರ್ಮಸ್ಥಳ ಕಂಗೊಳಿಸುತ್ತಿದೆ.

ಮಂಜುನಾಥ ದೇವಾಲಯ ಇಲ್ಲಿನ ಪ್ರಧಾನ ಆಕರ್ಷಣೆ. ಸರ್ವಧರ್ಮ ಸಮನ್ವಯಕ್ಕೆ ಶ್ರೀ ಕ್ಷೇತ್ರ ಒಂದು ಉತ್ತಮ ಉದಾಹರಣೆಯಾಗಿದೆ. ಜೈನರು ಇಲ್ಲಿಯ ಧರ್ಮಾಧಿಕಾರಿಗಳು. ಬೌದ್ಧ ಬೋಧಿಸತ್ವ ಮಂಜುಶ್ರೀಯ ಮೂಲ ಹೆಸರು. ಮಂಜುನಾಥಸ್ವಾಮಿ ಶೈವದೇವರು.

ಸುಮಾರು ಇಪ್ಪತ್ತು ಅಡಿ ಎತ್ತರದ ಕಟ್ಟೆಯ ಮೇಲೆ ಮಣ್ಣು, ಇಟ್ಟಿಗೆ ಮತ್ತು ಮರ ಇವುಗಳಿಂದ ಮಂಜುನಾಥ ದೇವಾಲಯವನ್ನು ಕಟ್ಟಲಾಗಿದೆ. ಒಮ್ಮೆ ಧರ್ಮದೇವತೆಗಳ ಅಪ್ಪಣೆಯ ಮೇರೆಗೆ ಜೈನ ಹೆಗ್ಗಡೆಗಳೊಬ್ಬರು ಅಣ್ಣಪ್ಪಸ್ವಾಮಿ ಎಂಬಾತನ ಮೂಲಕ ಕಾಶಿಯಿಂದ ಶಿವಲಿಂಗವನ್ನು ತರಿಸಿ ಇಲ್ಲಿ ಸ್ಥಾಪಿಸಿದರೆಂದು ಹೇಳುತ್ತಾರೆ. ಮಂಗಳೂರು ಬಳಿಯ ಕದ್ರಿ ಮಠವು ಮಂಜುನಾಥ ಪೀಠದ ಮೂಲವೆಂದೂ ಹೇಳುವುದುಂಟು. ಧರ್ಮಸ್ಥಳದ ಶಿವಲಿಂಗ ಮಂಜಿನಂತೆ ಮಂಜುಳವಾಗಿದ್ದರಿಂದ ಮಂಜುನಾಥ ಎಂದು ಕರೆದ ರೆನ್ನುತ್ತಾರೆ.

ದೇವಾಲಯದ ಎರಡು ಪ್ರಾಕಾರಗಳ ಒಳಭಾಗ ಮಂಜುನಾಥ ಸ್ವಾಮಿಯ ಮೂಲ ಆಲಯ. ಪಕ್ಕದಲ್ಲಿ ಅಮ್ಮನವರ ಆಲಯವಿದೆ. ನೆಲ್ಯಾಡಿ ಬೀಡು, ಚಂದ್ರನಾಥ ಬಸದಿ, ಹೆಗ್ಗಡೆಯವರ ಅರಮನೆ, ಜನಪದ ವಸ್ತು ಸಂಗ್ರಹಾಲಯ–ಮಂಜೂಷ, ಅಣ್ಣಪ್ಪಸ್ವಾಮಿ ಬೆಟ್ಟ, ಗೊಮ್ಮಟ ವಿಹಾರ ಇವು ಧರ್ಮಸ್ಥಳದಲ್ಲಿ ನೋಡಬೇಕಾದ ಇತರ ತಾಣಗಳು. ಬೃಹದಾಕಾರದ ಪ್ರತಿಮೆ 'ಬಾಹುಬಲಿ'ಯನ್ನು ನೋಡಬಹುದು.

ಹಿಂದೆ 'ಕುಡುಮ' ಎಂದು ಹೆಸರಾಗಿದ್ದ ಪ್ರದೇಶ ಈಗ 'ಧರ್ಮಸ್ಥಳ' ಎಂದಾಗಿದೆ. 'ಕುಡುಮ' ಎಂದರೆ ಧರ್ಮ ಮಾಡು ಎಂದು ಅರ್ಥವಿದೆ. ಧರ್ಮಸ್ಥಳ ಈ ಹೆಸರಿಗೆ ಅನ್ವರ್ಥವಾಗಿದೆ. ಮಂಜುನಾಥನ ಸನ್ನಿಧಿಯಲ್ಲಿ ನಿತ್ಯ ಅನ್ನದಾನವಿರುತ್ತದೆ. ಔಷಧದಾನ, ವಿದ್ಯಾದಾನ ಇಲ್ಲಿ ನಡೆಯುತ್ತಿರುವ ಇತರ ದಾನಗಳು. ಮಂಜುನಾಥನ ದರ್ಶನ ಮಾಡಿದವರ ಭಯ, ಕಾಯಿಲೆ ಗಳು ಇತರ ಸಂಕಷ್ಟಗಳು ದೂರ.

## ಕದ್ರಿಯ ಮಂಜುನಾಥ

ಕುಡುಮದ ದೈವಗಳು ಮತ್ತು ಅಣ್ಣಪ್ಪ ಭೂತದಿಂದ ಕದ್ರಿಯ ಮಂಜುನಾಥ ದೇವಾಲಯದ ಸ್ಥಾಪನೆಯಾಗಿದೆ ಎನ್ನುತ್ತಾರೆ. ಮಂಗಳೂರಿಗೆ ಮೂರು ಕಿ.ಮೀ. ದೂರದಲ್ಲಿ ಕದ್ರಿ ಕ್ಷೇತ್ರವಿದೆ. ಹಿಂದೆ ಈ ಪ್ರದೇಶವನ್ನು ಕದರಿಕಾ ವಿಹಾರ ಎನ್ನುತ್ತಿದ್ದರು. ಇದೊಂದು ಪ್ರಾಚೀನ ಬೌದ್ಧ ಕೇಂದ್ರ. ಕದ್ರಿ ಗುಡ್ಡದ ಮೇಲೆ ಜೋಗಿಮಠದಲ್ಲಿ ಜೋಗಿಗಳು ಇದ್ದು ಮಂಜುನಾಥ ಇವರ ದೇವರು. ನಾಥಪಂಥದ ದೇವರು ಮಂಜುನಾಥನಾದಂತೆ ಜೋಗಿ ಮಠದ ಸುತ್ತ ಭೂತನಾಥ, ಮಚ್ಛೇಂದ್ರನಾಥ ಗೋರಖನಾಥರ ಮಂದಿರ ಗಳಿವೆ. ಪರಶುರಾಮ ಕ್ಷತ್ರಿಯರೆಲ್ಲರನ್ನೂ ಸೋಲಿಸಿ ಗಳಿಸಿದ ಭೂಮಿಯೆಲ್ಲ ವನ್ನೂ ಕಶ್ಯಪನಿಗೆ ದಾನ ಮಾಡಿ ತನ್ನ ನೆಲೆ ಕಾಣಲು ಈಶ್ವರನನ್ನು ಕುರಿತು ತಪಸ್ಸು ಮಾಡಿದ. ಆಗ ಶಿವನು ಪ್ರತ್ಯಕ್ಷವಾಗಿ ಅವತರಿಸುವೆನೆಂದು ನವ ನಾಥರ ರೂಪ ಧರಿಸಿದುದಾಗಿ ಕದ್ರಿಯ ಮಂಜುನಾಥ ಕ್ಷೇತ್ರ ಮಹಿಮೆ ಎಂಬ ಕೃತಿಯಿಂದ ತಿಳಿದುಬರುತ್ತದೆ. ಕದ್ರಿ ಮಂಗಳೂರಿಗೆ ಸೇರಿದಂತಿದೆ.

ಕದ್ರಿಯ ಮಂಜುನಾಥ ದೇವಾಲಯದ ಗರ್ಭಗೃಹ ಚೌಕಾಕಾರವಾಗಿದ್ದು ಸುತ್ತಲೂ ಪ್ರದಕ್ಷಿಣ ಪಥವಿದೆ. ಗರ್ಭಗೃಹದ ಗೋಡೆಗೆ ಹೊಂದಿಕೊಂಡಂತೆ ದಕ್ಷಿಣ ಉತ್ತರ ದಿಕ್ಕುಗಳ ಕೇಂದ್ರಗಳಲ್ಲಿ ಗೋಡೆಗೂಡುಗಳಿದ್ದು ಇಲ್ಲಿ ಮಚ್ಛೇಂದ್ರನಾಥ, ಗೋರಖನಾಥ, ಶೃಂಗಿನಾಥರ ಪ್ರತಿಮೆಗಳಿವೆ. ಒಳಾಂಗಣದ ಸುತ್ತ ಹೆಂಚಿನ ಮಾಡಿನ ಪೌಳಿ ಇದೆ. ಮಂಜುನಾಥನ ವಿಗ್ರಹ ಕಡೆದ ಲಿಂಗವಾಗಿಲ್ಲದೆ ಶಿಲೆಯ ವಿಚಿತ್ರ ರೂಪ. ಲಿಂಗದ ಆಕಾರವಾಗಿಲ್ಲದ ಶಿಲೆಯ ಮುಂದೆ ಲೋಹದಲ್ಲಿ ಮಾಡಿದ ಮುಖವಿಟ್ಟು ಅಲಂಕಾರ ಮಾಡಲಾಗುತ್ತದೆ. ಇಲ್ಲಿ ಆಗಮೋಕ್ತ ರೀತಿಯ ಪೂಜಾ ವಿಧಾನವಿದ್ದು ಅರ್ಚಕರು ವೈಷ್ಣವರು ಆಗಮಿಕರು. ದೇವಾಲಯದ ಎದುರಿಗಿರುವ ಕಂಚಿನ ದೀಪಸ್ತಂಭ ಅಪರೂಪದ್ದಾಗಿದೆ. ಇಲ್ಲಿ ದೀಪ ಬೆಳಗುವ ಕಾರ್ಯಕ್ರಮ ಕುತೂಹಲಕಾರಿ. ಜೋಗಿಮಠ, ಲೋಕೇಶ್ವರ ವಿಗ್ರಹ, ಗಣಪತಿ ಹಾಗೂ ಗೋಮುಖ ಪ್ರೇಕ್ಷಣೀಯ. ದೇವಾಲಯದಲ್ಲಿ ಗಣಪತಿ, ಪಾರ್ವತಿ, ಸುಬ್ರಹ್ಮಣ್ಯ ಹಾಗೂ ಅಣ್ಣಪ್ಪ ಮತ್ತು ಪಂಜುರ್ಲಿಭೂತ ವಿಗ್ರಹಗಳೂ ಇವೆ.

## ಉಡುಪಿಯ ಶ್ರೀ ಕೃಷ್ಣ ದೇವಾಲಯ

ಉಡುಪಿ ಕರ್ನಾಟಕದ ಪ್ರಸಿದ್ಧ ಯಾತ್ರಾಸ್ಥಳ. ಅಖಿಲ ಭಾರತ ಖ್ಯಾತಿಯ ಇಲ್ಲಿನ ಕೃಷ್ಣದೇವಾಲಯ ನೋಡಬೇಕಾದುದು. ಇದೇ ಅಲ್ಲದೆ ಉಡುಪಿಯಲ್ಲಿ ಇತರ ದೇವಾಲಯಗಳೂ ಇವೆ.

ಉಡುಪಿಗೆ ರಜತಪೀಠಪುರ ಎಂಬ ಹೆಸರಿದೆ. ತುಳುನಾಡಿನ 7 ಕ್ಷೇತ್ರಗಳಲ್ಲಿ ರೌಪ್ಯ ಪೀಠ ಅಥವಾ ರಜತಪೀಠಪುರ ಒಂದಾಗಿದೆ. ಚಂದ್ರ(ಉಡು + ಪ) ಶಾಪದಿಂದ ವಿಮೋಚನೆ ಪಡೆಯಲು ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡ ಸ್ಥಳ ಉಡುಪಿ ಎನ್ನಲಾಗಿದೆ.

ಉಡುಪಿಯ ಶ್ರೀ ಕೃಷ್ಣ ದೇವಾಲಯವನ್ನು ಶ್ರೀ ಕೃಷ್ಣಮಠ ಎಂದೂ ಹೇಳುತ್ತಾರೆ. ದೇವಳದ ರಚನೆ ಸರಳವಾಗಿದೆ. ಕಟ್ಟದ ಆಯತಾಕಾರವಿದೆ. ಉತ್ತರ ಭಾಗದಲ್ಲಿ ಒಳಗೆ ಪ್ರವೇಶವಿದ್ದು ಪಶ್ಚಿಮ ಭಾಗದ ಕನಕನ ಕಿಂಡಿಯಿಂದ ಶ್ರೀಕೃಷ್ಣ ದರ್ಶನ ಮಾಡುವ ವ್ಯವಸ್ಥೆ ಇದೆ. ಕನಕದಾಸರು ಹರಿ

ದಾಸರಾಗಿದ್ದು, ಉಡುಪಿಯಲ್ಲಿ ಶ್ರೀಕೃಷ್ಣನನ್ನು ಒಲಿಸಿಕೊಂಡರೆನ್ನಲಾಗಿದೆ. ಕನಕದಾಸರ ಮೊರೆಗೆ ಕೃಷ್ಣ ತಾನೇ ಅವರೆಡೆಗೆ ತಿರುಗಿಕೊಂಡನೆಂದು ಕಥೆ ಇದೆ.

ಉಡುಪಿ ಕೃಷ್ಣನ ಮೂರ್ತಿಯನ್ನು ದ್ವೈತ ಮತಾಚಾರ್ಯರಾದ ಶ್ರೀ ಮಧ್ವಾಚಾರ್ಯರು ಪ್ರತಿಷ್ಠಾಪಿಸಿದರೆನ್ನಲಾಗಿದೆ. ಬಲಗೈಯಲ್ಲಿ ದಂಡ ಹಿಡಿದಿರುವ ಒಂದೂಕಾಲಡಿ ಎತ್ತರವಾದ ಈ ಮೂರ್ತಿ ನೋಡಲು ಅತ್ಯಂತ ಸುಂದರವಾಗಿದೆ. ಬಹು ಪ್ರಾಚೀನವಾದ ಮೂರ್ತಿಯೂ ಹೌದು. ಶ್ರೀಕೃಷ್ಣ ದೇವಾಲಯದ ಒಂದು ಭಾಗದಲ್ಲಿ ಮಧ್ಯ ಪುಷ್ಕರಿಣಿ ಇದೆ. ಉಡುಪಿಯಲ್ಲಿ ಪ್ರತಿವರ್ಷ ಶ್ರೀಕೃಷ್ಣ ಜಯಂತಿ ಮಹೋತ್ಸವ, ಲಕ್ಷ ದೀಪೋತ್ಸವ ಅತ್ಯಂತ ವಿಜೃಂಭಣೆಯಿಂದ ನಡೆಯುತ್ತದೆ. ಇಲ್ಲಿ ಜರಗುವ ಪರ್ಯಾಯ ಮಹೋತ್ಸವ ವೈಶಿಷ್ಟ್ಯಪೂರ್ಣದ್ದಾಗಿದೆ. ಉಡುಪಿಯ ಎಂಟು ಮಠಗಳಲ್ಲಿ ಅನುಕ್ರಮವಾಗಿ ಒಂದು ಮಠದ ಸ್ವಾಮಿಗಳಿಂದ ಇನ್ನೊಂದು ಮಠದ ಸ್ವಾಮಿಗಳು ಶ್ರೀಕೃಷ್ಣ ಮಠದ ಪೂಜಾಧಿಕಾರ ವಹಿಸಿಕೊಳ್ಳುವ ಕಾರ್ಯಕ್ರಮವೇ ಪರ್ಯಾಯ ಉತ್ಸವ.

ಅನಂತೇಶ್ವರ ದೇವಾಲಯ ಶ್ರೀಕೃಷ್ಣನ ದೇವಾಲಯದ ಸನಿಹದಲ್ಲಿ ಇದ್ದು ಇದು ಒಂದು ದೊಡ್ಡ ದೇವಸ್ಥಾನವಾಗಿದೆ. ಸುಮಾರು 9ನೆಯ ಶತಮಾನದ್ದೆನ್ನಲಾದ ಈ ದೇವಾಲಯ ಗಜಪೃಷ್ಠಾಕಾರವಾಗಿದ್ದು ಇದರ ಎದುರು ಚಂದ್ರಮೌಳೀಶ್ವರ ದೇವಾಲಯವಿದೆ. ಅನಂತೇಶ್ವರ ದೇವಾಲಯ ಕರ್ನಾಟಕದ ದೊಡ್ಡ ದೇವಾಲಯಗಳಲ್ಲಿ ಒಂದು ಎನ್ನಬಹುದು.

ಉಡುಪಿಯಿಂದ ಮೂರು ಕಿ.ಮೀ. ದೂರದಲ್ಲಿರುವ ಅಂಬಲಪಾಡಿ ಒಂದು ಪುಣ್ಯಕ್ಷೇತ್ರ. ಇಲ್ಲಿ ಪುರಾತನವಾದದ್ದೆನ್ನಲಾದ ಜನಾರ್ಧನ ದೇವಾಲಯ ಹಾಗೂ ಮಹಾಕಾಳಿ ಗುಡಿ ಇದೆ. ಜನಾರ್ಧನ ದೇವಾಲಯದಲ್ಲಿರುವ ಜನಾರ್ಧನ ದೇವರ ವಿಗ್ರಹ ಅತ್ಯಂತ ಆಕರ್ಷಕವಾಗಿದೆ. ಕ್ರಿ.ಶ. ಹದಿನಾರನೆಯ ಶತಮಾನದಲ್ಲಿ ಶ್ರೀಧರನಿಡಂಬೂರ್ ಎಂಬುವರು ಜನಾರ್ಧನ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದರು. ಮಹಾಕಾಳಿ ದೇವಾಲಯದ ಮೂಲ ವಿಗ್ರಹ ಮರದಿಂದ ತಯಾರಿಸಲ್ಪಟ್ಟು ಸುಮಾರು ಐದು ಅಡಿ ಎತ್ತರವಿದೆ. ಪ್ರತಿ ಶುಕ್ರವಾರ ಕಾಳೀದರ್ಶನಕ್ಕೆಂದು ಅಸಂಖ್ಯಾತ

ಭಕ್ತ ಜನರು ಸೇರುತ್ತಾರೆ. ನವರಾತ್ರಿ ಸಮಯದಲ್ಲಿ ಮಹಾಕಾಳಿಗೆ ಹೋಮ ಇತ್ಯಾದಿ ನಡೆಯುತ್ತದೆ.

ಉಡುಪಿಯಲ್ಲಿ ಸೋದೆ, ಶಿರೂರು, ಕಾಣಿಯೂರು, ಕೃಷ್ಣಾಪುರ, ಅದಮಾರು, ಪಲಿಮಾರು, ಪೇಜಾವರ ಹಾಗೂ ಪುತ್ತಿಗೆ ಎಂಬ ಎಂಟು ಮಠಗಳಿವೆ. ಈ ಮಠದ ಯತಿಗಳೇ ಶ್ರೀಕೃಷ್ಣನ ಪೂಜೆಯನ್ನು ಅನುಕ್ರಮವಾಗಿ ವಹಿಸಿಕೊಳ್ಳುತ್ತಾರೆ.

## ಕುಕ್ಕೆ ಸುಬ್ರಹ್ಮಣ್ಯಸ್ವಾಮಿ ದೇವಾಲಯ

ಸುಬ್ರಹ್ಮಣ್ಯ ಒಂದು ತೀರ್ಥಕ್ಷೇತ್ರ. ಸುಳ್ಯ ತಾಲ್ಲೂಕಿನಲ್ಲಿರುವ ಈ ಗ್ರಾಮ ಕುಕ್ಕೆಸುಬ್ರಹ್ಮಣ್ಯ, ಪುಷ್ಪಗಿರಿ ಎಂದೂ ಹೆಸರಾಗಿದೆ. ಈ ಕ್ಷೇತ್ರಕ್ಕೆ ಸಮೀಪದಲ್ಲಿ ಕುಮಾರಧಾರಾ ನದಿ ಹರಿಯುತ್ತದೆ. ಸುಬ್ರಹ್ಮಣ್ಯದಲ್ಲಿ ಜರುಗುವ ಜಾತ್ರೆ ಸಮಯದಲ್ಲಿ ಹರಕೆ ಹೊತ್ತ ಯಾತ್ರಿಕರು ಈ ನದಿಯಲ್ಲಿ ಸ್ನಾನ ಮಾಡಿ ಸುಬ್ರಹ್ಮಣ್ಯ ದೇವಾಲಯದವರೆಗೆ ಸುಮಾರು ಒಂದು ಮೈಲಿ ದೂರದ ರಸ್ತೆಯಲ್ಲಿ ಉರುಳಿಕೊಂಡು ಹೋಗಿ ದೇವರಿಗೆ ತಮ್ಮ ಹರಕೆಯನ್ನೊಪ್ಪಿಸುತ್ತಾರೆ. ಇದರಿಂದ ಕಾಯಿಲೆಗಳೂ, ಪಾಪಗಳೂ ಪರಿಹಾರವಾಗುವುದೆಂಬ ನಂಬಿಕೆ ಇದೆ. ಸುಬ್ರಹ್ಮಣ್ಯ ಬ್ರಹ್ಮರಥ ಇಲ್ಲಿ ನೋಡಬೇಕಾದುದು. ಇದರಲ್ಲಿ ಹಿಂದಿನ ಕಾಲದ ಆಕರ್ಷಕ ರಥಶಿಲ್ಪಗಳನ್ನು ಕಾಣಬಹುದು.

ದೇವಾಲಯದ ಈಶಾನ್ಯ ದಿಕ್ಕಿನಲ್ಲಿ ಶೃಂಗೇರಿ ಮಠವಿದೆ. ಗರ್ಭಗುಡಿಯಲ್ಲಿ ಆರು ಮುಖದ ಸುಬ್ರಹ್ಮಣ್ಯ ವಿಗ್ರಹವಿದ್ದು ಮಧ್ಯದಲ್ಲಿ ಒಂದು ಅಗಲವಾದ ಏಳು ತಲೆ ಬೆಳ್ಳಿಯ ನಾಗರ ಹೆಡೆ ಇದೆ. ಅದರ ಕೆಳಗಡೆ ಚಿನ್ನದಂತೆ ಪ್ರಕಾಶಿಸುವ ಮತ್ತೊಂದು ನಾಗರ ಹೆಡೆಯೂ ಇದೆ. ದೇವಾಲಯದ ಪ್ರಾಕಾರದ ಈಶಾನ್ಯ ಮೂಲೆಗೆ ಬಂದರೆ ಅಲ್ಲಿಯ ಗರ್ಭಗುಡಿಯಲ್ಲಿ ಸೂರ್ಯ ಅಂಬಿಕೆ, ವಿಷ್ಣು, ಗಣಪತಿ, ಮಹೇಶ್ವರ ವಿಗ್ರಹಗಳನ್ನು ಕಾಣುತ್ತೇವೆ. ಹೊರಗೆ ಬಂದರೆ ಎದುರಿಗೆ ಶ್ರೀ ಸುಬ್ರಹ್ಮಣ್ಯ ಮಠವಿದ್ದು ಅದರ ಇದಿರಿಗೆ ಇರುವ ಮಹಾದ್ವಾರದ ಮೂಲಕ ಶ್ರೀ ಸಂಪುಟ ನರಸಿಂಹಸ್ವಾಮಿ ಮಂದಿರ

ವನ್ನು ಪ್ರವೇಶಿಸಬಹುದು. ಗರ್ಭಗುಡಿಯಲ್ಲಿ ಬೆಳ್ಳಿ ಪೀಠದ ಮೇಲೆ ಪಾಂಡುರಂಗ ವಿಠಲ, ಮಧ್ವನರಸಿಂಹ ವಿಗ್ರಹಗಳಿವೆ.

ಸುಬ್ರಹ್ಮಣ್ಯ ಕ್ಷೇತ್ರದ ಇನ್ನೊಂದು ಗುಡಿ ಆದಿ ಸುಬ್ರಹ್ಮಣ್ಯನ ಗುಡಿ. ಜನರಲ್ಲಿ ಒಂದು ನಂಬಿಕೆ ಇದೆ–ಧರ್ಮಸ್ಥಳಕ್ಕೆ ಹೇಳಿಕೊಂಡ ಹರಕೆ, ಸುಬ್ರಹ್ಮಣ್ಯದಲ್ಲಿ ಸಲ್ಲಿಸಿದರೆ ಆಗುತ್ತದೆ. ಆದರೆ ಸುಬ್ರಹ್ಮಣ್ಯಕ್ಕೆ ಹೇಳಿಕೊಂಡ ಹರಕೆ ಧರ್ಮಸ್ಥಳದಲ್ಲಿ ಆಗುವುದಿಲ್ಲ. ಸುಬ್ರಹ್ಮಣ್ಯದಲ್ಲಿ ಹರಕೆ ಸಲ್ಲಿಸುವ ಪರಿ ವಿಶಿಷ್ಟ. ನಾಗಪ್ರತಿಷ್ಠೆ ಮಾಡಿಸುವುದೂ ಉಂಟು.

ಈ ಕ್ಷೇತ್ರಕ್ಕೆ ಕುಕ್ಕೆ ಸುಬ್ರಹ್ಮಣ್ಯ ಎನ್ನುತ್ತಾರೆ. ಕಾರಣ ಕುಕ್ಕೆ ಎಂದರೆ ಮಗು ಅಥವಾ ಬಾಲ ಎಂದು ಅರ್ಥ.

ಕುಮಾರಪರ್ವತ, ಶೇಷಪರ್ವತ ಎಂಬ ಎರಡು ಬೆಟ್ಟಗಳ ನಡುವೆ ಇರುವ ಸುಬ್ರಹ್ಮಣ್ಯ ಒಂದು ಸುಂದರ ಪ್ರದೇಶವಾಗಿದೆ. ಈ ಕ್ಷೇತ್ರ ಬಹು ಹಿಂದೆ ಕುಕ್ಕೆ ಪಟ್ಟಣವೆಂದು ಖ್ಯಾತಿವೆತ್ತಿತ್ತು. ಆದಿಶಂಕರಾಚಾರ್ಯರು ಈ ಸ್ಥಳವನ್ನು ಸಂದರ್ಶಿಸಿದ್ದರೆಂದು ತಿಳಿಯಲಾಗಿದೆ,

ಕುಕ್ಕೆ ಸುಬ್ರಹ್ಮಣ್ಯ ಸ್ವಾಮಿ ದೇವಾಲಯದ ಪ್ರಾಕಾರದೊಳಗೆ ಸುಬ್ರಹ್ಮಣ್ಯ, ಲಕ್ಷ್ಮೀನರಸಿಂಹ ಹಾಗೂ ಉಮಾಮಹೇಶ್ವರರ ಗುಡಿಗಳಿವೆ. ಸುಬ್ರಹ್ಮಣ್ಯ ದೇವರ ಗುಡಿಯೊಳಗಿನ ಲಿಂಗ ಕುಕ್ಕೆ ಸುಬ್ರಹ್ಮಣ್ಯ ಎಂದು ಪ್ರಸಿದ್ಧವಾಗಿದೆ. ಪ್ರತಿ ವರ್ಷ ನವೆಂಬರ್, ಡಿಸೆಂಬರ್ ತಿಂಗಳುಗಳಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಆಗ ಭಕ್ತರ ಸಂದಣಿ ಜೋರು.

## ದಕ್ಷಿಣ ಭಾರತ ಜೈನ ಕಾಶಿ ಮೂಡಬಿದರೆ

ಕಾರ್ಕಳ ತಾಲ್ಲೂಕಿನ ಮೂಡಬಿದರೆ ಒಂದು ಜೈನ ಕ್ಷೇತ್ರ. ಈ ಊರಿಗೆ ಹಿಂದೆ ವಂಶಪುರ, ವೇಣುಪುರ ಎಂಬ ಹೆಸರುಗಳಿದ್ದಂತೆ ತೋರುತ್ತದೆ. ಮೂಡಣ ದಿಕ್ಕಿನಲ್ಲಿರುವ ಈ ಊರು ಬಿದಿರು ಮೆಳೆಗಳಿಂದ ಕೂಡಿದ್ದುದರಿಂದ ಈ ಊರಿಗೆ ಮೂಡುಬಿದರೆ ಎಂದು ಕರೆಯಲಾಯಿತು.

ಜೈನರ ವಾಸ್ತು ಕಲಾ ಮಂದಿರಗಳು, ಬಸದಿಗಳು, ದೇವಾಲಯಗಳಿಂದ ಮೂಡ ಬಿದರೆ ಪ್ರಸಿದ್ಧಿಯಾಗಿದೆ. ಈ ಗ್ರಾಮ ಹದಿನೇಳನೆಯ ಶತಮಾನ ದಲ್ಲಿ ಪುತ್ತಿಗೆಯ ಚೌಟರಸರ ರಾಜಧಾನಿಯಾಗಿತ್ತು. ಚೌಟರಸರು ಜೈನ ಮತಾವಲಂಬಿಗಳಾಗಿದ್ದರು. ಮೂಡಬಿದರೆಯಲ್ಲಿ ಜೈನ ಮಂದಿರಗಳೇ ಹೆಚ್ಚು.

ಮೂಡಬಿದರೆಯಲ್ಲಿ ಹದಿನೆಂಟು ಬಸದಿಗಳಿವೆ. ಇಂದಿಗೂ ಈ ಬಸದಿ ಗಳು ಚೆನ್ನಾಗಿದ್ದು ಎಂದಿನ ಸೌಂದರ್ಯವನ್ನು ಉಳಿಸಿಕೊಂಡಿವೆ. ಇವು ಗಳಲ್ಲಿ ತ್ರಿಭುವನ ತಿಲಕ ಚೂಡಾಮಣಿ ಬಸದಿ ಅತ್ಯಂತ ಆಕರ್ಷಕವಾಗಿದ್ದು ದಕ್ಷಿಣ ಭಾರತದ ಉತ್ತಮ ವಾಸ್ತು ನಿರ್ಮಾಣಗಳಲ್ಲೊಂದಾಗಿದೆ.

ಹಿಂದೆ ಶ್ರವಣ ಬೆಳಗೊಳ (ಹಾಸನ ಜಿಲ್ಲೆ)ದಿಂದ ಇಲ್ಲಿಗೆ ಬಂದ ಜೈನ ಗುರುಗಳೊಬ್ಬರ ಆದೇಶದಿಂದ ನೆಲವನ್ನು ಅಗೆದಾಗ ಪಾರ್ಶ್ವನಾಥ ಸ್ವಾಮಿಯ ವಿಗ್ರಹ ದೊರಕಿ ಊರಲ್ಲಿ ನೆಲಸಿದ್ದ ಜೈನರು ಬಸದಿಯನ್ನು ಕಟ್ಟಿಸಿ ಆ ಪ್ರತಿಮೆಯನ್ನು ಪ್ರತಿಷ್ಠಾಪಿಸಿವರೆಂದು ಹೇಳುತ್ತಾರೆ. ಈ ಬಸದಿಗೇ ಹಳೆ ಬಸದಿ ಅಥವಾ ಗುರು ಬಸದಿ ಎಂದು ಹೆಸರಿದೆ. ಇದಕ್ಕೆ ಸಿದ್ಧಾಂತ ಬಸದಿ ಎಂದೂ ಕರೆಯುವರು. ಇಲ್ಲಿ ಕಪ್ಪು ಶಿಲೆಯಿಂದ ಮಾಡಿದ ಪಾರ್ಶ್ವನಾಥ ತೀರ್ಥಂಕರ ವಿಗ್ರಹವಿದೆ. ಈ ಮಂದಿರದ ಸಮೀಪದಲ್ಲೇ ಪದ್ಮಾವತಿ ಅಮ್ಮನ ಬಸದಿ ಇದೆ. ಇದರಲ್ಲಿ ಸರಸ್ವತಿ ಮತ್ತು ಇಪ್ಪತ್ತನಾಲ್ಕು ತೀರ್ಥಂಕರರ ಮೂರ್ತಿಗಳಿವೆ. ಗುರು ಬಸದಿಯಲ್ಲಿ 32 ಜಿನ ಪ್ರತಿಮೆಗಳಿವೆ. ಮೂಡ ಬಿದರೆಯ ಜೈನ ಪೀಠಾಧಿಪತಿಗಳಿಗೆ ಪಟ್ಟವಾಗುವುದು ಇಂದಿಗೂ ಈ ಬಸದಿ ಯಲ್ಲಿಯೇ.

ತ್ರಿಭುವನ ತಿಲಕ ಚೂಡಾಮಣಿ ಬಸದಿಯನ್ನು ಕ್ರಿ.ಶ. 1431 ರಲ್ಲಿ ಕಟ್ಟಲಾಯಿತು ಎಂದು ತಿಳಿದು ಬಂದಿದೆ. ಈ ಬಸದಿಯಲ್ಲಿ ಸಾವಿರ ಕಂಬ ಗಳಿವೆ. ಈ ಎಲ್ಲ ಕಂಬಗಳೂ ಚಿತ್ರಕಲೆಯಿಂದ ತುಂಬಿಕೊಂಡಿರುವುದು ಒಂದು ವೈಶಿಷ್ಟ್ಯ. ಯಾವುದೇ ಒಂದು ಕಂಬದ ಕೆತ್ತನೆ ಇನ್ನೊಂದರಂತಿಲ್ಲ. ಇಲ್ಲಿ ಗೋಡೆಗಳಲ್ಲಿ ಕಂಬಗಳಲ್ಲಿ ಕೆತ್ತಲ್ಪಟ್ಟ ಮೃಗ ಪಕ್ಷಿಗಳು, ಹೂ ಹಣ್ಣುಗಳ ಬಳ್ಳಿಗಳ ದೇವಾಸುರರ ಗೊಂಬೆಗಳ ಕಲಾತ್ಮಕತೆ ವರ್ಣನಾತೀತ. ಮೂರು

ಅಂತಸ್ತುಗಳುಳ್ಳ ಬಸದಿಯಲ್ಲಿ ಆರು ಮಂಟಪಗಳಿದ್ದು ಗರ್ಭಗೃಹವಲ್ಲಿ ಒಂಬತ್ತು ಅಡಿ ಎತ್ತರದ ಚಂದ್ರನಾಥನ ವಿಗ್ರಹವಿದೆ. ಇದು ಪಂಚ ಲೋಹದ ಮೂರ್ತಿಯಾಗಿದೆ. ಗರ್ಭಗುಡಿಯ ಮುಂದೆ ಮೂರು ಮಂಟಪ ಗಳು ಸಾಲಾಗಿದ್ದು ಪ್ರಾಕಾರದಿಂದ ಸುತ್ತುವರೆದಿದೆ. ಮೇಲಿನ ಅಂತಸ್ತಿಗೆ ತಾಮ್ರದ ತಗಡುಗಳನ್ನು ಹೊದಿಸಲಾಗಿದೆ.

ಭೈರಾದೇವಿ ಮಂಟಪ ಎಂದು ಕರೆಯಲಾಗುವ ಮಂಟಪದ ಕೆಳಗಲ್ಲು ಗಳಲ್ಲಿ ಕೆತ್ತಲಾಗಿರುವ ಜಿರಾಫೆ ಹಾಗೂ ಡ್ರೇಗನ್ ವಿಸ್ಮಯವನ್ನುಂಟು ಮಾಡುತ್ತವೆ. ಭೈರಾದೇವಿ ಗೇರು ಸೊಪ್ಪೆಯ ರಾಣಿಯಾಗಿದ್ದಳು.

ಬಸದಿಯ ಮುಂದೆ ಗೇರು ಸೊಪ್ಪೆಯ ರಾಣಿ ಕಟ್ಟಿಸಿದೆನ್ನಲಾದ ಐವತ್ತು ಅಡಿ ಎತ್ತರದ ಮಾನಸ್ತಂಭವೂ ನಕ್ಷತ್ರಾಕಾರದ ಮಂಟಪವೂ ಇದೆ. ಇವು ಅತ್ಯಂತ ಆಕರ್ಷಣೀಯವಾಗಿವೆ. ಬಸದಿಯಲ್ಲಿನ ಕೆಲವು ಜಿನ ಬಿಂಬಗಳು ಸ್ಫಟಿಕದಿಂದ ಆಗಿದೆ. ಇದೇ ಊರಿನ ಶೆಟ್ಟರ ಬಸದಿಯಲ್ಲಿ ವರ್ಧಮಾನ ತೀರ್ಥಂಕರ ಮೂರ್ತಿ ಇದೆ. ಬಡಗ ಬಸದಿಯಲ್ಲಿ ಮೂರು ಅಡಿ ಎತ್ತರದ ಅಮೃತ ಶಿಲೆಯ ಚಂದ್ರನಾಥ ತೀರ್ಥಂಕರರ ಮೂರ್ತಿ ಇವೆ. ಎದುರಿಗೆ ನಲವತ್ತು ಅಡಿ ಎತ್ತರದ ಮಾನಸ್ತಂಭವಿದೆ.

ಹಿರೇ ಬಸದಿ, ಕಲ್ಲು ಬಸದಿ, ವಿಕ್ರಮಶೆಟ್ಟಿ ಬಸದಿ, ಕೋಟಿ ಬಸದಿ, ಮಾದಶೆಟ್ಟಿ ಬಸದಿ, ಲೆಪ್ಪದ ಬಸದಿ ಹಾಗೂ ಶ್ರೀ ಮಠದ ಬಸದಿ ಇವು ಇನ್ನಿತರ ಬಸದಿಗಳಾಗಿವೆ.

ಹಿರೇ ಬಸದಿಯಲ್ಲಿ ಶಾಂತಿನಾಥರ ಮೂರ್ತಿ ಇದೆ. ಈ ಬಸದಿ ಚಿತ್ರ ಕಲೆಯಿಂದ ಕೂಡಿದೆ. ಕಲ್ಲು ಬಸದಿಯಲ್ಲಿ ಅಮೃತ ಶಿಲೆಯ ಚಂದ್ರ ನಾಥರ ವಿಗ್ರಹವೂ ವಿಕ್ರಮ ಶೆಟ್ಟಿ ಬಸದಿಯಲ್ಲಿ ಶ್ರೀ ಆದೀಶ್ವರ ಮೂರ್ತಿ ಮತ್ತು ನಲವತ್ತು ಅಡಿ ಎತ್ತರದ ಮಾನಸ್ತಂಭವೂ ಇದೆ. ಕೋಟಿ ಬಸದಿಯ ನೇಮಿನಾಥ, ಮಾದಶೆಟ್ಟಿ ಬಸದಿಯ ಆದಿ ತೀರ್ಥಂಕರ, ಅನಂತನಾಥಸ್ವಾಮಿ, ಸುಪಾರ್ಶ್ವ ತೀರ್ಥಂಕರ ವಿಗ್ರಹಗಳೂ, ದೇರಮ ಶೆಟ್ಟಿ ಬಸದಿಯ ಅರ, ಮಲ್ಲಿ ಹಾಗೂ ಮುನಿಸುವ್ರತ ಎಂಬ ಮೂರು ವಿಗ್ರಹಗಳು ಗಮನಾರ್ಹ, ಲೆಪ್ಪದ ಬಸದಿಯಲ್ಲಿ ಶ್ರೀ ಚಂದ್ರನಾಥರ ವಿಗ್ರಹ ಹಾಗೂ ಜ್ವಾಲಾಮಾಲಿನಿ

ದೇವಿಯ ವಿಗ್ರಹ ಇದೆ. ಈ ಬಸದಿಯ ನಲವತ್ತು ಅಡಿ ಎತ್ತರದ ಮಾನ ಸ್ತಂಭ ಗಮನ ಸೆಳೆಯುತ್ತದೆ.

ಶ್ರೀ ಮಠದ ಬಸದಿಯಲ್ಲಿ ಜೈನ ಗುರುಗಳು ವಾಸಿಸುತ್ತಾರೆ. ಚೌಟರಸರ ಅರಮನೆ ಮೂಡಬಿದಿರೆಯ ಮತ್ತೊಂದು ಪ್ರೇಕ್ಷಣೆಯ ತಾಣ. ಈ ಅರ ಮನೆಯ ಕಿಟಕಿ ಮತ್ತು ಕಲ್ಲು ಕಂಬಗಳ ಮೇಲೆ ಹಲವಾರು ಚಿತ್ರಗಳನ್ನು ಕೆತ್ತ ಲಾಗಿದ್ದು ವೈಶಿಷ್ಟ್ಯವಾಗಿವೆ. ಅರಮನೆ ಬಸ್ ನಿಲ್ದಾಣದ ಸಮೀಪವಿದೆ.

ಮೂಡಬಿದರೆಯಲ್ಲಿರುವ ಇತರ ದೇವಾಲಯಗಳೆಂದರೆ ಗೌರಿದೇಗುಲ, ಗೋಪಾಲಕೃಷ್ಣ ದೇವಸ್ಥಾನ, ವೆಂಕಟರಮಣ ಹಾಗೂ ಮಹಾಲಸ ದೇವಾ ಲಯ. ಕೋಟೆಯಲ್ಲಿ ಹನುಮಂತನ ಗುಡಿ ಇದೆ. ಒಟ್ಟಾರೆ ಮೂಡಬಿದರೆ ದಕ್ಷಿಣ ಭಾರತದ ಜೈನ ಸಂಸ್ಕೃತಿಯ ಆಗರವಾಗಿತ್ತೆನ್ನಲಡ್ಡಿಯಿಲ್ಲ.

## ಗೊಮ್ಮಟ ಮೂರ್ತಿಗಳು

ಗೊಮ್ಮಟ ಮೂರ್ತಿಗಳು ಭಾರತೀಯ ಶಿಲ್ಪ ಕಲೆಗೆ ಕರ್ನಾಟಕದ ಒಂದು ಮಹತ್ವ ಪೂರ್ಣ ಕೊಡುಗೆ ಎನ್ನಬಹುದು. ಗೊಮ್ಮಟ ಎಂದರೆ ಸುಂದರ ಎಂದು ಅರ್ಥವಿದೆ. ಗೊಮ್ಮಟ ಅಥವಾ ಗೊಮ್ಮಟೇಶ್ವರ ಎಂಬ ಹೆಸರು ಆದಿ ತೀರ್ಥಂಕರ ವೃಷಭನಾಥನ ಕಿರಿಯ ಮಗ ಬಾಹು ಬಲಿಯನ್ನು ಕುರಿತದ್ದಾಗಿದೆ. ಬಾಹು ಬಲಿ ಸುಂದರ ಕಾಯದವನಾಗಿದ್ದು ಪೌದನ ಪುರ ವನ್ನು ಆಳುತ್ತಿದ್ದ ದೊರೆ. ಈತನಿಗೆ ಮನ್ಮಥ ಎಂಬ ಹೆಸರು ಇತ್ತು. ಮನ್ಮಥ ಸುಂದರಾಂಗ, ಹೀಗಾಗಿ ಗೊಮ್ಮಟ ಪದದ ಔಚಿತ್ಯವನ್ನು ಊಹಿಸ ಬಹುದು.

ಬಾಹುಬಲಿ ಭರತನೆಂಬುವನ ತಮ್ಮ-ಭರತ ಅಯೋಧ್ಯೆಯನ್ನು ಆಳು ತ್ತಿದ್ದ. ಆತನಿಗೆ ಚಕ್ರರತ್ನವೊಂದು ಪ್ರಾಪ್ತವಾಗಿ ಅದರ ದೆಸೆಯಿಂದ ಇಡೀ ಭೂಮಂಡಲವನ್ನು ಗೆದ್ದು ಚಕ್ರವರ್ತಿಯಾಗಿ ಹಿಂದಿರುಗಿ ಬರುವಾಗ ಬಾಹು ಬಲಿಯನ್ನೆದುರಿಸಬೇಕಾದ ಪ್ರಸಂಗ ಒದಗಿದ್ದೆ ಗೊಮ್ಮಟ ಮೂರ್ತಿಗಳ ಸ್ಥಾಪನೆಗೆ ಕಾರಣವಾಗಿದ್ದು ಗಮನಾರ್ಹ ಅಂಶ. ಬಾಹುಬಲಿ ಸ್ವಾಭಿಮಾನಿ

ಭರತ ತನ್ನನ್ನು ಯುದ್ಧದಲ್ಲಿ ಸೋಲಿಸಿ ರಾಜ್ಯವನ್ನು ಗೆದ್ದುಕೊಳ್ಳಲಿ ಎಂದು ಬಿಟ್ಟ, ಯುದ್ಧ ನಡೆಯಿತು. ದೃಢಕಾಯನೂ ವೀರನೂ ಆಗಿದ್ದ ಬಾಹು ಬಲಿಯೇ ಗೆದ್ದ, ಭರತ ಸ್ವಲ್ಪವೂ ವಿವೇಚಿಸದೆ ತಮ್ಮನ ಮೇಲೆ ಚಕ್ರ ಪ್ರಯೋಗಿಸಿದ. ಇದರಿಂದ ಬಾಹು ಬಲಿಗೇನೂ ಆಗಲಿಲ್ಲ. ಆದರೆ ಬಾಹು ಬಲಿ ತಾನೇ ಗೆದ್ದರೂ ಅಣ್ಣನನ್ನು ಸೋಲಿಸಿ ರಾಜ್ಯವನ್ನಾಳಲು ಒಪ್ಪದೆ ವಿರಕ್ತನಾಗಿ ತಪಸ್ಸಿಗೆ ಹೊರಟ, ಆದರೆ ಅವನಿಗೆ ಜ್ಞಾನಲಭಿಸಲಿಲ್ಲ. ತಾನು ಗೆದ್ದ ನೆಲದಲ್ಲಿಯೇ ತಪಸ್ಸಿಗೆ ನಿಂತಿದ್ದ. ಬಾಹು ಬಲಿಗೆ ಭರತ ಅಭಿಮಾನವನ್ನು ಬಿಡುವಂತೆ ಕೇಳಿಕೊಂಡ. ಬಾಹುಬಲಿಗೆ ಜ್ಞಾನೋದಯ ಉಂಟಾಯಿತು. ಭರತ ಪೌದನ ಪುರದಲ್ಲಿ ಬಾಹು ಬಲಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದ. ಬಾಹುಬಲಿಯ ಬಗ್ಗೆ ಪ್ರಚಲಿತವಾಗಿರುವ ಕಥೆ ಇದು. ಬಾಹು ಬಲಿ ಜೈನರ ಆರಾಧ್ಯ ದೇವನೂ ಆಗಿದ್ದಾನೆ.

ಕರ್ನಾಟಕದಲ್ಲಿ ಪ್ರಸಿದ್ಧವಾಗಿರುವ ಐದು ಗೊಮ್ಮಟ ಮೂರ್ತಿಗಳು ಇದ್ದು ಇವುಗಳಲ್ಲಿ ಮೂರು ದಕ್ಷಿಣ ಕನ್ನಡ ಜಿಲ್ಲೆಯಲ್ಲೇ ಇವೆ. ಈ ಎಲ್ಲವೂ ಎತ್ತರದ ವಿಗ್ರಹಗಳು. ಇವು ಕಾರ್ಕಳ, ವೇಣೂರು ಮತ್ತು ಧರ್ಮಸ್ಥಳ ಗಳಲ್ಲಿವೆ.

## ಕಾರ್ಕಳ

ಕಾರ್ಕಳದ ಗೊಮ್ಮಟೇಶ್ವರ ವಿಗ್ರಹವನ್ನು ಕಳಸ ರಾಜವಂಶದ ಭೈರ ರಸನ ಮಗ ವೀರ ಪಾಂಡ್ಯ ಸ್ಥಾಪಿಸಿದ. ಈ ವಿಗ್ರಹದ ಎತ್ತರ ನಲ ವತ್ತೊಂದೂವರೆ ಅಡಿಗಳು. ಈ ಮೂರ್ತಿಯ ಪ್ರತಿಷ್ಠಾಪನೆ ಕ್ರಿ.ಶ. 1432 ರಲ್ಲಿ ಆಯಿತೆನ್ನಲಾಗಿದೆ. ಮೂರ್ತಿಯನ್ನು ಮುನ್ನೂರು ಅಡಿಗಳ ಎತ್ತರದ ಚಿಕ್ಕ ಬೆಟ್ಟದ ಮೇಲೆ ಒಂದೇ ಕಲ್ಲಿನಲ್ಲಿ ಕೆತ್ತಲಾಗಿದೆ. ಮೂರ್ತಿಯನ್ನು ಸಾವಿರಾರು ಜನ ಸೇರಿ ಎಳೆದರಂತೆ ಅದರಿಂದಲೂ ಆಗದೆ ಮದ್ದಾನೆಗಳಿಂದ ನೂಕಿಸಿ ಬೆಟ್ಟದ ತುದಿಯನ್ನು ಮುಟ್ಟಿಸಲಾಯಿತೆನ್ನಲಾಗಿದೆ. ಅನಂತರ ವಿಗ್ರಹದ ಅಂತಿಮ ನಯಗೊಳಿಸುವ ಕೆಲಸ ಮುಗಿಸಿ ಪ್ರತಿಷ್ಠಾಪಿಸಲಾಯಿತೆನ್ನ ಲಾಗಿದೆ. ವಿಗ್ರಹ ನೋಡಲು ಹೃದಯಂಗಮ, ಮುಖ ಭಾವ, ವಿಶಾಲ

ವಕ್ಷಸ್ಥಲ, ನೀಳವಾದ ಕೈಗಳು ಗಮನಾರ್ಹ. ಗೊಮ್ಮಟನಿಗೆ ಅರವತ್ತು ವರ್ಷಗಳಿಗೊಮ್ಮೆ ಮಸ್ತಕಾಭಿಷೇಕ ಜರುಗುತ್ತದೆ. ಪ್ರತಿನಿತ್ಯ ಪಾದ ಪೂಜೆ ನಡೆಯುತ್ತದೆ. ಶ್ರವಣ ಬೆಳಗೊಳದ ಗೊಮ್ಮಟನಂತೆ ಇದೂ ಸುಂದರವಾಗಿದೆ ಇಲ್ಲಿರುವ ಚತುರ್ಮುಖ ಬಸದಿಯೆಂದು ಕರೆಯಲಾಗುವ ಜೈನ ಮಂದಿರ ಇಮ್ಮಡಿ ಭೈರವ ಎಂಬ ರಾಜನ ನೇತೃತ್ವದಲ್ಲಿ ನಿರ್ಮಾಣ ಗೊಂಡಿತು. ಈ ಬಸದಿಯ ನಾಲ್ಕು ಮೂಲೆಗಳಲ್ಲಿ ಅರ, ಮಲ್ಲಿ, ಮುನಿ ಸುವ್ರತರ ಶಿಲಾ ಪ್ರತಿಮೆಗಳನ್ನು ಪ್ರತಿಷ್ಠಾಪಿಸಲಾಗಿದೆ.

ಭೈರರಸ ವಂಶದವರು ಜೈನ ಧರ್ಮೀಯರಾಗಿದ್ದರಾದರೂ ಈ ರಾಜರ ಆಶ್ರಯದಲ್ಲಿ ಕೆಲವು ಹಿಂದೂ ದೇವಾಲಯಗಳು ನಿರ್ಮಾಣಗೊಂಡಿವೆ. ಇಂತಹ ಒಂದು ದೇವಾಲಯ ಅನಂತಶಯನ ದೇವಾಲಯ. ಏಳು ಅಡಿ ಎತ್ತರವಿರುವ ಅನಂತಶಯನ ವಿಗ್ರಹದಲ್ಲಿ ಆದಿಶೇಷನ ಮೇಲೆ ವಿಷ್ಣು ಮಲಗಿದ್ದಾನೆ. ಶ್ರೀದೇವಿ ಭೂದೇವಿ ಪಾದ ಸೇವೆ ಮಾಡುತ್ತಿರುವರು.

ಗೊಮ್ಮಟ ವಿಗ್ರಹದ ಎದುರು ಬ್ರಹ್ಮ ದೇವರ ಕಂಬವಿದ್ದು ಮೇಲೆ ಬ್ರಹ್ಮ ದೇವರ ವಿಗ್ರಹವಿದೆ. ಇದು ಅತ್ಯಂತ ಆಕರ್ಷಕವಾಗಿದೆ. ಗೊಮ್ಮಟ ವಿಗ್ರಹ ಸ್ಥಾಪನೆಯ ಸಂದರ್ಭದಲ್ಲಿ ವಿಜಯನಗರದ ದೊರೆ ಇಮ್ಮಡಿ ದೇವ ರಾಯ ಬಂದಿದ್ದನೆನ್ನಲಾಗಿದೆ. ಕಾರ್ಕಳದಲ್ಲಿ ವಿಜಯನಗರದ ಕಾಲಕ್ಕೆ ಸೇರಿದ ಸುಂದರ ಕಾಳಿಕಾಂಬಾ ದೇವಾಲಯವಿದೆ. ಇಲ್ಲಿರುವ ಕಾಳಿಕಾಂಬ ವಿಗ್ರಹ ಅತ್ಯಂತ ಸುಂದರವಾಗಿದೆ. ಕ್ರಿ.ಶ. 15-16ನೆಯ ಶತಮಾನದಲ್ಲಿ ಸ್ಥಾಪನೆ ಗೊಂಡ ಲಲಿತ ಕೀರ್ತಿ ಭಟ್ಟಾರಕರ ಮಠದಲ್ಲಿರುವ ಅನಂತ ಪದ್ಮನಾಭ ಮೂರ್ತಿ ವಿಶಿಷ್ಟವಾಗಿದೆ. ವೆಂಕಟರಮಣ ದೇವಾಲಯ ಕಾರ್ಕಳದ ಮತ್ತೊಂದು ದೇವಾಲಯ.

## ವೇಣೂರು

ವೇಣೂರು ಕಾರ್ಕಳಕ್ಕೆ ಸಮೀಪದಲ್ಲಿಯೇ ಇದೆ. ಇಲ್ಲಿ ಎಂಟು ಜೈನ ಬಸದಿಗಳು, ಏಕಶಿಲೆಯಲ್ಲಿ ಕೆತ್ತಿರುವ ಮೂವತ್ತೈದು ಅಡಿ ಎತ್ತರದ

ಗೊಮ್ಮಟ ವಿಗ್ರಹವೂ ಇವೆ. ಕ್ರಿ.ಶ. 1604ರಲ್ಲಿ ವೀರ ತಿಮ್ಮಣ್ಣ ಅಜಿಲನೆಂಬುವನು ಈ ಸುಂದರ ವಿಗ್ರಹವನ್ನು ಕೆತ್ತಿಸಿದ. ಇದು ಗುರುಪುರ ಹೊಳೆಯ ದಕ್ಷಿಣ ದಂಡೆಯಲ್ಲಿನ ವಿಶಾಲವಾದ ಬಂಡೆಯ ಮೇಲಿದೆ. ಬಸದಿಯಲ್ಲಿ ಸುಂದರವಾದ ತೀರ್ಥಂಕರ ವಿಗ್ರಹಗಳಿವೆ, ವೇಣೂರಿನಲ್ಲಿ ಮಹಾದೇವ ದೇವಾಲಯವೊಂದಿದೆ. ಶಾಂತಿನಾಥ ಬಸದಿಯು ಚಿತ್ರಕಲೆಯಿಂದ ಕೂಡಿದೆ.

## ಧರ್ಮಸ್ಥಳದ ನೂತನ ಗೊಮ್ಮಟ

ನೂರು ಶತಮಾನಗಳ ಹಿಂದೆ ಸ್ಥಾಪನೆಗೊಂಡ ಗೊಮ್ಮಟ ಮೂರ್ತಿಯ ಪ್ರಭಾವ ಇಪ್ಪತ್ತನೆಯ ಶತಮಾನದಲ್ಲಿ ನೂತನವಾದ ಗೊಮ್ಮಟೇಶ್ವರ ಮೂರ್ತಿಯ ನಿರ್ಮಾಣಕ್ಕೆ ಕಾರಣವಾಯಿತು. ಇದು ಆಗಿದ್ದು ಧರ್ಮಸ್ಥಳದ ಧರ್ಮಾಧಿಕಾರಿ, ಶ್ರೀ ವೀರೇಂದ್ರ ಹೆಗ್ಗಡೆಯವರ ಪ್ರಯತ್ನದಿಂದಾಗಿ.

ಈ ಮಹಾಶಿಲ್ಪವನ್ನು ಕೆತ್ತಿದ ಶಿಲ್ಪಿ ಡಾ॥ ರಂಜಾಳ ಗೋಪಾಲ ಶೆಣೈ. ಉತ್ತಮ ಗ್ರಾನೈಟ್ (ಕಣಶಿಲೆ) ಶಿಲೆಯ ಬಾಹುಬಲಿ ಮೂರ್ತಿ. ದೊಡ್ಡ ದೊಡ್ಡ ಶಿಲ್ಪಗಳನ್ನು ಮೂಡಿಸುವುದರಲ್ಲಿ ಸಿದ್ಧಹಸ್ತರಾದ ಗೋಪಾಲ ಶೆಣೈ ಮೂರ್ತಿ ಕೆತ್ತುವ ಮೊದಲು ಶ್ರವಣಬೆಳಗೊಳ, ಕಾರ್ಕಳ ಮತ್ತು ವೇಣೂರಿನ ಶಿಲಾಮೂರ್ತಿಗಳ ಅಧ್ಯಯನ ನಡೆಸಿದರು. ಕಡೆಗೆ ಬೆಳಗೊಳದ ಮೂರ್ತಿಯನ್ನೇ ಆಧರಿಸಿ ಕಾರ್ಕಳಕ್ಕೆ ಸಮೀಪದ ಮಂಗಳಪಾಡೆಯ ನೂರಡಿ ಉದ್ದದ ಬಂಡೆಯನ್ನು ಶಿಲ್ಪದ ಆವಿಷ್ಕಾರಕ್ಕೆ ಆಯ್ದುಕೊಂಡರು. ಮೂರ್ತಿಯು ಕೆತ್ತನೆ ಮುಗಿಯುವವರೆಗೂ ಉಪ್ಪಿನ ಆಹಾರವನ್ನು ತೆಗೆದುಕೊಳ್ಳದಿದ್ದುದು ಗಮನಾರ್ಹ. 1967ರಲ್ಲಿ ಮೂರ್ತಿಯ ಕೆತ್ತನೆ ಆರಂಭಗೊಂಡು 1970ರಲ್ಲಿ ಮುಗಿಯಿತು. ಅರವತ್ನಾಲ್ಕು ಚಕ್ರಗಳ ವಿಶೇಷ ಟ್ರಾಲಿಯ ಮೇಲೆ ಗೊಮ್ಮಟ ಮೂರ್ತಿಯನ್ನು ಮಲಗಿ ಇಪ್ಪತ್ತಮೂರನೆ ದಿನಗಳಲ್ಲಿ ಧರ್ಮಸ್ಥಳಕ್ಕೆ ಸಾಗಿಸಲಾಯಿತು. 1973ರ ಮಾರ್ಚಿ ಇಪ್ಪತ್ತರಂದು ಮೂರ್ತಿಯು ಶ್ರೀಕ್ಷೇತ್ರ ಧರ್ಮಸ್ಥಳವನ್ನು ತಲಪಿತು. ಇದರ ಪ್ರತಿಷ್ಠಾಪನೆ ಒಂದ

ರೋಮಾಂಚಕಾರಿ ಅನುಭವವೇ. 1975ರ ಡಿಸೆಂಬರ್ 25ರಂದು ಈ ಕೆಲಸ ನಡೆದು ಅರವತ್ತು ಮಂದಿ ಒಂದು ತಿಂಗಳ ಕಾಲ ದುಡಿದರು.

ಧರ್ಮಸ್ಥಳದ ಗೊಮ್ಮಟಮೂರ್ತಿ ಸುಂದರವಾಗಿದೆ. ಒಟ್ಟು ಎತ್ತರ ಐವತ್ತೆರಡು ಅಡಿ ಇದೆ. ಮೂರ್ತಿಯಲ್ಲಿ ಕೆಲವು ವಿಶೇಷಗಳೆಂದರೆ ತಲೆ ಗೂದಲು ಭುಜದವರೆಗೂ ಇಳಿಬಿದ್ದಿರುವುದು. ಎರಡು ಪಾದಗಳ ಮೇಲೆ ಹಾವಿನ ಮರಿಗಳು ಹತ್ತುತ್ತಿರುವುದು ಮೊದಲಾದುವು. ಈ ಗೊಮ್ಮಟನನ್ನು ನೋಡಹೋಗುವುದೇ ಒಂದು ಅನುಭವ. ಮೇಲೇರಲು ಪಾವಟಿಕೆಗಳಿವೆ. ಗೊಮ್ಮಟ ಮೂರ್ತಿಯನ್ನು ಕಂಡಾಗ ಆಗುವ ಆನಂದ ಕ್ಷಣಕಾಲ ಆವರಿಸುವ ಮೌನಕ್ಕೆ ಸಾಟಿ ಇಲ್ಲ.

ಕರ್ನಾಟಕದ ಪ್ರವಾಸಿಗಳಿಗೆ ಗೊಮ್ಮಟ ಮೂರ್ತಿಗಳು ವಿಶಿಷ್ಟ ಅನುಭವವನ್ನು ತಂದುಕೊಡುತ್ತವೆ. ಜೈನಪರಂಪರೆಯ ತತ್ವಗಳನ್ನು ತಿಳಿಸಿ ಕೊಡಬಲ್ಲ ಗೊಮ್ಮಟ ಕ್ಷೇತ್ರಗಳು ದರ್ಶನಯೋಗ್ಯವಷ್ಟೇ ಅಲ್ಲ. ಭಾರತೀಯ ಶಿಲ್ಪಕಲೆಯನ್ನು ತಿಳಿಯಲು ಅವಕಾಶ ಮಾಡಿಕೊಡುವ ಸುಂದರ ತಾಣಗಳು. ಅವು ಇರುವ ಸ್ಥಾನಗಳು ದೇವಸ್ಥಾನಗಳು.

## ಮಂಗಳೂರು ದೇವಾಲಯಗಳು

ಪಶ್ಚಿಮ ಕರಾವಳಿಯ ಸುಂದರ ನಗರ ಮಂಗಳೂರು. ಬಂದರೂ ಹೌದು. ಈ ಊರಿಗೆ ಕೊಡಿಯಾಲ ಮತ್ತು ಮಂಗಳಾಪುರ ಎಂಬ ಹೆಸರು ಗಳಿವೆ. ಮಂಗಳೂರಿನ ಒಂದು ಭಾಗವನ್ನು ಈಗಲೂ ಕೊಡಿಯಾಲ ಬೈಲು ಎಂದು ಕರೆಯುತ್ತಾರೆ. ಇಲ್ಲಿರುವ ಮಂಗಳಾದೇವಿ ದೇವಾಲಯ ತುಂಬ ಪ್ರಸಿದ್ಧವಾದುದು. ಈ ದೇವಸ್ಥಾನದಿಂದಾಗಿ ಊರಿಗೆ ಮಂಗಳೂರು ಎಂಬ ಹೆಸರು ಬಂದಿದೆ.

ಕೇರಳದ ರಾಣಿ ಪ್ರಮೀಳೆಯೇ ಮತ್ಸ್ಯೇಂದ್ರನಾಥ, ಗೋರಖನಾಥ ಎಂಬುವರೊಡನೆ ನಾಸಿಕಕ್ಕೆ ಪ್ರಯಾಣ ಬೆಳೆಸಿದಾಗ ದಾರಿಯಲ್ಲಿ ಈ ಜಿಲ್ಲೆಯ ಉಲ್ಲಾಳದ ಹತ್ತಿರ ನೇತ್ರಾವತಿ ನದಿಯನ್ನು ದಾಟಿ ಬೋಳಾರದ ಬಳಿ

ತಂಗಿದ್ದರೆಂದೂ ಮುಂದೆ ಪ್ರಮೀಳೆಗೆ ಪ್ರಯಾಣ ಮುಂದುವರೆಸಲು ಆಗದಿದ್ದ ಕಾರಣ ಆಕೆ ಅಲ್ಲಿಯೇ ಉಳಿಯಲಾಗಿ ಆಕೆಗಾಗಿ ಒಂದು ಕುಟೀರವನ್ನು ಸ್ಥಾಪಿಸಲಾಯಿತು. ಪ್ರಮೀಳೆ ಆಗ ತನ್ನ ಹೆಸರನ್ನು ಮಂಗಳೆ ಎಂದು ಬದಲಾಯಿಸಿಕೊಂಡಿದ್ದಳು. ಮುಂದೆ ಗೋರಖನಾಥರು ಅತ್ತಾವರದ ಬಲ್ಲಾಳರು ಕಟ್ಟಿಸಿದ ದೇವಸ್ಥಾನದಲ್ಲಿ ಶಕ್ತಿದೇವತೆಯನ್ನು ಪ್ರತಿಷ್ಠಾಪಿಸಿ ಅದಕ್ಕೆ ರಾಣಿ ಮಂಗಳೆಯ ಹೆಸರನ್ನಿಟ್ಟರೆಂದು ಹೇಳುತ್ತಾರೆ. ಆ ದೇವಸ್ಥಾನದ ಪ್ರವೇಶ ಮಂಗಳಾಪುರ ಎಂದಾಗಿ ಮುಂದೆ ಮಂಗಳೂರು ಎಂದಾಯಿತೆಂದು ಪ್ರತೀತಿ ಇದೆ. ಮಂಗಳಾದೇವಿ ದೇವಾಲಯವನ್ನು ಕ್ರಿ.ಶ. 968ರಲ್ಲಿ ಆಳುವ ವಂಶದ ದೊರೆ ಎರಡನೆಯ ಕುಂದವರ್ಮ ಮತ್ತೆ ಕಟ್ಟಿಸಿದನೆಂದೂ ಈಗಿರುವ ದೇವಾಲಯವನ್ನು ಬಿದನೂರಿನ ನಾಯಕರು ಕಟ್ಟಿಸಿದರೆಂದೂ ತಿಳಿದು ಬಂದಿದೆ.

ಮಂಗಳೂರು ಕ್ರೈಸ್ತದೇವಾಲಯಗಳಿಗೂ ಒಂದೆರಡು ಮಹಮ್ಮದೀಯನ ದೇವಾಲಯಗಳಿಗೂ ಹೆಸರುವಾಸಿಯಾಗಿದೆ.

ಇಲ್ಲಿಯ ಚರ್ಚುಗಳಲ್ಲಿ ಬೋಳಾರದ ರೋಸರ ಚರ್ಚ್, ಬಲ್ಮಠದ ಶಾಂತಿ ಚರ್ಚ್, ಸೆಂಟ್ ಅಲೋಸಿಯಸ್ ಕಾಲೇಜಿನ ಚರ್ಚ್. ಶಾಂತಿ ಹಾಗೂ ವಿಶ್ರಾಂತಿ ಚರ್ಚುಗಳು ಖ್ಯಾತಿವೆತ್ತಿವೆ, ಶಾಂತಿ ಚರ್ಚ್ 1862ರ ಕಟ್ಟಲ್ಪಟ್ಟು ಇದು ಸ್ವಿಟ್ಜರ್‌ಲ್ಯಾಂಡಿನ ಬಾಸೆಲ್‌ನ ಮಿಡ್‌ಹೌಸ್ ಮಾದರಿಯಲ್ಲಿದೆ. ಸೆಂಟ್ ಅಲೋಷಿಯಸ್ ಕಾಲೇಜಿನ ಚರ್ಚ್ 1885ರಲ್ಲಿ ಕಟ್ಟಲ್ಪಟ್ಟು ಇದು ರೋಮನ್ ಸೆಂಟ್ ಫಿಲಿಪ್ ಮೇರಿ ಚರ್ಚಿನ ಮಾದರಿಯದಾಗಿದೆ. ಈ ಚರ್ಚಿನಲ್ಲಿ ಅಮೋಘ ವರ್ಣಚಿತ್ರಗಳಿವೆ.

ಮಂಗಳೂರಿನ ಬಂದರು ಪ್ರದೇಶಕ್ಕೆ ಹೊಂದಿಕೊಂಡ ಹಾಗಿರುವ ಜೀನತ್‌ಭಕ್ಷ್ ಜುಮ್ಮಾ ಮಸೀದಿಯನ್ನು ಈಚೆಗೆ ಹೊಸದಾಗಿ ಕಟ್ಟಲಾಗಿದ್ದು ಇದರ ಮರದ ಕಂಬಗಳು ಹಾಗೂ ಪ್ರಾರ್ಥನಾ ಜಗತಿಗಳು ಆಕರ್ಷಕ ಕೆತ್ತನೆಗಳಿಂದ ಕೂಡಿವೆ, ಈ ಮಸೀದಿಯನ್ನು ಬಹು ಹಿಂದೆ ಮಲ್ಲಿಕ್‌ದಿನಾರ್ ಎಂಬ ಸಂತನ ನಿರ್ದೇಶನದಲ್ಲಿ ಮಂಗಳೂರಿಗೆ ಬಂದಿದ್ದ ಅರಬ್ಬೀ ಜನರು ಕಟ್ಟಿಸಿದರೆನ್ನಲಾಗಿದೆ. ಟಿಪ್ಪುಸುಲ್ತಾನನು ಕಟ್ಟಿಸಿದ್ದೆನ್ನಲಾದ ಈದ್‌ಗಾ ಮಸೀದಿ ಲೈಟ್‌ಹೌಸ್ ಬೆಟ್ಟದಲ್ಲಿದೆ. 1794ರಲ್ಲಿ ಟಿಪ್ಪುಸುಲ್ತಾನ್ ಮಂಗಳೂರನ್ನು ವಶಪಡಿಸಿಕೊಂಡಿದ್ದ.

ಡೊಂಗರ ಕೇರಿಯಲ್ಲಿರುವ ಷಾ ಅಮೀರರ ಮಸೀದಿ ಹಾಗೂ ಸಮೀಪದ ಷಾ ಅಮೀರ ಎಂಬ ಸಂತನ ದರ್ಗಾ ನೋಡತಕ್ಕುದಾಗಿದೆ.

## ವಿಟ್ಲದ ಪಂಚಲಿಂಗೇಶ್ವರ ಗುಡಿ

ಬಂಟವಾಳ ತಾಲ್ಲೂಕಿನ ವಿಟ್ಲ ಗ್ರಾಮದಲ್ಲಿ ಪಂಚಲಿಂಗೇಶ್ವರ, ಸುಬ್ರಹ್ಮಣ್ಯ, ವಿಠೋಬ, ಅನಂತೇಶ್ವರ ದೇವಾಲಯಗಳಿವೆ.

ವಿಟ್ಲ ಹಿಂದೆ ಇಷ್ಟಿಕಾ ಪುರ ಎಂಬ ಹೆಸರನ್ನು ಹೊಂದಿದ್ದು ಅರಸು ಮನೆತನವೊಂದು ಆಳುತ್ತಿತ್ತು. ಈ ಮನೆತನದ ಉಲ್ಲೇಖ ಪಂಚಲಿಂಗೇಶ್ವರ ದೇವಸ್ಥಾನದ ಶಾಸನವೊಂದರಲ್ಲಿದೆ. ವಿಟ್ಲದ ಮುಖ್ಯ ಆಕರ್ಷಣೆಯೇ ಈ ದೇವಾಲಯ. ಅರಸು ಮನೆತನಕ್ಕೆ ಹೆಗಡೆಗಳೆಂದೂ ಕರೆಯಲಾಗುತ್ತಿದ್ದ ಪಂಚಲಿಂಗೇಶ್ವರ ಗುಡಿಗೆ ಮುಂಡಿಸಿದ್ದ ಶೇಖ ಎಂಬ ಹೆಗಡೆ ಹೊನ್ನ ಕಳಸವನ್ನು ಮಾಡಿಸಿಕೊಟ್ಟುದರ ಉಲ್ಲೇಖವಿದೆ.

ಈ ದೇವಸ್ಥಾನ ಗಜ ಪೃಷ್ಠಾಕಾರದಲ್ಲಿದ್ದು ಗರ್ಭಗೃಹ, ಮಧ್ಯ ಮಂಟಪ ಮತ್ತು ಮುಖಮಂಟಪಗಳನ್ನೊಳಗೊಂಡಿದೆ. ಮೂರು ಹಂತಗಳ ಇಳಿ ಜಾರು ಚಾವಣಿಯನ್ನು ಹೊಂದಿರುವ ಈ ದೇವಾಲಯ ಸುಮಾರು ಎಂಟನೆಯ ಶತಮಾನದ್ದಿರಬಹುದು.

ಬಂಟವಾಳ ತಾಲ್ಲೂಕಿನ ಬಂಟವಾಳದ ದಕ್ಷಿಣಕ್ಕೆ ಆರು ಕಿ.ಮೀ. ದೂರ ಪಾಣೆ ಮಂಗಳೂರು ಇವೆ. ಇಲ್ಲಿನ ವೆಂಕಟರಮಣ ದೇವಾಲಯ ನೋಡತಕ್ಕುದಾಗಿದೆ. ವರ್ಷಕ್ಕೊಮ್ಮೆ ಇಲ್ಲಿ ಲಕ್ಷದೀಪೋತ್ಸವ ಜರುಗುತ್ತದೆ.

ಬಂಟವಾಳದಲ್ಲಿ ವೆಂಕಟರಮಣ, ಸೀತಾರಾಮ ಮತ್ತು ಮಹಾಲಿಂಗೇಶ್ವರ ಗುಡಿಗಳಿವೆ. ಈ ಊರಿಗೆ ಸಮೀಪದಲ್ಲಿರುವ ನರಹರಿ ಪರ್ವತ ಆಕರ್ಷಣೆ ವುಂಟುಮಾಡಿದ್ದು ಬೆಟ್ಟದ ಮೇಲೂ ಒಂದು ದೇವಾಲಯವಿದೆ.

ಬಂಟವಾಳದ ಶ್ರೀ ವೆಂಕಟರಮಣ ದೇವಸ್ಥಾನ ಪ್ರಮುಖ ದೇವಸ್ಥಾನ. ಶ್ರೀ ಮಹಾಲಿಂಗೇಶ್ವರ, ಸೀತಾರಾಮ, ಮಹಾಮಾಯಿ ದೇವಾಲಯಗಳು ಪೇಟೆಯಲ್ಲಿವೆ.

ಬಿ.ಸಿ. ರೋಡ್ ಬಂಟ್ವಾಳ ತಾಲ್ಲೂಕಿನ ಮುಖ್ಯ ಪಟ್ಟಣ. ಇಲ್ಲಿ ರಕ್ತ ಕೇಶ್ವರಿ ಗುಡಿ, ಶ್ರೀ ಚಂಡಿಕೇಶ್ವರ ಗುಡಿ ಪುನರ್ನಿವರ್ಮಾಣವಾಗುತ್ತಿದೆ. ಅಮ್ಮುಂಬಳದಲ್ಲಿ ಸೋಮನಾಥ ದೇವಾಲಯುವಿದೆ. ಈ ತಾಲ್ಲೂಕಿನ ಅಜಿಲ ಮೊಗರುವಿನ ಮಸೀದಿ ಹೆಸರಾಗಿದೆ. ಬಿ. ಸಿ. ರೋಡ್‌ಗೆ 16 ಕಿ.ಮೀ. ದೂರದ ವಗ್ಗ ಗ್ರಾಮದಲ್ಲಿ ಕಾರಂಜೇಶ್ವರ ದೇವಾಲಯುವಿದೆ. ಕಾರಿಂಜೆಯು ರಥೋತ್ಸವದಲ್ಲಿ ದೇವರನ್ನು ಹೊತ್ತು ಬರುವ ದೃಶ್ಯ, ಈಶ್ವರ ಪಾರ್ವತಿ ಯುರ ಸಂಗಮ ಇವು ಅದ್ಭುತವಾದುದು.

ಕಲ್ಲಡ್ಕದ ನಿಟಲೇಶ್ವರ ದೇವಸ್ಥಾನದಲ್ಲಿ ಉದ್ಭವ ಲಿಂಗವಿದೆ.

## ಬೆಳ್ಳೆ

ಉಡುಪಿ ತಾಲ್ಲೂಕಿನ ಒಂದು ಗ್ರಾಮ. ಉಡುಪಿಗೆ ಹತ್ತು ಕಿ.ಮೀ. ದೂರದಲ್ಲಿದೆ. ಈ ಗ್ರಾಮಕ್ಕೆ ಪಾಜಕ ಕ್ಷೇತ್ರ ಎಂದೂ ಹೆಸರಿದೆ. ಭೂತಾ ರಾಧನೆ. ನಾಗ ಪೂಜೆ, ಶೈವನಾಥ, ಜೈನ ಹಾಗೂ ಭಾಗವತ ಸಂಪ್ರದಾಯ ಗಳು ಬೇರೂರಿದ್ದ ಇಲ್ಲಿ ಮಧ್ವಾಚಾರ್ಯರು ಜನಿಸಿದರು. ಇಲ್ಲಿ ಆಚಾರ್ಯ ವಿಗ್ರಹವೊಂದನ್ನು ಸ್ಥಾಪಿಸಲಾಗಿದೆ. ಮಧ್ವಾಚಾರ್ಯರು ಜನಿಸಿದರೆನ್ನುವ ಒಂದು ದೊಡ್ಡ ಮನೆಯು ಹಿಂಭಾಗದಲ್ಲಿ ಒಂದು ದೊಡ್ಡ ಕೆರೆಯಿದ್ದು ಅದನ್ನು ಹೊಂದಿಕೊಂಡಂತೆ ಮಹಾದೇವ ದೇವಸ್ಥಾನವಿದೆ. ಅದರ ಮುಂದೆಯೇ ಸೂರ್ಯನ ಮೂರ್ತಿ ಇರುವ ದೇವಸ್ಥಾನ ಮತ್ತು ಶಿವನ ದೇವಾಲಯದ ಸುತ್ತಮುತ್ತ ಭೂತ ನೆಲೆಗಳಿವೆ.

ಬೆಳ್ಳೆಯು ಬಳಿ ಇರುವ ಕುಂಜಾರು ಗಿರಿಯು ಮೇಲೆ ಬಾಣ ತೀರ್ಥ, ಗದಾ ತೀರ್ಥ, ಪರಶು ತೀರ್ಥ ಹಾಗೂ ಧನುಸ್ ತೀರ್ಥ ಎಂಬ ತೀರ್ಥಗಳಿದ್ದು ಇವು ಯಾತ್ರಿಕರಿಗೆ ಪವಿತ್ರ ಎನಿಸಿವೆ.

## ಪುತ್ತೂರು

ಮಂಗಳೂರಿಗೆ 52 ಕಿ.ಮೀ. ದೂರದಲ್ಲಿದೆ. ಇಲ್ಲಿರುವ ಮಹಲಿಂಗೇ

ಶ್ವರ ದೇವಾಲಯ ತುಂಬಾ ಪ್ರಾಚೀನವಾದುದು. ಇದಲ್ಲದೆ ವೆಂಕಟರಮಣ, ಮಹಾಮಾಯಾ ರಾಧಾಕೃಷ್ಣ ಮತ್ತು ಭವಾನಿಶಂಕರ ದೇವಾಲಯಗಳೂ ಇವೆ.

ಪುತ್ತೂರು ತಾಲ್ಲೂಕಿನ ಕಡಬ ಗ್ರಾಮದಲ್ಲಿ ಗಣೇಶ ಮತ್ತು ನೀಲಕಂಠ ದೇವಾಲಯಗಳಿವೆ. ಪುತ್ತೂರಿಗೆ 13 ಕಿ.ಮೀ. ಈಶಾನ್ಯದಲ್ಲಿರುವ ಸವಣೂರು ಎಂಬಲ್ಲಿ ಪುಡೊತ್ತು ಚಂದ್ರನಾಥ ಬಸದಿ ಇದೆ.

ಇದೇ ತಾಲ್ಲೂಕಿನ ಉಪ್ಪಿನಂಗಡಿ ನೇತ್ರಾವತಿ ನದಿ ದಡದ ಮೇಲಿದೆ. ಈ ಊರಿನ ಬಳಿ ನೇತ್ರಾವತಿಯನ್ನು ಕುಮಾರ ಧಾರ ನದಿ ಸೇರಿಕೊಳ್ಳುತ್ತದೆ. ಸಂಗಮದ ಹತ್ತಿರ ಲಕ್ಷ್ಮೀನಾರಾಯಣ ಗುಡಿ ಇದೆ. ಇದೊಂದು ಪುರಾತನ ದೇವಾಲಯ. ರಾಘವೇಂದ್ರ ಮಠ ಸಹ ಇದೆ. ಬಸ್ ನಿಲ್ದಾಣದ ಬಳಿ ಶಾಂತಿ ನಾಥ ಸ್ವಾಮಿ ಬಸದಿ ಸಹ ಇದೆ.

## ಉದ್ಯಾವರ

ಉಡುಪಿಗೆ ಐದು ಕಿ.ಮೀ. ದೂರದಲ್ಲಿರುವ ಊರು. ಉದ್ಯಾವರ ನದಿ ದಡದ ಮೇಲೆ ಈ ಊರು ಹಿಂದೆ ಆಳುಪರ ರಾಜಧಾನಿಯಾಗಿತ್ತು.

ದಕ್ಷಿಣ ಕನ್ನಡದ ಅತ್ಯಂತ ಪ್ರಾಚೀನ ದೇವಾಲಯಗಳಲ್ಲಿ ಒಂದಾದ ಚಂಬು ಕಲ್ಲು ಶಿವಾಲಯ ಇಲ್ಲಿದೆ. ಆಳುಪ ಕಾಲದ ಸಪ್ತಮಾತೃಕೆಯರ ಮೃಣ್ಮಯ ಮೂರ್ತಿಗಳಿರುವ ಶಕ್ತ್ಯಾಲಯ ಗಮನ ಸೆಳೆಯುತ್ತವೆ. ಬೊಮ್ಮೇಶ್ವರ ಎಂಬಲ್ಲಿ ಈಶ್ವರ ಮತ್ತು ವಿಷ್ಣು ಗುಡಿಗಳಿವೆ. ಬೋಳಾರಿನಲ್ಲಿ ಎರಡು ಬಾಹು ಗಣಪತಿಯ ಗುಡಿ ಇದೆ. ಶಿಥಿಲವಾದ ಮಹಿಷ ಮರ್ದಿನಿ ಮತ್ತು ಶಿವಾಲಯಗಳೂ ಇವೆ.

## ಭದ್ರಗಿರಿ

ಕರ್ನಾಟಕವೇ ಅಲ್ಲದೆ ವಿದೇಶಗಳಲ್ಲೂ ಖ್ಯಾತಿ ಹೊಂದಿರುವ ಸಂತಕೇಶವ ದಾಸರು ಈ ಊರಿನವರು. ಉಡುಪಿ ತಾಲ್ಲೂಕಿನಲ್ಲಿದೆ. ಎಣ್ಣೆ ಹೊಳೆ

ಮತ್ತು ಸ್ವರ್ಣ ನದಿ ಸಂಗಮದಲ್ಲಿರುವ ಈ ಊರಿನಲ್ಲಿ ವಿಠಲ ದೇವಾಲಯ ಇದೆ.

## ಉಡುಪಿ ತಾಲ್ಲೂಕಿನ ದೇವಾಲಯಗಳು

ಉಡುಪಿ ತಾಲ್ಲೂಕಿನ ಕಟಪಾಡಿಯಲ್ಲಿ ಹಲವು ಪ್ರಾಚೀನ ದೇವಾಲಯಗಳಿವೆ. ಕೋಟದಲ್ಲಿ ನರಸಿಂಹ, ಮಹದೇವ ಹಾಗೂ ಅಮೃತೇಶ್ವರಿ ದೇವಾಲಯಗಳಿವೆ. ಹೆದ್ದಾರಿಯಲ್ಲಿ ಕಂಡು ಬರುವ ಊರುಗಳಾದ ನಂದಿಕೂರಿನಲ್ಲಿ ಅಮೃತೇಶ್ವರಿ ದೇವಾಲಯ, ಸಾಲಿಗ್ರಾಮದ ಯೋಗಿ ನರಸಿಂಹ ದೇವಾಲಯ ಹೆಸರಿಸಬಹುದಾಗಿದೆ. ಬಂಟ ಕಲ್ಲಿನ ದುರ್ಗಾ ಪರಮೇಶ್ವರಿ, ನಾಯಂಪಳ್ಳಿಯ ಗೋಪಾಲ ಕೃಷ್ಣ, ನೀಲಾವರದ ದುರ್ಗಾ ಭಗವತಿ, ಸುರುಳು ಎಂಬಲ್ಲಿನ ಕಪ್ಪು ಶಿಲೆಯ ಮಹಾದೇವ ಗುಡಿ, ಅಲೆವೂರಿನ ದುರ್ಗಾ ಮತ್ತು ಜನಾರ್ಧನ ದೇವಾಲಯಗಳು, ಎರ್ಮಾಳಿನ ಚಂದ್ರನಾಥ ಬಸದಿ, ಹಾಗೂ ಮಧ್ವಾಚಾರ್ಯರು ಸ್ಥಾಪಿಸಿದ್ದೆನ್ನಲಾದ ಜನಾರ್ಧನ ಗುಡಿ, ನಿಡಬೂರಿನ ಆಂಜನೇಯನ ದೇವಾಲಯ ಇವು ತಾಲ್ಲೂಕಿನ ಇತರ ದೇವಾಲಯಗಳು.

ಕಲ್ಯಾಣಪುರ ಉಡುಪಿ ತಾಲ್ಲೂಕಿನಲ್ಲಿ ಉಡುಪಿಯಿಂದ ಆರು ಕಿ.ಮಿ. ದೂರದಲ್ಲಿದೆ. ಸ್ವರ್ಣ ನದಿ ದಡದ ಮೇಲಿದೆ. ವಿಜಯನಗರದ ಅರಸರ ಕಾಲದ್ದೆನ್ನಲಾದ ವೀರಭದ್ರ, ಕೆಂಚಮ್ಮ, ಮಹಾಲಿಂಗೇಶ್ವರ, ಗಣಪತಿ, ವೆಂಕಟರಮಣ ದೇವಾಲಯಗಳು ಇಲ್ಲಿವೆ, ಮಿಲಾಗ್ರಿಸ್ ಕ್ರೈಸ್ತ ದೇವಾಲಯ ಹದಿನೇಳನೆಯ ಶತಮಾನದ್ದೆನ್ನಲಾಗಿದೆ.

ಉಡುಪಿ ತಾಲ್ಲೂಕಿನ ತೋನ್ಸೆ ಗ್ರಾಮದಲ್ಲಿ ವಿಜಯನಗರದರಸರ ಕಾಲದ ದುರ್ಗಾ ಮತ್ತು ಗಣಪತಿ ದೇವಾಲಯಗಳೂ ಖಂಡಿಗೆ ವಿನಾಯಕ, ಪಟ್ಟಾಭಿ ರಾಮಚಂದ್ರ, ಪಡು ಕುದುರು ಗಣಪತಿ, ಜನಾರ್ಧನ, ಲಕ್ಷ್ಮೀ ನಾರಾಯಣ ದೇವಾಲಯಗಳು ಇದೆ.

## ಪೆರುಡೂರು

ಉಡುಪಿಯ ಈಶಾನ್ಯಕ್ಕೆ 19 ಕಿ.ಮಿ. ದೂರದಲ್ಲಿದೆ. ಇಲ್ಲಿನ ಅನಂತ ಪದ್ಮನಾಭ ದೇವಾಲಯ ಸುಮಾರು ಆರು ನೂರು ವರ್ಷಗಳಿಗೂ ಹಿಂದಿನದಾಗಿದೆ. ಈ ದೇವಸ್ಥಾನದ ಗರ್ಭಗೃಹ ಮತ್ತು ತೀರ್ಥ ಮಂಟಪ ವಿಜಯನಗರ ವಾಸ್ತು ಶೈಲಿಯನ್ನು ಹೋಲುತ್ತದೆ. ದೇವಸ್ಥಾನದ ಎಂಟು ಮೂಲೆಗಳಲ್ಲೂ ಬೇರೆ ಬೇರೆ ದೇವರ ಗುಡಿಗಳೂ ಎಂಟು ಮಠಗಳೂ ಇರುವುದು ಒಂದು ವೈಶಿಷ್ಟ್ಯ. ಪ್ರತಿ ವರ್ಷ ಸಿಂಹ ಮಾಸದ ಸಂಕ್ರಮಣದಂದು ಇಲ್ಲಿ ಸಾವಿರಾರು ಜನ ಸೇರುತ್ತಾರೆ. ಈ ಜಾತ್ರೆ ಹೆಸರು ವಾಸಿಯಾದುದು. ಇಲ್ಲಿನ ದೇವಾಲಯ ತುಂಬಾ ಮಹತ್ವದ್ದೆನ್ನಲಾಗಿದೆ.

## ಬ್ರಹ್ಮಾವರ

ಉಡುಪಿಯಿಂದ ಹದಿಮೂರು ಕಿ.ಮಿ. ದೂರದಲ್ಲಿದೆ. ಇಲ್ಲಿ ಮಹಾಲಿಂಗೇಶ್ವರ, ಜನಾರ್ಧನ ಹಾಗೂ ಗೋಪೀನಾಥ ದೇವಾಲಯಗಳಿವೆ. ಒಂಬತ್ತನೆಯ ಶತಮಾನದ್ದಿರಬಹುದಾದ ಮಹಾಲಿಂಗೇಶ್ವರ ದೇವಾಲಯದ ನವರಂಗದಲ್ಲಿ ಚತುರ್ಭುಜಗಳುಳ್ಳ ಕೈಗಳಲ್ಲಿ ಅಂಕುಶ ಪಾಶ ಪದ್ಮಗಳನ್ನು ಹಿಡಿದಿರುವ ಗಜಗೌರಿಯ ವಿಗ್ರಹ ತುಂಬಾ ಆಕರ್ಷಕವಾಗಿದೆ. ಬ್ರಹ್ಮಾವರದ ಸಮೀಪದಲ್ಲಿ ಕಾಮೇಶ್ವರ ಹಾಗೂ ಕಡಿಲೇಶ್ವರ ದೇವಾಲಯಗಳಿವೆ.

## ಬಾರಕೂರು

ಉಡುಪಿಗೆ 16 ಕಿ.ಮಿ. ಉತ್ತರಕ್ಕಿದೆ. ಹಿಂದೆ ಆಳುವರು ಇಲ್ಲಿ ಆಳಿದರು. ಇದು ಕೆಲಕಾಲ ಅವರ ರಾಜಧಾನಿಯೂ ಆಗಿತ್ತು. ಇಲ್ಲಿರುವ ಪಂಚಲಿಂಗೇಶ್ವರ ಗುಡಿ ಎಂದೂ ಕರೆಯುತ್ತಾರೆ. ಐತಿಹಾಸಿಕ ಮಹತ್ವವುಳ್ಳ ಈ ದೇವಾಲಯ ಚಾಳುಕ್ಯ, ಹೊಯ್ಸಳ ಹಾಗೂ ವಿಜಯನಗರ ಕಾಲದಲ್ಲಿ ಬೆಳವಣಿಗೆ ಹೊಂದಿ ಆಯಾಕಾಲದ ವಾಸ್ತು ಶೈಲಿಯನ್ನು ನಿರೂಪಿ

ಸುತ್ತದೆ. ಸೋಮನಾಥ ಅಥವಾ ಮೂಡುಕೇರಿ ಸೋಮನಾಥೇಶ್ವರ ದೇವಾಲಯ ಹೊಯ್ಸಳರ ಕಾಲಕ್ಕೂ ಹಿಂದಿನದಾಗಿದೆ. ಇದೇ ಅಲ್ಲದೆ ಬಾರಕೂರಿನಲ್ಲಿ ವೇಣುಗೋಪಾಲ, ಗಣಪತಿ, ಬಟ್ಟಕೇರಿ ವಿನಾಯಕ, ಮಣಿಗಾರ ಕೇಸಿಸಿದ್ದೇಶ್ವರ, ನಾಗರ ಮಠದ ಕೇಶವ, ಜೆಳಕೇರಿ ಗಣಪತಿ, ಪಾಠಶಾಲಕೇರಿ ವೀರಭದ್ರ ಮೊದಲಾದ ದೇವಾಲಯಗಳಿವೆ. ಪಂಚಲಿಂಗೇಶ್ವರ ದೇವಾಲಯದಲ್ಲಿರುವ ಸ್ಕಂದ ವಿಗ್ರಹ ಅಪೂರ್ವವಾಗಿದೆ.

## ಮಂದರ್ತಿ

ಉಡುಪಿಗೆ ಉತ್ತರದಲ್ಲಿ 25 ಕಿ.ಮೀ. ದೂರದಲ್ಲಿದೆ. ಇಲ್ಲಿ ದುರ್ಗಾ ಪರಮೇಶ್ವರಿ ದೇವಾಲಯವಿದೆ. ಇದೊಂದು ಶಕ್ತಿ ಪೂಜಾ ಸ್ಥಳ. ದೇವಾಲಯದಲ್ಲಿ ಮಹಿಷಾಸುರ ಮರ್ದಿನಿ, ಚಾಮುಂಡೇಶ್ವರಿ ವಿಗ್ರಹಗಳಿವೆ.

## ಮುಂಡಕೂರ

ಕಾರ್ಕಳ ತಾಲ್ಲೂಕಿನಲ್ಲಿರುವ ಈ ಗ್ರಾಮದಲ್ಲಿ ಶಾಂಭವಿ ನದಿ ಹರಿಯುತ್ತದೆ. ಇಲ್ಲಿರುವ ಮಹಿಷಾಸುರ ಮರ್ದಿನಿ ದೇವಾಲಯ ಅತ್ಯಂತ ಪ್ರಾಚೀನವಿದ್ದು ಗರ್ಭಗುಡಿ, ತೀರ್ಥ ಮಂಟಪಗಳಿಂದ ಕೂಡಿದೆ. ಸುತ್ತಲೂ ಪಾಳಿ ಇದೆ. ಮಹಿಷಮರ್ದಿನಿ ಕೈಯಲ್ಲಿ ಶಂಖು ಚಕ್ರಗಳು ತ್ರಿಶೂಲ ಇವೆ. ವಿಗ್ರಹದ ಎತ್ತರ ಮೂರಡಿ ಇದೆ.

## ಬೈಂದೂರು

ಕುಂದಾಪುರ ತಾಲ್ಲೂಕಿನ ಈ ಊರು ಇತಿಹಾಸ ಪ್ರಸಿದ್ಧ, ಆಳುವ ರಾಜರ ಕಾಲದಲ್ಲಿ ಒಂದು ಮುಖ್ಯ ನಗರವಾಗಿತ್ತು. ಇಂದು ಇದೊಂದು

ಬಂದರೂ ಕೂಡ. ಇಲ್ಲಿ ಸುಮಾರು 9 ಮತ್ತು 10ನೆಯ ಶತಮಾನದಲ್ಲಿ ಸೇನ ವಾರ ಎಂಬ ಅರಸರು ಆಳುತ್ತಿದ್ದರು.

ಬೈಂದೂರಿನ ಸೇನೇಶ್ವರ ದೇವಾಲಯ ಖ್ಯಾತಿವೆತ್ತುದಾಗಿದೆ. ಇದು ಕಲ್ಯಾಣದ ಚಾಳುಕ್ಯದ ಶೈಲಿಯನ್ನು ನಿರೂಪಿಸುವ ಶಿಲ್ಪವಿದೆ. ಇಲ್ಲಿರುವ ವಿಗ್ರಹಗಳು ಆಳೆತ್ತರದವು. ದ್ವಿಕೂಟ ರಚನೆಯ ಈ ದೇವಾಲಯದಲ್ಲಿ ಸುಮಾರು ಇಪ್ಪತ್ತಕ್ಕೂ ಹೆಚ್ಚು ಭವ್ಯ ವಿಗ್ರಹಗಳಿವೆ. ಆದಿನಾಥೇಶ್ವರ ಮತ್ತು ವೆಂಕಟೇಶ್ವರ ದೇವಾಲಯಗಳೂ ಕೋಟೇಶ್ವರ ಮತ್ತು ಮಹಾಲಿಂಗೇಶ್ವರದೇವಾಲಯಗಳೂ ಇವೆ.

## ಪೊಳಲಿಯ ರಾಜರಾಜೇಶ್ವರಿ ದೇವಾಲಯ

ಬಂಟವಾಳ ತಾಲ್ಲೂಕಿನ ಒಂದು ಗ್ರಾಮ ಪೊಳಲಿ. ಇಲ್ಲಿರುವ ಶ್ರೀ ರಾಜರಾಜೇಶ್ವರಿ ದೇವಾಲಯ ದಕ್ಷಿಣ ಕನ್ನಡದ ಪ್ರಾಚೀನ ದೇವಾಲಯಗಳಲ್ಲೊಂದು, ಇಲ್ಲಿನ ರಾಜರಾಜೇಶ್ವರಿ, ಭದ್ರಕಾಳಿ, ಸುಬ್ರಹ್ಮಣ್ಯ ಮೊದಲಾದ ಮೂರ್ತಿಗಳು ಸುದ್ದೆಯಿಂದ ಮಾಡಲ್ಪಟ್ಟವುಗಳಾಗಿವೆ. ಈ ದೇವಾಲಯ ಕ್ರಿ.ಶ. ಎಂಟನೆಯ ಶತಮಾನದಲ್ಲಿ ಕಟ್ಟಿದ್ದಿರಬಹುದೆಂದು ತಿಳಿಯಲಾಗಿದೆ. ದೇವಿಯ ಮೂರ್ತಿ ಸುಮಾರು ಹತ್ತು ಅಡಿಗಳಷ್ಟು ಎತ್ತರವಿದೆ ದೇವಾಲಯದ ಮುಖ ಮಂಟಪ, ಗರ್ಭಗುಡಿಯ ಛಾವಣಿ, ಧ್ವಜಸ್ತಂಭ ಹಾಗೂ ದೀಪ ಸ್ತಂಭಗಳನ್ನು ತಾಮ್ರದ ತಗಡಿನಿಂದ ಹೊದಿಸಲಾಗಿದೆ.

ಪ್ರತಿ ವರ್ಷ ಏಪ್ರಿಲ್ ತಿಂಗಳಲ್ಲಿ ಇಲ್ಲಿ ನಡೆಯುವ 'ಪೊಳಲಿಯ ಚೆಂಡು' ಎಂಬ ಉತ್ಸವ ಸಹಸ್ರಾವಧಿ ಸಂಖ್ಯೆಯಲ್ಲಿ ಭಕ್ತರನ್ನು ಆಕರ್ಷಿಸುತ್ತದೆ. ಒಂದು ತಿಂಗಳ ಕಾಲ ಈ ಉತ್ಸವ ನಡೆಯುತ್ತದೆ. ಉತ್ಸವದ ಕೊನೆಯಲ್ಲಿ ದೇವಾಲಯದ ಎದುರಿನ ಬಯಲಿನಲ್ಲಿ ಹುಲ್ಲು ಚಕ್ಕೆಗಳಿಂದ ಮಾಡಿದ ಚೆಂಡನ್ನು ಕಟ್ಟಿ ಆಡುವುದರಿಂದ ಉತ್ಸವಕ್ಕೆ ಪೊಳಲಿಯ ಚೆಂಡು ಎಂಬ ಹೆಸರಿದೆ. ದೇವಿ ದುಷ್ಟ ರಾಕ್ಷಸನೊಬ್ಬನನ್ನು ವಧಿಸಿದ ಕುರುಹಾಗಿಯೂ ಚೆಂಡು ರಾಕ್ಷಸನ ಕುಂಡದ ಸಂಕೇತವೆಂದೂ ಭಾವಿಸಿ ಈ ಉತ್ಸವವನ್ನಾಚರಿಸಲಾಗುತ್ತದೆ.

## ಮರವಂತೆ

ಕುಂದಾಪುರ ತಾಲ್ಲೂಕಿನಲ್ಲಿರುವ ಒಂದು ಗ್ರಾಮ, ಈ ಊರಿನಲ್ಲಿ ಸೌಪರ್ಣಿಕಾ ನದಿ ದಕ್ಷಿಣಾಭಿಮುಖವಾಗಿ ಹರಿದು ಪಂಚಗಂಗಾವಳಿಯೊಂದಿಗೆ ಸಮುದ್ರದಲ್ಲಿ ಸೇರುವ ದೃಶ್ಯನಯನ ಮನೋಹರ, ಕಡಲತೀರದ ನೋಟ ರಮ್ಯ. ನದೀದಡದಲ್ಲಿ ವರಾಹಸ್ವಾಮಿ ದೇವಾಲಯವಿವೆ. ಇದರಲ್ಲಿ ವರಾಹ ಹಾಗೂ ನರಸಿಂಹ ಮತ್ತು ಜನಾರ್ಧನ ವಿಗ್ರಹಗಳಿವೆ. ಬ್ರಹ್ಮ ಲಿಂಗೇಶ್ವರ ದೇವಾಲಯ ಈ ಊರಿನ ಇನ್ನೊಂದು ದೇವಾಲಯ.

## ಮೆಕ್ಕೆಕಟ್ಟೆ

ಉಡುಪಿ ತಾಲ್ಲೂಕಿನಲ್ಲಿ ಉಡುಪಿಯಿಂದ 30 ಕಿ. ಮೀ ದೂರದಲ್ಲಿದೆ. ಪುರಾತನ ಕಾಷ್ಠಶಿಲ್ಪಗಳ ಸಂಗ್ರಹದಿಂದಾಗಿ ಈ ಊರು ಪ್ರಸಿದ್ಧವಾಗಿದೆ. ನಂದಿಕೇಶ್ವರ ಇಲ್ಲಿಯ ಪ್ರಧಾನ ದೇವರು. ಉಳಿದವು ಶಿವಗಣಗಳು. ಸುಮಾರು ಎರಡು ಅಡಿಯಿಂದ ಇಪ್ಪತ್ತು ಅಡಿಗಳಷ್ಟು ಎತ್ತರದ ವಿವಿಧ ವರ್ಣಗಳ ತುಳುನಾಡಿನ ದೈವಗಳ ಒಟ್ಟು 170 ಮರದ ಮೂರ್ತಿಗಳನ್ನು ಇಲ್ಲಿ ಕಂಡು ವಿಸ್ಮಯರಾಗುತ್ತೇವೆ. ಈ ಶಿಲ್ಪಗಳು ನೆಟ್ಟಗೆ ನಿಂತಿರುತ್ತವೆ ಯಲ್ಲದೆ ನೋಡುವವರಲ್ಲಿ ಭಯ ಭಕ್ತಿಗಳನ್ನು ಮೂಡಿಸುತ್ತವೆ.

## ಹಟ್ಟಿಯಂಗಡಿ

ಕುಂದಾಪುರಕ್ಕೆ ಏಳೆಂಟು ಕಿ. ಮೀ ದೂರದಲ್ಲಿ ವರಾಹಿ ನದಿ ದಡದ ಮೇಲಿರುವ ಹಳ್ಳಿ ಕ್ರಿ. ಶ. 900 ರಲ್ಲಿ ಲೋಕಾದಿತ್ಯ ರಾಯನೆಂಬುವನು ಪ್ರತಿಷ್ಠಾಪಿಸಿದ್ದೆಂದು ಹೇಳಲಾಗುವ ಲೋಕನಾಥ ವಿಗ್ರಹವಿರುವ ಲೋಕ ನಾಥೇಶ್ವತ ಗುಡಿ ಇದೆ, ಇದೇ ಅಲ್ಲದೆ ಶಿವಲಿಂಗ, ಗಣಪತಿ, ದುರ್ಗಾ ಪರಮೇಶ್ವರಿ, ದಧಿವಾಮನ, ವೇಣುಗೋಪಾಲ ಗುಡಿಗಳಿವೆ.

ಹಟ್ಟಿಯಂಗಡಿ ಪ್ರಾಚೀನ ಧರ್ಮಕೇಂದ್ರಗಳಲ್ಲಿ ಒಂದಾಗಿದ್ದು ಇಲ್ಲಿ ಕ್ಷೇತ್ರಪಾಲ ಬಸದಿ ಇದೆ. ಪಾರ್ಶ್ವನಾಥ ಮೂರ್ತಿ ಹಾಗೂ ಚಂದ್ರನಾಥ ಸ್ವಾಮಿ ಮೂರ್ತಿಗಳನ್ನು ಕಾಣಬಹುದು.

## ಹೊಸಂಗಡಿ

ಕುಂದಾಪುರ ತಾಲ್ಲೂಕಿನ ಒಂದು ಹಳ್ಳಿ. ವರಾಹಿ ಜಲವಿದ್ಯುತ್ ಯೋಜನೆಯಿಂದಾಗಿ ಅಭಿವೃದ್ಧಿಯಾಗಿದೆ. ಹಿಂದೆ ಇದು ಹೊನ್ನೆಯ ಕಂಬಳಿ ಎಂಬ ಜೈನ ವಂಶದ ಪಾಳೇಗಾರರ ರಾಜಧಾನಿಯಾಗಿತ್ತು. ಇಲ್ಲಿ ವಿರೂಪಾಕ್ಷ ಶಾಂತೇಶ್ವರ, ವೆಂಕಟರಮಣ, ಮಾರುತಿ, ಗಣಪತಿ ಮತ್ತು ವಿಠಲಗುಡಿಗಳಿವೆ. ಕುಂದಾಪುರದಲ್ಲಿರುವ ವೆಂಕಟರಮಣ ದೇವಾಲಯವೂ ಗಮನಾರ್ಹ.

## ಹೆಜಮಾ

ಉಡುಪಿ ತಾಲ್ಲೂಕಿನಲ್ಲಿದೆ. ಶಾಂಭವಿ ಹೊಳೆ ಹರಿಯುತ್ತದೆ. ಇಲ್ಲಿ ಶ್ರೀ ಲಕ್ಷ್ಮೀಜನಾರ್ಧನ, ಶಂಭುನಾಥ ಮತ್ತು ಈಚಿನ ಮಹಾಲಿಂಗೇಶ್ವರ ದೇವಾಲಯಗಳಿವೆ.

## ಕುಂದಾಪುರ

ಶ್ರೀ ಕುಂದೇಶ್ವರ ದೇವಾಲಯದಿಂದ ಈ ಊರು ಪ್ರಸಿದ್ಧವಾಗಿದೆ. ಇಲ್ಲಿ ಈ ಪ್ರಾಚೀನ ದೇವಾಲಯವೇ ಅಲ್ಲದೆ ವೆಂಕಟರಮಣ ಗುಡಿ ಮುನ್ನೂರು ವರ್ಷಗಳಷ್ಟು ಹಳೆಯದು, ಇಲ್ಲಿನ ಮೂಲ ಮೂರ್ತಿ ಗರುಡ, ಹನುಮಂತ, ಗಣಪತಿ ವಿಗ್ರಹಗಳು, ಚಿಕ್ಕದಿದ್ದು ನೋಡಲು ಆಕರ್ಷಕವಿದೆ. ಕುಕದೇಶ್ವರ ನಗರದ ಪ್ರಧಾನ ದೇವಸ್ಥಾನ, ಇದೀಗ ದೇವಸ್ಥಾನ ಹೊಸ ರೂಪ ತಾಳಿದೆ. ದತ್ತಾತ್ರೇಯ ಸಾರಸ್ವತರದಾದರೆ ಲಕ್ಷ್ಮೀನಾರಾಯಣ ದೈವಜ್ಞ ಬ್ರಾಹ್ಮಣರದಾಗಿದೆ.

## ಕುಂಭಾಸಿ

ಕುಂದಾಪುರ ತಾಲ್ಲೂಕಿನ ಕುಂಭಾಸಿ ಅಥವಾ ಕುಂಭಕಾಶಿ ತುಳುನಾಡಿನ ಸಪ್ತಕ್ಷೇತ್ರಗಳಲ್ಲೊಂದಾಗಿದೆ. ಕುಂದಾಪುರದ ದಕ್ಷಿಣಕ್ಕೆ ಐದು ಕಿ. ಮೀ. ದೂರದಲ್ಲಿದೆ. ಈ ಊರಿಗೆ ಅತಿಸಮೀಪದ ಆನೆಗುಡ್ಡೆಯಲ್ಲಿ ಹಿಂದೆ ಗೌತಮ ನೆಂಬ ಋಷಿಗೆ ಕಾಟಕೊಡುತ್ತಿದ್ದ ಕುಂಭನೆಂಬ ರಾಕ್ಷಸನನ್ನು ಭೀಮನು ಕೊಂದ ನೆಂದೂ ಅವನಿಗೆ ಕೊಲ್ಲಲು ಸಹಾಯವಾಗುವಂತೆ ಗಣಪತಿಯು ಖಡ್ಗವನ್ನು ದಯಪಾಲಿಸಿದನೆಂದೂ ಹೇಳುತ್ತಾರೆ. ಕುಂಭನೆಂಬ ರಾಕ್ಷಸನಿಗೆ ಅಸಿ (ಖಡ್ಗ) ಯಾದ ಊರಿಗೆ ಕುಂಭಾಸಿ ಎಂಬ ಹೆಸರು ಬಂದಿದೆ. ಇಲ್ಲಿನ ಬೆಟ್ಟದ ಮೇಲೆ ಗಣಪತಿ ದೇವಾಲಯವಿದೆ. ಈ ಊರಿನಲ್ಲಿ ಒಟ್ಟು ನಾಲ್ಕು ದೇವಾಲಯ ಗಳಿವೆ. ಮಹಾದೇವ, ಕೇಶವ, ಆದಿತ್ಯ ಹಾಗೂ ಗಣಪತಿ, ಮಹಾದೇವ ಹಾಗೂ ಕೇಶವ ದೇವಾಲಯ ಒಟ್ಟೊಟ್ಟಿಗಿರುವುದರಿಂದ ಈ ಕ್ಷೇತ್ರವನ್ನು ಹರಿಹರ ಕ್ಷೇತ್ರ ಎನ್ನುತ್ತಾರೆ. ಮಹಾದೇವನ ಗುಡಿ ಒಂದು ಕೆರೆಯ ಮಧ್ಯೆ ಇದೆ. ಇದು ಸುಮಾರು ಹನ್ನೊಂದನೆಯ ಶತಮಾನದ ದೇವಾಲಯ ವಾಗಿದೆ. ಇತ್ತೀಚೆಗೆ ಹರಿಹರ ಮೂರ್ತಿಗಳನ್ನು ಮಾಡಿಸಲಾಗಿದೆ. ಗುಡಿಯ ಅಕ್ಕಪಕ್ಕದಲ್ಲಿ ಎರಡು ತೀರ್ಥಗಳಿದ್ದು ಇದನ್ನು ಸೂರ್ಯ ಪುಷ್ಕರಿಣಿ ಚಂದ್ರ ಪುಷ್ಕರಿಣಿ ಎನ್ನುತ್ತಾರೆ. ದೇವಾಲಯ ಚತುರಸ್ರ ಆಕಾರದಲ್ಲಿದೆ. ಗರ್ಭಗುಡಿಯಲ್ಲಿ ಪಾಣಿಪೀಠವಿದ್ದು ಹರಿಹರ ವಿಗ್ರಹಗಳಿವೆ. ಗುಡಿಯ ಸನಿಹದಲ್ಲಿ ದಕ್ಷಿಣಪಾರ್ಶ್ವದಲ್ಲಿ ಚಿಕ್ಕಗುಡಿ ಇದ್ದು ಅಲ್ಲಿ ಕೇಶವ ವಿಗ್ರಹವಿದೆ.

ಹರಿಹರ (ಮಹಾದೇವ) ದೇವಾಲಯದ ಪಕ್ಕದಲ್ಲಿ ಸ್ವಲ್ಪ ದಕ್ಷಿಣಕ್ಕೆ ಸೂರ್ಯನಾರಾಯಣ ದೇವಾಲಯವಿದ್ದು ಗರ್ಭಗುಡಿಯಲ್ಲಿ ಸುಮಾರು ಐದು ಅಡಿ ಎತ್ತರದ ಸೂರ್ಯನಾರಾಯಣ ವಿಗ್ರಹವಿದೆ.

ಕುಂಭಾಸಿ–ಗಣೇಶಾರಾಧನೆಗೆ ಖ್ಯಾತಿವೆತ್ತಿದೆ. ಇಲ್ಲಿಯ ಗಣೇಶನಿಗೆ ಆನೆ ಗುಡ್ಡೆ ಗಣಪತಿ ಎಂದು ಕರೆಯುತ್ತಾರೆ, ಗಣಪತಿ ದೇವಾಲಯ ಶಿಲ್ಪ ಶಾಸ್ತ್ರಕ್ಕೆ ಅನುಗುಣವಾಗಿದೆ.

# ಕುಂದಾಪುರ ತಾಲ್ಲೂಕಿನ ಇತರ ದೇವಾಲಯಗಳು

ಕುಂದಾಪುರದಿಂದ ಏಳು ಕಿ. ಮಿ. ದೂರದಲ್ಲಿ ಕೋಟೇಶ್ವರ ಎಂಬ ಊರು ಇದ್ದು ಇದಕ್ಕೆ ಧ್ವಜೇಶ್ವರ ಎಂಬ ಹೆಸರೂ ಇದೆ. ತುಳು ನಾಡಿನ ಸಪ್ತ ಕ್ಷೇತ್ರಗಳಲ್ಲಿ ಇದೂ ಒಂದು ಕೋಟಿಲಿಂಗೇಶ್ವರ ದೇವಸ್ಥಾನ ಇಲ್ಲಿ ಪ್ರಸಿದ್ಧವಾಗಿದೆ.

ಕೋಟೇಶ್ವರ ದೇವಾಲಯವನ್ನು ಕಟ್ಟಡದ ವಿಸ್ತಾರ ಮತ್ತು ಅದರ ಪರಿಸರದ ದೃಷ್ಟಿಯಿಂದ ಪರಿಶೀಲಿಸಿದಾಗ ಇದೊಂದು ದಕ್ಷಿಣ ಕನ್ನಡದ ಅತಿ ದೊಡ್ಡ ದೇವಾಲಯವೆಂದು ಇತಿಹಾಸ ತಜ್ಞ ಡಾ. ಪಿ. ಗುರುರಾಜಭಟ್ ಅಭಿಪ್ರಾಯಪಡುತ್ತಾರೆ.

ನವರಂಗದ ಸುತ್ತಿನಲ್ಲಿರುವ ಮೂಲೆ ಗಣಪತಿ ಎಂಬ ಸುಮಾರು ಎರಡು ಅಡಿ ಎತ್ತರದ ಗಣೇಶ ವಿಗ್ರಹವೂ ಸಪ್ತ ಮಾತೃಕೆಯರ ಶಿಲಾ ವಿಗ್ರಹಗಳೂ ಗರ್ಭಗುಡಿಯ ಸುತ್ತಿನಲ್ಲಿರುವ ಉಬ್ಬು ಶಿಲ್ಪಗಳು ಅದರ ಮೇಲಿರುವ ಸಮುದ್ರ ಕುದುರೆಗಳೂ ಮತ್ತಿತರ ಶಿಲ್ಪಗಳು, ಮಹಾ ದ್ವಾರ ದಲ್ಲಿರುವ ನಂದಿ ವಿಗ್ರಹ ಗಮನಾರ್ಹವಾಗಿದೆ.

ಮೂಲೆ ಗಣಪತಿ ಪ್ರಭಾವಳಿ ಇಲ್ಲದ ಮೂರ್ತಿ. ಮೇಲಿನ ಕೈಗಳಲ್ಲಿ ಅಕ್ಷಮಾಲೆ ಮತ್ತು ದಂತಗಳಿದ್ದರೆ. ಇನ್ನುಳಿದ ಕೈಗಳಲ್ಲಿ ಮೋದಕವುಂಟು. ಇದೊಂದು ಕ್ರಿ. ಶ. ಎಂಟನೆಯ ಶತಮಾನದ ಮೂರ್ತಿ ಇರಬಹುದು. ಕರಿಶಿಲೆಯಿಂದ ಕೊರೆಯಲಾದ ಸಪ್ತ ಮಾತೃಕೆಯರು ಹಾಗೂ ಜತೆಯ ವೀರಭದ್ರ, ಗಣೇಶ ಮೂರ್ತಿಗಳು ಒಂಬತ್ತನೆಯ ಶತಮಾನಕ್ಕೆ ಸೇರಿದವು. ಮಹಿಷಮರ್ದಿನಿ ಇಲ್ಲಿ ಕಂಡು ಬರುವ ಪಂಚಲೋಹದ ಮೂರ್ತಿ, ದೇವಿಯ ಮೇಲಿನ ಕೈಗಳಲ್ಲಿ ಶಂಖ ಚಕ್ರಗಳಿವೆ.

ಇಲ್ಲಿ ಕಾಣಲಾಗುವ ಇನ್ನೊಂದು ಮೂರ್ತಿ ಆದಿಗಣಪನದಾಗಿದೆ. ಇದು ಎರಡೂ ಕಾಲು ಅಡಿ ಎತ್ತರದ ಮೂರ್ತಿ, ಇದರ ಜಟಾ ಮುಕುಟ

ವಿಶಿಷ್ಟವಾಗಿದೆ. ಹಾಗೆಯೇ ಸೊಂಡಿಲಿನ ವಿನ್ಯಾಸವೂ ವಿಶಿಷ್ಟ ವಾದುದಾಗಿದೆ.

ಕೋಟೇಶ್ವರ ದೇವಾಲಯದ ಮೂರ್ತಿಗಳಲ್ಲಿ ವೇಣುಗೋಪಾಲಕೃಷ್ಣನ ವಿಗ್ರಹ ಅತ್ಯಂತ ಮನೋಹರವಾಗಿದೆ. ಎರಡೂವರೆ ಅಡಿ ಎತ್ತರವಾಗಿದ್ದು ಕಪ್ಪುಶಿಲೆಯಿಂದ ಕಡೆದುದಾಗಿದೆ. ಈ ಮೂರ್ತಿಯ ಎರಡೂ ಪಕ್ಕಗಳಲ್ಲಿ ರುಕ್ಮಿಣಿ ಸತ್ಯಭಾಮೆಯರ ಉಬ್ಬು ಶಿಲ್ಪಗಳಿವೆ.

ನಂದಿವಿಗ್ರಹಗಳು ಕರ್ನಾಟಕದಲ್ಲಿ ಹಲವೆಡೆ ಇವೆಯಷ್ಟೆ. ಕೋಟೇಶ್ವರದ ವಿಗ್ರಹ 9ನೇ ಶತಮಾನದ್ದಾಗಿದ್ದು ಎರಡೂವರೆ ಅಡಿ ಎತ್ತರವಿದೆ. ಇದು ಭಿನ್ನವಾಗಿದ್ದು ಬದಿಗಿರಿಸಲಾಗಿದೆ.

ಕೋಟಿಲಿಂಗೇಶ್ವರ ಇಲ್ಲಿನ ಪುರಾತನ ದೇವಾಲಯವಾಗಿದ್ದು ಇಲ್ಲಿ ಕೋಟಿಲಿಂಗಗಳಿವೆ ಎನ್ನುತ್ತಾರೆ. ದೇವಾಲಯದ ನವರಂಗಕ್ಕೆ ಹೋಗುವಾಗ ಎರಡೂ ಕಡೆಗಳಲ್ಲಿ ಪರಶುಪಾಣಿ ಹಾಗೂ ಪಂಚಲೋಹದ ಶೂಲಪಾಣಿ ವಿಗ್ರಹಗಳು ಆಳೆತ್ತರಕ್ಕಿವೆ. ಇವು ದ್ವಾರಪಾಲ ಮೂರ್ತಿಗಳು.

ಕೋಟೇಶ್ವರ ದೇವಾಲಯದ ಅಧಿದೇವತೆ ಕೋಟೇಶ್ವರ. ಈ ಗುಡಿ 500 ವರ್ಷಗಳಿಗೂ ಹಿಂದೆ ಕಟ್ಟಲ್ಪಟ್ಟುದಾಗಿರಬೇಕು. ದೇವಾಲಯದ ಉತ್ತರ ದಿಕ್ಕಿನಲ್ಲಿರುವ ಕೆರೆ ಅತಿದೊಡ್ಡದಾಗಿದೆ. ವಿಸ್ತಾರದಲ್ಲಿ ಇದು ಗೋಕರ್ಣದ ಕೋಟಿ ತೀರ್ಥವನ್ನು ಹೋಲುತ್ತದೆ.

ಕೋಟೇಶ್ವರದಿಂದ ಐದು ಕಿ.ಮೀ ದೂರದ ಹೂವಿನ ಕೆರೆ ಒಂದು ಸಿದ್ಧಿ ಕ್ಷೇತ್ರವಾಗಿದೆ. ಇದು ಯತಿವಾದಿರಾಜರ ಜನ್ಮಸ್ಥಳವಾಗಿದೆ.

ಬಸರೂರಿನ ಪಡುಕೇರಿಯಲ್ಲಿನ ದೇವಿ, ವೆಂಕಟರಮಣ, ರಾಮಚಂದ್ರ, ದಾಮೋದರ ದೇವಾಲಯಗಳು ಗೌಡ ಸಾರಸ್ವತರ ಮಹಾಲಸಾ ನಾರಾಯಣಿ, ಶಾಂತೇರಿ ಕಾಮಾಕ್ಷಿ ದೇವಾಲಯಗಳೂ ಸಿದ್ದಾಪುರದ ಬಳಿಯ ಕಮಲ ಶಿಲೆ ದೇವಾಲಯ ತಾಲ್ಲೂಕಿನ ಇತರ ದೇವಾಲಯಗಳು. ಹಾಗೆಯೇ ಕಂಡ್ಲೂರಿನ ಕನ್ನಿಕಾಪರಮೇಶ್ವರಿ ದೇವಾಲಯ ಸುಂದರವಾಗಿದೆ.

## ಬೇಂದ್ರ್‌ತೀರ್ಥ – ಜಾಂಬ್ರಿಗುಹೆ

ಪುತ್ತೂರು ತಾಲ್ಲೂಕಿನ ರಮ್ಯತಾಣಗಳು–ಬೇಂದ್ರ್ ತೀರ್ಥ ಬಿಸಿ ನೀರಿನ ಬುಗ್ಗೆ. ಪಾಣಾಜೆ ಎಂಬಲ್ಲಿಗೆ 12 ಕಿ. ಮೀ. ದೂರದಲ್ಲಿದೆ. ಬೇಂದ್ರ್ ಎಂದರೆ ತುಳುವಿನಲ್ಲಿ ಬಿಸಿನೀರು ಎಂದು ಅರ್ಥವಿದೆ. ಈ ತೀರ್ಥದ ಪೂರ್ವ ದಿಕ್ಕಿನಲ್ಲಿ ಎರ್ಮುತಿ ಮತ್ತು ಬಕ್ಕ ಹೊಳೆಗಳ ಸಂಗಮಕ್ಕೆ ದೂರದಲ್ಲಿ ವಿಷ್ಣುಮೂರ್ತಿ ದೇವಸ್ಥಾನವಿದೆ. ಬೇಂದ್ರ್‌ತೀರ್ಥ ಸ್ನಾನಕ್ಕಾಗಿ ಜನ ಬರುವುದುಂಟು.

ಪುತ್ತೂರು ತಾಲ್ಲೂಕಿನ ಪಾಣಾಜೆ ಗ್ರಾಮದ ಅರ್ಲಪದವು ಸಮೀಪಕ್ಕೆ ಜಾಂಬ್ರಗುಹೆ ಇದೆ. ಪೆಟ್ಟಣಗೆ ಮಹಾಲಿಂಗೇಶ್ವರ ದೇವಸ್ಥಾನ ನೋಡ ಬೇಕಾದುದಾಗಿದೆ, ಗುಹೆಯ ಪರಿಸರದ ಈ ಗುಡಿ ಕೇರಳ ರಾಜ್ಯದ ಉತ್ತರದ ಗಡಿಯಲ್ಲಿದೆ. ಗುಹೆ ಕರ್ನಾಟಕದ ದಕ್ಷಿಣ ಅಂಚಿನಲ್ಲಿದೆ,

## ವರಾಂಗ

'ವರಾಂಗ' ಕಾರ್ಕಳ ತಾಲ್ಲೂಕಿನ ಒಂದು ಜೈನ ಕ್ಷೇತ್ರ. ಸಹ್ಯಾದ್ರಿ ಪರ್ವತ ಸಾಲಿನ ಸುಂದರ ತಾಣ. ವರಾಂಗವನ್ನು ವರಾಂಗತೀರ್ಥ ಎಂದು ಹೇಳುತ್ತಾರೆ. ಕಾರ್ಕಳಕ್ಕೆ 12 ಕಿ. ಮೀ. ದೂರಕ್ಕಿದೆ.

ಇಲ್ಲಿನ ನೇಮೀಶ್ವರ ಬಸದಿ ಖ್ಯಾತಿವೆತ್ತುದಾಗಿದೆ. ಹೀಗೆಯೇ ಚಂದ್ರನಾಥ ಮತ್ತು ಚತುರ್ಮುಖ ಬಸದಿಗಳಿವೆ. ನೇಮೀಶ್ವರ ಬಸದಿಯು ಹಿಂದೆ ಅನೇಕ ಮುನಿಗಳಿಗೆ ಆಶ್ರಯ ನೀಡಿತ್ತು. ಅರವತ್ತಕ್ಕೂ ಹೆಚ್ಚು ಬಿಂಬಗಳು ಈ ಬಸದಿಯಲ್ಲೇ ಇವೆ. ಆದೀಶ್ವರಸ್ವಾಮಿ ಬಿಂಬ, ಅನಂತಸ್ವಾಮಿ ಬಿಂಬಗಳು ಗಮನಾರ್ಹ. ನೇಮೀಶ್ವರ ತೀರ್ಥಂಕರರ ಬಿಂಬ ಕ್ರಿ. ಶ. 16ನೆಯ ಶತಮಾನದ್ದಾಗಿದೆ.

ಚತುರ್ಮುಖ ಬಸದಿಯಲ್ಲಿರುವ ಶಾಂತಿನಾಥ, ಅನಂತನಾಥ, ನೇಮಿ ನಾಥ ಹಾಗೂ ಪಾರ್ಶ್ವನಾಥ ಬಿಂಬಗಳು ಸುಂದರವಾಗಿದೆ. ಪದ್ಮಾವತಿ

ದೇವಿಯ ಬಿಂಬ ನೋಡಲು ಸುಂದರವಾಗಿದೆ, ಈ ಯಕ್ಷಿ ಜನರ ವೈಹಿಕ ಮತ್ತು ಮಾನಸಿಕ ಕಾಯಿಲೆಗಳನ್ನು ಹೋಗಲಾಡಿಸುತ್ತಾಳೆ ಎಂದು ಜನ ನಂಬುತ್ತಾರೆ. ಈ ಬಸದಿಯ ಮೇಲ್ಭಾಗಕ್ಕೆ ತಾಮ್ರದ ಹೊದಿಕೆಯನ್ನು ಹಾಕಿಸಲಾಗಿದೆ, ಇದು ನಾಗಮ್ಮ ಎಂಬಾಕೆ ತನ್ನ ದೋಷನಿವಾರಣೆಗೆ ಹಾಕಿಸಿದ್ದೆನ್ನಲಾಗಿದೆ.

ನೇಮೇಶ್ವರ ಬಸದಿ ಆಯತಾಕಾರವಿದ್ದು ಚೌಕ ಗರ್ಭಗುಡಿ, ಸುಕನಾಸಿ ನವರಂಗ, ಮುಖಮಂಟಪಗಳನ್ನೊಳಗೊಂಡಿದೆ. ವರಾಂಗದಲ್ಲಿರುವ ತಟಾಕದ ಮಧ್ಯೆ ಚತುರ್ಮುಖ ಬಸದಿ ಇದೆ. ಜೈನ ಮಠದ ಒಳಗೆ ಚಂದ್ರನಾಥಸ್ವಾಮಿ ಬಸದಿ ಇದ್ದು ಗರ್ಭಗುಡಿಯಲ್ಲಿ ಬಿಳಿ ಶಿಲೆಯ ಚಂದ್ರನಾಥ ಸ್ವಾಮಿ ಮೂರ್ತಿಇದೆ. ಜೊತೆಗೆ ಪದ್ಮಾಸನ ಭಂಗಿಯ ನೇಮಿನಾಥನ ಬಿಂಬ, ಕಂಚಿನ ಬಾಹುಬಲಿ, ಮಹಾವೀರ, ಪಾರ್ಶ್ವನಾಥ. ಪದ್ಮಾವತಿ ಮತ್ತು ಜ್ವಾಲಾ ಮಾಲಿನಿಯರ ಬಿಂಬಗಳು ಸುಂದರವಾಗಿದೆ.

ವರಾಂಗದ ಮಹಾನ ಸ್ತಂಭ ಪ್ರವಾಸಿಗಳ ಕುತೂಹಲವನ್ನು ಕೆರಳಿಸುತ್ತದೆ. ಬಸದಿಗಳ ಎದುರು ಮಾನಸ್ತಂಭವಿರುವುದು ಸಾಮಾನ್ಯ. ಅದೇನೂ ನಿಯಮ ವಿಲ್ಲವಷ್ಟೆ. ವರಾಂಗದ ಮಹಾನಸ್ತಂಭದ ಕೆಳಭಾಗ ಚೌಕಾಕಾರವಿದ್ದು ಮೇಲೇರುತ್ತ ಚಿಕ್ಕದಾಗುವ ಮೂರು ನೆಲೆಗಳ ವೇದಿಕೆ ಇದೆ. ಈ ವೇದಿಕೆಯ ನಡು ಭಾಗದಲ್ಲಿ ಲಂಬವಾಗಿ ನಿಲ್ಲಿಸಿರುವ ಶಿಲಾಸ್ತಂಭವಿದೆ. ಮೇಲೆ ಒಂದು ಚಿಕ್ಕ ಮಂಟಪವಿದ್ದು ಅಲ್ಲಿ ತೀರ್ಥಂಕರರ ವಿಗ್ರಹಗಳಿವೆ.

## ಇತರ ದೇವಾಲಯಗಳು

ಮಂಗಳೂರು ತಾಲ್ಲೂಕಿನ ಅತ್ತೂರಿನಲ್ಲಿರುವ ಸುರಗಿರಿ ಮಹಾಲಿಂಗೇಶ್ವರ ದೇವಾಲಯ, ಹರೆಕಲ ಗ್ರಾಮದ ಸಮೀಪದ ನರಹರಿಬೆಟ್ಟದ ಮೇಲಿರುವ ಶಾರದಾಂಬ ಮತ್ತು ನರಸಿಂಹ ಗುಡಿಗಳೂ, ಕಿನ್ನಿಗೋಳಿ ಗ್ರಾಮದ ಶ್ರೀರಾಮ ದೇವಾಲಯ, ಕಟೀಲುಗ್ರಾಮದ ದುರ್ಗಾಪರಮೇಶ್ವರಿ ದೇವಾಲಯ, ಗುರುಪುರ ನದಿ ದಡದ ಮೇಲಿರುವ ಗುರುಪುರ ಗ್ರಾಮದ

ನೀಲಕಂಠ ದೇವಾಲಯ ಮತ್ತು ಶ್ರೀ ವರದರಾಜ ವೆಂಕಟರಮಣ ದೇವಾಲಯಗಳು.

ಬೆಳ್ತಂಗಡಿ ತಾಲ್ಲೂಕಿನ ಆಲದಂಗಡಿ ಗ್ರಾಮದ ಅರ್ಧನಾರೀಶ್ವರ ಮತ್ತು ಸೋಮನಾಥ ದೇವಾಲಯಗಳೂ, ಬೆಳ್ತಂಗಡಿಗೆ 24 ಕಿ. ಮೀ. ದೂರದಲ್ಲಿರುವ ನರವಿಯಲ್ಲಿನ ಸೂರ್ಯ ಮತ್ತು ಸ್ಕಂದ ದೇವಾಲಯಗಳು, ಸುಳ್ಯ ತಾಲ್ಲೂಕಿನ ಬಳಪ ಗ್ರಾಮದ ತ್ರಿಶೂಲಿ ದೇವಾಲಯ, ನಂದಳಿಕೆ ಗ್ರಾಮದ ಮಹಾಲಿಂಗೇಶ್ವರ ದೇವಾಲಯ ಕಾರ್ಕಳ (ತಾಲ್ಲೂಕು) ದಕ್ಷಿಣ ಕನ್ನಡ ಜಿಲ್ಲೆಯ ಇತರ ಗಮನಾರ್ಹ ದೇವಸ್ಥಾನಗಳಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಪ್ರತಿಯೊಂದು ಊರಿನಲ್ಲಿಯೂ ದೇವಾಲಯ ಗಳಿವೆ, ಪುರಾಣ ಕಾಲದಲ್ಲಿಯೂ ಈ ಜಿಲ್ಲೆಯ ಉಲ್ಲೇಖವಿರುತ್ತದೆ. ಕ್ರೈಸ್ತರ ಹಲವು ಇಗರ್ಜಿಗಳು, ಮುಸಲ್ಮಾನರ ಮಸೀದಿಗಳೂ, ಉರುಫ್ ನಡೆಯುವ ಸ್ಥಳಗಳು ಜಿಲ್ಲೆಯ ಹಲವೆಡೆಗಳಲ್ಲಿ ಇವೆ. ಜಿಲ್ಲೆಯು ಪವಿತ್ರ ತೀರ್ಥ ಕ್ಷೇತ್ರಗಳಿಂದ ಕೂಡಿ ಭಕ್ತರನ್ನೂ ಭಾವುಕರನ್ನೂ ಆಕರ್ಷಿಸುತ್ತದೆ. ಪರಶುರಾಮರು ಸೃಷ್ಟಿಸಿದ ಸಪ್ತಕ್ಷೇತ್ರಗಳಲ್ಲಿ ಆರು ದಕ್ಷಿಣ ಕನ್ನಡದಲ್ಲಿಯೇ ಇವೆ,

ಈ ಜಿಲ್ಲೆಯ ಬಹಳಷ್ಟು ದೇವಾಲಯಗಳು ಅತ್ಯುತ್ತಮ ಶಿಲ್ಪದ ಉದಾಹರಣೆಗಳಾಗಿವೆ. ಕಾರ್ಕಳ. ಮೂಡಬಿದರೆ, ವೇಣೂರು ಮೊದ ಲಾದೆಡೆಗಳಲ್ಲಿನ ಶಿಲ್ಪಗಳು ಕುತೂಹಲ ಮೂಡಿಸುತ್ತವೆ. ಹಿಂದೂಗಳ ಪವಿತ್ರ ಕ್ಷೇತ್ರಗಳಿರುವಂತೆ ಜೈನರಿಗೂ ಪವಿತ್ರವಾಗಿರುವ ಸ್ಥಳಗಳು ಈ ಜಿಲ್ಲೆಯಲ್ಲಿವೆ.

## ದೇವಾಲಯಗಳ ಬೆಳೆವಣಿಗೆ–ಅರಸರ ಕಾಣಿಕೆ

ದಕ್ಷಿಣ ಕನ್ನಡ ಜಿಲ್ಲೆಯ ಪ್ರದೇಶವನ್ನು ಹೆಚ್ಚು ಕಾಲ ಆಳಿದವರೆಂದರೆ ಆಳುಪರು. ಇವರಲ್ಲದೆ ಭೈರರಸರು, ಚೌಟರು, ಅಜಿಲರು, ಕೆಳದಿಯ

ಅರಸರೂ ಆಳಿರುತ್ತಾರೆ. ಒಬ್ಬೊಬ್ಬರ ಕಾಲದಲ್ಲಿಯೂ ದೇವಾಲಯಗಳು ಅಭಿವೃದ್ಧಿಯನ್ನು ಕಂಡವು. ವಾಸ್ತು ಶಿಲ್ಪದ ಬೆಳವಣಿಗೆಗೆ ಅರಸರು ತಮ್ಮದೇ ಆದ ರೀತಿಯಲ್ಲಿ ಸೇವೆ ಸಲ್ಲಿಸಿರುತ್ತಾರೆ,

ಆಳುಪರ ಕಾಲದ ಶಿಲ್ಪ ಶೈಲಿ ಸರಿ ಸುಮಾರು ಬಾದಾಮಿ ಕಲ್ಯಾಣ ಚಾಳುಕ್ಯ ಶೈಲಿಯನ್ನು ಹೋಲುತ್ತದೆ–ಅಲ್ಲಲ್ಲಿ ಪಲ್ಲವ ಹಾಗೂ ಚೋಳ ಶಿಲ್ಪ ಶೈಲಿಯೂ ಕಂಡು ಬರುತ್ತವೆ, ಕೆಲವು ದೇವಸ್ಥಾನಗಳು ಹೊಯ್ಸಳ ಶೈಲಿ ಯಲ್ಲಿಯೂ ಇವೆ. ಕಾರ್ಕಳದ ಅನಂತಶಯನ, ಅತ್ತಾವರದ (ಮಂಗಳೂರು) ಚಕ್ರಪಾಣಿ ಗೋಪಾಲ ಕೃಷ್ಣ ಹೊಯ್ಸಳ . ಶೈಲಿಯವು. ನಂದಿಕೂರಿನ ಮಹಿಷಮರ್ದಿನಿ, ಮೂಡ ಬಿದರೆಯ ಮಹಿಷಮರ್ದಿನಿ. ಬಾದಾಮಿ ಚಾಳುಕ್ಯ ಶೈಲಿಯದಾದರೆ ಬೆಂದೂರ ಸೇನೇಶ್ವರ ದೇವಾಲಯ ಮೂರ್ತಿಗಳು ನೀಲಾವರದ ದುರ್ಗಾ ಭಗವತಿ ಕಲ್ಯಾಣ ಚಾಳುಕ್ಯರ ಶೈಲಿಯದಾಗಿದೆ. ಆಳುಪರ ಅರಸು ಕುಂದವರ್ಮ ಇಂದಿನ ಕುಂದಾಪುರದಲ್ಲಿ ಕುಂದೇಶ್ವರ ದೇವಾಲಯವನ್ನು ಕಟ್ಟಿಸಿದನೆಂದು ಪ್ರತೀತಿ ಇದೆ.

ಮೊದಲು ವೇಣೂರಿನಿಂದ ಹಾಗೂ ಬಳಿಕ ಆಲದಂಗಡಿಯಿಂದ ಅಜಿಲರು ಆಳಿದರು. ಅಜಿಲ ಅರಸುಗಳ ಪೈಕಿ ವೀರತಿಮ್ಮರಾಜ ನೆಂಬುವನು ವೇಣೂರಿನ ಗೊಮ್ಮಟ ಶಿಲಾ ಮೂರ್ತಿಯನ್ನು ಸ್ಥಾಪಿಸಿದ–ಇವನ ರಾಣಿ ಪಾಂಡ್ಯದೇವಿ ಗೊಮ್ಮಟನ ಎಡ ಭಾಗದಲ್ಲಿ ಚಂದ್ರನಾಥ ಚೈತ್ರಾಲಯವನ್ನೂ ಮತ್ತೊಬ್ಬ ರಾಣಿ ಪಾರ್ಶ್ವದೇವಿ ಗೊಮ್ಮಟನ ಬಲಭಾಗದಲ್ಲಿ ಶಾಂತಿಕೇಶ್ವರ ಚೈತ್ಯಾಲಯವನ್ನು ಕಟ್ಟಿಸಿದರು. ಅಜಿಲರ ರಾಣಿ ಮದುರಕ ದೇವಿ ತನ್ನ ರಾಜಧಾನಿ ಆಲದಂಗಡಿಯಲ್ಲಿ ಅರ್ಧನಾರೀಶ್ವರ ಹಾಗೂ ಸೋಮನಾಥ ದೇವಾಲಯಗಳನ್ನು ಕಟ್ಟಿಸಿದಳು.

ಚೌಟರಸರು ಜೈನ ಮತಾವಲಂಬಿಗಳಾಗಿದ್ದರು. 1507 ರಲ್ಲಿ ತಿರುಮಲರಾಯ ಚೌಲ ಎಂಬ ಅರಸು ಪೊಳಲಿಯ ದೇವಾಲಯಕ್ಕೆ ದತ್ತಿ ಬಿಟ್ಟುದರ ಉಲ್ಲೇಖವಿದೆ.

ಭೈರರಸರ ಜೈನ ಪೈಕಿ ವೀರಪಾಂಡ್ಯನೆಂಬುವನು 1432ರಲ್ಲಿ ತನ್ನ ಗುರು ಲಲಿತ ಕೀರ್ತಿಯ ಆದೇಶವಂತೆ ಕಾರ್ಕಳದಲ್ಲಿ ಗೊಮ್ಮಟ ವಿಗ್ರಹವನ್ನು ಪ್ರತಿಷ್ಠಾಪಿಸಿ ಅದರ ಮುಂದೆ ಬ್ರಹ್ಮಸ್ತಂಭವನ್ನು ಸ್ಥಾಪಿಸಿದ. ಅಭಿನವ ಚಾವುಂಡರಾಯ ಎಂದೂ ಹೆಸರಾದ. ಕಾರ್ಕಳದ ನೇಮೀಶ್ವರ ಬಸದಿಯ ಮುಂದೆ ಮಾನಸ್ತಂಭವನ್ನು ಮಾಡಿಸಿದ ಕೀರ್ತಿ ಪಾಂಡ್ಯದೇವಿ ಒಡೆಯನದು. ಮೂರನೆಯ ವೀರಪಾಂಡ್ಯ ಕಾರ್ಕಳದ ಪಾಂಡ್ಯನ ಗರಿಯಲ್ಲಿ ಚತುರ್ಮುಖ ಬಸದಿಯನ್ನು ಕಟ್ಟಿಸಿದ. ಈತನೇ ಕಾರ್ಕಳದ ಅನಂತಶಯನ ದೇವಾಲಯವನ್ನೂ ಕಟ್ಟಿಸಿದನೆನ್ನುತ್ತಾರೆ.

## ಭೂತಾರಾಧನೆ

ಇದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಶೇಷವಾಗಿ ಕಂಡುಬರುವ ವಿಶಿಷ್ಟ ರೀತಿಯ ದೈವಾರಾಧನೆ. ಪ್ರಾಣಿರೂಪದಲ್ಲಿರುವ ಭೂತ, ಒಬ್ಬ ಮನುಷ್ಯನ ಮರಣಾನಂತರ ದೈವೀಕೃತವಾದ ಭೂತ ಹಾಗೂ ಪೌರಾಣಿಕ ವ್ಯಕ್ತಿಗಳ ಭೂತ ಹೀಗೆ ಈ ಭೂತಗಳು ಸಾಮಾನ್ಯವಾಗಿ ಪೂಜೆಗೊಳ್ಳುವ ಭೂತಗಳಾಗಿವೆ ಹುಲಿ, ನಂದಿ, ಕೋಣ ಮೊದಲಾದವು ಪ್ರಾಣಿರೂಪದ ಭೂತಗಳು. ಕೋಟಿ ಚೆನ್ನಯ, ಕೋಟಿ ಪುಂಜ, ದೇವ ಪುಂಜ, ಕುಜುಂಬ–ಕುಂಜ ಮೊದಲಾದ ವ್ಯಕ್ತಿಗಳು ಮಾನವರಾಗಿ ವೀರರಾಗಿ ಅಕಾಲ ಮರಣಕ್ಕೆ ತುತ್ತಾದರೆ. ಆ ಬಳಿಕ ಅವು ಭೂತಗಳಾಗಿ ದೈವತ್ವವನ್ನು ಹೊಂದಿ ಪೂಜೆಗೊಳ್ಳುತ್ತದೆ. ಬೇತಾಳ ವೀರಭದ್ರ, ಭೈರವ, ಚಾಮುಂಡಿ, ಕನ್ಯಾಕುಮಾರಿ ಮೊದಲಾದವು ದೇವ ದೇವಿಯರ ಅಂಶಗಳೆಂದು ಪೂಜಾರ್ಹವಾಗಿವೆ. ಇವು ಪುರಾಣ ವ್ಯಕ್ತಿಗಳಾಗಿರಲೂ ಬಹುದು. ಹೀಗೆ ಭೂತಗಳು ಆರಾಧನೆಗೆ ಅರ್ಹವಾಗಿದ್ದು ಭೂತಗಳ ನೆಲೆಯನ್ನು ಭೂತಸ್ಥಾನ ಎನ್ನುತ್ತಾರೆ. ಈಚೆಗೆ ಭೂತಸ್ಥಾನಗಳು ದೇವಸ್ಥಾನಗಳಾಗಿವೆ. ಭೂತಸ್ಥಾನ 12 ಅಡಿ ಉದ್ದ 9 ಅಡಿ ಅಗಲ ಹಾಗೂ 12 ಅಡಿ ಎತ್ತರದ ಸಣ್ಣ ಪ್ರಮಾಣದ ಗುಡಿಗಳಾಗಿರುತ್ತವೆ. ಈ ಗುಡಿಗಳಿಗೆ ಕಿಟಕಿಗಳಿರುವುದಿಲ್ಲ.

ಭೂತಾರಾಧನೆ ಒಟ್ಟಾಗಿಯೂ ಹಾಗೂ ಒಂದೇ ಮನೆಯಲ್ಲಿಯೂ ನಡೆಯುತ್ತದೆ. ಭೂತಾರಾಧನೆಗೆ ಅಕ್ಕಿ, ಬತ್ತದ ಅರಳು, ಎಳನೀರು, ತೆಂಗಿನಕಾಯಿ, ಅಡಕೆ. ಹೊಂಬಾಳೆ, ತೆಂಗಿನ ಗರಿ ಇವುಗಳನ್ನು ಬಳಸುತ್ತಾರೆ. ಭೂತ ದೈವವೂ ಓದು, ಭೂತಕ್ಕೆ ಸಂಬಂಧಿಸಿದ ಹಾಡುಗಳೇ ಪಾಡ್ದನಗಳು. ಭೂತ ಪೂಜೆಯ ಸಂದರ್ಭದಲ್ಲಿ ಆಯಾ ಭೂತಗಳ ಚರಿತ್ರೆ. ಸಾಮರ್ಥ್ಯ ಮೊದಲಾದವನ್ನು ಕುರಿತು ನಿರೂಪಿಸಿರುವ ಪದ್ಯಗಳು ಪಾಡ್ದನಗಳು. ಪಾಡ್ದನಗಳಲ್ಲಿ ಭೂತಗಳ ಮಹಿಮೆಯಷ್ಟೇ ತುಂಬಿರದೆ ಅವು ಪುರಾಣಗಳೂ ಆಗಿದ್ದು ಅವುಗಳಲ್ಲಿ ತುಳುನಾಡಿನ ಪ್ರಾಚೀನ ಸಂಸ್ಕೃತಿಯನ್ನು ಅರಿಯಬಹುದಾಗಿದೆ. ಸ್ಥಳೀಯ ಭೂತಗಳಲ್ಲದೆ ತುಳುನಾಡಿಗೆ ಇತರ ಕಡೆಗಳಿಂದ ಭೂತಗಳ ಬಗ್ಗೆ ಆಯಾ ಪಾಡ್ದನಗಳ ಮೂಲಕ ತಿಳಿಯಬಹುದು.

# ಕಾವೇರಿ ಜಿಲ್ಲೆಯ ದೇವಾಲಯಗಳು

ದೇವಾಲಯಗಳು ಒಂದು ದೇಶದ, ನಾಡಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳು. ನಿರ್ಮಲ ಮನಸ್ಸನ್ನು ಪ್ರೇರಿಸಿ ಪವಿತ್ರ ವಾತಾವರಣವನ್ನು ಸೃಷ್ಟಿಸುವುದು ಇಲ್ಲಿನ ಉದ್ದೇಶ. ಬೇರೆ ಬೇರೆ ಧರ್ಮದವರು ದೇವಾಲಯಗಳನ್ನು ಸೂಕ್ತ ಹೆಸರಿನಿಂದ ಕರೆಯುತ್ತಾರೆ. ಜೈನರು ಬಸದಿಗಳೆಂದೂ ಬೌದ್ಧರು ಚೈತ್ಯಾಲಯಗಳೆಂದೂ ಮಹಮ್ಮದೀಯರು ಮಸೀದಿಗಳೆಂದೂ ಕ್ರೈಸ್ತರು ಚರ್ಚುಗಳೆಂದೂ ಕರೆಯುವರು.

ದೇವಾಲಯಗಳು ಕಲಾತ್ಮಕ ಕೃತಿಗಳೂ ಹೌದು. ಕರ್ನಾಟಕ ಶಿಲ್ಪಕಲೆಗೆ ಹೆಸರುವಾಸಿಯಾಗಿದೆ. ಕಲ್ಲನ್ನು ಕೆತ್ತಿ ಬೆಣ್ಣೆಯಂತೆ ನಯವಾದ ರೂಪು ಕೊಟ್ಟು ಜೀವ ಕಳೆಯನ್ನು ತುಂಬುವ ಸಾಹಸವನ್ನು ಇಲ್ಲಿಯ ಶಿಲ್ಪಿಗಳು ಮಾಡಿದ್ದಾರೆ. ಕನ್ನಡನಾಡಿನ ಪುರಾತನ ವಾಸ್ತುವಿನಲ್ಲಿ ಮುಖ್ಯಾಲು ಭಾಗ ದೇವಾಲಯಗಳು. ಕರ್ನಾಟಕದ ವಾಸ್ತುಶಿಲ್ಪವನ್ನು ಐದು ಭಾಗಗಳಾಗಿ ವಿಂಗಡಿಸಿ ಪರಿಶೀಲಿಸಬಹುದು. ಕ್ರಿ.ಶ. ಐದನೆಯ ಶತಮಾನದ ಚಾಲುಕ್ಯ ಪೂರ್ವ ಯುಗ, ಕ್ರಿ.ಶ. 6 ರಿಂದ 10ನೆಯ ಶತಮಾನದವರೆಗೆ ಚಾಲುಕ್ಯ ಯುಗ (ರಾಷ್ಟ್ರಕೂಟರೂ ಸೇರಿ), ಕ್ರಿ.ಶ. 11 ರಿಂದ 13ನೆಯ ಶತಮಾನದವರೆಗೆ ಹೊಯ್ಸಳ ಯುಗ, 14ನೆಯ ಶತಮಾನದ ವಿಜಯನಗರ ವಾಸ್ತುಶಿಲ್ಪ, ಕಡೆಗೆ ಮಹಮ್ಮದೀಯ ವಾಸ್ತುಶಿಲ್ಪ (ಮಸೀದಿ ಇತ್ಯಾದಿ). ದೇವಾಲಯ ನಿರ್ಮಾಣದಲ್ಲಿ ನಮ್ಮ ಶಿಲ್ಪಿಗಳು ತೋರಿದ ಕೈಚಳಕ ಬೆರಗುಗೊಳಿಸುವಂತಹುದು.

ಕರ್ನಾಟಕದ ವಾಸ್ತು ವೈಭವದ ದೇವಸ್ಥಾನಗಳಲ್ಲಿ ಪ್ರತಿಯೊಂದನ್ನು ಹಂತ ಹಂತವಾಗಿ ಅಧ್ಯಯನ ಮಾಡಿ ನೋಡಬೇಕು. ಕರ್ನಾಟಕದ ಸಂಸ್ಕೃತಿಯ ವರ್ಧನೆಗೆ ದೇವಾಲಯಗಳ ಕೊಡುಗೆ ಅಪಾರ, ದೇವಾಲಯಗಳ ನಿರ್ಮಾಣ ಶತಮಾನಗಳಿಂದ ನಡೆಯುತ್ತಿದ್ದಂತೆ ಇಂದೂ ಆ ಕಾರ್ಯ ನಿಂತಿಲ್ಲ. ಪುರಾತನ ಪದ್ಧತಿಯಿಂದಲೂ ಆಧುನಿಕ ಶೈಲಿಯಲ್ಲೂ ದೇವಾಲಯಗಳು ನಿರ್ಮಾಣವಾಗುತ್ತಿವೆ. ದೇವಾಲಯವು ಒಂದು ಊರಿನಲ್ಲಿ ಇರುವುದು ಶುಭದ ಸಂಕೇತ, ಸತ್ಕಾರ್ಯ ಪ್ರೇರಕ, ಧರ್ಮ ಜಾಗೃತಿಗೆ ಸಾಧನವಲ್ಲವೆ ?

## ಕಾವೇರಿ ಜಿಲ್ಲೆಗಳು

ಮೈಸೂರು, ಮಂಡ್ಯ, ಕೊಡಗು ಮೂರು ಜಿಲ್ಲೆಗಳು ಕಾವೇರಿ ನದಿ ಹರಿಯುವ ಜಿಲ್ಲೆಗಳಾಗಿವೆ. ಕಾವೇರಿ ಕೆಲವುಟ್ಟಿಗೆ ಹಾಸನ ಜಿಲ್ಲೆಯಲ್ಲಿಯೂ ಹರಿಯುತ್ತದೆ.

ಕಾವೇರಿ ಹುಟ್ಟುವುದು ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಭಾಗಮಂಡಲ ಸಮೀಪದ ಬ್ರಹ್ಮಗಿರಿ ಬೆಟ್ಟದಲ್ಲಿ. ಕಾವೇರಿಯ ಉಗಮ ಸ್ಥಾನಕ್ಕೆ ತಲಕಾವೇರಿ ಎಂದು ಹೆಸರು. ಕೊಡಗಿನ ಸೋಮವಾರ ಪೇಟೆ ತಾಲ್ಲೂಕಿನ ಶಿರಂಗಾಲದವರೆಗೂ ನದಿ ಹರಿದು ಹಾಸನ ಜಿಲ್ಲೆಯ ಮೂಲಕ ಮೈಸೂರು ಜಿಲ್ಲೆಯನ್ನು ಪ್ರವೇಶಿಸುತ್ತದೆ. ಚುಂಚನ ಕಟ್ಟೆ ಎಂಬಲ್ಲಿ ಜಲಪಾತವಾಗಿ ಪರಿಣಮಿಸಿ ಕೃಷ್ಣರಾಜ ನಗರದ ಮೂಲಕ ಕೃಷ್ಣರಾಜ ಸಾಗರ ಕಟ್ಟೆ (ಕನ್ನಂಬಾಡಿ)ಯನ್ನು ತಲುಪುತ್ತದೆ. ಬಳಿಕ ಮಂಡ್ಯ ಜಿಲ್ಲೆಯ ಶ್ರೀರಂಗ ಪಟ್ಟಣದಲ್ಲಿ ಕವಲೊಡೆದು ಅದನ್ನೊಂದು ದ್ವೀಪವಾಗಿಸಿ ಸುತ್ತಿ ಮತ್ತೆ ಮೈಸೂರು ಜಿಲ್ಲೆಗೆ ಬರುತ್ತದೆ. ತಿರುಮಕೂಡಲು ನರಸೀಪುರ, ತಲಕಾಡುಗಳನ್ನು ದಾಟಿ ಕೊಳ್ಳೇಗಾಲಕ್ಕೆ ಸಮೀಪ ಬರುತ್ತದೆ. ಅಲ್ಲಿಂದ ಈಶಾನ್ಯಾಭಿಮುಖವಾಗಿ ಹರಿದು ಶಿವ ಸಮುದ್ರ ಎಂಬಲ್ಲಿ ಕವಲೊಡೆದು ಗಗನ ಚುಕ್ಕಿ ಭರ ಚುಕ್ಕಿಗಳಾಗಿ ಧುಮುಕಿ ಮತ್ತೆ ಒಂದಾಗೂಡಿ ಹರಿದು ಬೋಡಮಲ್ಲೆ

ಬೆಟ್ಟದ ಬಳಿ ಕರ್ನಾಟಕದ ಗಡಿ ಬಿಟ್ಟು ತಮಿಳುನಾಡಿನತ್ತ ಸಾಗಿ ಆ ರಾಜ್ಯದ ಮೂಲಕ ಬಂಗಾಳ ಕೊಲ್ಲಿಯನ್ನು ಸೇರುತ್ತದೆ.

ಕಾವೇರಿ ನದಿ ತೀರದಲ್ಲಿ ಹಲವಾರು ಪುಣ್ಯಕ್ಷೇತ್ರಗಳಿವೆ. ಸುಂದರ ದೇವಾಲಯಗಳಿವೆ. ಕಾವೇರಿ ದೇವತೆಯನ್ನು ಕೊಡಗರು (ಕೊಡವರು) ತಮ್ಮ ಕುಲ ದೇವತೆ ಎಂದು ನಂಬಿ ಪೂಜಿಸುತ್ತಾರೆ.

ಕರ್ನಾಟಕದ ಮೂರು ಕಾವೇರಿ ಜಿಲ್ಲೆಗಳ ದೇವಾಲಯಗಳ ಪರಿಚಯ ಮಾಡಿಕೊಳ್ಳುವುದು ಇಲ್ಲಿನ ಉದ್ದೇಶವಾಗಿದೆ. ಈ ಕಾವೇರಿಗೆ ಕರ್ನಾಟಕದ ಭಾಗದಲ್ಲಿ ಸುಮಾರು 20 ಉಪನದಿಗಳು ಕೂಡಿಕೊಳ್ಳುತ್ತವೆ. ಕೊಡಗಿನಲ್ಲಿಯೇ ಕನ್ನಿಕೆ ಎಂಬ ಉಪ ನದಿ ಉತ್ತರ ಭಾಗದಿಂದ ಹರಿದು ಬಂದು ಭಾಗ ಮಂಡಲದಲ್ಲಿ ಸಂಗಮವಾಗುತ್ತದೆ. ಶಿಂಷಾ, ಲಕ್ಷ್ಮಣತೀರ್ಥ, ಸುವರ್ಣಾವತಿ, ಉಡುತೊರೆ ಹಳ್ಳ ಇವೇ ಮೊದಲಾದವು ಇತರ ಉಪ ನದಿಗಳು.

## ಕೊಡಗು ಜಿಲ್ಲೆಗಳು

ದಕ್ಷಿಣದ ಕಾಶ್ಮೀರ ಎಂಬ ಖ್ಯಾತಿಗೆ ಪಾತ್ರವಾದ ಕೊಡಗು ಪರ್ವತ ಮಯ ಪ್ರದೇಶ. ಪುಷ್ಪಗಿರಿ, ಬ್ರಹ್ಮಗಿರಿ, ತುಂಬೆ ಮಲೆ, ಇಗ್ಗುತ್ತಪ್ಪ ಶಿಖರ, ಸೋಮಮಲೆ, ತಡಿಯಂಡಮೋಳು ಮೊದಲಾದುವು ಮುಖ್ಯ ಶಿಖರಗಳು, ಈ ಜಿಲ್ಲೆಯ ಮೂರನೆಯ ಒಂದು ಭಾಗ ಅರಣ್ಯಗಳಿಂದಾವೃತವಾಗಿದೆ. ನಾಗರ ಹೊಳೆ ಕಾಡು ಪ್ರಸಿದ್ಧ ವನ್ಯಮೃಗ ಧಾಮವೂ ಹೌದು.

ಪ್ರಾಚೀನ ವಾಸ್ತು ಶಿಲ್ಪ ದೃಷ್ಟಿಯಿಂದ ಬಹು ಮಹತ್ವವಾದ ಕೃತಿಗಳು ಈ ಜಿಲ್ಲೆಯಲ್ಲಿ ಇಲ್ಲವೇದೇ ಹೇಳಬಹುದು. ಮಡಿಕೇರಿಯ ಓಂಕಾರೇಶ್ವರ ದೇವಾಲಯ, ಕೊಡಗಿನ ಇಗ್ಗುತ್ತಪ್ಪ ದೇವರ ಶಿಖರ, ಭಾಗಮಂಡಲ, ಇರ್ಪುಗಳಲ್ಲಿನ ದೇವಾಲಯಗಳು ವಾಸ್ತುಶಿಲ್ಪ ದೃಷ್ಟಿಯಿಂದ ಲ್ಲದಿದ್ದರೂ ಪವಿತ್ರ ಸ್ಥಾನಗಳಾಗಿ ಪ್ರಸಿದ್ಧವಾಗಿವೆ.

## ಭಾಗಮಂಡಲ

ಮಡಿಕೇರಿ ತಾಲ್ಲೂರಿನ ಗ್ರಾಮ. ಭಗಂಡೇಶ್ವರ ಮುನಿ ಇಲ್ಲಿ ತಪಸ್ಸು ಮಾಡುತ್ತಿದ್ದುದರಿಂದ ಈ ಸ್ಥಳಕ್ಕೆ ಭಾಗಮಂಡಲವೆಂಬ ಹೆಸರು ಬಂದಿದೆ. ಇಲ್ಲಿಗೆ ಸಮೀಪದಲ್ಲಿಯೇ ಕನ್ನಿಕೆ ನದಿ ಪವಿತ್ರ ಕಾವೇರಿಯನ್ನು ಸೇರಿ ಕೊಳ್ಳುತ್ತದೆ. ಸುಜ್ಯೋತಿ ಎಂಬ ಸರಸ್ವತಿಯಂತಹ ಗುಪ್ತ ಗಾಮಿನಿಯೂ ಸೇರಿ ಇದು ತ್ರಿವೇಣಿ ಸಂಗಮ ಕ್ಷೇತ್ರವೆಂದು ಪರಿಗಣಿಸಲ್ಪಟ್ಟಿದೆ. ಪವಿತ್ರ ಯಾತ್ರಾಸ್ಥಳವಾದ ಇಲ್ಲಿ ಭಗಂಡೇಶ್ವರ ದೇವಾಲಯವಿದೆ.

## ತಲಕಾವೇರಿ

ನಾಡಿನ ಪುಣ್ಯ ನದಿ ಕಾವೇರಿಯ ಉಗಮ ಸ್ಥಾನ ಭಾಗಮಂಡಲಕ್ಕೆ 16 ಕಿ.ಮೀ. ದೂರಕ್ಕಿದೆ. ಇಲ್ಲಿ ಅಗಸ್ತ್ಯೇಶ್ವರ ಹಾಗೂ ಗಣಪತಿ ದೇವಾ ಲಯಗಳಿವೆ. ಅಗಸ್ತ್ಯೇಶ್ವರ ದೇವಾಲಯದ ಲಿಂಗವನ್ನು ಅಗಸ್ತ್ಯ ಮುನಿ ಗಳು ಪ್ರತಿಷ್ಠಾಪಿಸಿದರೆಂದು ಪ್ರತೀತಿ ಇದೆ. ತಲಕಾವೇರಿಯಲ್ಲಿ ತುಲಾ ಮಾಸದ ಸಂಕ್ರಮಣದಿಂದ ವೃಶ್ಚಿಕ ಮಾಸದ ಸಂಕ್ರಮಣದವರೆಗೆ ಜಾತ್ರೆ ನಡೆಯುತ್ತದೆ. ತುಲಾಮಾಸದ ಸಂಕ್ರಮಣದ ದಿನ ಒಂದು ಗೊತ್ತಾದ ಮುಹೂರ್ತದಲ್ಲಿ ಕಾವೇರಿ ತೀರ್ಥೋದ್ಭವವಾಗಿ ಹರಿಯುತ್ತದೆ. ಆ ದಿನ ಕಾವೇರಿ ಸ್ನಾನ ಮಾಡಲು ಸಾವಿರಾರು ಯಾತ್ರಿಕರು ಬರುತ್ತಾರೆ.

ಮಡಿಕೇರಿಯ ಓಂಕಾರೇಶ್ವರ ದೇವಾಲಯ ಜಿಲ್ಲೆಯ ಗಮನಾರ್ಹ ದೇವಾಲಯಗಳಲ್ಲೊಂದು. ಇದನ್ನು ಕೊಡಗಿನ ದೊರೆ ಎರಡನೆಯ ಲಿಂಗ ರಾಜ ಕ್ರಿ.ಶ. 1820ರಲ್ಲಿ ಕಟ್ಟಿಸಿದನೆನ್ನಲಾಗಿದೆ. ಇದು ಹಿಂದೂ ದೇವಾ ಲಯವಾದರೂ ಕಟ್ಟಡ ಭಾರತೀಯ ಮುಸ್ಲಿಂ ಶೈಲಿಯಲ್ಲಿದೆ. ದೇವಾಲಯ ಚೌಕಾಕಾರಕ್ಕಿದ್ದು ಕೇಂದ್ರದಲ್ಲಿ ಒಂದು ಗುಮ್ಮಟ ಹಾಗೂ ನಾಲ್ಕು ಮೂಲೆ ಗಳಲ್ಲಿ ಚಿಕ್ಕ ಗುಮ್ಮಟಗಳಿರುವ ಸ್ತಂಭಗಳಿವೆ. ಗುಮ್ಮಟಗಳ ಮೇಲೆ ಲೋಹದ ಕಲಶವಿದೆ.

ಮಡಿಕೇರಿಯಲ್ಲಿ ಒಂದು ಕಲ್ಲಿನ ಕೋಟೆ ಇದ್ದು ಒಳಗೆ 1885 ರಲ್ಲಿ ಕಟ್ಟಿದ್ದೆನ್ನಲಾದ ಆಂಗ್ಲಿಕನ್ ಸಂಪ್ರದಾಯದ ಇಗರ್ಜಿ ಇದೆ. ಈ ಇಗರ್ಜಿ ಇದ್ದಲ್ಲಿ ಹಿಂದೆ ಒಂದು ವೀರಭದ್ರ ದೇವಾಲಯ ಇದ್ದಿತೆಂದು ಹೇಳುತ್ತಾರೆ. ಇಗರ್ಜಿ ಪುಟ್ಟದಾದ ಗಾಥಿಕ್ ಶೈಲಿಯ ವಾಸ್ತು ಆಗಿದೆ.

## ಇಗ್ಗುತ್ತಪ್ಪ ದೇವರ ಶಿಖರ

ಕೊಡಗಿನ ಪಶ್ಚಿಮ ಘಟ್ಟದ ಬೆಟ್ಟ ಸಾಲಿನ ಶಿಖರಗಳಲ್ಲಿ ಎರಡನೆ ದೊಡ್ಡ ಶಿಖರ. ವಿರಾಜ ಪೇಟೆಗೆ 18 ಕಿ.ಮೀ. ಪಶ್ಚಿಮಕ್ಕಿದೆ. ಈ ಶಿಖರದ ಬುಡದ ಕುಂಜು ಗ್ರಾಮದಲ್ಲಿ ಇಗ್ಗುತ್ತಪ್ಪ ದೇವರ ದೇವಾಲಯವಿದೆ. ಪಾಡಿ ಸುಬ್ರಹ್ಮಣ್ಯ ಎಂತಲೂ ಇದಕ್ಕೆ ಹೆಸರು. ಇದೊಂದು ಪುಣ್ಯಕ್ಷೇತ್ರ. ಯಾತ್ರಿಕರು ಇಲ್ಲಿಗೆ ಒಂದು ಹರಕೆಗಳನ್ನೊಪ್ಪಿಸುತ್ತಾರೆ. ಮಲ್ಮ ಎಂಬುದು ಇಗ್ಗುತ್ತಪ್ಪ ನೆಲೆಸಿದ ಸ್ಥಳ. ಶಿಖರದ ಮೇಲಿರುವ ಸಮ ಭೂಮಿಯ ಮಧ್ಯೆ ಇಗ್ಗುತ್ತಪ್ಪನ ಶಿಲಾ ವಿಗ್ರಹವಿದೆ. ಕೇರಳದ ಕಣ್ಣಾನೂರು ಬಳಿ ಇರುವ ಪಾಕಡ ಎಂಬ ದ್ವೀಪದಲ್ಲಿ ಹುಟ್ಟಿದ ಏಳು ಜನ ದೇವತೆಗಳು ಅಂದರೆ ಆರು ಮಂದಿ ಅಣ್ಣ ತಮ್ಮಂದಿರು ಹಾಗೂ ಒಬ್ಬ ತಂಗಿ ವಲಸೆ ಬಂದು ಒಬ್ಬೊಬ್ಬರು ಒಂದೊಂದೆಡೆ ನೆಲಸಿದರು. ಹಿರಿಯ ಇಗ್ಗುತ್ತಪ್ಪ ಮಲ್ಮದಲ್ಲಿ ಒಬ್ಬ ತಮ್ಮ ಪಾಲೂರಪ್ಪ ಎಂಬುವನು ನಾಪೊಕ್ಲು ಎಂಬಲ್ಲಿಗೆ ಐದು ಕಿ.ಮೀ. ದೂರದ ಪಾಲೂರಿನಲ್ಲಿ ಇನ್ನೊಬ್ಬ ತಮ್ಮ ಪೆಮ್ಮಯ್ಯ ವೈನಾಡು ಗಡಿಯ ತಿರುನೆಲ್ಲಿಯಲ್ಲಿ ನೆಲಸಿದರು. ತಂಗಿ ಪನ್ನಂಗಾಲ ಎಂಬ ಸ್ಥಳದಲ್ಲಿ ನೆಲಸಿದಳು. ಉಳಿದವರು ಬೇರೆಯಾದರು ಎಂದು ಐತಿಹ್ಯವಿದೆ.

## ಇರ್ಪು

ಕೊಡಗಿನ ವಿರಾಜಪೇಟೆ ತಾಲ್ಲೂಕಿನ ಒಂದು ಪುಣ್ಯ ಕ್ಷೇತ್ರ. ವಿರಾಜ ಪೇಟೆಗೆ 48 ಕಿ.ಮೀ. ದೂರದಲ್ಲಿದೆ. ಲಕ್ಷ್ಮಣ ತೀರ್ಥ ನದಿ ಇಲ್ಲಿ ಹರಿದಿದ್ದು ನದಿ ತೀರದಲ್ಲಿ ರಾಮೇಶ್ವರ ದೇವಾಲಯವಿದೆ. ಇಲ್ಲಿರುವ

# ಮೈಸೂರು ಜಿಲ್ಲೆ

ಕಲೆ. ಸಾಹಿತ್ಯ ಸಂಸ್ಕೃತಿಗಳಿಗೆ ಹೆಸರಾದ ಮೈಸೂರು ಜಿಲ್ಲೆ ಹಲವಾರು ಪ್ರಸಿದ್ಧ ತೀರ್ಥ ಕ್ಷೇತ್ರಗಳನ್ನು ಐತಿಹಾಸಿಕ ಸ್ಥಳಗಳನ್ನು ಒಳಗೊಂಡಿದೆ. ನಂಜನಗೂಡು. ತಿರುಮಕೂಡಲು ನರಸೀಪುರ. ಮಹದೇಶ್ವರ ಬೆಟ್ಟ, ತಲಕಾಡು, ಬಿಳಿಗಿರಿರಂಗನ ಬೆಟ್ಟ ಇವು ಪ್ರಸಿದ್ಧ ತೀರ್ಥಕ್ಷೇತ್ರಗಳಾದರೆ ಮೈಸೂರು. ಮೂಗೂರು, ಪಿರಿಯಾಪಟ್ಟಣ. ಉಮ್ಮತ್ತೂರು ಇತಿಹಾಸ ಪ್ರಸಿದ್ಧ ಸ್ಥಳಗಳು, ಈ ಜಿಲ್ಲೆಯ ತಲಕಾಡು, ನರಸಮಂಗಲ, ಚಿಕ್ಕ ಹನಸೋಗೆ, ಹಳೆ ಆಲೂರು ಇಲ್ಲೆಲ್ಲ ಗಂಗರ ಕಾಲದ ದೇವಾಲಯಗಳೂ, ಬನ್ನೂರು ತಲಕಾಡು ಮೊದಲಾದ ಕಡೆ ಚೋಳರ ಕಾಲದ ದೇವಸ್ಥಾನಗಳೂ ಇವೆ. ಹೊಯ್ಸಳರ ಕಾಲದ ಒಂದು ಪ್ರಸಿದ್ಧ ದೇವಾಲಯ ಸೋಮನಾಥ ಪುರದಲ್ಲಿದೆ. ರಾಷ್ಟ್ರಕವಿ ಕುವೆಂಪು ಸೋಮನಾಥಪುರದ ಕೇಶವ ದೇವಾ ಲಯವನ್ನು ಕುರಿತು "ಬಾಗಿಲಲಿ ಕೈ ಮುಗಿದು ಒಳಗೆ ಬಾ ಯಾತ್ರಿಕನೆ, ಶಿಲೆಯಲ್ಲವೀ ಗುಡಿಯು ಕಲೆಯು ಬಲೆಯು" ಎಂದು ಹಾಡಿದ್ದಾರೆ. ನಂಜನಗೂಡು. ಕೃಷ್ಣರಾಜನಗರ ಮೊದಲಾದ ಕಡೆಗಳಲ್ಲಿ ಹೊಯ್ಸಳರ ನಂತರದ ಕಾಲದ ದೇಗುಲಗಳಿವೆ.

ಮೈಸೂರು ಹಿಂದೆ ಮಹಿಷಪುರ, ಮಹಿಷ ಮಂಡಲ ಎಂದು ಹೆಸ ರಾಗಿತ್ತು. ವಿಜಯನಗರದ ಅರಸರ ಕಾಲದಲ್ಲಿ ಮೈಸೂರು ಜಿಲ್ಲೆ ವಿಜಯ ನಗರ ಸಾಮ್ರಾಜ್ಯದ ಅಧೀನಕ್ಕೆ ಬಂದಿತು. ಅದಕ್ಕೂ ಮೊದಲು ಗಂಗರು, ಚೋಳರು, ಹೊಯ್ಸಳರು ಈ ಜಿಲ್ಲೆಯನ್ನು ಆಳಿದ್ದರು. ಎಂತಲೇ ಆಯಾ ಅರಸರ ಕಾಲದಲ್ಲಿ ಕಟ್ಟಲಾದ ದೇವಾಲಯಗಳನ್ನು ಕಾಣುತ್ತೇವೆ.

ಮೈಸೂರು ಜಿಲ್ಲೆಯಲ್ಲಿ ಒಟ್ಟು ಹನ್ನೊಂದು ತಾಲ್ಲೂಕುಗಳಿವೆ. ಮೈಸೂರು, ಕೃಷ್ಣರಾಜನಗರ, ಯಳಂದೂರು, ತಿರುಮಕೂಡಲು ನರಸೀಪುರ, ಚಾಮರಾಜನಗರ, ನಂಜನಗೂಡು, ಹುಣಸೂರು, ಹೆಗ್ಗಡ ದೇವನಕೋಟೆ, ಗುಂಡ್ಲುಪೇಟೆ, ಕೊಳ್ಳೇಗಾಲ ಹಾಗೂ ಪಿರಿಯಾಪಟ್ಟಣ ಇವು ಈ ತಾಲ್ಲೂಕುಗಳಾಗಿವೆ.

ಮೈಸೂರನ್ನಾಳಿದವರು ಯದುವಂಶದ ಅರಸರು. ಇವರಿಗೆ ಒಡೆಯ ರೆಂದೂ ಹೇಳುವರು. ಇವರಲ್ಲಿ ಪ್ರಸಿದ್ಧರಾದವರು ಚಿಕ್ಕದೇವರಾಜ ಒಡೆಯರ್, ಮುಮ್ಮಡಿ ಹಾಗೂ ನಾಲ್ಮಡಿ ಕೃಷ್ಣರಾಜ ಒಡೆಯರು ಮತ್ತು ಜಯಚಾಮರಾಜೇಂದ್ರ ಒಡೆಯರು. ಈ ರಾಜರುಗಳ ಕಾಲದಲ್ಲಿ ದೇವಾಲಯಗಳ ಅಭಿವೃದ್ಧಿಯಾದವು.

ಮೈಸೂರಿನ ಅರಮನೆ ಕಣ್ಣಿಗೆ ಒಂದು ಹಬ್ಬ. ನವರಾತ್ರಿ ಕಾಲದಲ್ಲಿ ಅರಮನೆಗೆ ಮಾಡುವ ವಿದ್ಯುದ್ದೀಪಾಲಂಕಾರದಿಂದಾಗಿ ಅದು ಸ್ವರ್ಗ ಲೋಕವೇ ಧರೆಗಿಳಿದು ಬಂದಿದೆಯೋ ಎನಿಸುವಂತೆ ಮಾಡುತ್ತದೆ. ಅರಮನೆ ಆವರಣದಲ್ಲಿರುವ ದೇವಾಲಯಗಳು ಒಡೆಯರ ಕಾಲದ ವಾಸ್ತುಶಿಲ್ಪಕ್ಕೆ ಉತ್ತಮ ಉದಾಹರಣೆಗಳಾಗಿವೆ. ಕೋಟೆ ಆಂಜನೇಯಸ್ವಾಮಿ ದೇವಸ್ಥಾನ ಅರಮನೆಯ ಸನಿಹದಲ್ಲಿದೆ. ಮೈಸೂರಿನ ಪ್ರೇಕ್ಷಣೀಯ ಸ್ಥಳಗಳಲ್ಲಿ ಚಾಮುಂಡಿ ಬೆಟ್ಟವೂ ಒಂದು. ಇದು ಸಮುದ್ರ ಮಟ್ಟದಿಂದ 1063 ಮೀಟರ್ ಎತ್ತರದಲ್ಲಿದೆ. ಈ ಬೆಟ್ಟ ಮೈಸೂರು ನಗರಕ್ಕೆ ಒಂದು ಸುಂದರ ಹಿನ್ನೆಲೆಯನ್ನೊದಗಿಸಿದ್ದು ಬೆಟ್ಟದ ಮೇಲೆ ಮೈಸೂರರಸರ ಮನೆ ದೇವರಾದ ಚಾಮುಂಡೇಶ್ವರಿ ದೇವಾಲಯವಿದೆ. ಇದು ದ್ರಾವಿಡ ಶೈಲಿಯ ಸುಂದರ ದೇವಾಲಯ, ಗರ್ಭಗುಡಿಯಲ್ಲಿರುವ ಚಾಮುಂಡೇಶ್ವರಿ ವಿಗ್ರಹ ಅತ್ಯಂತ ಸುಂದರವಾಗಿದೆ. ಪ್ರತಿ ಸೋಮವಾರ ಈ ದೇವಾಲಯದಲ್ಲಿ ವಿಶೇಷ ಪೂಜೆ ಇರುತ್ತದೆ. ನವರಾತ್ರಿ ಕಾಲದಲ್ಲಿ ನಡೆಯುವ ಚಾಮುಂಡೇಶ್ವರಿ ರಥೋತ್ಸವ ತೆಪ್ಪೋತ್ಸವಗಳು ಸಾವಿರಾರು ಭಕ್ತರನ್ನಾಕರ್ಷಿಸುತ್ತವೆ. ದೇವಾಲಯದ ಒಂದು ಕಡೆ ಮಹಿಷಾಸುರನ ಭವ್ಯವಾದ ವಿಗ್ರಹವಿದೆ. ಮಹಿಷಾಸುರನೆಂಬ ದೈತ್ಯನನ್ನು ಕೊಲ್ಲಲು ಪಾರ್ವತಿ ಆದಿಶಕ್ತಿಯಾಗಿ ಅವತರಿಸಿದಳೆಂದು

ಪ್ರತೀತಿ ಇದೆ. ಚಾಮುಂಡೇಶ್ವರಿ ದೇವಾಲಯದಿಂದ ಕೆಳಕ್ಕೆ ಬೃಹತ್ ನಂದಿ ವಿಗ್ರಹವಿವೆ, ಇದು ಕರಿ ಶಿಲೆಯ ವಿಗ್ರಹ. ಒಂದೇ ಕಲ್ಲಿನಲ್ಲಿ ಕಡೆಯಲಾದ ಈ ವಿಗ್ರಹ ಸುಂದರವಾಗಿದ್ದು ಇದಕ್ಕೂ ಪೂಜೆ ಸಲ್ಲುತ್ತಿದೆ. ಚಾಮುಂಡೇಶ್ವರಿ ದೇವಾಲಯದಲ್ಲಿ ಮುಮ್ಮಡಿ ಕೃಷ್ಣದೇವರಾಜ ಒಡೆಯರು ಮತ್ತು ಅವರ ಪತ್ನಿಯರಾದ ದೇವಾಜಮ್ಮಣ್ಣಿ, ಚೆಲುವಾಜಮ್ಮಣ್ಣಿ, ಲಿಂಗಾಜಮ್ಮಣ್ಣಿ ಇವರುಗಳ ಭಕ್ತ ವಿಗ್ರಹಗಳನ್ನು ನಿಲ್ಲಿಸಲಾಗಿದೆ.

ಮೈಸೂರಿಗೆ ಈಶಾನ್ಯದಲ್ಲಿನ ಕ್ಯಾತಮಾರನಹಳ್ಳಿಯಲ್ಲಿ ಗ್ರಾಮದೇವತೆ ಹುಲಿಯಮ್ಮನ ಗುಡಿ ಇದೆ. ಮೈಸೂರು ನಗರಕ್ಕೆ 10 ಕಿ. ಮಿ. ದೂರ ದಲ್ಲಿರುವ ವರುಣ ಇತಿಹಾಸ ಪ್ರಸಿದ್ಧ ಸ್ಥಳ. ವರುಣದಲ್ಲಿ ಮಹಾಲಿಂಗೇಶ್ವರ ಒಂದು ಚಿಕ್ಕ ಗುಡಿ ಇದರ ಹೊರ ಗೋಡೆಗಳ ಮೇಲೆ ಕಪೋತದ ಕೆಳಗೆ ಪುರಾಣದ ಕಥೆಗಳನ್ನು ಹೇಳುವ ಶಿಲ್ಪ ಪಟ್ಟಿಕೆಗಳಿವೆ. ಮಹದೇವೇಶ್ವರ ದೇವಾಲಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಪತ್ನಿ ದೇವಾಜಮ್ಮಣ್ಣಿ ಕಟ್ಟಿಸಿದಳು. ಗರ್ಭಗುಡಿಯಲ್ಲಿ ಗೋಳಾಕಾರದ ಶಿಲೆಯಲಿಂಗವಿದೆ. ನವರಂಗದಲ್ಲಿ ಪಾರ್ವತಿ, ನಂದಿ, ವಿದ್ಯಾಗಣಪತಿ ಹಾಗೂ ಕೃಷ್ಣನ ಮೂರ್ತಿಗಳಿವೆ.

## ಬೆಟ್ಟದಪುರ

ಪಿರಿಯಾಪಟ್ಟಣ ತಾಲ್ಲೂಕಿನ ಒಂದು ಗ್ರಾಮ. ಪಿರಿಯಾಪಟ್ಟಣಕ್ಕೆ 16 ಕಿ. ಮಿ ಉತ್ತರಕ್ಕಿರುವ ಈ ಊರು ಸಂಕೇತಿ ಬ್ರಾಹ್ಮಣರ ಒಂದು ಮುಖ್ಯ ಕೇಂದ್ರ. ಬೆಟ್ಟದಪುರ ಸಂಕೇತಿಗಳೆಂದು ಈ ಬ್ರಾಹ್ಮಣರು ಹೆಸರಾಗಿರುತ್ತಾರೆ. ಈ ಊರಿನ ಆಗ್ನೇಯದಲ್ಲಿರುವ ಬೆಟ್ಟ ಸುಮಾರು 4390 ಅಡಿ ಎತ್ತರವಿದ್ದು ಬೆಟ್ಟದ ಮೇಲೆ ಸಿಡಿಲು ಮಲ್ಲಿಕಾರ್ಜುನ ದೇವಾಲಯವಿದೆ. ಅನ್ನದಾನಿ ಮಲ್ಲಿಕಾರ್ಜುನ ಎಂದೂ ಈ ದೇವರಿಗೆ ಹೇಳುತ್ತಾರೆ. ಬೆಟ್ಟದ ಬುಡದಲ್ಲಿ ಮೆಟ್ಟಿಲುಗಳನ್ನೇರತೊಡಗುವ ಸ್ಥಳದಲ್ಲಿ ಎತ್ತರವಾದ ಗೋಪುರವಿರುವ ಪ್ರವೇಶ ದ್ವಾರವಿದ್ದು ಇದರ ಎರಡೂ

ಕಡೆಗಳಲ್ಲಿ ಮಹಿಷಾಸುರ ಮರ್ದಿನಿ ಹಾಗೂ ಭೈರವೇಶ್ವರ ದೇವಾಲಯಗಳಿವೆ. ದ್ವಾರದ ಗೋಡೆಗಳು ಹಾಗೂ ಮೇಲ್ಚಾವಣಿಗಳಲ್ಲಿ ಹಲವು ಚಿತ್ರಗಳಿವೆ. ಈ ಊರಿಗೆ ಸಮೀಪವೇ ಇನ್ನೊಂದು ಚಿಕ್ಕದಾದ ಬೆಟ್ಟವಿದ್ದು ಅದರ ಬಳಿ ವೀರಾಂಜನೇಯನ ಗುಡಿ ಇದೆ.

ಪಿರಿಯಾಪಟ್ಟಣದಲ್ಲಿ ಪಿರಿಯಾಪಟ್ಟಣದಮ್ಮ, ಕನ್ನಂಬಾಡಿಯಮ್ಮ, ಹೆಂಕಡೇಶ್ವರ, ವೈದ್ಯೇಶ್ವರ, ಚೆನ್ನಕೇಶವ, ಕೋಟೆ ಮಾರಮ್ಮ, ಆಂಜನೇಯ ದೇವಸ್ಥಾನಗಳಿವೆ. ಪಿರಿಯಾಪಟ್ಟಣದಮ್ಮ ಹಾಗೂ ಕನ್ನಂಬಾಡಿಯಮ್ಮ ದೇವತೆಗಳ ಜಾತ್ರೆ ಪ್ರತಿ ವರ್ಷ ನಡೆಯುತ್ತದೆ.

## ಚಾಮರಾಜೇಶ್ವರ ದೇವಾಲಯ

ಚಾಮರಾಜನಗರದಲ್ಲಿರುವ ಈ ದೇವಾಲಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ತಂದೆ ಚಾಮರಾಜ ಒಡೆಯರು 1826ರಲ್ಲಿ ಕಟ್ಟಿಸಿದರು. ಈ ದೇವಾಲಯಕ್ಕೆ ದೊಡ್ಡ ಪ್ರಾಕಾರವಿದೆ. ಎತ್ತರವಾದ ಮಹಾದ್ವಾರ, ಗೋಪುರ ಇದೆ. ಒಳಗೆ ಮೂರು ಗುಡಿಗಳಿದ್ದು ಮಧ್ಯದ ಗುಡಿಯಲ್ಲಿ ಶಿವಲಿಂಗವಿದೆ ಇದನ್ನೆ ಚಾಮರಾಜೇಶ್ವರ ಎನ್ನುತ್ತಾರೆ. ಎಡಗಡೆ ಗುಡಿಯಲ್ಲಿ ಕೆಂಪನಂಜಮಾಂಬಾ ವಿಗ್ರಹವೂ ಬಲಗಡೆ ಗುಡಿಯಲ್ಲಿ ಚಾಮುಂಡಿ ವಿಗ್ರಹವೂ ಇದೆ. ಪ್ರಾಕಾರದೊಳಗೆ ಸುತ್ತಲೂ ಹಲವು ಶಿವಲಿಂಗಗಳೂ 63 ಪುರಾತನರ ವಿಗ್ರಹಗಳೂ ಇವೆ. ವೀರಭದ್ರ ಗುಡಿ ಚಾಮರಾಜನಗರದ ಮತ್ತೊಂದು ಗುಡಿ. ಇದರಲ್ಲಿ ವೀರಭದ್ರ ಮೂರ್ತಿ ಹಾಗೂ ಭದ್ರಕಾಳಿ ವಿಗ್ರಹಗಳಿವೆ. ಪಾರ್ಶ್ವನಾಥ ದೇವಸ್ಥಾನ ಇಲ್ಲಿನ ಮತ್ತೊಂದು ದೇವಾಲಯ. ಚಾಮರಾಜನಗರ ತಾಲ್ಲೂಕಿದ ಹಳೆ ಆಲೂರಿನಲ್ಲಿ ಪ್ರಾಚೀನ ವೆನ್ನಲಾದ ಅರ್ಕೇಶ್ವರ ಗುಡಿ ಇದೆ. ನರಸಮಂಗಲದಲ್ಲಿ ಪ್ರಾಚೀನ ರಾಮ ಲಿಂಗೇಶ್ವರ ದೇವಾಲಯವಿದೆ. ಇದು ಗಂಗರ ಶೈಲಿಯದಾಗಿದೆ.

ಹರದನ ಹಳ್ಳಿಯಲ್ಲಿ ದಿವ್ಯಲಿಂಗೇಶ್ವರ ದೇವಾಲಯವಿದ್ದು ಇದಕ್ಕಿದ್ದ ಮೊದಲ ಹೆಸರು ಅಳಿಲೇಶ್ವರ. ದೇವಾಲಯ ವಿಜಯನಗರ ಶೈಲಿಯ

ಗೋಪುರವನ್ನು ಹೊಂದಿದೆ, ನವರಂಗದ ಎಡಭಾಗದಲ್ಲಿ ವೀರಭದ್ರನ ಗುಡಿ ಇದೆ. ಪ್ರಾಕಾರದಲ್ಲಿ ಸರಸ್ವತಿ ಹಾಗೂ ಕಾಮಾಕ್ಷಿ ದೇವರ ಗುಡಿಗಳು ಇವೆ. ಗೋಪಾಲ ಕೃಷ್ಣದೇವಾಲಯ ಈ ಊರಿನ ಮತ್ತೊಂದು ದೇವಾಲಯ, ಇದರ ಕೆಲವು ಸ್ತಂಭಗಳಲ್ಲಿ ಶಿವನ ವಿಗ್ರಹಗಳಿವೆ, ಶ್ರೀವೈಷ್ಣವ ಆಳ್ವಾರು ಗಳ ವಿಗ್ರಹಗಳು ಇಲ್ಲಿಯ ಒಂದು ಪೂಜಾಗೃಹದಲ್ಲಿವೆ. ಹರದನ ಹಳ್ಳಿ ಚಾಮರಾಜನಗರದ ದಕ್ಷಿಣಕ್ಕೆ ಐದು ಕಿ. ಮೀ ದೂರದಲ್ಲಿದೆ.

ಹರಳುಕೋಟೆ ಚಾಮರಾಜನಗರಕ್ಕೆ ಐದು ಕಿ. ಮೀ ದೂರದಲ್ಲಿರುವ ಒಂದು ಗ್ರಾಮ. ಹಿಂದೆ ಈ ಊರು ಅರ್ಜುನನ ಮಗ ಬಬ್ರುವಾಹನನ ರಾಜಧಾನಿಯಾಗಿತ್ತು. ಆಗ ಇದರ ಹೆಸರು ಮಣಿಪುರ, ಇಲ್ಲಿ ಜನಾರ್ದನ ದೇವಾಲಯವಿದೆ. ದ್ರಾವಿಡ ಶೈಲಿಯ ಈ ಕಟ್ಟಡದ ಗರ್ಭಗುಡಿಯಲ್ಲಿ ಶ್ರೀನಿವಾಸನ ಮೂರ್ತಿಯೊಂದಿದೆ. ವೀರಭದ್ರ, ಆಂಜನೇಯ ಗುಡಿಗಳೂ ಇಲ್ಲಿರುತ್ತವೆ. ಇವು ಅಷ್ಟೇನೂ ಭವ್ಯವಾಗಿರುವುದಿಲ್ಲ. ಈ ದೇವಾಲಯ ಗಳು ಶಿಥಿಲವಾದ ಸ್ಥಿತಿಯಲ್ಲಿದ್ದು ನವೀಕರಿಸುವ ಅಗತ್ಯವಿರುತ್ತದೆ.

## ಗೌರೀಶ್ವರ ದೇವಾಲಯ

ದ್ರಾವಿಡ ಶೈಲಿಯ ಗೌರೀಶ್ವರ ದೇವಾಲಯ ಯಳಂದೂರಿನ ಪ್ರೇಕ್ಷ ಣೀಯ ಅಂಶ. ಇದರ ಮಹಾದ್ವಾರ ಹನ್ನೆರಡು ಅಡಿಗಳಷ್ಟು ಎತ್ತರ ವಿರುತ್ತದೆ. ದೇವಾಲಯದಲ್ಲಿ ಶಿವ, ಭೈರವ, ವೀರಭದ್ರ, ಗಣಪತಿ, ದುರ್ಗ, ವಿಷ್ಣು, ವೇಣುಗೋಪಾಲ, ಕೃಷ್ಣ, ದಕ್ಷಿಣಾಮೂರ್ತಿ ವಿಗ್ರಹಗಳಿವೆ. ಕಪಿಲೇಶ್ವರ, ವರಾಹಸ್ವಾಮಿ ದೇವಾಲಯಗಳು ಯಳಂದೂರಿನ ಇತರ ದೇವಾಲಯಗಳು. ಹದಿ ಬದೆಯ ಧರ್ಮ ಕಾವ್ಯವನ್ನು ಬರೆದ ಸಂಚಿಯ ಹೊನ್ನಮ್ಮ ಇದೇ ಊರಿನವಳು ಎಂದು ತಿಳಿಯಲಾಗಿದೆ. ಗೌರೀಶ್ವರ ದೇವಾಲಯದಲ್ಲಿ ಕಂಡು ಬರುವ ಕೆಲವು ಕೆತ್ತನೆಗಳು ಉದಾ : ಕಮಲದ ಮೊಗ್ಗು, ಸರಸ್ವತಿ ವಿಗ್ರಹ ಬಹು ಅಂದವಾಗಿದೆ.

# ಬಿಳಿಗಿರಿರಂಗನ ಬೆಟ್ಟ

ಯಳಂದೂರಿಗೆ 15 ಕಿ. ಮಿ. ದೂರಕ್ಕಿರುವ ಗಿರಿ ಕ್ಷೇತ್ರ. ಬೆಟ್ಟ ಸುಮಾರು 5090 ಅಡಿ ಎತ್ತರವಿದೆ. ಈ ಗಿರಿಗೆ ಶ್ವೇತಾದ್ರಿ, ಬಿಳಿಗಿರಿ ಬೆಟ್ಟ ಎಂದೂ ಹೆಸರುಗಳಿವೆ. ಬೆಟ್ಟದ ಮೇಲಿರುವ ಬಿಳಿಗಿರಿ ರಂಗಸ್ವಾಮಿ ದೇವಾಲಯದಿಂದಾಗಿ ಗಿರಿ ಒಂದು ಕ್ಷೇತ್ರವಾಗಿದೆ.

ರಂಗಸ್ವಾಮಿ ದೇವಾಲಯ ಬೆಟ್ಟದ ತುದಿಯಲ್ಲಿದೆ. ದೇವಾಲಯ ದ್ರಾವಿಡ ಶೈಲಿಯ ಕಟ್ಟಡವಾಗಿದ್ದು ಮುಖ್ಯ ದೇವರು ಬಿಳಿಗಿರಿ ರಂಗಸ್ವಾಮಿ ಸುಂದರ ಶಿಲಾಮೂರ್ತಿ ಇರುತ್ತದೆ. ಶ್ರೀನಿವಾಸ ಎಂದೂ ಈ ದೇವರಿಗೆ ಹೆಸರು. ಚತುರ್ಭುಜ ಮೂರ್ತಿ. ಈ ದೇವಾಲಯದ ನವರಂಗದ ಬಲಕ್ಕಿರುವ ಗೂಡುಗಳಲ್ಲಿ ಬಿಳಿಗಿರಿ ರಂಗ, ಆಂಜನೇಯ ಹಾಗೂ ಮಣವಾಳ ಮಹಾಮುನಿಗಳ ಮೂರ್ತಿಗಳನ್ನು ನೋಡಬಹುದು. ಅದೇ ರೀತಿ ಎಡ ಭಾಗದ ಗೂಡುಗಳಲ್ಲಿ ರಾಮಾನುಜ, ನಮ್ಮಾಳ್ವಾರ್ ಹಾಗೂ ಶಠಕೋಪರ ವಿಗ್ರಹಗಳನ್ನು ಕಾಣಬಹುದು. ದೇವಾಲಯದ ಬಲಭಾಗದಲ್ಲಿ ಅಲಮೇಲು ಮಂಗೈ ಎಂದು ಹೇಳುವ ಅಮ್ಮನವರ ಗುಡಿ ಇದೆ. ಬಿಳಿಗಿರಿ ರಂಗಸ್ವಾಮಿಯ ರಥೋತ್ಸವ ಪ್ರತಿ ವರ್ಷ ವೈಶಾಖ ಮಾಸದಲ್ಲಿ ನೆರವೇರುತ್ತದೆ.

ಈ ಬೆಟ್ಟದಲ್ಲಿ ಸೋಲಿಗರ ಸಂಖ್ಯೆಯೇ ಹೆಚ್ಚು. ಇವರು ಬಿಳಿಗಿರಿ ರಂಗನನ್ನು ತಮ್ಮ ನೆಂಟನೆಂದು ಹೇಳುತ್ತಾರೆ. ವೆಂಕಟೇಶಸ್ವಾಮಿ ಪತ್ನಿಯ ಅಭ್ಯಂಗನ ಸ್ನಾನಕ್ಕೆಂದು ಎಣ್ಣೆ ತರಲು ಈ ಗಿರಿಗೆ ಬಂದಾಗ ಸೋಲಿಗರ ಹೆಣ್ಣೊಬ್ಬಳನ್ನು ಪ್ರೀತಿಸಿ ಅಲ್ಲಿಯೇ ನೆಲಸಿದನೆಂದು ಸೋಲಿಗರು ಈ ದೇವರನ್ನು ಭಕ್ತಿ ಶ್ರದ್ಧೆಗಳಿಂದ ಕಾಣುತ್ತಾರೆ. ಬೆಟ್ಟದ ಮೇಲೆ ಗಂಗಾ ಧರೇಶ್ವರ ಎಂಬ ಇನ್ನೊಂದು ಗುಡಿ ಇದೆ. ವಿಷ್ಣುವು ಭಸ್ಮಾಸುರನೆಂಬ ರಾಕ್ಷಸನನ್ನು ಸಂಹರಿಸಲು ಮೋಹಿನಿ ರೂಪತಾಳಿ ಅವನನ್ನು ಕೊಲಿಸಿದ ಬಳಿಕ ಆ ರಾಕ್ಷಸನಿಗೆ ವರವಿತ್ತು ವಂಚಿತನಾಗಿದ್ದ ರುದ್ರ ಇಲ್ಲಿ ನೆಲಸಿದನೆಂದು ಹೇಳುತ್ತಾರೆ.

ಬಿಳಿಗಿರಿಯನ್ನು ದಕ್ಷಿಣದ ತಿರುಪತಿ ಎಂದೂ ಹೇಳುತ್ತಾರೆ. ಇದೊಂದು ಗಿರಿಧಾಮ. ವನ್ಯಮೃಗಗಳೂ ಇಲ್ಲಿ ವಾಸವಾಗಿವೆ.

## ಅಗರ

ಯಳಂದೂರಿಗೆ 12 ಕಿ.ಮೀ. ದೂರದಲ್ಲಿರುವ ಹಳ್ಳಿ. ಇಲ್ಲಿ ಚೋಳ ರಾಜ ಒಂದನೆಯ ರಾಜರಾಜನ ಕಾಲದ ದುರ್ಗಾ ದೇವಾಲಯವಿದೆ. ನರಸಿಂಹ ದೇವಾಲಯ ಊರಿನ ಇನ್ನೊಂದು ಚೋಳರ ಕಾಲದ ಗುಡಿ. ದುರ್ಗಾ ದೇವಾಲಯದಲ್ಲಿ ವೈಷ್ಣವೀರೂಪದ ದುರ್ಗಾವಿಗ್ರಹವಿದೆ. ನರಸಿಂಹ ಗುಡಿಯಲ್ಲಿ ವೃತ್ತಾಕಾರದ ಗರ್ಭಗೃಹವಿದ್ದು ನರಸಿಂಹ ವಿಗ್ರಹ ಒಂದು ಸಂಯುಕ್ತ ರೂಪವಾಗಿದೆ. ಇದು ಯೋಗ, ಲಕ್ಷ್ಮೀ, ಜ್ವಾಲಾ, ಉಗ್ರ ಹಾಗೂ ಪ್ರಹ್ಲಾದ ಈ ನರಸಿಂಹಗಳ ಮಿಶ್ರ ರೂಪ ಎನ್ನಬಹುದು. ರಾಮೇಶ್ವರ, ವರದರಾಜ ದೇವಾಲಯಗಳು ಈ ಊರಿನ ಇತರ ದೇವಾಲಯಗಳಾಗಿವೆ. ಅಗರದ ಎಲ್ಲ ದೇವಾಲಯಗಳೂ ಪ್ರಾಚೀನ.

## ಅರ್ಕೇಶ್ವರ ದೇವಾಲಯ, ಕೃಷ್ಣರಾಜನಗರ

ಕೃಷ್ಣರಾಜನಗರಕ್ಕೆ ಮೊದಲು ಇದ್ದ ಹೆಸರು ಎಡತೊರೆ. ಕಾರಣ, ಕಾವೇರಿ ನದಿಯ ದಂಡೆಯಲ್ಲಿ ನದಿ ಎಡಕ್ಕೆ ತಿರುಗುವಲ್ಲಿ ಈ ಊರಿತ್ತು. ಕೃಷ್ಣರಾಜ ಸಾಗರದ ರಚನೆಯಾದ ಬಳಿಕ ಅದರಿಂದಾಗಿ ಎಡತೊರೆಯ ಒಂದು ಭಾಗ ಮುಳುಗಡೆಯಾಗುತ್ತಿದ್ದುದರಿಂದ ಹೊಸ ಪಟ್ಟಣವನ್ನು ಸುಮಾರು 3 ಕಿ. ಮೀ. ದೂರದಲ್ಲಿ ಎತ್ತರವಾದ ಸ್ಥಳದಲ್ಲಿ ನಿರ್ಮಿಸಲಾಯಿತು. ಎಡತೊರೆ ಭಾಗದಲ್ಲಿ ಅರ್ಕೇಶ್ವರ ದೇವಾಲಯವಿದೆ. ರಥಸಪ್ತಮಿಯ ದಿನ ಸೂರ್ಯ ರಶ್ಮಿ ( ಅರ್ಕ = ಸೂರ್ಯ ) ನೇರವಾಗಿ ಶಿವಲಿಂಗದ ಮೇಲೆ ಬೀಳುವುದು ಗಮನಾರ್ಹ.

ಕೃಷ್ಣರಾಜನಗರ ತಾಲ್ಲೂಕಿನ ಚುಂಚನ ಕಟ್ಟೆ ಒಂದು ಪವಿತ್ರ ಸ್ಥಳ.

ಇಲ್ಲಿ ಚುಂಚ ಎಂಬ ಋಷಿ ವಾಸವಾಗಿದ್ದು ಅವನಿಂದ ಊರಿಗೆ ಈ ಹೆಸರಿದೆ. ಚುಂಚ ರಾಮನ ಭಕ್ತನಾಗಿದ್ದನು. ಅರಣ್ಯ ವಾಸ ಕಾಲದಲ್ಲಿ ಶ್ರೀ ರಾಮ ಸೀತಾ ಲಕ್ಷ್ಮಣರೊಂದಿಗೆ ಇಲ್ಲಿಗೆ ಬಂದಿದ್ದನೆಂದು ಹೇಳುತ್ತಾರೆ. ಇಲ್ಲಿ ಕಾವೇರಿ ಸೃಷ್ಟಿಸಿರುವ ಜಲಪಾತ ರಮ್ಯ. ನದಿ ಬಲ ದಂಡೆಯ ಮೇಲೆ ಕೋದಂಡ ರಾಮನ ದೇವಾಲಯವಿದೆ. ದೇವಾಲಯದೊಳಗಿನ ಕಲ್ಯಾಣ ಮಂಟಪದ ವರ್ಣರಂಜಿತ ದಶಾವತಾರ ಚಿತ್ರಗಳಿವೆ. ಪ್ರತಿ ವರ್ಷ ಚುಂಚನ ಕಟ್ಟೆಯಲ್ಲಿ ರಾಮದೇವರ ರಥೋತ್ಸವ, ಜಾತ್ರೆ ನಡೆಯುತ್ತದೆ.

ಕೃಷ್ಣರಾಜ ನಗರಕ್ಕೆ ವಾಯುವ್ಯದಲ್ಲಿ ಸುಮಾರು 34 ಕಿ.ಮೀ. ದೂರ ದಲ್ಲಿ ದೊಡ್ಡ ಹನ ಸೋಗೆ ಎಂಬ ಗ್ರಾಮವಿದೆ. ಲೇಖಕನ ಜನ್ಮಸ್ಥಳ ಇಲ್ಲಿ ಕಾವೇರಿ ನದಿ ದಂಡೆಯ ಮೇಲೆ ಈಶ್ವರ, ಆಂಜನೇಯ ಹಾಗೂ ರಾಘವೇಂದ್ರ ಸ್ವಾಮಿ ದೇವಾಲಯಗಳಿವೆ. ಮೊದಲು ಈ ಊರುವನ ಸೋಗೆ ಎಂದು ಇತ್ತು. ಈಗಿನ ಚಿಕ್ಕ ಹನಸೋಗೆಯೇ ಹನಸೋಗೆಯಾಗಿತ್ತು. ಅಲ್ಲಿನ ಬ್ರಾಹ್ಮಣರು ನದಿ ದಡದಲ್ಲಿ ನೆಲಸಿ ಊರು ದೊಡ್ಡ ಗ್ರಾಮವಾಗಿ ದೊಡ್ಡ ಹನಸೋಗೆ ಎನಿಸಿತು. ಚಿಕ್ಕ ಹನಸೋಗೆಯಲ್ಲಿ ಆದಿನಾಥನ ಬಸದಿ ಇದ್ದು ಅದು ಹಾಳಾದ ಸ್ಥಿತಿಯಲ್ಲಿದೆ. ಸಾಲಿಗ್ರಾಮ ಕೆ. ಆರ್. ನಗರಕ್ಕೆ 26 ಕಿ.ಮೀ. ದೂರದಲ್ಲಿದ್ದು ಇದು ಶ್ರೀ ವೈಷ್ಣವರ ಪವಿತ್ರ ಸ್ಥಳ. ಇಲ್ಲಿ ಹೊಯ್ಸಳರ ಕಾಲದ ಕೆಲವು ದೇವಾಲಯಗಳಿವೆ. ನರಸಿಂಹಸ್ವಾಮಿ ದೇವಸ್ಥಾನ ಇವುಗಳಲ್ಲಿ ಪ್ರಮುಖವಾದುದು. ಇಲ್ಲಿಯ ದೇವಾಲಯದಲ್ಲಿ ರಾಮಾನುಜಾ ಚಾರ್ಯರ ಪಾದ ಎನ್ನಲಾದ ಕಲ್ಲಿನ ಶಿಲ್ಪವಿದೆ. ಚುಂಚನ ಕಟ್ಟೆ, ಸಾಲಿಗ್ರಾಮ ಹಾಗೂ ಹನಸೋಗೆ ಈ ಗ್ರಾಮಗಳನ್ನು ಕುರಿತು ಶ್ರೀ ಎಸ್. ಕೆ. ರಾಮ ಚಂದ್ರರಾಯರು ಒಂದು ಕಿರು ಹೊತ್ತಗೆ ಪ್ರಕಟಿಸಿರುತ್ತಾರೆ (ನೋಡಿ : ಐ.ಬಿ.ಎಚ್. ಪ್ರಕಾಶನದ ಕನ್ನಡ ನಾಡು ನುಡಿ ಸಂಸ್ಕೃತಿ ಮಾಲೆ)

## ವಿಜಯ ನಾರಾಯಣ ದೇವಾಲಯ, ಗುಂಡ್ಲುಪೇಟೆ

ಮೈಸೂರಿನ ದಕ್ಷಿಣಕ್ಕೆ 61.8 ಕಿ.ಮೀ, ದೂರದಲ್ಲಿರುವ ಗುಂಡ್ಲು

ಪೇಟೆಗೆ ಮೊದಲಿದ್ದ ಹೆಸರು ವಿಜಯಪುರ. ಇಲ್ಲಿ ಪರವಾಸು ದೇವ ದೇವಾಲಯ, ವಿಜಯ ನಾರಾಯಣ ದೇವಾಲಯ ಎಂದು ಎರಡು ದೇವಾಲಯಗಳಿವೆ. ಪರ ವಾಸುದೇವ ಗುಡಿ ಈಗ ಪಾಳು ಬಿದ್ದ ಸ್ಥಿತಿಯಲ್ಲಿದೆ. ಇದು ಗರ್ಭ ಗೃಹ, ಸುಕನಾಸಿ, ಪ್ರದಕ್ಷಿಣಾ ಪಥ, ವಿಸ್ತಾರವಾದ ನವರಂಗ ಇವನ್ನೆಲ್ಲ ಹೊಂದಿದೆ. ಇಲ್ಲಿದ್ದ ಮುಖ ಮಂಟಪ, ಹಾಗೂ ಪರವಾಸು ದೇವ ವಿಗ್ರಹ ಮತ್ತು ಪಕ್ಕದಲ್ಲಿದ್ದ ಕಮಲವಲ್ಲಿ ದೇವಾಲಯದ ವಿಗ್ರಹ ಇವನ್ನು ವಿಜಯ ನಾರಾಯಣನ ಗುಡಿಗೆ ತೆಗೆದುಕೊಂಡು ಹೋಗಿ ಇಡಲಾಗಿದೆ. ಕೋಟೆಯ ಒಳಗಿರುವ ವಿಜಯ ನಾರಾಯಣನ ದೇವಾಲಯವನ್ನು ಹೊಯ್ಸಳ ವಿಷ್ಣುವರ್ಧನನು ಕಟ್ಟಿಸಿದನೆಂದು ತಿಳಿಯಗಿಲಾದೆ. ಆದರೆ ದೇವಾಲಯದ ಬೇರೆ ಬೇರೆ ಕಾಲಗಳಲ್ಲಿ ರಚನೆಗೊಂಡಿದ್ದು ನವರಂಗದ ಮೇಲ್ಛಾವಣಿ ವಿಜಯನಗರ ಶೈಲಿಯದಾಗಿದ್ದು ಮಧ್ಯದಲ್ಲಿ ಕಮಲದ ಕೆತ್ತನೆ ಇದೆ. ಗರ್ಭಗೃಹದ ದ್ವಾರ ಸುಂದರವಾಗಿದೆ. ಇಲ್ಲಿರುವ ಮೂರ್ತಿ ಅಭಯ ಮುದ್ರೆಯಲ್ಲಿ ನಿಂತಿದ್ದು ಬಲಗೈಯಲ್ಲಿ ಕಮಲ ಇರುತ್ತದೆ. ಹಿಂಭಾಗದ ತೋರಣದಲ್ಲಿ ದಶಾವತಾರಗಳ ಕೆತ್ತನೆ ಇರುತ್ತದೆ. ಪರ ವಾಸುದೇವ ವಿಗ್ರಹ ಅತ್ಯಂತ ಸುಂದರವಾಗಿದ್ದು ತಲೆಯ ಮೇಲ್ಭಾಗದಲ್ಲಿ ಬಿಚ್ಚಿರುವ ಹೆಡೆಯುಳ್ಳ ಆದಿಶೇಷನ ಸುರುಳಿಯ ಮೇಲೆ ದೇವರು ಕುಳಿತಿರುವ ಭಂಗಿ ನಯನ ಮನೋಹರ. ಇದೊಂದು ಒಳ್ಳೆಯ ಶಿಲ್ಪ. ದೇವಾಲಯದಲ್ಲಿ ಪ್ರದಕ್ಷಿಣಾ ಪಥವಿದೆ. ಈ ದೇವಾಲಯ ಕ್ರಿ.ಶ. 13–14ನೆಯ ಶತಮಾನಕ್ಕೆ ಸೇರಿದುದಾಗಿದೆ. ರಾಮೇಶ್ವರ ಗುಡಿ ಗುಂಡ್ಲುಪೇಟೆಯ ಮತ್ತೊಂದು ದೇವಾಲಯ. ಇದು ಬಹುಮಟ್ಟಿಗೆ ತಲಕಾಡಿನ ವೈದ್ಯೇಶ್ವರ ದೇವಾಲಯವನ್ನು ಹೋಲುತ್ತದೆ. ಇದರ ಗೋಪುರ ಇಟ್ಟಿಗೆಯದಾಗಿದೆ. ಗರ್ಭಗೃಹ ಚೌಕಾಕಾರ. ಈ ಗುಡಿಯನ್ನು 1337ರಲ್ಲಿ ಕುಮಾರ ಕಂಪಣ್ಣನೆಂಬುವನು ನಿರ್ಮಿಸಿದನೆಂದು ತಿಳಿಯಲಾಗಿದೆ. ಗುಂಡ್ಲುಪೇಟೆಯಿಂದ 15 ಕಿ.ಮೀ. ದೂರದಲ್ಲಿರುವ ಗೋಪಾಲ ಸ್ವಾಮಿ ದೇವಾಲಯವಿದೆ. ಇಲ್ಲಿ ವರ್ಷಕ್ಕೊಮ್ಮೆ ರಥೋತ್ಸವ ನಡೆಯುತ್ತದೆ. ತೆರಕಣಾಂಬಿಯಲ್ಲಿ ಲಕ್ಷ್ಮೀವರದರಾಜ ಸ್ವಾಮಿ, ಸುಗ್ರೀವ ದೇವಾಲಯ, ಹನುಮಂತ ದೇವಾಲಯಗಳಿವೆ. ಸುಗ್ರೀವನ ವಿಗ್ರಹ ಸುಮಾರು ಆರು ಅಡಿ ಎತ್ತರವಿರುತ್ತದೆ.

# ತಲಕಾಡು

ತಿರುಮಕೂಡಲು ನರಸೀಪುರ ತಾಲ್ಲೂಕಿನ ಪುಣ್ಯ ಕ್ಷೇತ್ರ, ಕಾವೇರಿ ನದಿಯ ದಡದಲ್ಲಿರುವ ಈ ಊರು ಇತಿಹಾಸ ಪ್ರಸಿದ್ಧ ಸ್ಥಳವೂ ಆಗಿದೆ. ಹಿಂದೆ ತಲಕಾಡು ಗಂಗರಸರ ರಾಜಧಾನಿಯಾಗಿತ್ತು. ಇಲ್ಲಿ ಮೂವತ್ತಕ್ಕಿಂತಲೂ ಹೆಚ್ಚು ದೇವಾಲಯಗಳಿದ್ದುದಾಗಿ ತಿಳಿಯಲಾಗಿದೆ. ಇಲ್ಲಿ ಕಂಡು ಬರುವ ಅಪಾರ ಮರಳಿನ ರಾಶಿಯಲ್ಲಿ ಕೆಲವು ದೇವಾಲಯಗಳು ಹೂತು ಹೋಗಿರಬಹುದೆಂದು ಭಾವಿಸಲಾಗಿದೆ. ಇಲ್ಲಿ ಗಂಗರ ಹಾಗೂ ಚೋಳರ ಕಾಲದ ದೇವಾಲಯಗಳನ್ನು ಕಾಣುತ್ತೇವೆ. ಹೊಯ್ಸಳರ ಕಾಲದ ಹಾಗೂ ಮೈಸೂರು ಅರಸರ ಕಾಲದ ದೇವಾಲಯಗಳೂ ಇವೆ. ತಲಕಾಡು ಪಂಚಲಿಂಗ ದರ್ಶನ ಉತ್ಸವಕ್ಕೆ ಖ್ಯಾತಿವೆತ್ತುದಾಗಿದೆ. ಈ ಉತ್ಸವ ಸುಮಾರು 4 ರಿಂದ 14 ವರ್ಷಗಳ ಸಮಯದಲ್ಲಿ ಒಂದು ಸಲ ನಡೆಯುತ್ತದೆ. ಕಾರ್ತಿಕ ಬಹುಳ ಅಮಾವಾಸ್ಯೆಯು ಸೋಮವಾರವಾಗಿದ್ದು ಸೂರ್ಯ ಚಂದ್ರರಿಬ್ಬರೂ ವೃಶ್ಚಿಕ ರಾಶಿಯಲ್ಲಿ ಸೇರಿದಾಗ, ಆ ದಿನ ಉಷಃಕಾಲದಲ್ಲಿ ಬರುವ ಕುಹ ಯೋಗ ಪಂಚಲಿಂಗ ದರ್ಶನಕ್ಕೆ ಸೂಕ್ತ ಎಂದು ಹೇಳುತ್ತಾರೆ. ಈ ಪಂಚಲಿಂಗ ದರ್ಶನಕ್ಕೆ ಭಾರತದ ಇತರ ರಾಜ್ಯಗಳೂ ಸೇರಿದಂತೆ ನಾಡಿನ ನಾನಾ ಕಡೆಗಳಿಂದ ಯಾತ್ರಿಕರು ತಲಕಾಡಿಗೆ ಬರುತ್ತಾರೆ. ಈ ಶಿವಲಿಂಗಗಳ ವಿವರ ಇಂತಿದೆ.

1. ತತ್ಪುರುಷ ಮುಖ – ಅರ್ಕೇಶ್ವರ – ಕಾವೇರಿಯ ಉತ್ತರ ವಾಹಿನಿ ಬಳಿ (ವಿಜಯಪುರ)
2. ಅಘೋರ ಮುಖ – ವಾಸುಕೀಶ್ವರ - ಪೂರ್ವ ವಾಹಿನಿ ಬಳಿ
3. ಸದ್ಯೋಜಾತ ಮುಖ– ಸೈಕತೇಶ್ವರ ಅಥವಾ ಮರಳೇಶ್ವರ – ದಕ್ಷಿಣ ವಾಹಿನಿ ಬಳಿ
4. ವಾಮದೇವ ಮುಖ – ಮಲ್ಲಿಕಾರ್ಜುನೇಶ್ವರ – ಪಶ್ಚಿಮ ವಾಹಿನಿ ಬಳಿ (ಮುಡುಕು ತೊರೆಯಲ್ಲಿ)

5. ಈಶಾನ್ಯ ಮುಖ – ವೈದ್ಯನಾಥೇಶ್ವರ – ಮಧ್ಯದಲ್ಲಿ ಪಂಚ ಲಿಂಗ ದರ್ಶನದಿಂದ ಮುಕ್ತಿ, ಸೌಖ್ಯ ದೊರೆಯುವುದೆಂಬ ನಂಬಿಕೆ ಇದೆ. ಇಲ್ಲಿಯ ಕೀರ್ತಿ ನಾರಾಯಣ ದೇವಾಲಯವನ್ನು ಹೊಯ್ಸಳರ ದೊರೆ ವಿಷ್ಣುವರ್ಧನ ಕ್ರಿ.ಶ. 1117ರಲ್ಲಿ ತಾನು ಚೋಳರನ್ನು ಗೆದ್ದುದರ ಕುರುಹಾಗಿ ಕಟ್ಟಿಸಿದ. ಕೀರ್ತಿ ನಾರಾಯಣ ವಿಗ್ರಹ ಹತ್ತು ಅಡಿ ಎತ್ತರದ ಚತುರ್ಭುಜ ಮೂರ್ತಿ. ಇದರ ಪ್ರಭಾವಳಿಯ ಮೇಲೆ ವಿಷ್ಣುವಿನ ದಶಾವತಾರಗಳನ್ನು ನೋಡಬಹುದು. ನವರಂಗದಲ್ಲಿ ನಮ್ಮಾಳ್ವಾರ್, ವೇದಾಂತ ದೇಶಿಕರ್ ಮೊದಲಾದ ಮೂರ್ತಿಗಳಿವೆ. ನವರಂಗ ವಿಶಾಲವಾಗಿದ್ದು ಅದರ ನಡುವೆ ನಾಲ್ಕು ದಪ್ಪ ಕಂಬಗಳಿವೆ. ಅಲ್ಲಲ್ಲಿ ಕಾಣುವ ತಾವರೆ, ಆನೆ, ಸಿಂಹ, ಬಳ್ಳಿ ಇವುಗಳ ಕೆತ್ತನೆಗಳು ಅಂದವಾಗಿವೆ. ಗರ್ಭಗುಡಿ ಎತ್ತರವಾದ ಜಗತಿಯ ಮೇಲೆ ಇರುತ್ತದೆ.

ವೈದ್ಯೇಶ್ವರ ದೇವಾಲಯ ಕಣ ಶಿಲೆಯ ರಚನೆಯಾಗಿದೆ. ದ್ರಾವಿಡ ಹಾಗೂ ಹೊಯ್ಸಳ ಶೈಲಿಗಳ ಬೆರೆತ ಕಲೆಗಾರಿಕೆಯನ್ನು ಇಲ್ಲಿ ಕಾಣುತ್ತೇವೆ. ಇಂದು ಕಾಣುವ ಕಟ್ಟಡ ವಿಜಯನಗರದರಸರ ಕಾಲದಲ್ಲಿ ಸುಮಾರು 1450ರ ವೇಳೆಗೆ ನಿರ್ಮಾಣವಾಗಿರಬಹುದೆಂದು ತೋರುತ್ತದೆ. ಗುಡಿಯ ಸುತ್ತ ದೊಡ್ಡ ಪ್ರಾಕಾರವಿದ್ದು ಅದಕ್ಕೆ ಸೇರಿದಂತೆ ಸಣ್ಣ ಗುಡಿಗಳಿವೆ. ವೈದ್ಯೇಶ್ವರ ದೇವಾಲಯದ ದ್ವಾರಪಾಲ ವಿಗ್ರಹಗಳು ಹತ್ತು ಅಡಿ ಎತ್ತರವಿದ್ದು ಕರ್ನಾಟಕದಲ್ಲೇ ಇವು ದೊಡ್ಡವು.

ದೇವಾಲಯನ್ನು ದೊಡ್ಡದಾದ ಜಗತಿಯ ಮೇಲೆ ಎಬ್ಬಿಸಲಾಗಿದೆ. ಪೂರ್ವ ಮತ್ತು ದಕ್ಷಿಣದಲ್ಲಿ ಪ್ರವೇಶ ದ್ವಾರಗಳಿವೆ. ಗರ್ಭಗುಡಿಯ ಮುಂದೆ ಒಂದಂಕಣದ ಅಂತರಾಳ, ನಡುವೆ ನವರಂಗ ಅದರ ನಾಲ್ಕು ಪಾರ್ಶ್ವಗಳಲ್ಲಿ ಮೂರು ಅಂಕಣಗಳ ಸಾಲುಗಳಿವೆ. ದೇವಾಲಯದಲ್ಲಿ ಕಂಚಿನ ನಟರಾಜ ವಿಗ್ರಹವಿದೆ. ಈ ದೇವಾಲಯದ ಬಳಿ 1932ರಲ್ಲಿ ಆನಂದೇಶ್ವರ ದೇವಾಲಯದ ಶಿವಲಿಂಗವನ್ನು ತಂದು ಸ್ಥಾಪಿಸಲಾಗಿದೆ. ಚಿಕ್ಕ ದೇವರಾಜ ಒಡೆಯರ ಕಾಲದ ಗೌರೀಶಂಕರ ದೇವಾಲಯ, ಪಂಚಲಿಂಗೇಶ್ವರ, ವೀರಭದ್ರ, ಗೋಕರ್ಣೇಶ್ವರ ಇವು ತಲಕಾಡಿನ ಇತರ ದೇವಾಲಯಗಳು.

# ತಿರುಮಕೂಡಲು ನರಸೀಪುರ

ತಿರುಮಕೂಡಲು ನರಸೀಪುರ ಮೈಸೂರಿನಿಂದ ಆಗ್ನೇಯಕ್ಕೆ 30 ಕಿ.ಮೀ. ದೂರದಲ್ಲಿ ಕಾವೇರಿ ಕಪಿಲಾ ನದಿಗಳ ಸಂಗಮದ ಬಳಿ ಬಲ ದಂಡೆಯ ಮೇಲಿದೆ. ಅಗಸ್ತ್ಯೇಶ್ವರ, ಗುಂಜಾ ನರಸಿಂಹ ದೇವಾಲಯಗಳು ಈ ಊರಿನಲ್ಲಿ ನೋಡಬೇಕಾದವು. ತಿರುಮ ಕೂಡಲನ್ನೂ ನರಸೀಪುರವನ್ನೂ ಸಂಪರ್ಕಿಸುವ ಸೇತುವೆಯೊಂದಿದೆ. ಅಗಸ್ತ್ಯೇಶ್ವರ ದೇವಾಲಯ ದ್ರಾವಿಡ ಶೈಲಿಯ ರಚನೆ. ಇದರ ಕಾಲ ಕ್ರಿ.ಶ. 10-11ನೇ ಶತಮಾನ ಇರಬಹುದು. ಇಲ್ಲಿನ ಅಗಸ್ತ್ಯೇಶ್ವರ ಲಿಂಗವನ್ನು ಅಗಸ್ತ್ಯ ಋಷಿಗಳು ಸ್ಥಾಪಿಸಿದರೆಂದು ತಿಳಿಯಲಾಗಿದೆ. ಒಮ್ಮೆ ಅಗಸ್ತ್ಯ ಮುನಿಗಳು ಶಿವ ಪೂಜೆ ಮಾಡಬೇಕೆಂದು ಬಯಸಿ ಹನುಮಂತನಿಗೆ ನರ್ಮದೆಯಿಂದ ಒಂದು ಲಿಂಗವನ್ನು ತರಲು ಹೇಳಿದರಂತೆ. ಆದರೆ ಲಿಂಗ ಬರದೆ ಕಚ್ಚುಕಚ್ಚಾಗಿ ಲಿಂಗದ ಶಿರದ ಮೇಲೆ ಮೂರು ಪೊಳ್ಳುಗಳಾದವು. ಈ ಪೊಳ್ಳುಗಳಲ್ಲಿ ಯಾವಾಗಲೂ ನೀರು ತುಂಬಿಕೊಂಡಿರುತ್ತದೆ. ಇದನ್ನು ಪವಿತ್ರವೆಂದು ಭಕ್ತರಿಗೆ ಹಂಚುವ ಪರಿ ಪಾಠವಿದೆ. ಹನುಮಂತನು ತಂದ ಲಿಂಗವನ್ನು ಹನುಮಂತೇಶ್ವರ ದೇವಾ ಲಯದಲ್ಲಿ ಪ್ರತಿಷ್ಠಾಪಿಸಿದರೆನ್ನಲಾಗಿದೆ. ಅಗಸ್ತ್ಯೇಶ್ವರ ಗುಡಿಯಲ್ಲಿ ಸೋಮೇಶ್ವರ, ಮಾರ್ಕಂಡೇಶ್ವರ ಲಿಂಗಗಳೂ ಇವೆ.

ಅಗಸ್ತ್ಯೇಶ್ವರ ಗುಡಿಯಲ್ಲಿನ ಕಂಬಗಳ ಮೇಲೆ ಹಲವು ಸುಂದರ ಕೆತ್ತನೆಗಳನ್ನು ಕಾಣಬಹುದು. ನವರಂಗದಲ್ಲಿ ಸೂರ್ಯ, ಸುಬ್ರಹ್ಮಣ್ಯ ಮೊದಲಾದ ಶಿಲಾ ವಿಗ್ರಹಗಳನ್ನು ನೋಡುತ್ತೇವೆ. ಗುಡಿಯ ಒಂದು ಕಡೆ ಪಾರ್ವತಿ ಗುಡಿ ಇದ್ದು ಈ ದೇವಿಗೆ ಪೂರ್ಣ ಮಂಗಳ ಕಾಮಾಕ್ಷಿ ಎಂದು ಕರೆಯುತ್ತಾರೆ. ಇದೊಂದು ಸುಂದರ ವಿಗ್ರಹ, ನಾಲ್ಕು ಅಡಿ ಎತ್ತರವಿದೆ. ಪ್ರಾಕಾರದೊಳಗೆ ನಂದಿ, ವಿಷ್ಣು ಮೊದಲಾದ ಮೂರ್ತಿ ಗಳನ್ನು ಇರಿಸಲಾಗಿದೆ. ಎರಡು ಅಡಿ ಎತ್ತರದ ಅಶ್ವತ್ಥ ನಾರಾಯಣ ಮೂರ್ತಿ ಗಮನ ಸೆಳೆಯುತ್ತದೆ. ಈ ವಿಗ್ರಹ ನೃತ್ಯ ಭಂಗಿಯಲ್ಲಿರುತ್ತದೆ.

ಗುಂಜಾನರಸಿಂಹ ದೇವಾಲಯ ವಿಜಯನಗರ ಕಾಲದ ರಚನೆಯಾಗಿದೆ.

ಮೈಸೂರು ಅರಸರ ಕಾಲದಲ್ಲಿ ದೇವಾಲಯವನ್ನು ವಿಸ್ತರಿಸಲಾಯಿತು. ಈ ದೇವಾಲಯವೂ ದ್ರಾವಿಡ ಶೈಲಿಯಲ್ಲಿದ್ದು ಗರ್ಭಗೃಹ, ಮಂಟಪ, ಪ್ರಾಕಾರ, ಗೋಪುರ ಮಹಾದ್ವಾರಗಳನ್ನೊಳಗೊಂಡಿದೆ, ಮೂಗೂರು ಅರಸರೂ ಈ ದೇವಾಲಯವನ್ನು ಸುಂದರಗೊಳಿಸುವುದರಲ್ಲಿ ಕೆಲಸ ಮಾಡಿದರು. ಮಹಾದ್ವಾರದ ಬಳಿ ಇರುವ ಒಂದು ಮೂರ್ತಿ ಗೋಪುರವನ್ನು ಕಟ್ಟಿಸಿದ ಒಬ್ಬ ಮೂಗೂರು ಅರಸನದಾಗಿದೆ ಎನ್ನುತ್ತಾರೆ.

ಗರ್ಭಗೃಹದಲ್ಲಿರುವ ನರಸಿಂಹನ ಬಲಗೈಯ ಹೆಬ್ಬೆರಳು ಹಾಗೂ ತೋರು ಬೆರಳುಗಳ ನಡುವೆ ಗುಂಜಾ ಸಸ್ಯದ ಕಾಂಡವೊಂದನ್ನು ಬಿಡಿಸಲಾಗಿದೆ. ಇದು ಈ ಕ್ಷೇತ್ರದ ಪಾವಿತ್ರ್ಯಕ್ಕೆ ಕುರುಹಾಗಿದ್ದು ಪಾವಿತ್ರ್ಯದಲ್ಲಿ ಕಾಶಿಗಿಂತ ಒಂದು ಗುಂಜಿ ತೂಕ ಹೆಚ್ಚು ಎಂದು ತಿಳಿಸುತ್ತದೆ.

ದೇವಾಲಯದ ಪ್ರಾಕಾರದೊಳಗೆ ವರದರಾಜ, ರಾಮ, ಕೃಷ್ಣ ಮೊದಲಾದ ಮೂರ್ತಿಗಳನ್ನು ಇರಿಸಿರುವ ಚಿಕ್ಕ ಚಿಕ್ಕ ಗುಡಿಗಳಿವೆ. ದಕ್ಷಿಣ ಹಾಗೂ ಪಶ್ಚಿಮದ ಕೈಪಿಡಿ ಗೋಡೆಯಲ್ಲಿ ಹಿರಣ್ಯ ಕಶಿಪು ಸಂಹಾರ, ಯೋಗಾ ನರಸಿಂಹ ಮೊದಲಾಗಿ ನರಸಿಂಹ ದೇವರ ಒಂಬತ್ತು ವಿವಿಧ ರೂಪಗಳನ್ನು ಬಿಡಿಸಲಾಗಿದೆ.

ಅಗಸ್ತ್ಯೇಶ್ವರ ದೇವಾಲಯದ ಬಳಿಯೇ ವ್ಯಾಸರಾಯ ಮಠವಿರುತ್ತದೆ. ಇಲ್ಲಿ ಆಗಿಹೋದ ಕೆಲವು ಗುರುಗಳ ಬೃಂದಾವನಗಳಿವೆ. ಆ ನಂದೇಶ್ವರ, ಭಿಕ್ಷೇಶ್ವರ, ಮೂಲಸ್ಥಾನೇಶ್ವರ ಇವು ಈ ಊರಿನ ಇನ್ನಿತರ ಶಿವಾಲಯಗಳಾಗಿವೆ.

## ಸೋಮನಾಥ ಪುರ

ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳಲ್ಲಿ ಬೇಲೂರು ಹಳೆಬೀಡುಗಳಂತೆ ಸೋಮನಾಥ ಪುರವೂ ಒಂದು. ತಿರುಮಕೂಡಲು ನರಸೀಪುರ ತಾಲ್ಲೂಕಿನಲ್ಲಿ ತಿರುಮಕೂಡಲಿಗೆ 10 ಕಿ.ಮಿ. ದೂರದಲ್ಲೂ ಮೈಸೂರಿಗೆ

40 ಕಿ.ಮೀ. ದೂರದಲ್ಲಿಯೂ ಈ ಊರು ಕಾವೇರಿ ನದಿ ಎಡ ದಂಡೆಯ ಮೇಲಿದೆ.

ಮುಮ್ಮಡಿ ನರಸಿಂಹನೆಂಬ ಹೊಯ್ಸಳ ದೊರೆಯ ಆಳ್ವಿಕೆಯ ಕಾಲದಲ್ಲಿ ಆತನ ಮಂತ್ರಿಯಾಗಿದ್ದ ಸೋಮನಾಥ ತನ್ನ ಹೆಸರಿನಲ್ಲಿ ಒಂದು ಅಗ್ರಹಾರವನ್ನು ನಿರ್ಮಿಸಿ ಸೋಮನಾಥಪುರ ಎಂದು ಕರೆದ. ಈತನೇ ಇಲ್ಲಿ ಒಂದು ವಿಷ್ಣು ದೇವಾಲಯ ಹಾಗೂ ಒಂದು ಶಿವ ದೇವಾಲಯವನ್ನೂ ಕಟ್ಟಿಸಿದ. ವಿಷ್ಣು ದೇವಾಲಯವೇ ವಿಶ್ವ ಪ್ರಸಿದ್ಧ ಕೇಶವ ದೇವಾಲಯ. ಈ ದೇವಾಲಯಗಳೇ ಅಲ್ಲದೆ ಸೋಮನಾಥ ಲಕ್ಷ್ಮೀನರಸಿಂಹ, ಯೋಗನಾರಾಯಣ ಮತ್ತು ನಾರಸಿಂಹೇಶ್ವರ ದೇವಾಲಯಗಳನ್ನು ಶಿವ ದೇವಾಲಯದ ಬಳಿ ಸೋವಲೇಶ್ವರ ದೇವಾಲಯವನ್ನು ಕಟ್ಟಿಸಿದುದಾಗಿ ತಿಳಿದುಬಂದಿದೆ. ಆದರೆ ಕೇಶವ ದೇವಾಲಯದೊಂದಿಗೆ ಉಳಿದಿರುವ ದೇವಾಲಯಗಳೆಂದರೆ ಶಿವ ಅಥವಾ ಪಂಚಲಿಂಗೇಶ್ವರ ದೇವಾಲಯ ಮತ್ತು ಲಕ್ಷ್ಮೀ ನರಸಿಂಹ ದೇವಾಲಯ.

## ಕೇಶವ ದೇವಾಲಯ

ಇದು ತ್ರಿಕೂಟಾಚಲ ಗುಡಿ. ಮೂರು ಗರ್ಭಗೃಹಗಳಿರುವ ಒಂದು ಉತ್ತಮ ಹೊಯ್ಸಳ ದೇವಾಲಯ. ಇಲ್ಲಿನ ಶಿಲಾ ಕೆತ್ತನೆಗಳು ಪ್ರವಾಸಿಯ ಕಣ್ಮನಗಳನ್ನು ತಣಿಸುತ್ತವೆ. ಮೂಗಿನ ಮೇಲೆ ಬೆರಳಿಡುವಂತೆ ಮಾಡುತ್ತವೆ. ಇಲ್ಲಿ ಎಲ್ಲರೂ ಮೂಕವಿಸ್ಮಿತರೇ,

ದೇವಾಲಯವು ಉದ್ದ 218 ಅಡಿ, ಅಗಲ 117 ಅಡಿ ಇರುವ ಅಂಗಳದ ನಡುವೆ ಇದೆ. ಅಂಗಳದೊಳ ಭಾಗದಲ್ಲಿ ಪ್ರಾಕಾರದ ಗೋಡೆಗೆ ಸೇರಿದಂತೆ ಎರಡು ಅಂಕಣಗಳ 64 ಕೈಸಾಲೆ ಮಂಟಪಗಳಿವೆ. ದೇವಾಲಯ ಮೂರು ಅಡಿ ಎತ್ತರದ ಜಗತಿಯ ಮೇಲಿದೆ. ಜಗತಿಯು ನಕ್ಷತ್ರಾಕಾರದಲ್ಲಿದ್ದು ಅದರ ಕೆಳಭಾಗದ ಮೂಲೆಗಳಲ್ಲಿ ಕಟ್ಟಡವನ್ನು ಹೊತ್ತು ನಿಂತಿವೆಯೋ ಏನೋ ಎಂಬಂತೆ ಆನೆಗಳು ನಿಲ್ಲಿಸಲ್ಪಟ್ಟಿವೆ. ದೇವಾಲಯಕ್ಕೆ

ಮೂರು ಶಿಖರಗಳಿದ್ದು ಬಹು ಸುಂದರವಾಗಿ ಕಾಣುತ್ತವೆ. ಶಿಖರಗಳು ಅಷ್ಟೇನೂ ಎತ್ತರವಿರದೆ ಜಗತಿಯಿಂದ ಮೇಲಕ್ಕೆ 32 ಅಡಿ ಎತ್ತರವಿದೆ. ಶಿಖರದಲ್ಲಿ ಹಲವು ಸುಂದರ ವಿಗ್ರಹಗಳ ಕೆತ್ತನೆ ಇರುತ್ತದೆ. ತುದಿಯಲ್ಲಿ ಮುಗುಚಿ ಹಾಕಿದ ಕಮಲವಿದೆ.

ದೇವಾಲಯದ ಗೋಡೆ ಮೂರು ಭಾಗಗಳಿಂದ ಗುರುತಿಸಲ್ಪಡುತ್ತದೆ. ಕೆಳಭಾಗ, ಮಧ್ಯಭಾಗ ಹಾಗೂ ಮೇಲ್ಭಾಗ, ಈ ಭಾಗಗಳಲ್ಲಿನ ಪಟ್ಟಿಕೆಗಳಲ್ಲಿ ನಾವು ಕಾಣದ ಕೆತ್ತನೆ ಇಲ್ಲ. ರಾಮಾಯಣ, ಭಾರತ ಮತ್ತು ಭಾಗವತ ಕಥೆ ಗಳು, ಹಲವಾರು ದೇವರುಗಳ ಶಿಲ್ಪಗಳು, ಪ್ರಾಣಿ ಪಕ್ಷಿಗಳು ಮೊದಲಾದ ಕೆತ್ತನೆಗಳು ಒಂದು ಸಣ್ಣ ಪ್ರಪಂಚವನ್ನೇ ಇಲ್ಲಿ ಸೃಷ್ಟಿಸಿವೆ.

ದೇವಾಲಯದಲ್ಲಿ ಒಂದು ಮುಖ ಮಂಟಪ, ನವರಂಗ, ಮೂರು ಗರ್ಭಗೃಹಗಳಿವೆ. ನವರಂಗದ ಮೇಲ್ಭಾಗದಲ್ಲಿ ಛಾವಣಿಯಲ್ಲಿ ಹದಿನಾರು ಅಂಕಣಗಳಿದ್ದು ಪ್ರತಿ ಅಂಕಣದಲ್ಲಿಯೂ ಭುವನೇಶ್ವರಿಗಳಿವೆ. ಈ ಭುವನೇ ಶ್ವರಿಗಳಲ್ಲಿನ ಕೆತ್ತನೆಗಳು ಅಪೂರ್ವ, ಇವುಗಳಲ್ಲಿ ಕೆಲವು ಸೂಕ್ಷ್ಮ ಪ್ರಮಾಣದ ಕೆತ್ತನೆಗಳಿದ್ದು ಕೆತ್ತನೆಗಳಿದ್ದು ಪ್ರವಾಸಿಗಳನ್ನು ಚಕಿತಗೊಳಿಸುತ್ತದೆ, ದೇವಾ ಲಯದ ಕೆಲವು ಭಿತ್ತಿ ಶಿಲ್ಪಗಳು ಉದಾ : ನೃತ್ಯ ಗಣಪತಿ, ಆನೆಯೇರಿದ ಇಂದ್ರ, ಮಹಿಷಾಸುರ ಮರ್ದಿನಿ ನೃತ್ಯ ಸರಸ್ವತಿ, ಅತ್ಯಂತ ಸುಂದರ.

ಮೂರು ಗರ್ಭಗೃಹಗಳಲ್ಲಿ ಉತ್ತರ ಗರ್ಭಗೃಹದಲ್ಲಿ ಜನಾರ್ಧನ ವಿಗ್ರಹವೂ ದಕ್ಷಿಣದ ಗೃಹದಲ್ಲಿ ವೇಣುಗೋಪಾಲನ ವಿಗ್ರಹವೂ ಇದೆ. ಮಧ್ಯದ ಗರ್ಭಗೃಹದಲ್ಲಿ ಹಿಂದೆ ಕೇಶವನ ವಿಗ್ರಹವಿದ್ದಿತೆಂದು ಹೇಳುತ್ತಾರೆ. ಈಗ ಇರುವುದಿಲ್ಲ, ಜನಾರ್ಧನ ವಿಗ್ರಹ ಆರು ಅಡಿ ಎತ್ತರವಿದ್ದು ಇದು ನಿಂತ ಭಂಗಿಯ ಸುಂದರ ಶಿಲ್ಪ. ಇದರ ಪ್ರಭಾವಳಿಯಲ್ಲಿ ದಶಾವತಾರದ ಚಿತ್ರಗಳನ್ನು ಬಿಡಿಸಲಾಗಿವೆ. ವೇಣುಗೋಪಾಲನ ವಿಗ್ರಹ ನಾಲ್ಕೂವರೆ ಅಡಿ ಎತ್ತರವಿದ್ದು ಈ ಗುಡಿಯಲ್ಲಿ ಕಂಡುಬರುವ ಕೆತ್ತನೆಗಳು ಸೂಕ್ಷ್ಮ ವಾಗಿರುತ್ತವೆ.

ನೃತ್ಯಲಕ್ಷ್ಮಿ, ತಾಂಡವ ಗಣಪತಿ, ಕೂರ್ಮಾವತಾರ, ರತಿ ಮನ್ಮಥ, ಪರಶುರಾಮ ಇವು ದೇವಾಲಯದ ಇತರ ಕೆಲವು ಮುಖ್ಯ ಶಿಲ್ಪಗಳು.

## ಪಂಚಲಿಂಗೇಶ್ವರ ದೇವಾಲಯ

ಇದು ಪಂಚಕೂಟಾಚಲ, ಐದು ಗರ್ಭಗೃಹಗಳಿರುವ ದೇವಾಲಯ. ಇಲ್ಲಿಯ ಲಿಂಗಗಳಿಗೆ ಬಿಜ್ಜಲೇಶ್ವರ, ಪೆರ್ಗಡೇಶ್ವರ, ರೇವಲೇಶ್ವರ, ಬಯಿರಲೇಶ್ವರ ಹಾಗೂ ಸೋಮನಾಥೇಶ್ವರ ಎಂಬ ಹೆಸರುಗಳಿವೆ. ಈ ಐದೂ ದೇವಾಲಯಗಳೂ ಬೇರೆ ಬೇರೆ ಇದ್ದರೂ ಇವನ್ನು ಒಂದಾಗಿ ಸೇರಿಸಿರುವ ಉದ್ದನಾದ ಮೊಗಸಾಲೆ ಇದೆ. ಇಲ್ಲಿನ ರಚನೆ ಸರಳವಾಗಿದೆ. ಹೊಯ್ಸಳ ದೇವಾಲಯಗಳಲ್ಲಿಯೇ ಇದೊಂದು ಅಪೂರ್ವ ಮಾದರಿ ಎನ್ನಬಹುದಾಗಿದೆ. ಈ ದೇವಾಲಯದ ಯಾವ ಭಾಗದಲ್ಲಿಯೇ ಆಗಲಿ ಮೂರ್ತಿಶಿಲ್ಪಗಳಿರುವುದಿಲ್ಲ.

## ಮುಡುಕುತೊರೆ

ತಿರುಮಕೂಡಲು ನರಸೀಪುರ ತಾಲ್ಲೂಕಿನ ಒಂದು ಪವಿತ್ರ ಯಾತ್ರಾ ಸ್ಥಳ. ತಲಕಾಡಿಗೆ 4 ಕಿ. ಮೀ ದೂರದಲ್ಲಿ ಕಾವೇರಿನದಿ ಎಡದಂಡೆಯ ಮೇಲಿದೆ, ಇಲ್ಲಿರುವ ಸೋಮಗಿರಿ ಎಂಬ ಬೆಟ್ಟದ ಮೇಲೆ ಮಲ್ಲಿಕಾರ್ಜುನ ದೇವಾಲಯವಿದೆ. ಇಲ್ಲಿನ ಶಿವಲಿಂಗ ತಲಕಾಡಿನ ಪಂಚಲಿಂಗಗಳಲ್ಲೊಂದು. ಇಲ್ಲಿರುವ ಒಂದು ಮಂಟಪದ ಗೋಡೆಗಳ ಮೇಲೆ ಶಿವಪುರಾಣದ ದೃಶ್ಯಾವಳಿಗಳನ್ನು ಕೆತ್ತಲಾಗಿದೆ. ಪ್ರತಿವರ್ಷ ಜನವರಿ ಫೆಬ್ರವರಿ ತಿಂಗಳಿನಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ.

## ಮೂಗೂರು

ತಿರುಮಕೂಡಲು ನರಸೀಪುರದಿಂದ 10 ಕಿ. ಮೀ ದೂರದಲ್ಲಿದೆ. ಇಲ್ಲಿ ಆರು ದೇವಾಲಯಗಳಿದ್ದು ಇವುಗಳಲ್ಲಿ ದೇಶೇಶ್ವರ, ನಾರಾಯಣ ಮತ್ತು ತಿಬ್ಬಾದೇವಿ ದೇವಾಲಯಗಳು ಮುಖ್ಯವಾದವು.

ದೇಶೇಶ್ವರ ದೇವಾಲಯ ಚೋಳರ ಕಾಲದ್ದೆಂದು ತಿಳಿಯಲಾಗಿದೆ. ಇದರೊಂದಿಗೆ ಶಂಕರೇಶ್ವರ ಎಂಬ ದೇವಾಲಯವಿದೆ. ಎರಡೂ ದೇವಾಲಯಕ್ಕೆ ಒಂದು ದ್ವಾರವನ್ನು ನಿರ್ಮಿಸಲಾಗಿದೆ. ತಿಬ್ಬಾದೇವಿ ಅಥವಾ ತ್ರಿಪುರಾಂಬ ದೇವಾಲಯ ದೇಶೇಶ್ವರ ಗುಡಿಗೆ ಸಮೀಪದಲ್ಲಿಯೇ ಇದೆ. ಈ ಗುಡಿಯಲ್ಲಿ ನವರಂಗ, ಮುಖ ಮಂಟಪ, ಮಹಾದ್ವಾರ. ಪ್ರಾಕಾರ ಎಲ್ಲವೂ ಇವೆ. ಮಹಾದ್ವಾರದ ಮುಂಭಾಗದಲ್ಲಿ ಒಂದು ಶತಮಾನಕ್ಕೂ ಹಿಂದಿನ ದೆನ್ನಲಾದ ಮಂಟಪವಿದೆ. ಇದರ ಸುಂದರವಾದ ಕಂಬಗಳು. ಕಮಾನುಗಳು ಗಮನ ಸೆಳೆಯುತ್ತವೆ. ಈ ದೇವಾಲಯದ ದೇವತೆ ವೈಷ್ಣವಿ.

ನಾರಾಯಣಸ್ವಾಮಿ ದೇವಾಲಯ ಹೊಯ್ಸಳರ ಕಾಲದ್ದಾಗಿದೆ. ಗರ್ಭಗೃಹ, ಸುಕನಾಸಿ, ನವರಂಗ, ಮುಖಮಂಟಪ ಎಲ್ಲವನ್ನೂ ಒಳಗೊಂಡಿದ್ದು ನವರಂಗದ ಕಂಬಗಳು ನಯನಮನೋಹರವಾಗಿವೆ,

ಮೂಗೂರಿನಲ್ಲಿ ಒಂದೆರಡು ಜಿನ ಬಸದಿಗಳೂ ಇವೆ. ಪಾರ್ಶ್ವನಾಥನ ಬಸದಿಯಲ್ಲಿ ನಿಂತಭಂಗಿಯ ನಾಲ್ಕು ಅಡಿ ಎತ್ತರದ ಪಾರ್ಶ್ವನಾಥನ ವಿಗ್ರಹ ಸುಂದರವಾಗಿದೆ. ವಿಗ್ರಹದ ತಲೆಯಮೇಲೆ ಏಳು ಹೆಡೆಗಳ ಸರ್ಪವಿರುವ ಕೆತ್ತನೆ ಗಮನಾರ್ಹ,

ಮೂಗೂರಿನಲ್ಲಿ ಪ್ರತಿವರ್ಷ ನಡೆಯುವ ತಿಬ್ಬಾದೇವಿ ಜಾತ್ರೆ ಉತ್ಸವ ಉಲ್ಲೇಖನೀಯ. ಶಂಕರೇಶ್ವರ ದೇವಾಲಯದ ಹಾಗೂ ಅದರ ಹಿಂಭಾಗದಲ್ಲಿರುವ ಕಾಳಭೈರವನ ಗುಡಿಯ ಸುಂದರ ಕೆತ್ತನೆಗಳು ಆಕರ್ಷಣೀಯ.

ತಿರುಮಕೂಡಲು ನರಸೀಪುರದ ಸೋಸಲೆ ಗ್ರಾಮದಲ್ಲಿ ವ್ಯಾಸರಾಯರ ಮಠವಿದೆ. ಇದೊಂದು ಧಾರ್ಮಿಕ ಕ್ಷೇತ್ರ.

## ನಂಜನಗೂಡು

ಮೈಸೂರಿಗೆ 24 ಕಿ. ಮೀ. ದೂರದಲ್ಲಿ ಕಪಿಲಾನದಿ ಬಲದಂಡೆಯ ಮೇಲಿರುವ ತೀರ್ಥಕ್ಷೇತ್ರ.

ನಂಜನಗೂಡಿನಲ್ಲಿ ಶ್ರೀಕಂಠೇಶ್ವರ ಅಥವಾ ನಂಜುಂಡೇಶ್ವರ ದೇವಾಲಯವಿದೆ. ಇದು ಕರ್ನಾಟಕದಲ್ಲೆ ಅತಿ ದೊಡ್ಡ ದೇವಾಲಯ. ಈ ದೇವಾಲಯ ದ್ರಾವಿಡ ಶೈಲಿಯ ಕಟ್ಟಡ. ಉದ್ದ 385 ಅಡಿ ಅಗಲ 160 ಅಡಿ. ಪೂರ್ವಾಭಿಮುಖವಾಗಿರುವ ಈ ದೇವಾಲಯದಲ್ಲಿ 147 ಕಂಬ ಗಳಿರುವುದು ಒಂದು ವೈಶಿಷ್ಟ್ಯ. ಮಹಾದ್ವಾರದ ಮೇಲೆ ಏಳು ಅಂತಸ್ತಿನ ಸುಮಾರು 120 ಅಡಿ ಎತ್ತರ ವಿರುವ ದೊಡ್ಡ ಗೋಪುರವಿದೆ. ಇದಕ್ಕಿರುವ ಏಳು ಚಿನ್ನದ ಮುಲಾಮಿನ ಕಲಶಗಳು ಹತ್ತು ಅಡಿಗಳಿಗೂ ಎತ್ತರವಿದ್ದು ಎರಡು ಕೊಂಬುಗಳ ನಡುವೆ ಇವನ್ನು ಸಾಲಾಗಿ ಜೋಡಿಸಲಾಗಿದೆ. ದೇವಾಲಯದ ಹೊರಗೋಡೆಗಳ ಎತ್ತರ ಸುಮಾರು ಹನ್ನೆರಡು ಅಡಿ ಇದೆ. ಕಂಬಸಾಲು ಇರುವ ಕೈ ಸಾಲೆ ಇದೆ.

ಮಹಾದ್ವಾರದಿಂದ ಒಳಗೆ ಹೋಗುತ್ತಿದ್ದಂತೆಯೇ ನೂರಾರು ಜನರು ಸೇರಬಹುದಾದಂತಹ ದೊಡ್ಡ ತೆರೆದ ಅಂಗಳವಿದೆ. ಇದರ ಮಧ್ಯ ಭಾಗದಲ್ಲಿ ಒಂದು ವಸಂತ ಮಂಟಪವಿದೆ. ಅಂಗಳದ ಒಂದು ಪಕ್ಕಕ್ಕೆ ಪಾಕ ಶಾಲೆ ಇನ್ನೊಂದು ಪಕ್ಕಕ್ಕೆ ಉಗ್ರಾಣ ಇವೆ. ಇಲ್ಲಿ ನಾವು ನೋಡುವ ಪ್ರೇಕ್ಷಣೀಯ ಅಂಶಗಳನ್ನು ಹೀಗೆ ಪಟ್ಟಿ ಮಾಡಬಹುದು.

1. ಅಂಗಳದ ಎರಡೂ ಕಡೆ ಎತ್ತರದ ಎರಡು ಕಂಬ ಸಾಲುಗಳು

2. ಒಳಸಾಲಿನ (ಕಂಬಸಾಲು) ಹಿಂದಿನ ಅಂಕಣಗಳಲ್ಲಿ ಮೂರ್ತಿಗಳು

3. ಅಂಗಳದ ಮುಂದಕ್ಕೆ ಬಸವನ ಕಟ್ಟೆ

4. ವಸಂತ ಮಂಟಪದ ಎದುರಿನ ವಿಶಾಲವಾದ ಜಗತಿಯಮೇಲೆ ಮಧ್ಯೆ ಅಷ್ಟ ಮುಖದ ಎತ್ತರದ ಕಲ್ಲಿನ ದೀಪಸ್ತಂಭ.

5. ದಳವಾಯಿ ವಿಕ್ರಮರಾಯ ಮಾಡಿಸಿದ ನಂದಿ ( ದೊಡ್ಡ ಪ್ರಮಾಣದ) ಇರುವ ಗುಡಿ. (ಕರಶಿಲೆಯ ನಂದಿ)

6. ತಾಂಡವೇಶ್ವರ ಗುಡಿ

7. ಬಸವನ ಕಟ್ಟೆಯ ಪಶ್ಚಿಮಕ್ಕೆ ಇರುವ ಮತ್ತೊಂದು ಮಹಾದ್ವಾರ. ಇದರ ಛಾವಣಿಗಿರುದ ಐದು ಅಂತಸ್ತಿನ ಶಿಖರ. ಈ ಶಿಖರಕ್ಕೆ ಐದು ಚಿನ್ನದ ಮುಲಾಮಿನ ಕಲಶಗಳಿವೆ.

8, ಎರಡನೆಯ ದ್ವಾರಕ್ಕೆ ಹೊಂದಿಕೊಂಡಂತಿರುವ ಚಿಕ್ಕಗುಡಿಗಳು.

9. ನವಗ್ರಹಗಳಿರುವ ಆವರಣ ಹಾಗೂ ಯಜ್ಞಶಾಲೆ

10, ಮಹಾದ್ವಾರದ ಪಶ್ಚಿಮಕ್ಕೆ ಇರುವ ಮೂಲಗುಡಿ. ಇಲ್ಲಿಯೇ ಶ್ರೀಕಂಠೇಶ್ವರಲಿಂಗವಿದೆ.

11. ಧ್ವಜಸ್ತಂಭ—ಬಲಿಪೀಠ

12. ಮೂಲ ದೇವಾಲಯದ ಒಳ ಮಂಟಪದ ಮುಂದೆ ಒಂಬತ್ತು ಕಂಬಗಳ ಸಭಾಮಂಟಪ. ಮೂಲಗುಡಿಯಲ್ಲಿ ಪ್ರಾಚೀನ ನಂಜುಡೇಶ್ವರ ಲಿಂಗ.

13. ವಿಷ್ಣು ಹಾಗೂ ಚಂಡಿಕೇಶ್ವರ ಗುಡಿ

14. ಪಾರ್ವತಿ ಗುಡಿ ಮತ್ತು ಇತರ ದೇವರುಗಳು

15. ಅಂಗಳದ ನೇರದಿಂದ ಪ್ರಾರಂಭವಾಗುವ ಸಾಲಿನಲ್ಲಿ ಶೈವ ಪುರಾತನರ ವಿಗ್ರಹಗಳು, ಶಿವಲಿಂಗಗಳು, ಮುಮ್ಮಡಿ ಕೃಷ್ಣರಾಜಒಡೆಯರು ಹಾಗೂ ಅವರ ಹೆಂಡತಿ ಮಕ್ಕಳ ವಿಗ್ರಹಗಳು.

16, ಟಿಪ್ಪು ಸುಲ್ತಾನನು ಅರ್ಪಿಸಿದ ಪಚ್ಚೆಲಿಂಗವಿರುವ ಗುಡಿ.

ನಂಜುಡೇಶ್ವರ ದೇವಾಲಯದಲ್ಲಿರುವಷ್ಟು ವಿಗ್ರಹಗಳನ್ನು ಬೇರೆಲ್ಲಿಯೂ ನಾವು ಕಾಣಲಾರೆವೊ ಏನೋ. ಇಲ್ಲಿ 200ಕ್ಕೂ ಹೆಚ್ಚು ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದ್ದು ಇವುಗಳಲ್ಲಿ ಅರ್ಧದಷ್ಟು ಶಿವಲಿಂಗ ಗಳೇ, ಉಳಿದಂತೆ ನಾರಾಯಣ, ಪಾರ್ವತಿ, ನೃತ್ಯ ಗಣಪತಿ, ಸುಬ್ರಹ್ಮಣ್ಯ, ಷಣ್ಮುಖ, ಉಚ್ಛಿಷ್ಟ ಗಣಪತಿ, ಶೈವ ಪುರಾತನರು, ಲೀಲಾಮೂರ್ತಿಗಳು

( ಆಗಮೋಕ್ತ ಶಿವಲೀಲಾಮೂರ್ತಿಗಳು ). ಎಂಟು ಅಡಿ ಎತ್ತರದ ನಂದಿ ವಿಗ್ರಹಗಳು. ಇವುಗಳು ಶಿಲೆಯದಾದರೆ ಲೋಹವಿಗ್ರಹಗಳೂ ಕಡಿಮೆ ಯೇನಿಲ್ಲ. ತಾಂಡವೇಶ್ವರ. 63 ಪುರಾತನರು. ಭೂದೇವಿ ಸಹಿತ ನಾರಾಯಣ, ಚಂದ್ರಶೇಖರ–ಪಾರ್ವತಿ, ಗಣಪತಿ, ಚಂಡಿಕೇಶ್ವರ ಮೊದ ಲಾದವು. ಗಾರೆಯಲ್ಲಿ ಮಾಡಿದ ಸುಮಾರು 122 ಮೂರ್ತಿಗಳನ್ನು ದೇವಾಲಯದ ಪ್ರಾಕಾರದಲ್ಲಿ ನೋಡಬಹುದು. ಇವುಗಳಲ್ಲಿ 32 ವಿಧದ ಗಣಪತಿ, 25 ಲೀಲಾ ಮೂರ್ತಿಗಳು, ಹತ್ತು ಬಗೆ ದಕ್ಷಿಣಾಮೂರ್ತಿಗಳು ವೀರಭದ್ರ, ನಾರಾಯಣ ಮೊದಲಾದವು ಗಮನಾರ್ಹ.

ನಂಜುಂಡೇಶ್ವರ ದೇವಾಲಯ ಒಂದು ಕಾಲದ ರಚನೆಯಾಗಿರದೆ. ಇದರ ನಿರ್ಮಾಣ ಕಾರ್ಯ ಗಂಗರ ಅಥವಾ ಚೋಳರ ಕಾಲದಿಂದಲೇ ಆರಂಭವಾಗಿರಬೇಕು. ಇದಕ್ಕೂ ಮೊದಲೇ ಶ್ರೀಕಂಠೇಶ್ವರ ಲಿಂಗ, ಗರ್ಭ ಗುಡಿ, ಒಳ ಮಂಟಪ ಇದ್ದಿರಬೇಕು. ಇವು ಪ್ರಾಚೀನವಾದವೆಂದೂ ತಿಳಿಯ ಲಾಗಿದೆ. ಈ ದೇವಾಲಯದ ಪರಿಪೂರ್ಣತೆಗೆ ಹೊಯ್ಸಳ ಅರಸರೂ, ವಿಜಯ ನಗರದರಸರೂ ಶ್ರಮಿಸಿದ್ದಾರೆ. ಮೈಸೂರರಸರ ಕೊಡುಗೆಯಂತೂ ಉಲ್ಲೇಖನೀಯ. ದೇವಾಲಯ ಇಂದಿನ ರೂಪ ತಳೆದುದೇ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ.

ಪ್ರತಿನಿತ್ಯ ಶ್ರೀಕಂಠೇಶ್ವರನಿಗೆ ಪೂಜೆ, ಅಭಿಷೇಕ ಸಲ್ಲುತ್ತದೆ. ಸೋಮವಾರ ಮತ್ತು ಹುಣ್ಣಿಮೆ ದಿನಗಳಲ್ಲಿ ವಿಶೇಷ. ವರ್ಷಕ್ಕೆ ಇಲ್ಲಿ ಎರಡು ಜಾತ್ರೆಗಳು ನಡೆಯುತ್ತವೆ. ಇವನ್ನು ಚಿಕ್ಕ ಜಾತ್ರೆ ದೊಡ್ಡ ಜಾತ್ರೆ ಎಂದೂ ಹೇಳುತ್ತಾರೆ, ಜನಪದರಿಗೆ ನಂಜುಂಡ ಕುಲದೈವ. ಎಂತಲೇ ಜಾತ್ರೆಗಳಲ್ಲಿ ಜನಸಂದಣಿ ಹೆಚ್ಚು. ಯಾತ್ರಾರ್ಥಿಗಳಿಗೆ ಲೆಕ್ಕವಿಲ್ಲ.

ನಂಜನಗೂಡಿನಲ್ಲಿ ಪರಶುರಾಮ, ಗಣಪತಿ, ದತ್ತಾತ್ರೇಯ ಮೊದಲಾದ ಇತರ ದೇವಾಲಯಗಳು ರಾಘವೇಂದ್ರಸ್ವಾಮಿಮಠ, ವೀರಶೈವಮಠ ಇವೆ. ಪರಶುರಾಮ ದೇವಾಲಯವನ್ನು ನೋಡಿಯೇ ನಂಜನಗೂಡಿನ ಯಾತ್ರೆ ಪೂರ್ಣಗೊಳಿಸಬೇಕೆನ್ನುತ್ತಾರೆ. ಈ ದೇವಾಲಯವೂ ನದಿ ತಟಾಕದಲ್ಲಿದೆ.

ಪರಶುರಾಮ ತಾನು ತಾಯಿಯನ್ನು ಕೊಂದ ಪಾಪವನ್ನು ಇಲ್ಲಿ ಈಶ್ವರನ ಅನುಗ್ರಹದಿಂದ ಕಳೆದುಕೊಂಡನೆಂದು ಹೇಳುತ್ತಾರೆ.

ನಂಜನಗೂಡು ದಕ್ಷಿಣ ಕಾಶಿ ಎಂದು ಖ್ಯಾತಿವೆತ್ತಿದೆ. ಇಲ್ಲಿಗೆ ಬಂದು ನಂಜುಂಡೇಶ್ವರನಿಗೆ ಮಾಡಿಕೊಂಡ ಹರಕೆ ಸಲ್ಲಿಸುತ್ತಾರೆ. ಇದು ಜನಪದ ಆರಾಧ್ಯ ದೈವಗಳಲ್ಲಿ ಪ್ರಸಿದ್ಧನಾದ ನಂಜಯ್ಯ ನೆಲೆಸಿವ ಕ್ಷೇತ್ರ. ನಂಜಯ್ಯನೇ ನಂಜುಂಡೇಶ್ವರ. ಈತನನ್ನು ಹಕೀಮ್ ನಂಜುಂಡನೆಂತಲೂ ತಿಳಿಯುತ್ತಾರೆ. ಇವನಿಗೆ ಹರಸಿಕೊಂಡರೆ ರೋಗಗಳು ಗುಣವಾಗುತ್ತವೆ ಎಂದು ಜನರಲ್ಲಿ ನಂಬಿಕೆ ಇದೆ.

## ಮಹದೇಶ್ವರ ದೇವಾಲಯ

ಕೊಳ್ಳೇಗಾಲ ತಾಲ್ಲೂಕಿನಲ್ಲಿರುವ ಮಹದೇಶ್ವರ ಬೆಟ್ಟದ ಮೇಲಿರುವ ದೇವಾಲಯ.

ಮಹದೇಶ್ವರ ಬೆಟ್ಟ ಒಂದು ಪ್ರಸಿದ್ಧ ಯಾತ್ರಾಸ್ಥಳ. ಈ ಬೆಟ್ಟಕ್ಕೆ ಮಾದೇಶ್ವರ ಬೆಟ್ಟ, ಮಹದೇಶ್ವರ ಮಲೈ ಎಂದೂ ಹೇಳುತ್ತಾರೆ. ಈ ಗಿರಿಗೆ ಸೇರಿದಂತೆ ಜೇನು ಮಲೆ, ಆನು ಮಲೈ, ಪಚ್ಚೆ ಮಲೈ, ಪವಳ ಮಲೈ ಕೊಂಗು ಮಲೆ ಮೊದಲಾಗಿ ಎಪ್ಪತ್ತೇಳು ಬೆಟ್ಟಗಳಿವೆ ಎಂದೂ ಸ್ಥಳ ಪುರಾಣವಿದೆ. ಬೆಟ್ಟದ ತಪ್ಪಲಿಗೆ ತಾಳ ಬೆಟ್ಟ ಎನ್ನುತ್ತಾರೆ. ಇಲ್ಲಿಗೆ ಬರಲು ಕೌದಳ್ಳಿ ಎಂಬಲ್ಲಿಂದ ಹದಿನಾರು ಕಿ. ಮೀ. ದೂರ ಪ್ರಯಾಣ ಮಾಡಬೇಕು. ತಪ್ಪಲಿನಿಂದ ಹನ್ನೆರಡು ಕಿ.ಮೀ. ಬಂದರೆ ಮಹದೇಶ್ವರ ಸ್ವಾಮಿ ದೇವಾಲಯ ಕಾಣಸಿಗುತ್ತದೆ.

ಕ್ರಿ. ಶ. 15 ಅಥವಾ 16ನೆಯ ಶತಮಾನದಲ್ಲಿ ಕುಂತೂರು ಮಠದಿಂದ ಮಹಾದೇಶ್ವರ ಸ್ವಾಮಿ ಇಲ್ಲಿಗೆ ಬಂದು ನೆಲಸಿದನೆಂದು ಹೇಳುತ್ತಾರೆ. ದೇವಾಲಯವನ್ನು ಆಲಂಬಾಡಿಯ ಜುಂಜೇಗೌಡನೆಂಬುವನು ಕಟ್ಟಿಸಿದನೆಂದು ತಿಳಿಯಲಾಗಿದೆ. ದೇವಾಲಯದ ಸುತ್ತ ಪೌಳಿ, ಮಂಟಪ ಇವೆ. ಗರ್ಭಗುಡಿ,

ಸುಕನಾಸಿ, ಮುಖಮಂಟಪ, ನವರಂಗ ಇವೆ. ಮುಖಮಂಟಪದಲ್ಲಿ ವೀರಭದ್ರನ ಶಿಲ್ಪವೂ ದೇವಾಲಯದ ಬಲದ್ವಾರದ ಪೌಳಿಯ ಮೇಲೆ ಆಲಂಬಾಡಿ ಬಸವನ ವಿಗ್ರಹವೂ ಇವೆ.

ಅಮಾವಾಸ್ಯೆ ದಿನಗಳಲ್ಲಿ ಇಲ್ಲಿಗೆ ಬರುವ ಯಾತ್ರಿಕರ ಸಂಖ್ಯೆ ಹೆಚ್ಚು. ಪ್ರತಿ ವರ್ಷ ಯುಗಾದಿ, ಶಿವರಾತ್ರಿಗಳಲ್ಲಿ ದನಗಳ ಜಾತ್ರೆ ಸೇರುತ್ತದೆ, ಆಗ ವಿಶೇಷ ಉತ್ಸವಗಳೂ ನಡೆಯುತ್ತವೆ. ಮಾದೇಶ್ವರರ ಶಿಷ್ಯ ಶೇಷಣ್ಣೊಡೆಯರ ಉತ್ಸವ ಇವುಗಳಲ್ಲಿ ತುಂಬಾ ವೈಶಿಷ್ಟ್ಯವಾದುದಾಗಿದ್ದು ಇದು 12 ವರ್ಷಗಳಿಗೊಮ್ಮೆ ನಡೆಯುತ್ತದೆ.

ಕೊಳ್ಳೇಗಾಲ ತಾಲ್ಲೂಕಿನ ಸತ್ತೇಗಾಲದಲ್ಲಿ ಕೆಲವು ಪ್ರಾಚೀನ ದೇವಾಲಯಗಳಿವೆ.

## ಸಕ್ಕರೆಯ ಸೀಮೆ, ಮಂಡ್ಯ

ರಾಷ್ಟ್ರಕೂಟರು, ಗಂಗರು, ಚೋಳರು, ಹೊಯ್ಸಳರು ಕಡೆಗೆ ಮೈಸೂರು ಅರಸರು ಆಳಿದ ಈ ಜಿಲ್ಲೆ ಈ ಅರಸರುಗಳಿಂದ ಪ್ರಭಾವಿತ ವಾಗಿದೆ. ಈ ಜಿಲ್ಲೆಯ ಮೇಲುಕೋಟೆ ಬಳಿ ಇರುವ ತೊಣ್ಣೂರು ಹೊಯ್ಸಳ ವಿಷ್ಣುವರ್ಧನನ ಉಪ ರಾಜಧಾನಿಯಾಗಿತ್ತೆಂದು ಹೇಳುತ್ತಾರೆ. ಹೊಯ್ಸಳರ ಬಳಿಕ ಈ ಜಿಲ್ಲೆ ವಿಜಯ ನಗರದ ಅರಸರಿಗೆ ಸೇರಿತ್ತು. ಈ ಜಿಲ್ಲೆಯ ನಾಗಮಂಗಲದ ಮತ್ತು ಚನ್ನ ಪಟ್ಟಣದ (ಬೆಂಗಳೂರು ಜಿಲ್ಲೆ) ದ ಪಾಳೆಗಾರರೂ ಇಲ್ಲಿ ಆಡಳಿತ ನಡೆಸಿದ್ದರು. ಶ್ರೀರಂಗಪಟ್ಟಣ ಕ್ರಿ. ಶ. 1610ರಿಂದಲೇ ಮೈಸೂರು ಸಂಸ್ಥಾನದ ರಾಜಧಾನಿಯಾಗಿದ್ದಿತು. ಆದರೆ ಟಿಪ್ಪುಸುಲ್ತಾನನು ಸೋತ ನಂತರ ಮೈಸೂರಿಗೆ ರಾಜಧಾನಿಯು ವರ್ಗಾಯಿಸಲ್ಪಟ್ಟಿತು. ಈ ಜಿಲ್ಲೆಯಲ್ಲಿ ಚೋಳರು ಮತ್ತು ಹೊಯ್ಸಳರ ಕಾಲದ ದೇವಾಲಯಗಳನ್ನು ಗಂಗರ ಕಾಲದ ಬಸದಿಗಳನ್ನು ಕಾಣುತ್ತೇವೆ.

ಮಂಡ್ಯ, ಮದ್ದೂರು, ನಾಗಮಂಗಲ, ಪಾಂಡವಪುರ, ಕೃಷ್ಣರಾಜ ಪೇಟೆ, ಮಳವಳ್ಳಿ ಹಾಗೂ ಶ್ರೀರಂಗಪಟ್ಟಣ ಈ ಜಿಲ್ಲೆಯ ತಾಲ್ಲೂಕುಗಳು,

ಮಂಡ್ಯ ಸಕ್ಕರೆ ಉತ್ಪಾದನೆಗೆ ಹೆಸರಾಗಿದೆ. ಈ ಊರಿಗೆ ಮಂಡೇ ಮೇಮು ಎಂದು ಹೆಸರಿತ್ತು. ದ್ವಾಪರ ಯುಗದಲ್ಲಿ ಇಂದ್ರವರ್ಮನೆಂಬ ರಾಜ ಇಲ್ಲಿಗೆ ಬಂದು ತಪಸ್ಸು ಮಾಡಿ ಸೋಮವರ್ಮನೆಂಬ ಮಗನನ್ನು ಪಡೆದ. ಸೋಮವರ್ಮ ಇಲ್ಲಿ ಕೋಟೆ ಕಟ್ಟಿಸಿ ಮಂಡೇಮೇಮು ಎಂದು ಊರಿಗೆ ಹೆಸರಿಟ್ಟ. ಇದೇ ಮಂಡ್ಯ ಎಂದಾಗಿದೆ. ಈ ಊರಿನಲ್ಲಿ ಪ್ರಸಿದ್ಧ ವಾಗಿರುವ ಜನಾರ್ಧನಸ್ವಾಮಿ ದೇವಾಲಯ ಹಾಗೂ ಇನ್ನಿತರ ಈಚೀಚೆಗೆ ಕಟ್ಟಲಾದ ಗುಡಿಗಳಿವೆ. ಜನಾರ್ಧನ ಸ್ವಾಮಿ ರಥೋತ್ಸವ ಪ್ರತಿವರ್ಷ ಏಪ್ರಿಲ್ ಮೇ ತಿಂಗಳುಗಳಲ್ಲಿ ನಡೆಯುತ್ತದೆ. ಮಂಡ್ಯಕ್ಕೆ 8 ಕಿ. ಮೀ. ದೂರದ ಬೆಳ್ಳಂಡಗೆರೆಯಲ್ಲಿ ಪ್ರತಿ ವರ್ಷ ಡಿಸೆಂಬರಿನಲ್ಲಿ ಕಾಡುಬಸವೇಶ್ವರ ಸ್ವಾಮಿ ಜಾತ್ರೆಯೂ ಏಳು ಕಿ. ಮೀ. ದೂರದಲ್ಲಿರುವ ಸುಂಡಹಳ್ಳಿಯಲ್ಲಿ ದೀಪಾವಳಿ ಕಾಲದಲ್ಲಿ ಮಹದೇಶ್ವರ ಸ್ವಾಮಿ ರಥೋತ್ಸವ ನಡೆಯುತ್ತದೆ. ಕೆರಗೋಡಿನ ಪಂಚಲಿಂಗೇಶ್ವರ ಜಾತ್ರೆ ಹಾಗೂ ಶಿವಾರ ಗ್ರಾಮದ ಗಂಗಾಧರೇಶ್ವರ ಸ್ವಾಮಿ ಜಾತ್ರೆಗಳೂ ಪ್ರಸಿದ್ಧ.

## ಬಸರಾಳು

ಮಂಡ್ಯಕ್ಕೆ ಉತ್ತರದಲ್ಲಿ 24 ಕಿ. ಮೀ. ದೂರದಲ್ಲಿರುವ ಹಳ್ಳಿ. ಇಲ್ಲಿ ಹೊಯ್ಸಳ ದೊರೆ ಎರಡನೆಯ ನರಸಿಂಹನ ದಂಡನಾಯಕ ಹರಿಹರನಿಂದ ಸ್ಥಾಪಿಕಲ್ಪಟ್ಟ ಮಲ್ಲಿಕಾರ್ಜುನ ದೇವಾಲಯವಿದೆ. ಹೊಯ್ಸಳ ವಾಸ್ತು ಶೈಲಿಯ ದೇವಾಲಯ ನಕ್ಷತ್ರಾಕಾರದ ಜಗತಿಯ ಮೇಲೆ ನಿಂತಿದೆ. ತ್ರಿಕೂಟಾಚಲ ಗುಡಿಯಾದ ಇಲ್ಲಿ ದಕ್ಷಿಣದ ಗರ್ಭಗೃಹದ ದ್ವಾರದಲ್ಲಿ ವೈಷ್ಣವ ದ್ವಾರಪಾಲಕರ ವಿಗ್ರಹಗಳಿವೆ. ಒಳಗೆ ಸೂರ್ಯನ ವಿಗ್ರಹ ವಿರುವುದು ವೈಶಿಷ್ಟ್ಯ. ಪಶ್ಚಿಮದ ಗರ್ಭಗೃಹದ ಮುಂದೆ ಒಂದು ಸುಕನಾಸಿ ಇದೆ, ಉತ್ತರ ಗರ್ಭಗುಡಿಯ ನವರಂಗದ ದ್ವಾರದ ಮೇಲೆ ತಾಂಡವೇಶ್ವರ ಹಾಗೂ ಅಕ್ಕಪಕ್ಕಗಳಲ್ಲಿ ಶೈವ ದ್ವಾರಪಾಲಕರ ವಿಗ್ರಹಗಳಿವೆ. ನವರಂಗದ ಗೋಡೆಗಳ ಜಾಲಂಧ್ರ ಗಮನ ಸೆಳೆಯುತ್ತದೆ. ಗರ್ಭಗುಡಿಯಲ್ಲಿ ಯಾವ ವಿಗ್ರಹವೂ ಇಲ್ಲ. ಮುಂಭಾಗದಲ್ಲಿ ಒಂದು ನಂದಿಗುಡಿ ಇದೆ. ದೇವಾಲಯದ

ಹೊರಗೋಡೆಯ ಮೇಲೆ ಇರುವ ಪಟ್ಟಿಕೆಗಳಲ್ಲಿ ಅಪಾರ ಶಿಲ್ಪ ಸಮೂಹ ಎದ್ದು ಅಲ್ಲಿ ಕಂಡು ಬರುವ ರಾಮಾಯಣ ಭಾಗವತ ಮಹಾಭಾರತದ ಕಥೆಗಳ ಕೆತ್ತನೆಗಳು ಕಣ್ಮನಗಳನ್ನು ಸೆರೆ ಹಿಡಿಯುತ್ತವೆ. ದೇವಾಲಯ ಸಣ್ಣದಾದರೂ ಗಮನಾರ್ಹವಾಗಿದೆ.

## ಮೇಲುಕೋಟೆ

ಇದೊಂದು ಪ್ರಸಿದ್ಧ ಯಾತ್ರಾಸ್ಥಳ. ಪಾಂಡವಪುರ ತಾಲ್ಲೂಕಿನಲ್ಲಿ ಪಾಂಡವಪುರಕ್ಕೆ 29 ಕಿ. ಮೀ. ದೂರದಲ್ಲಿದೆ. ಇದೊಂದು ಗಿರಿಕ್ಷೇತ್ರ, ತಿರುನಾರಾಯಣಪುರ, ಯಾದವಾದ್ರಿ, ನಾರಾಯಣಾದ್ರಿ, ವೇದಾದ್ರಿ, ಯದು ಶೈಲ ಎಂದೂ ಈ ಗಿರಿಗೆ ಹೆಸರುಗಳಿವೆ. ದಕ್ಷಿಣ ಭಾರತದ ನಾಲ್ಕು ಪ್ರಸಿದ್ಧ ಶ್ರೀ ವೈಷ್ಣವ ಕ್ಷೇತ್ರಗಳಲ್ಲಿ ಇದೂ ಒಂದು. ಕಂಚಿ, ತಿರುಪತಿ ಮತ್ತು ಶ್ರೀರಂಗ ಇತರ ಮೂರು ಕ್ಷೇತ್ರಗಳು. ಶಾಸನಗಳಲ್ಲಿ ಮೇಲುಕೋಟೆಗೆ ಆ ಹೆಸರೂ ಸೇರಿದಂತೆ ವೈಕುಂಠವರ್ಧನ ಕ್ಷೇತ್ರ, ದಕ್ಷಿಣ ಬದರಿಕಾಶ್ರಮ ಎಂಬ ಹೆಸರುಗಳಿರುವುದು ಕಂಡು ಬರುತ್ತದೆ.

ಮೇಲುಕೋಟೆಯ ದೇವಾಲಯಗಳಲ್ಲಿ ಚೆಲುವನಾರಾಯಣಸ್ವಾಮಿ ದೇವಾಲಯ ಪ್ರಮುಖವಾದುದು. ದೇವಸ್ಥಾನ ವಿಸ್ತಾರವಾದ ಕಟ್ಟಡವನ್ನು ಹೊಂದಿದ್ದು ಸುತ್ತಲೂ ಕೈಸಾಲೆ, ಮುಂದೆ ಪ್ರವೇಶ ದ್ವಾರ ಹಾಗೂ ಗೋಪುರ ಇವುಗಳನ್ನೊಳಗೊಂಡಿದೆ. ಚೌಕಾಕಾರದ ಈ ಕಟ್ಟಡದೊಳಗೂ ಕೈಸಾಲೆ ಇದೆ. ಅಲ್ಲದೆ ಯಜ್ಞ ಶಾಲೆ, ಪಾಕ ಶಾಲೆ, ಮಂಟಪಗಳು ಇವೆ. ಗರ್ಭ ಗುಡಿಯ ಮುಂದಿನ ನವರಂಗಕ್ಕೆ ಮೂರು ಪ್ರವೇಶದ್ವಾರಗಳಿವೆ. ನವರಂಗದ ಒಂದು ಮಂಟಪದಲ್ಲಿ ಉತ್ಸವ ವಿಗ್ರಹವಾದ ಶೆಲ್ವ ಪಿಳ್ಳೆಯನ್ನಿಟ್ಟಿರುವುದು ದೇವಾಲಯದ ಒಂದು ವೈಶಿಷ್ಟ್ಯವಾಗಿದೆ. ಪಾತಾಳಾಂಕಣದಲ್ಲಿ ರಾಮಾನು ಜಾಚಾರ್ಯರ ಸನ್ನಿಧಿ ಇದ್ದು ಈ ರಾಮಾನುಜರ ವಿಗ್ರಹವನ್ನು ಅವರ ಶಿಷ್ಯರು ಪ್ರತಿಷ್ಠಾಪಿಸಿರುವುದಾಗಿ ತಿಳಿದು ಬರುತ್ತದೆ. ಶ್ರೀವೈಷ್ಣವ ಸಿದ್ಧಾಂತದ ಪ್ರತಿಪಾದಕರಾಗಿದ್ದವರು ಶ್ರೀ ರಾಮಾನುಜರು. ಹುತ್ತದಲ್ಲಿ

21

ಹುದುಗಿದ್ದ ನಾರಾಯಣ ದೇವರನ್ನು ತೆಗೆದು ದೇವಸ್ಥಾನವನ್ನು ಮತ್ತೆ ನಿರ್ಮಿಸಲು ಶ್ರೀ ವೈಷ್ಣವ ಮತವನ್ನು ಸ್ವೀಕರಿಸಿದ ಹೊಯ್ಸಳ ವಿಷ್ಣು ವರ್ಧನನು ನೆರವಾದನೆಂದು ಹೇಳುತ್ತಾರೆ. ನಾರಾಯಣನ ಪ್ರತಿಷ್ಠೆಯಾದುದು ಕ್ರಿ. ಶ. 1110ಲ್ಲಿ ಎನ್ನಲಾಗಿದೆ.

ಚೆಲುವನಾರಾಯಣ ಸ್ವಾಮಿ ದೇವಾಲಯ 14ನೆಯ ಶತಮಾನದಲ್ಲಿ ಮಹಮ್ಮದೀಯರ ದಾಳಿಗೊಳಗಾಗಿತ್ತು. ಮುಂದೆ ವಿಜಯನಗರದ ಅರಸ ಮಲ್ಲಿಕಾರ್ಜುನನ ಮಂತ್ರಿ ತಿಮ್ಮಣ್ಣ ದಂಡನಾಯಕ 1460ರಲ್ಲಿ ಇದನ್ನು ಅಭಿವೃದ್ಧಿಗೊಳಿಸಿದ. 1771ರಲ್ಲಿ ಮರಾಠರು ಇಲ್ಲಿ ಮುತ್ತಿಗೆ ಹಾಕಿದ್ದರು.

ಈ ದೇವಾಲಯದಲ್ಲಿ ವೈರಮುಡಿ ಎಂಬ ಕಿರೀಟವಿದೆ. ವೈರ ಎಂದರೆ ತಮಿಳಿನಲ್ಲಿ ವಜ್ರ ಎಂದು ಅರ್ಥ. ಪ್ರತಿ ವರ್ಷ ವೈರಮುಡಿಯನ್ನು ಉತ್ಸವಮೂರ್ತಿಗೆ ಧರಿಸಿ ಉತ್ಸವ ನೆರವೇರಿಸುತ್ತಾರೆ. ಈ ಉತ್ಸವ ಪ್ರತಿ ಏಪ್ರಿಲ್‌ನಲ್ಲೂ ನಡೆಯುತ್ತದೆ. ಮೈಸೂರು ಅರಸರ ಆರಾಧ್ಯ ದೈವ ವಾಗಿದ್ದ ಚೆಲುವ ನಾರಾಯಣನಿಗೆ ಅವರು ಹಲವಾರು ರತ್ನಾಭರಣಗಳನ್ನು ರಾಜಮುಡಿ, ಕೃಷ್ಣರಾಜಮುಡಿ ಎಂಬ ಆಭರಣಗಳನ್ನು ಕೊಟ್ಟಿರುತ್ತಾರೆ.

ಪಾತಾಳಾಂಕಣದಲ್ಲಿ ಯದುಗಿರಿ ಅಮ್ಮನವರ ಸನ್ನಿಧಿಯೊಂದಿದ್ದು ಇದರ ಮುಂದೆ ಇರುವ ಮಂಟಪದ ಕಂಬಗಳ ಮೇಲೆ ರಾಮಾಯಣ ಭಾರತ, ಭಾಗವತಗಳ ಕಥಾನಕಗಳ ಕೆತ್ತನೆ ಇದೆ.

ಉತ್ಸವಮೂರ್ತಿ ಶೆಲ್ವ ಪಿಳ್ಳೆ ಅಥವಾ ಸಂಪತ್ಕುಮಾರ ಮೊದಲು ಇದ್ದುದು ದೆಹಲಿ ಸುಲ್ತಾನನ ಅರಮನೆಯಲ್ಲಿ ಎಂದರೆ ಯಾರಾದರೂ ಅಚ್ಚರಿಗೊಳ್ಳುತ್ತಾರೆ. ಈ ಮೂರ್ತಿ ಸುಲ್ತಾನನ ಮಗಳಿಗೆ ಬಲುಪ್ರಿಯ ವಾಗಿತ್ತು. ರಾಮಾನುಜರು ಅಲ್ಲಿಗೆ ಹೋಗಿ ಈ ವಿಗ್ರಹವನ್ನು ತಂದರಾದರೂ ಸುಲ್ತಾನನ ಮಗಳು ವರನಂದಿ ಆ ದೇವರನ್ನು ಹಿಂಬಾಲಿಸಿ ಬಂದು ಅವನಲ್ಲಿ ಐಕ್ಯಳಾದಳೆಂದು ಹೇಳುತ್ತಾರೆ. ಇಂದಿಗೂ ನಾರಾಯಣನ ಪಾದದಡಿಯಲ್ಲಿ ವರ ನಂದಿಯ ವಿಗ್ರಹವನ್ನು ಕಾಣಬಹುದು. ಈಕೆಯನ್ನು ಬೀಬಿ

ನಾಚ್ಚಿಯಾರ್ ಎಂದು ಕರೆದಿದ್ದಾರೆ. ಶ್ರೀರಾಮನಿಗೆ ಪ್ರಿಯವಾದ ಈ ವಿಗ್ರಹಕ್ಕೆ ರಾಮಪ್ರಿಯ ಎಂಬ ಹೆಸರೂ ಇದೆ.

ಯೋಗಾನರಸಿಂಹ ದೇವಾಲಯ ಮೇಲುಕೋಟೆಯ ಇನ್ನೊಂದು ದೇವಾಲಯ. ಇದು ಚಿಕ್ಕದಾಗಿದ್ದು ಗರ್ಭಗುಡಿ, ಸುತ್ತಲ ಮಂಟಪ ಇವೆ. ಚೆಲುವನಾರಾಯಣ ಸ್ವಾಮಿ ದೇವಾಲಯದ ನಾಲ್ಕು ಬೀದಿಗಳಲ್ಲಿಯೂ ಇತರ ಕೆಲವು ದೇವಾಲಯಗಳಿವೆ.

ಮೇಲುಕೋಟೆಯಲ್ಲಿ ರಾಮಾನುಜಾಚಾರ್ಯರೇ ಸ್ಥಾಪಿಸಿದ್ದೆನ್ನಲಾದ ಯತಿರಾಜ ಮಠವಿದೆ. ಇದು ಧರ್ಮ ಜಾಗೃತಿಗೆಂದು ಕೆಲಸ ಮಾಡುತ್ತಿದೆ. ತಮಿಳು ನಾಡಿನಲ್ಲಿ ಶ್ರೀ ವೈಷ್ಣವರಿಗೆ ಚೋಳರ ಆಳ್ವಿಕೆಯ ಕಾಲದಲ್ಲಿ ಒದಗಿದ ಸಂಕಷ್ಟ ಪರಿಸ್ಥಿತಿಯಲ್ಲಿ ಕರ್ನಾಟಕದ ಮೇಲುಕೋಟೆ ಶ್ರೀ ವೈಷ್ಣವ ಪಂಥದ ಮುಖ್ಯ ಕೇಂದ್ರವಾಯಿತು. ಆಗ ಇಲ್ಲಿ ಹನ್ನೆರಡು ವರ್ಷ ಕಾಲ ವಿಶಿಷ್ಟಾದ್ವೈತ ಮತಾಚಾರ್ಯ ರಾಮಾನುಜರು ತಂಗಿದ್ದರೆಂದು ತಿಳಿಯಲಾಗಿದೆ.

## ತೊಣ್ಣೂರು

ಮೇಲುಕೋಟೆಗೆ 29 ಕಿ. ಮೀ. ದೂರದಲ್ಲಿದೆ. ಇದನ್ನು ತೊಂಡ ನೂರು ಎಂದೂ ಹೇಳುತ್ತಾರೆ, ಹಿಂದೆ ಇದಕ್ಕೆ ಯಾದವ ನಾರಾಯಣಪುರ ಎಂಬ ಹೆಸರಿದ್ದಿತು. ತೊಂಡ ಎಂದರೆ ಭಕ್ತ. ಭಕ್ತರ ಊರು ಇದಾಗಿದೆ. ಇಲ್ಲಿ ನಂಬಿನಾರಾಯಣನ ದೇವಾಲಯವಿದ್ದು ಇದನ್ನು ವಿಷ್ಣುವರ್ಧನನು ಕಟ್ಟಿಸಿದನೆನ್ನಲಾಗಿದೆ. ಗರ್ಭಗುಡಿಯಲ್ಲಿ ಗರುಡ ಪೀಠದ ಮೇಲೆ ಆರು ಅಡಿ ಎತ್ತರದ ನಾರಾಯಣ ವಿಗ್ರಹವಿದೆ. ಗರ್ಭಗುಡಿಯ ಮೇಲ್ಛಾವಣಿಯಲ್ಲಿ ಪದ್ಮದ ಕೆತ್ತನೆ ಇದೆ. ಮಹಾದ್ವಾರದ ಮುಂದೆ ಹದಿನಾರು ಮೂಲೆಗಳುಳ್ಳ ಗರುಡಗಂಬವಿದೆ. ದೇವಾಲಯದ ಹೊರ ಪ್ರಾಕಾರದಲ್ಲಿ ಲಕ್ಷ್ಮಿಗುಡಿ ಇದೆ. ರಾಮಾನುಜರು ಈ ಊರಿಗೂ ಬಂದಿದ್ದರು. ಇದಕ್ಕೆ ಕುರುಹಾಗಿ ಇಲ್ಲಿನ ಗುಡ್ಡದ ಮೇಲಿರುವ ಯೋಗಾನರಸಿಂಹ ದೇವಸ್ಥಾನದಲ್ಲಿ ಶಿರದ ಮೇಲೆ ಏಳು ಹೆಡೆ ಆದಿಶೇಷನಿರುವ ರಾಮಾನುಜರ ವಿಗ್ರಹವಿದೆ. ಒಮ್ಮೆ ಇಲ್ಲಿ

ಜನ ಮಳೆ ಇಲ್ಲದೆ ಕಂಗಾಲಾದಾಗ ರಾಮಾನುಜರು ತಮ್ಮ ತಪಶ್ಶಕ್ತಿಯಿಂದ ಕುಡಿಯುವ ನೀರು ಸಿಗುವಂಥ ಕೆರೆಯನ್ನು ನಿರ್ಮಿಸಿದರಂತೆ. ಈಕೆಗೆ ಇಂದು ಮೋತಿ ತಲಾಬ್ (ಮುತ್ತಿನ ಸರೋವರ) ಎಂಬ ಹೆಸರಿದೆ. ಕೃಷ್ಣನ ದೇವ ಸ್ಥಾನ ಈ ಊರಿನ ಮತ್ತೊಂದು ದೇವಾಲಯ, ಇದು ಒಂದನೆಯ ನರಸಿಂಹನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ. 1158) ಕಟ್ಟಲಾದ ದೇವಾಲಯ.

ತೊಣ್ಣೂರಿನಲ್ಲಿ ಸಾಲಾರ್ ಮಸೂದ್ ಘಾಜಿಯವರ ದುರ್ಗಾ ಇದ್ದು ಇಲ್ಲಿನ ಕೆಲವು ಕಂಬಗಳ ಮೇಲೆ ಹಿಂದೂ ದೇವತೆಗಳ ಶಿಲ್ಪಗಳಿರುತ್ತವೆ.

## ಮದ್ದೂರು

ಬೆಂಗಳೂರು ಮೈಸೂರು ಮಾರ್ಗದಲ್ಲಿ ಶಿಂಷಾ ನದಿ ದಡದಲ್ಲಿ ಕಂಗೊಳಿಸುವ ಮದ್ದೂರು ಐತಿಹಾಸಿಕವಾಗಿಯೂ ಪೌರಾಣಿಕವಾಗಿಯೂ ಪ್ರಸಿದ್ಧವಾಗಿರುವ ಸ್ಥಳ. ಕದಂಬ ಕ್ಷೇತ್ರ, ಅರ್ಜುನಪುರಿ, ಮರಡೂರು ಎಂದೂ ಈ ಊರಿಗೆ ಹೆಸರುಗಳಿವೆ. ಕದಂಬ ಋಷಿಗಳು ತಪಸ್ಸು ಮಾಡಿದ ಪುಣ್ಯ ಭೂಮಿ ಇದು. ಇಲ್ಲಿ ನೆಲೆಸಿದ ಉಗ್ರನರಸಿಂಹನ ದರ್ಶನಾರ್ಥವಾಗಿ ಶ್ರೀ ಕೃಷ್ಣನ ಸಮೇತ ಅರ್ಜುನ ಇಲ್ಲಿಗೆ ಬಂದುದರಿಂದ ಈ ಸ್ಥಳಕ್ಕೆ ಅರ್ಜುನ ಪುರಿ ಎಂದು ಹೆಸರು ಇತ್ತು. ಇಲ್ಲಿ ಹರಿಯುವ ಶಿಂಷಾ ನದಿಗೆ ಕದಂಬ ನದಿ ಎಂಬ ಹೆಸರೂ ಇದೆ. ಗ್ರಾಮ ದೇವತೆ ಮದ್ದೂರಮ್ಮ ಊರಿನ ಹೆಸರನ್ನು ಅನ್ವರ್ಥಗೊಳಿಸಿದ್ದಾಳೆ.

ಮದ್ದೂರಿನಲ್ಲಿ ವಾಸ್ತುವೈಭವದ ಎರಡು ದೇವಾಲಯಗಳಿವೆ. ಆದರೆ ಈ ವೈಭವ ಹಿಂದಿನಂತಿಲ್ಲ. ದೇವಸ್ಥಾನಗಳು ಸುಂದರ ತೋಟಗಳ ಸನಿಹ ದಲ್ಲಿದ್ದು ನೆಮ್ಮದಿ ತರಬಲ್ಲವು. ಉಗ್ರ ನರಸಿಂಹ ಸ್ವಾಮಿ ದೇವಸ್ಥಾನ, ವರದರಾಜ ಸ್ವಾಮಿ ದೇವಸ್ಥಾನ ಹಾಗೂ ಮದ್ದೂರಮ್ಮನ ಗುಡಿ ಇವು ಈ ಊರಿನ ಪ್ರಮುಖ ದೇವಾಲಯಗಳು. ಉಗ್ರನರಸಿಂಹಸ್ವಾಮಿ ದೇವಸ್ಥಾನ ದ್ರಾವಿಡ ಶೈಲಿಯದು, ಹೊಯ್ಸಳರ ಕಾಲದ ಕಟ್ಟಡ ಎನ್ನಬಹುದು. ನವರಂಗ ಆಕರ್ಷಣೀಯ, ಗರ್ಭಗುಡಿಯ ಉಗ್ರನರಸಿಂಹ ಏಳು ಅಡಿಯ

ಕಲಾತ್ಮಕ ವಿಗ್ರಹ. ನರಸಿಂಹನಿಗೆ ಎಂಟು ಕೈಗಳು, ಇವುಗಳಲ್ಲಿ ನಾಲ್ಕು ಕೈಗಳು ಶಂಖ, ಚಕ್ರ, ಪಾಶ ಮತ್ತು ಅಂಕುಶಗಳನ್ನು ಹೊತ್ತಿವೆ, ಇನ್ನೆರಡು ಕೈಗಳು ಹಿರಣ್ಯಕಶಿಪುವಿನ ಹೊಟ್ಟೆ ಬಗೆಯುತ್ತಿದ್ದರೆ ಉಳಿದೆರಡು ಕೈಗಳು ಕರುಳುಮಾಲೆ ಧರಿಸುವಲ್ಲಿ ತೊಡಗಿವೆ. ಸ್ವಾರಸ್ಯವೆಂದರೆ ಈ ದೇವರಿಗೆ ಮೂರು ಕಣ್ಣುಗಳು. ಈ ಗುಡಿಯ ಆವರಣದಲ್ಲಿರುವ ಶ್ರೀರಾಮ ಲಕ್ಷ್ಮಣ ಸೀತಾ ಆಂಜನೇಯರ ವಿಗ್ರಹಗಳು ಸುಂದರ. ಶ್ರೀರಾಮಾನುಜಾಚಾರ್ಯ, ನಮ್ಮಾಳ್ವಾರ್ ವಿಗ್ರಹಗಳೂ ಇಲ್ಲಿನ ಆವರಣದಲ್ಲಿವೆ. ದೇವಸ್ಥಾನದ ಗೋಪುರ ಶಿಥಿಲವಾಗಿದ್ದು ಪುನರ್ನಿರ್ಮಾಣದ ಹಂತದಲ್ಲಿದೆ.

ವರದರಾಜ ಸ್ವಾಮಿ ದೇವಾಲಯ ನರಸಿಂಹನ ಗುಡಿ ಪಕ್ಕದಲ್ಲಿಯೇ ಇದ್ದು ಈ ದೇವರ ಎತ್ತರ 12 ಅಡಿ. ಕಪ್ಪು ಶಿಲೆಯ ಚತುರ್ಬಾಹು ವಿಷ್ಣು ನೋಡಲು ರಮ್ಯ. ವೈಶಿಷ್ಟ್ಯವೆಂದರೆ ಈ ವಿಗ್ರಹ ಹಿಂಭಾಗದಿಂದಲೂ ಸುಂದರವಾಗಿ ಕಾಣುವುದು. "ಎಲ್ಲಾ ದೇವರ ಮುಂದೆ ನೋಡು ವರದರಾಜ ಸ್ವಾಮಿ ಹಿಂದೆ ನೋಡು" ಎಂಬ ಗಾದೆ ಇದರಿಂದ ರೂಢಿಗೆ ಬಂದಿದೆ. ಮದ್ದೂರಮ್ಮನ ಗುಡಿ ಊರಿಗೆ ಶೋಭಾಯಮಾನವಾಗಿದೆ. ನರಸಿಂಹಸ್ವಾಮಿ ರಥೋತ್ಸವ ಕಾಲದಲ್ಲಿ ಮದ್ದೂರಮ್ಮನ ಜಾತ್ರೆ ಒಂದು ವಾರದ ಕಾಲ ನಡೆಯುತ್ತದೆ,

ಮದ್ದೂರಿಗೆ ನಾಲ್ಕು ಕಿ.ಮೀ. ದೂರದಲ್ಲಿ ಶಿಂಷಾ ನದಿ ದಡದ ಮೇಲೆ ವೈದ್ಯನಾಥೇಶ್ವರ ದೇವಾಲಯವಿದೆ. ದೇವಾಲಯವಿರುವ ಈ ಪ್ರದೇಶಕ್ಕೆ ವೈದ್ಯನಾಥ ಪುರ ಎಂಬ ಹೆಸರಿದೆ. ಹಿಂದೆ ಇಲ್ಲಿ ಪಾಳೆಗಾರನೊಬ್ಬನ ಬಳಿ ಇದ್ದ ಹಸುಗಳ ಮಂದೆಯ ಒಂದು ಹಸು ಭಾರಿ ಪ್ರಮಾಣದಲ್ಲಿ ಹಾಲು ಕೊಡುತ್ತಿದ್ದು ಆದರೆ ಅದು ಹುತ್ತವೊಂದರ ಮೇಲೆ ಹಾಲು ಕರೆಯುತ್ತಿತ್ತು. ಪಾಳೆಗಾರ ಹುತ್ತವನ್ನು ಅಗೆಸಿ ತೆಗೆದಾಗ ರಕ್ತದ ಕಲೆಯನ್ನು ಕಂಡನಂತೆ. ಈ ರಕ್ತ ಲಿಂಗರೂಪಿ ಶಿವನದೆಂದೂ ಗಾಯಕ್ಕೆ ವಿಷ ಪರಿಹಾರಿ ಸೊಪ್ಪು ಅರೆದು ಹಚ್ಚಿ ವಾಸಿ ಮಾಡಬೇಕೆಂದು ಕನಸಿನಲ್ಲಿ ಪ್ರೇರಣೆಯಾಯಿತಂತೆ. ತನ್ನ ಗಾಯಕ್ಕೆ ವಾಸಿ ಮಾಡಿಕೊಂಡ ಈಶ್ವರ ಇಲ್ಲಿ ವೈದ್ಯೇಶ್ವರನಾಗಿ ಕಂಗೊಳಿಸಿದ್ದಾನೆ. ದೇವಾಲಯದಲ್ಲಿ ಇಂದಿಗೂ ಹುತ್ತವನ್ನು ತೋರಿಸು

ವರಲ್ಲದೆ ಹುತ್ತದ ಮಣ್ಣನ್ನು ಕೊಡುವ ಪದ್ಧತಿ ಇದೆ. ಇದು ರೋಗ ಪರಿಹಾರಿ ಎಂದು ಭಕ್ತರ ನಂಬಿಕೆ ಇದೆ.

ಮದ್ದೂರಿನ ದೇಶೇಶ್ವರ ದೇವಾಲಯ ಗಂಗರ ಕಾಲದ ರಚನೆ. ಇಲ್ಲಿನ ನಂದಿ ಮಂಟಪ ಒಂದು ಸುಂದರ ರಚನೆ.

## ಶಿವ ಸಮುದ್ರ

ಮಳವಳ್ಳಿ–ಕೊಳ್ಳೇಗಾಲ ತಾಲ್ಲೂಕುಗಳ ಗಡಿಯಲ್ಲಿದ್ದು ಮೈಸೂರಿಗೆ 80 ಕಿ.ಮೀ. ದೂರದಲ್ಲಿದೆ. ಇದೊಂದು ಪ್ರವಾಸಿಕೇಂದ್ರ, ಕಾವೇರಿ ಜಲಪಾತ, ವಿದ್ಯುದಾಗಾರ ಇವೆ. ಗಗನ ಚುಕ್ಕಿ ಭರ ಚುಕ್ಕಿ ಜಲಪಾತಗಳು ಪ್ರಸಿದ್ಧ. ಶಿವ ಸಮುದ್ರವನ್ನು ಮಧ್ಯರಂಗ ಎಂದು ಕರೆಯುತ್ತಾರೆ. ಆದಿ ರಂಗವೇ ಶ್ರೀರಂಗಪಟ್ಟಣ. ತಮಿಳು ನಾಡಿನಲ್ಲಿರುವ ಶ್ರೀರಂಗಂ ಅಂತ್ಯ ರಂಗ. ಇದೂ ಸಹ ಕಾವೇರಿ ನದಿಯಿಂದಾವೃತವಾದ ಒಂದು ದ್ವೀಪ. ಶ್ರೀ ವೈಷ್ಣವ ಕ್ಷೇತ್ರ.

ಶಿವ ಸಮುದ್ರದಲ್ಲಿ ಕಾಡಿನ ಮಧ್ಯೆ ರಂಗನಾಥಸ್ವಾಮಿ ದೇವಾಲಯವಿದೆ. ಇದು ಹೊಯ್ಸಳರ ಕಾಲದ ದೇವಾಲಯ. ರಂಗನಾಥನು ಇಲ್ಲಿ ಶಯನ ಭಂಗಿಯಲ್ಲಿರುತ್ತಾನೆ. ಶೇಷಶಾಯಿ ರಂಗನ ಉದ್ದ ಎಂಟು ಅಡಿಗಳು. ಇದೊಂದು ಕಲಾತ್ಮಕ ವಿಗ್ರಹ. ಜಗನ್ಮೋಹನ ರಂಗನಾಥ ಎಂದೂ ಇದಕ್ಕೆ ಹೆಸರು. ವಿಗ್ರಹದ ಕಾಲಿನ ಬಳಿ ಕಾವೇರಿಯ ವಿಗ್ರಹವಿದೆ. ದೇವಾಲಯದಲ್ಲಿ ಆದಿಶೇಷ, ಆಳ್ವಾರುಗಳು ಮೊದಲಾದ ವಿಗ್ರಹಗಳಿವೆ.

ಸೋಮೇಶ್ವರ ದೇವಸ್ಥಾನ, ವೀರಭದ್ರ ದೇವಾಲಯ ಈ ಊರಿನ ಇತರ ದೇವಾಲಯಗಳು. ಸೋಮೇಶ್ವರ ದೇವಾಲಯದ ಕಂಬಗಳಲ್ಲಿ ನವಿರಾದ ಕೆತ್ತನೆ ಕೆಲಸ ನೋಡಬಹುದು. ನವರಂಗ ಮತ್ತು ಮುಖ ಮಂಟಪಗಳಲ್ಲಿ ದ್ರಾವಿಡ ಶೈಲಿಯ ಕಂಬಗಳಿವೆ. ದೇಗುಲದಲ್ಲಿ ಸೋಮೇಶ್ವರ, ಗಣೇಶ, ಸೂರ್ಯಚಂದ್ರ, ಬಾಲಸುಬ್ರಹ್ಮಣ್ಯ, ಬಸವ ಈ ವಿಗ್ರಹಗಳಿರುತ್ತವೆ.

ವೀರಭದ್ರ ಗುಡಿ, ಮೀನಾಕ್ಷಿ ಗುಡಿ ಇತರ ದೇವಾಲಯಗಳು. ಮಳವಳ್ಳಿಯಲ್ಲಿ ಹೊಯ್ಸಳರ ಕಾಲದ ಸಾರಂಗ ಪಾಣಿ ದೇವಾಲಯವಿದ್ದರೆ ಇಲ್ಲಿಗೆ ಸಮೀಪದ ಮಾರೇಹಳ್ಳಿಯಲ್ಲಿ ನರಸಿಂಹ ಗುಡಿ ಇದೆ. ನರಸಿಂಹ ದೇವಾಲಯದಲ್ಲಿರುವ ವಿಗ್ರಹ ಅತ್ಯಂತ ಸುಂದರವಾಗಿದೆ.

## ನಾಗಮಂಗಲ

ಮೈಸೂರಿನಿಂದ ಸುಮಾರು 65 ಕಿ.ಮೀ. ದೂರದಲ್ಲಿರುವ ತಾಲ್ಲೂಕು ಕೇಂದ್ರ. ಇಲ್ಲಿ ಹಿತ್ತಾಳೆ, ಕಂಚಿನ ವಿಗ್ರಹಗಳನ್ನು ತಯಾರಿಸುವ ಜನರಿರುತ್ತಾರೆ. ಇವರು ತಯಾರಿಸುವ ಕಲಾತ್ಮಕ ಲೋಹದ ವಿಗ್ರಹಗಳಿಗೆ ಅಪಾರ ಬೇಡಿಕೆ ಇರುತ್ತದೆ.

ಮೊದಲು ನಾಗಮಂಡಲ ಎಂಬ ಹೆಸರು ಈ ಊರಿಗಿತ್ತು. ಮಹಾಭಾರತ ಕಾಲದಲ್ಲಿ ಇದೇ ಮಣಿಪುರವಾಗಿತ್ತು ಎಂದೂ ಹೇಳುತ್ತಾರೆ. ಇದನ್ನು ಲೋಹಿತ ವಂಶದ ಪಾಳೆಯಗಾರರು ಬಹುಕಾಲ ಆಳಿದರು. ಚನ್ನಪಟ್ಟಣದ ಜಗ ದೇವರಾಯನ ಕಾಲದಲ್ಲಿ ಇದು ಅವನ ಮುಖ್ಯ ಪಟ್ಟಣವಾಗಿತ್ತು. ಬಳಿಕ ಮೈಸೂರರಸರು ಮರಾಠರು ಈ ಪ್ರದೇಶದ ಮೇಲೆ ಅಧಿಕಾರ ಹೊಂದಿದ್ದರು.

ನಾಗಮಂಗಲದಲ್ಲಿ ಹೊಯ್ಸಳ ವಿಷ್ಣುವರ್ಧನನ ಕಾಲದ ಸೌಮ್ಯ ಕೇಶವ ದೇವಾಲಯವಿದೆ. ಇದು ತ್ರಿಕೂಟಾಚಲ ದೇವಾಲಯ. ಮಧ್ಯದ ಗರ್ಭಗುಡಿಯಲ್ಲಿಯೇ ಸೌಮ್ಯ ಕೇಶವನಿದ್ದಾನೆ. ಇತರ ಎರಡು ಗುಡಿಗಳಲ್ಲಿ ನರಸಿಂಹ, ವೇಣುಗೋಪಾಲ ವಿಗ್ರಹಗಳಿವೆ. ಮಹಾದ್ವಾರದ ಮೇಲೆ ಏಳು ಅಂತಸ್ತಿನ ದ್ರಾವಿಡ ಶೈಲಿಯ ಗೋಪುರ ಇದೆ. ದೇವಾಲಯದ ಮುಂಭಾಗದಲ್ಲಿರುವ ಗರುಡಗಂಬ ಐವತ್ತೈದು ಅಡಿ ಎತ್ತರವಿದ್ದು ಒಂದು ಕಲಾತ್ಮಕ ಕೃತಿಯಾಗಿದೆ. ಸೌಮ್ಯಕೇಶವ ಒಂದು ಪ್ರಾಚೀನ ದೇವಾಲಯ.

ನರಸಿಂಹ, ವೀರಭದ್ರ, ಭದ್ರಕಾಳಿ, ಗ್ರಾಮದೇವತೆ ಬಡಗೋಡಮ್ಮ, ಭುವನೇಶ್ವರ ದೇವಾಲಯಗಳು ಈ ಊರಿನ ಇನ್ನಿತರ ದೇವಾಲಯಗಳು.

ನರಸಿಂಹ ದೇವಾಲಯ ಹೊಯ್ಸಳರ ಕಾಲದ್ದಾಗಿದ್ದು ನರಸಿಂಹ ವಿಗ್ರಹ ದೊರೆತ ಕಡೆ ಬೆಳೆದಿದ್ದ ನಲವತ್ತು ಅಡಿ ಉದ್ದದ ಒಂದು ಕೊಂಬೆ ದೇವಾಲಯದಲ್ಲಿಟ್ಟಿರುವುದನ್ನು ನೋಡಬಹುದು. ಅಕ್ಕಸಾಲಿಗರ ಕಾಳಮ್ಮನಗುಡಿ ಮತ್ತೊಂದು ದೇವಾಲಯ. ಇದು ಊರಿನ ಒಳ ಕೋಟೆಯ ದಿಡ್ಡಿ ಬಾಗಿಲಿನಲ್ಲಿದೆ.

ನಾಗಮಂಗಲದ ಕೋಟೆಯನ್ನು ಲೋಹಿತ ವಂಶದ ಜೈವಿಡಣಾಯಕನೆಂಬುದನ್ನು ಕಟ್ಟಿಸಿದನೆನ್ನುತ್ತಾರೆ.

## ಬೆಳ್ಳೂರು

ನಾಗಮಂಗಲಕ್ಕೆ 16 ಕಿ. ಮೀ. ದೂರದಲ್ಲಿರುವ ಊರು, ಕನ್ನಡದ ಕಣ್ವರೆಂದು ಪ್ರಸಿದ್ಧರಾದ ಬಿ.ಎಂ. ಶ್ರೀಕಂಠಯ್ಯನವರ ಜನ್ಮಸ್ಥಳ ಇದಾಗಿದೆ. ಇಲ್ಲಿ ಕೆಲವು ಪ್ರಾಚೀನ ದೇವಾಲಯಗಳಿವೆ.

ಗೌರೇಶ್ವರ, ಸಿಂಗೇಶ್ವರ ಹಾಗೂ ಮಾಧವರಾಯ ದೇವಾಲಯಗಳು ಇಲ್ಲಿವೆ. ಮಾಧವರಾಯ ದೇವಾಲಯ ತ್ರಿಕೂಟಾಚಾಲ. ಇದು ವಿಜಯ ನಗರ ಕಾಲದ ರಚನೆ. ಇಡೀ ಕಟ್ಟಡದ ಒಂದು ವೇದಿಕೆಯ ಮೇಲೆ ಕಟ್ಟಲಾಗಿದೆ. ಆದಿ ಮಾಧವರಾಯ ಇಲ್ಲಿನ ಮೂಲ ವಿಗ್ರಹ, ಗೋಪಾಲನ ವಿಗ್ರಹವೊಂದು ಸುಂದರವಾಗಿದೆ. ವರದರಾಜನ ವಿಗ್ರಹವೊಂದಿದೆ. 1294 ರಲ್ಲಿ ಈ ದೇವಾಲಯವನ್ನು ಕಟ್ಟದ್ದೆನ್ನಲಾಗಿದೆ. ಮೂಲೆ ಸಿಂಗೇಶ್ವರ ದೇವಾಲಯವೂ ತ್ರಿಕೂಟಾಚಲ ದೇವಾಲಯ. ಮೂರು ಗರ್ಭ ಗುಡಿಗಳಿವೆ. ಆದರೆ ದೇವಾಲಯ ಹಾಳಾಗಿದೆ. ಗೌರೇಶ್ವರ ದೇವಾಲಯದ ಸುಕನಾಸಿ ಹಾಗೂ ಭುವನೇಶ್ವರಿಗಳು ಗಮನ ಸೆಳೆಯುತ್ತವೆ. ಈ ಗುಡಿಯ ಶಿಖರದ ಮೇಲೆ ಹುಲಿಯನ್ನು ಕೊಲ್ಲುತ್ತಿರುವ ಸಳನ ಶಿಲ್ಪವಿದೆ, ವೀರಭದ್ರ, ಕಲ್ಲೇಶ್ವರ ಈ ಊರಿನ ಇತರ ದೇವಾಲಯಗಳು.

## ಆದಿಚುಂಚನಗಿರಿ

ಬಾಲಗಂಗಾಧರನಾಥಸ್ವಾಮಿಗಳು ಇಲ್ಲಿಯ ಜಗದ್ಗುರುಗಳಾಗಿರುತ್ತಾರೆ. ಇವರು ಪಟ್ಟಕ್ಕೆ ಬಂದ ಮೇಲೆ ಶ್ರೀ ಕ್ಷೇತ್ರ ಬಹುಮಟ್ಟಿನ ಅಭಿವೃದ್ಧಿಯನ್ನು ಕಂಡಿದೆ. ಶೈಕ್ಷಣಿಕ ಕ್ಷೇತ್ರವೂ ಹೌದು, ನಿಸರ್ಗ ಸುಂದರ ಪ್ರದೇಶವೂ ಆಗಿದೆ. ಶ್ರೀ ಆದಿ ಚುಂಚನಗಿರಿ ಒಂದು ಗಿರಿಕ್ಷೇತ್ರ. ಮಯೂರಗಳು ವಿಹರಿಸುವ ಬೀಡು. ಪ್ರಸಿದ್ಧ ಯಾತ್ರಾಸ್ಥಳ. ಬೆಳ್ಳೂರಿಗೆ ಸುಮಾರು ಹತ್ತು ಕಿ. ಮೀ. ದೂರದಲ್ಲಿದೆ. ಇಲ್ಲಿಗೆ ಬಂದ ಪರಮೇಶ್ವರ ಈ ಗಿರಿಯಲ್ಲಿ ವಾಸಿಸಿ ಪರಪೀಡಕನಾಗಿದ್ದ ಚುಂಚನೆಂಬ ರಾಕ್ಷಸನನ್ನು ಕೊಂದನೆಂದೂ ಆವನಿಂದಾಗಿ ಈ ಗಿರಿಗೆ ಚುಂಚನಗಿರಿ ಎಂಬ ಹೆಸರಿದೆ. ಈಶ್ವರನೇ ಸ್ಥಾಪಿಸಿದ ಆದಿಪೀಠ ಇಲ್ಲಿದ್ದು ಇದು ಆದಿಚುಂಚನಗಿರಿಯಾಗಿದೆ.

ಶ್ರೀ ಗಂಗಾಧರೇಶ್ವರ ದೇವಾಲಯ ಎತ್ತರವಲ್ಲಿದೆ, ಚೋಳರು ಕಟ್ಟಿದ ದೇವಾಲಯ ಇದಾಗಿದೆ. ಈ ದೇವಾಲಯದ ಗರ್ಭಗುಡಿಯ ಲಿಂಗ ಬಟ್ಟಲಿನಿಂದ ಅಭಿಷೇಕದ ನೀರು ಗುಪ್ತಮಾರ್ಗವಾಗಿ ನಡುಮಟ್ಟದಲ್ಲಿರುವ ಆಳವಾದ ಬಿಂದು ಸರೋವರಕ್ಕೆ ಬರುವುದೆಂದು ಹೇಳುತ್ತಾರೆ. ಬಂಡೆಯ ಮೇಲೆ ಗವಿಸಿದ್ದೇಶ್ವರ ದೇವಾಲಯವಿದೆ ಗಿರಿಯ ಮಧ್ಯದ ಶಿಖರದಲ್ಲಿ ಗವಿಯಲ್ಲಿ ಸೋಮೇಶ್ವರ ಲಿಂಗವಿದೆ, ಈ ಗವಿಯಲ್ಲಿ ಕತ್ತಲು ಕವಿದಿರುತ್ತದೆ. ಭೈರವನ ಗುಡಿಯೊಂದು ಇಲ್ಲಿದೆ.

## ಬಿಂಡಿಗನವಿಲೆ

ನಾಗಮಂಗಲಕ್ಕೆ 19 ಕಿ. ಮೀ. ದೂರದಲ್ಲಿದೆ. ಇಲ್ಲಿ ಮಯೂರ ವನವಿದೆ. ದ್ರಾವಿಡ ಶೈಲಿಯ ಕೇಶವ ದೇವಾಲಯವಿದ್ದು ಇಲ್ಲಿ ಶ್ರೀ ಗಂಧದ ಮರದಲ್ಲಿ ಕೆತ್ತಲಾದ ಗರುಡನ ವಿಗ್ರಹವಿದೆ.

## ಕಂಬದಹಳ್ಳಿ

ಇದೊಂದು ಜೈನರ ಯಾತ್ರಾಸ್ಥಳ. ನಾಗಮಂಗಲಕ್ಕೆ 16 ಕಿ. ಮೀ.

ದೂರದಲ್ಲಿದೆ. ಇಲ್ಲಿನ ಪಂಚಕೂಟ ಬಸದಿಯಲ್ಲಿರುವ 50 ಅಡಿ ಎತ್ತರದ ಕರಿಶಿಲೆಯ ಬ್ರಹ್ಮದೇವರ ಕಂಬದಿಂದಾಗಿ ಊರಿಗೆ ಕಂಬದಹಳ್ಳಿ ಎಂಬ ಹೆಸರಿದೆ. ಕಂಬದಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳೂ ಕಂಬದ ಮೇಲೆ ಪೂರ್ವದ ಕಡೆಗಿರುವ ಬ್ರಹ್ಮದೇವರ ಶಿಲ್ಪವನ್ನು ಗಮನಿಸಬಹುದು. ಪಂಚಕೂಟ ಬಸದಿಯ ನಡುವೆ ಇರುವುದೇ ತ್ರಿಕೂಟಾಚಲ ಆದಿನಾಥ ಬಸದಿ ಗರ್ಭಗುಡಿ ಗಳಲ್ಲಿ ನೇಮಿನಾಥ. ಶಾಂತಿನಾಥರ ಕುಳಿತ ಭಂಗಿಯ ವಿಗ್ರಹಗಳೂ ಮತ್ತು ದೇವಾಲಯದಲ್ಲಿ ಇತರ ಕೆತ್ತನೆಗಳನ್ನೂ ಕಾಣಬಹುದು. ಶಾಂತಿನಾಥ ಬಸದಿ ದ್ರಾವಿಡ ಶೈಲಿಯದಿದೆ. ನವರಂಗದಲ್ಲಿ ಹೊಯ್ಸಳ ಶೈಲಿಯ ಕಲ್ಲಿನ ಕಂಬಗಳನ್ನು ನೋಡುತ್ತೇವೆ. ಈ ದೇವಾಲಯದಲ್ಲೂ ಗಮನಾರ್ಹ ಕೆತ್ತನೆಗಳಿದ್ದು ಶಾಂತಿನಾಥನ ಹತ್ತು ಅಡಿ ಎತ್ತರದ ವಿಗ್ರಹ ಅತ್ಯಂತ ಸುಂದರವಾಗಿದೆ.

ನಾಗಮಂಗಲ ತಾಲ್ಲೂಕಿನಲ್ಲಿ ನಾಮಮಂಗಲಕ್ಕೆ 9 ಕಿ. ಮೀ. ದೂರ ದಲ್ಲಿರುವ ಆಲತಿಗಿರಿ ಅಲ್ಲಿನ ಶ್ರೀ ಮಲ್ಲೇಶ್ವರ ಗುಹಾಲಯದಿಂದ ಪ್ರಸಿದ್ಧ ವಾಗಿದೆ. ಪರಶುರಾಮ ಇಲ್ಲಿರುವ ಬಂಡೆಯನ್ನು ಕೊಡಲಿಯಿಂದಲೇ ಕಡಿದು ಗುಹೆಯನ್ನು ನಿರ್ಮಿಸಿದನೆಂದು ಹೇಳುತ್ತಾರೆ. ಗುಹೆಯಲ್ಲಿ ಯಾರಾದರೂ ಸರಿ ನುಸಳಿಕೊಂಡು ಹೋಗಬೇಕು. ಒಳಗೆ ಕತ್ತಲೆ ಬೇರೆ. ಸ್ವಲ್ಪ ದೂರ ಸಾಗಿದರೆ ಶಿವಲಿಂಗದ ದರ್ಶನ ಮಾಡಬಹುದು. ಇದೊಂದು ಅಚ್ಚರಿಯ ಗುಹೆ. ತಾಲ್ಲೂಕಿನ ಪಾಲಗ್ರಹಾರದಲ್ಲಿ ಶ್ರೀನಿವಾಸ ಹಾಗೂ ಲಕ್ಷ್ಮೀ ದೇವಾಲಯಗಳಿವೆ. ಚೋಳಸಂದ್ರದಲ್ಲಿ ಹೊಯ್ಸಳ ಶೈಲಿಯ ಶಿಥಿಲವಾದ ಜಿನಬಸದಿ ಇದೆ. ಚಿನಕುರಳಿ ಗ್ರಾಮದಲ್ಲಿ ಆಂಜನೇಯ ದೇವಾಲಯವೊಂದಿದೆ. ನಲ್ಕುಂದಿ ಗ್ರಾಮದ ಗೋಪಾಲಕೃಷ್ಣ ದೇವಾಲಯ, ಹಟದ ವೀರಭದ್ರಗುಡಿ, ಮಾಚಲಗಟ್ಟ ಹಳ್ಳಿಯ ಮಲ್ಲೇಶ್ವರ ದೇವಾಲಯ ಇವು ಇನ್ನಿತರ ದೇವಾಲಯಗಳು.

## ಕಿಕ್ಕೇರಿ

ಕೃಷ್ಣರಾಜಪೇಟೆಗೆ 16 ಕಿ. ಮೀ. ದೂರದಲ್ಲಿರುವ ಈ ಊರಿನಲ್ಲಿ

ಹೊಯ್ಸಳರ ಕಾಲದ ಹಲವಾರು ದೇವಾಲಯಗಳಿವೆ. ಶಿಥಿಲವಾಗಿರುವ ಈ ಕೆಲವು ದೇವಾಲಯಗಳು ಕ್ರಿ. ಶ. 12ನೆಯ ಶತಮಾನದವೆನ್ನಲಾಗಿದೆ. ಜನಾರ್ಧನ, ಮಲ್ಲೇಶ್ವರ ಈ ಕೆಲ ದೇವಾಲಯ ಹಾಳಾಗಿವೆ. ಬ್ರಹ್ಮೇಶ್ವರ ದೇವಾಲಯ ಹೊಯ್ಸಳ ದೇವಾಲಯವಾಗಿದ್ದು ಇದು ಸುಸ್ಥಿತಿಯಲ್ಲಿದೆ. ಕ್ರಿ. ಶ. 1171ರಲ್ಲಿ ಬಮ್ಮವೆ ನಾಯಕಿತಿ ಕಟ್ಟಿಸಿದ ಈ ದೇವಾಲಯದಲ್ಲಿನ ನವರಂಗದ ಕಂಬಗಳ ಮೇಲಿರುವ ಮದನಿಕೆ ವಿಗ್ರಹಗಳು ಗಮನ ಸೆಳೆಯುತ್ತವೆ. ಕಿಕ್ಕೇರಮ್ಮ (ಗ್ರಾಮದೇವತೆ), ಉಪ್ಪರಿಗೆ ಬಸವಣ್ಣ ದೇವಾಲಯ, ನರಸಿಂಹ ದೇವಾಲಯ ಇತರ ದೇವಾಲಯಗಳು.

ಕಿಕ್ಕೇರಿಗೆ ಆರು ಕಿ. ಮಿ., ದೂರದ ಗೋವಿಂದನಹಳ್ಳಿಯಲ್ಲಿರುವ ಪಂಚಲಿಂಗೇಶ್ವರ ದೇವಾಲಯ ಅಮೋಘ ಹೊಯ್ಸಳ ಶೈಲಿಯ ಕೃತಿಯಾಗಿದೆ ಇದು ಹದಿಮೂರನೆಯ ಶತಮಾನದ ದೇವಾಲಯವಾಗಿದೆ. ಐದು ಗರ್ಭ ಗುಡಿಗಳಿದ್ದು ಎಲ್ಲವೂ ಸಾಲಾಗಿವೆ. ಪ್ರತಿ ಗರ್ಭಗುಡಿಯ ಮುಂದೆಯೂ ಸುಕನಾಸಿ, ನವರಂಗಗಳಿವೆ. ನಂದಿ ಮಂಟಪಗಳಿವೆ. ನವರಂಗದ ಕಂಬಗಳು ಲೇಥ್‌ಯಂತ್ರದಲ್ಲಿ ಕಡೆದಂತಿದ್ದು ಹೊಯ್ಸಳ ಶೈಲಿಯದಾಗಿದೆ. ಗರ್ಭಗುಡಿ ಗಳಲ್ಲಿ ಲಿಂಗಗಳಿವೆ.

ಪಂಚಲಿಂಗ ದೇವಾಲಯದ ಉತ್ತರದಲ್ಲಿ ಒಂದು ಶಿವಾಲಯವೂ ಇದೆ.

## ಹೊಸ ಹೊಳಲು

ಕೃಷ್ಣರಾಜಪೇಟೆಗೆ ಬಹು ಸಮೀಪದ ಹಳ್ಳಿ, ಇಲ್ಲಿ ಕ್ರಿ.ಶ. 13ನೆಯ ಶತಮಾನಕ್ಕೆ ಸೇರಿದ ಲಕ್ಷ್ಮೀನಾರಾಯಣ ದೇವಸ್ಥಾನ ಪ್ರಸಿದ್ಧವಾಗಿದೆ. ಈ ದೇವಾಲಯ ತ್ರಿಕೂಟಾಚಲವಾಗಿದೆ. ನವರಂಗ, ಮೂರು ಗರ್ಭಗೃಹಗಳಿವೆ. ದೇವಾಲಯದಲ್ಲಿ ಹಲವು ಪೌರಾಣಿಕ ಕಥಾ ಶಿಲ್ಪಗಳು, ಪ್ರಾಣಿಗಳ ಕೆತ್ತನೆ ಗಳು ಗಮನಾರ್ಹವಾಗಿವೆ. ಮಧ್ಯದ ಗರ್ಭಗುಡಿಯಲ್ಲಿ ಲಕ್ಷ್ಮೀನಾರಾಯಣನ ಮೂರ್ತಿ ಇದೆ. ಬಲಗಡೆ ಗರ್ಭಗುಡಿಯಲ್ಲಿ ಯಾವ ವಿಗ್ರಹವೂ ಇಲ್ಲ. ಗರ್ಭಗೃಹಗಳ ವಿನ್ಯಾಸ ಚೌಕಾಕಾರವಾಗಿರುತ್ತದೆ.

ಕೃಷ್ಣರಾಜ ಪೇಟೆ ತಾಲ್ಲೂಕಿನಲ್ಲಿ ಕಾವೇರಿಯ ಉಪನದಿ ಹೇಮಾವತಿ ನದಿ ಎಡದಂಡೆಯಲ್ಲಿರುವ ಮಹಾದಾಪುರದಲ್ಲಿ ಕೆಲವು ಹೊಯ್ಸಳ ಮತ್ತು ಇತರ ದೇವಾಲಯಗಳಿವೆ. ತ್ರಿಯಂಬಕೇಶ್ವರ ದೇವಾಲಯ ಹೊಯ್ಸಳ ಶೈಲಿಯ ರಚನೆ. ಸುಕನಾಸಿಯಲ್ಲಿ ಗಣಪತಿಯ ಮೂರ್ತಿಯೊಂದಿದೆ. ಶಿಥಿಲ ವಾದ ಮಹಾಲಿಂಗೇಶ್ವರ ದೇವಾಲಯ, ಚೆನ್ನಿಗರಾಯ ದೇವಾಲಯ, ವೀರ ಭದ್ರ ದೇವಾಲಯ ಇತರ ದೇವಾಲಯಗಳು. ವೀರಭದ್ರ ಗುಡಿಯಲ್ಲಿ ಸೂರ್ಯ, ಭೈರವ ಮೂರ್ತಿಗಳಿರುತ್ತವೆ. ತಾಲ್ಲೂಕಿನ ತೆಂಗಿನ ಘಟ್ಟ ಕೃಷ್ಣ ರಾಜ ಪೇಟೆಗೆ 18 ಕಿ.ಮೀ. ದೂರದಲ್ಲಿದೆ. ಇಲ್ಲಿ ಶಿವ ದೇವಾಲಯವಿದೆ. ಇದು ಶಿಥಿಲವಾಗಿದ್ದರೂ ಕೆಲಮಟ್ಟಿಗೆ ಸುಸ್ಥಿತಿಯಲ್ಲಿದೆ. ಸುಕನಾಸಿಯಲ್ಲಿ ಸಪ್ತಮಾತೃಕೆ ಮತ್ತು ಉಮಾ ಮಹೇಶ್ವರ ವಿಗ್ರಹಗಳಿವೆ. ನವರಂಗದ ಭುವನೇಶ್ವರಿಗಳು ಅತ್ಯಂತ ಕುತೂಹಲಕಾರಿಯಾಗಿದೆ. ಇವುಗಳಲ್ಲಿ ಎಂಟು ಸಿಂಹಗಳ ಕೆತ್ತನೆಯಿರುವ ಒಂದು ಭುವನೇಶ್ವರಿ ಅತ್ಯುತ್ತಮ ಎನ್ನಬೇಕು. ಸಿಂಹಗಳು ಇಳಿ ಬಿದ್ದ ಕಮಲದ ಮೊಗ್ಗಿನ ಸುತ್ತ ಕೆತ್ತಲ್ಪಟ್ಟಿರುವುದು ವೈಶಿಷ್ಟ್ಯ.

ತೊಣಚಿ ಕೃಷ್ಣರಾಜಪೇಟೆ ತಾಲ್ಲೂನ ಮತ್ತೊಂದು ಗ್ರಾಮ. ಇಲ್ಲಿ ಸಹ ಹೊಯ್ಸಳರ ಕಾಲದ ದೇವಾಲಯಗಳನ್ನು ಕಾಣುತ್ತೇವೆ. ಬಸವೇಶ್ವರ ದೇವಾಲಯ ಗರ್ಭಗೃಹ, ಸುಕನಾಸಿ, ನವರಂಗ, ನಂದಿ ಮಂಟಪಗಳನ್ನೊಳ ಗೊಂಡಿದೆ. ನಂದಿ ಮಂಟಪದಲ್ಲಿ ದೊಡ್ಡ ಬಸವನ ವಿಗ್ರಹವಿದೆ. ಇದು ಕ್ರಿ.ಶ. 12ನೆಯ ಶತಮಾನದ ರಚನೆಯಾಗಿದೆ. ಇಲ್ಲಿಯ ಭುವನೇಶ್ವರಿಗಳ ಗಮನ ಸೆಳೆಯುತ್ತವೆ. ನವರಂಗದಲ್ಲಿ ಗಣಪತಿ, ಸೂರ್ಯ ಮತ್ತಿತರ ವಿಗ್ರಹ ಗಳಿವೆ. ಇಲ್ಲಿರುವ ಮತ್ತೊಂದೂ ಶಿವ ದೇವಾಲಯವೇ ಆಗಿದ್ದು ಹೊಯ್ಸಳ ಕಾಲದ ದೇವಾಲಯವೆಂದು ತಿಳಿಯಲಾಗಿದೆ.

## ಶ್ರೀರಂಗನಾಥಸ್ವಾಮಿ ದೇವಾಲಯ, ಶ್ರೀರಂಗಪಟ್ಟಣ

ಶ್ರೀರಂಗಪಟ್ಟಣ ಮೈಸೂರಿಗೆ 14 ಕಿ.ಮೀ. ದೂರದಲ್ಲಿರುವ ಕಾವೇರಿ

ನದಿ ಸೃಷ್ಟಿಸಿರುವ ಒಂದು ದ್ವೀಪ. ಒಂದು ಕಾಲಕ್ಕೆ ಮೈಸೂರು ಅರಸರ ರಾಜಧಾನಿಯಾಗಿತ್ತು. ಇತಿಹಾಸ ಪ್ರಸಿದ್ಧವಾಗಿರುವ ಪುಣ್ಯಕ್ಷೇತ್ರ.

ಹಿಂದೆ ಗೌತಮ ಋಷಿ ಇಲ್ಲಿಯ ಆದಿರಂಗನನ್ನು ಪೂಜಿಸಿ ವಾಸವಾಗಿದ್ದರಿಂದ ಈ ಊರಿಗೆ ಗೌತಮ ಕ್ಷೇತ್ರ ಎಂದೂ ಹೆಸರಿತ್ತು. ಮಧ್ಯರಂಗವೇ ಶಿವ ಸಮುದ್ರದ ರಂಗನಾಥನ ಸನ್ನಿಧಿ. ಅಂತ್ಯರಂಗ ತಮಿಳುನಾಡಿನ ಶ್ರೀರಂಗಂ. ಈ ಮೂರು ಕ್ಷೇತ್ರಗಳನ್ನು ಶ್ರೀ ವೈಷ್ಣವರಾದವರು ಸಂದರ್ಶಿಸ ಬೇಕೆಂಬ ನಿಯಮವಿದೆ. ಕ್ರಿ.ಶ. 9ನೇ ಶತಮಾನಾಂತ್ಯದಲ್ಲಿ ಗಂಗರ ಸಾಮಂತನಾದ ತಿರುಮಾಲಯ್ಯನೆಂಬುವನು ಶ್ರೀರಂಗಪಟ್ಟಣದಲ್ಲಿ ರಂಗನಾಥ ಸ್ವಾಮಿ ದೇವಾಲಯವನ್ನು ಕಟ್ಟಿಸಿದನು.

ಶ್ರೀರಂಗ ಪಟ್ಟಣದ ರಂಗನಾಥ ಸ್ವಾಮಿ ದೇವಾಲಯ ದ್ರಾವಿಡ ಶೈಲಿಯಲ್ಲಿದೆ. ಮೂರು ಪ್ರಾಕಾರಗಳನ್ನು ಹೊಂದಿದ್ದು ಮೂರು ಹಂತಗಳಲ್ಲಿ ಗುಡಿಯನ್ನು ಕಟ್ಟಲಾಗಿದೆ. ದೇವಾಲಯದ ಹೆಚ್ಚಿನ ಒಳ ಭಾಗ ಹೊಯ್ಸಳರ ಕಾಲದ್ದಾಗಿದೆ. ಗರ್ಭಗೃಹ ಹಾಗೂ ಸುಕನಾಸಿಗಳ ಛಾವಣಿಗಳ ನಡುವೆ ಪದ್ಮಗಳನ್ನು ಬಿಡಿಸಲಾಗಿದೆ. ನವರಂಗ ದ್ವಾರದ ಬಳಿ ಎರಡು ದ್ವಾರ ಪಾಲಕರ ಭವ್ಯ ವಿಗ್ರಹಗಳಿವೆ. ಮಹಾದ್ವಾರದ ಗೋಪುರ, ಮುಖ ಮಂಟಪ ಮತ್ತು ಗರ್ಭಗೃಹದ ಗೋಪುರ ವಿಜಯನಗರದ ಶೈಲಿಯವಾಗಿವೆ. ಶ್ರೀರಂಗನಾಥನ ವಿಗ್ರಹ ಅದ್ಭುತವಾದ ಕೆತ್ತನೆಯಾಗಿದೆ. ಏಳು ತಲೆ ಆದಿಶೇಷನ ಮೇಲೆ ಮಲಗಿರುವ ಕರಿ ಶಿಲೆಯ ರಂಗನಾಥ ಸ್ವಾಮಿ ವಿಗ್ರಹ ನಯನ ಮನೋಹರ. ಕಣ್ಮನಗಳನ್ನು ಸೆಳೆಯುತ್ತದೆ. ಬಹುಶಃ ಇಂತಹ ಸುಂದರ ವಿಗ್ರಹ ಇನ್ನೊಂದಿಲ್ಲ ಎನ್ನಬಹುದು. ದೇವರ ಪಾದದ ಬಳಿ ಲಕ್ಷ್ಮಿ, ಗೌತಮ ಮುನಿಗಳ ವಿಗ್ರಹಗಳಿವೆ. ಲಕ್ಷ್ಮಿ ವಿಗ್ರಹವನ್ನು ಕಾವೇರಿಯದು ಎಂದೂ ಹೇಳುವುದುಂಟು.

ಈ ದೇವಾಲಯದ ಎರಡು ಕಂಬಗಳ ಮೇಲೆ ವಿಷ್ಣುವಿನ 24 ರೂಪಗಳನ್ನು ಕೆತ್ತಲಾಗಿದ್ದು ಇವನ್ನು ಚತುರ್ವಿಂಶತಿ ಕಂಬಗಳೆನ್ನುತ್ತಾರೆ. ನವರಂಗದಲ್ಲಿ ವಿಜಯನಗರ ಕಾಲದ ಗಂಟೆ ಮಾದರಿಯ ಕಂಬಗಳಿವೆ. ಗರ್ಭಗೃಹ ಹಾಗೂ ಪ್ರವೇಶ ದ್ವಾರದ ಗೋಪುರ ಭವ್ಯವಾಗಿವೆ. ದೇವಾಲಯದಲ್ಲಿನ ಕೆಲವು ದೊಡ್ಡ ಬೆಳ್ಳಿ ಪದಾರ್ಥಗಳನ್ನು ಶ್ರೀರಂಗಪಟ್ಟಣದಿಂದ

ಆಳಿದ ಟಿಪ್ಪುಸುಲ್ತಾನನು ದೇವಾಲಯಕ್ಕೆ ದೇಣಿಗೆಯಾಗಿ ಕೊಟ್ಟಿದ್ದೆನ್ನ ಲಾಗಿದೆ.

ದೇವಾಲಯದ ಎದುರಿಗೆ ಸ್ವಲ್ಪದೂರದಲ್ಲಿರುವ ಕಂಠೀರವ ನರಸರಾಜ ಒಡೆಯರು ಕಟ್ಟಿಸಿದ್ದೆನ್ನಲಾದ ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯದಲ್ಲಿ ನರಸಿಂಹದೇವರ ವಿಗ್ರಹ ಹಾಗೂ ಅಂಬೆಗಾಲು ಕೃಷ್ಣನ ವಿಗ್ರಹ ಮನೋಹರ ವಾಗಿವೆ. ಇಲ್ಲಿ ಒಡೆಯರ ಪ್ರತಿಮೆಯೂ ಇದೆ, ಇದು ಮೂರೂವರೆ ಅಡಿ ಎತ್ತರದ ಕಂಠೀರವ ನರಸರಾಜರದೆನ್ನಲಾಗಿದೆ. ಈ ದೇವಾಲಯದಲ್ಲಿ ಅನೇಕ ಕಂಬಗಳುಳ್ಳ ನವರಂಗವಿದೆ, ಶ್ರೀರಂಗಪಟ್ಟದ ಇನ್ನೊಂದು ದೇವಾಲಯ 16ನೆಯ ಶತಮಾನದ ಗಂಗಾಧರೇಶ್ವರ ದೇವಾಲಯ. ಇದು ಹೊಯ್ಸಳರ ಕಾಲದ ರಚನೆ. ಇದರ ನವರಂಗದಲ್ಲಿ ಅಪರೂಪದ ಸುಬ್ರಹ್ಮಣ್ಯ ವಿಗ್ರಹವಿದೆ. ಮಂಟಪದಲ್ಲಿ ಶಿವಶರಣರ ಮೂರ್ತಿಗಳಿವೆ.

ಆಂಜನೇಯ ದೇವಸ್ಥಾನ, ಜ್ಯೋತಿರ್ಮಹೇಶ್ವರ ದೇವಸ್ಥಾನ, ಜುಮ್ಮಾಮಸೀದಿ ಇಲ್ಲಿನ ಇತರ ಪ್ರೇಕ್ಷಣೀಯ ಸ್ಥಳಗಳು. ಜುಮ್ಮಾ ಮಸೀದಿ ಇಲ್ಲಿನ ಇತರ ಪ್ರೇಕ್ಷಣೀಯ ಸ್ಥಳಗಳು. ಜುಮ್ಮಾ ಮಸೀದಿ ಮಹಮ್ಮದೀಯರ ಪ್ರಾರ್ಥನಾಮಂದಿರ. ಇದು ಕೋಟೆ ಒಳಗಡೆ ಇದೆ, 1787ರಲ್ಲಿ ಟಿಪ್ಪುಸುಲ್ತಾನನು ಇದನ್ನು ಕಟ್ಟಿಸಿದ. ಇದಕ್ಕೆ ಎರಡು ದೊಡ್ಡ ಮಿನಾರುಗಳು ಇದ್ದು ನೋಡಲು ಭವ್ಯವಾಗಿವೆ.

ಪ್ರತಿವರ್ಷ ರಥಸಪ್ತಮಿಯಂದು ರಂಗನಾಥನ ಬ್ರಹ್ಮ ರಥೋತ್ಸವ ನಡೆಯುತ್ತದೆ. ಮಹಮ್ಮದೀಯನಾದರೂ ಟಿಪ್ಪುಸುಲ್ತಾನನಿಗೆ ರಂಗನಾಥನಲ್ಲಿ ವಿಶೇಷ ಭಕ್ತಿ ಗೌರವಗಳಿದ್ದವು ಎಂದು ತಿಳಿದುಬರುತ್ತದೆ.

## ಕರಿಘಟ್ಟ

ಶ್ರೀರಂಗಪಟ್ಟಣಕ್ಕೆ ಹತ್ತಿರವಿರುವ ಕರಿಘಟ್ಟ ಒಂದು ಸುಂದರ ಗಿರಿ.

ಈ ಬೆಟ್ಟದ ಬುಡದಲ್ಲಿ ಲೋಕಪಾವನಿ ನದಿ ಬಾಬುರಾಯನ ಕೊಪ್ಪಲು ಬಳಿ ಕಾವೇರಿಯನ್ನು ಕೂಡಿಕೊಳ್ಳುತ್ತದೆ. ಕರಿಘಟ್ಟ ಗಿರಿಯ ಮೇಲೆ ರಂಗನಾಥ ಸ್ವಾಮಿ ದೇವಾಲಯವಿದೆ. ಇಲ್ಲಿರುವ ರಂಗನಾಥನ ದಿವ್ಯಮೂರ್ತಿ ಸುಂದರ ಶಿಲ್ಪ.

ಶ್ರೀರಂಗಪಟ್ಟಣಕ್ಕೆ ಒಂದೂವರೆ ಕಿ. ಮೀ ದೂರದಲ್ಲಿ ಪಶ್ಚಿಮವಾಹಿನಿ ಎಂಬ ಪವಿತ್ರ ತೀರ್ಥವಿದೆ. ಇಲ್ಲಿ ಸ್ನಾನಘಟ್ಟಗಳಿದ್ದು ಗ್ರಹಗಳಿದ್ದು ಗ್ರಹಣ ಕಾಲದಲ್ಲಿ ಯಾತ್ರಾರ್ಥಿಗಳು ಸ್ನಾನಕ್ಕಾಗಿ ಬರುತ್ತಾರೆ. ಇದೊಂದು ತೀರ್ಥಕ್ಷೇತ್ರ.

## ಕಿತ್ತೂರು

ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿ ಕಪಿಲಾನದಿ ಬಲದಂಡೆಯ ಮೇಲಿರುವ ಗ್ರಾಮ. ಹಿಂದೆ ಇದು ಕೀರ್ತಿಪುರ ಎಂದು ಪುನ್ನಾಟರಾಜರ ರಾಜಧಾನಿಯಾಗಿತ್ತು. ಇಲ್ಲಿ ಪ್ರಾಚೀನವೆನ್ನಲಾದ ರಾಮೇಶ್ವರ ದೇವಾಲಯವಿದೆ. ಇದರಲ್ಲಿ ಸಿಂಹದ ಕಂಬಗಳು, ಮಹಿಷಾಸುರ ಮರ್ದಿನಿ ಶಿಲ್ಪ ಇವೆ. ಗಂಗ ಹಾಗೂ ಪಲ್ಲವ ಶೈಲಿಯ ಕೆತ್ತನೆಗಳು ಇವಾಗಿವೆ. ಈಗಿರುವ ದೇವಾಲಯ ಇತ್ತೀಚೆಗೆ ನಿರ್ಮಾಣಗೊಂಡದ್ದಾಗಿದೆ. ಆದರೂ ಪ್ರಾಚೀನ ದೇವಾಲಯದ ಅವಶೇಷಗಳನ್ನು ಕಾಣಲೂ ಬಹುದಾಗಿದೆ. ಹೆಗ್ಗಡದೇವನಕೋಟೆ ತಾಲ್ಲೂಕಿನ ಮಳಲಿ ಗ್ರಾಮದಲ್ಲಿ ಜಿನಬಸದಿ (ಜಿನಾಲಯ) ಗಳಿವೆ.

ಹುಣಸೂರು ತಾಲ್ಲೂಕಿನಲ್ಲಿ ಹೇಳಿಕೊಳ್ಳುವಂತಹ ದೇವಾಲಯಗಳಿರುವುದಿಲ್ಲ. ಹುಣಸೂರಿನ ಶಿಥಿಲಗೊಂಡ ರತ್ನಪುರಿ ಕೋಟೆಯಲ್ಲಿ ಕೆಲವು ಭಗ್ನಗೊಂಡ ದೇವಾಲಯಗಳಿವೆ. ಲಕ್ಷ್ಮಣ ತೀರ್ಥನದಿಯ ಎಡದಂಡೆಯ ಮೇಲಿರುವ ಕಟ್ಟೆ ಮಳಲವಾಡಿ ಗ್ರಾಮದಲ್ಲಿ ಪ್ರಾಚೀನವೆನ್ನಲಾದ ರಾಮೇಶ್ವರ ದೇವಾಲಯವಿದೆ. ಉಳಿದಂತೆ ತಾಲ್ಲೂಕಿನಲ್ಲಿ ಗ್ರಾಮದೇವತೆ ಮಾರಮ್ಮ ಮೊದಲಾದ ಸಣ್ಣಪುಟ್ಟ ದೇವಾಲಯಗಳಿವೆ.

# ಕಳಲೆ–ಹೆಡತಲೆ

ನಂಜನಗೂಡು ತಾಲ್ಲೂಕಿನ ಕಳಲೆ ಅರಸರ ಕೇಂದ್ರ ಸ್ಥಾನವಾಗಿದ್ದ ಗ್ರಾಮ. ಇಲ್ಲಿ ಲಕ್ಷ್ಮೀಕಾಂತ ದೇವಾಲಯವಿದೆ. ಇದು ದ್ರಾವಿಡ ಶೈಲಿಯ ದೇವಾಲಯ. ನಂಬಿನಾರಾಯಣನ ರೂಪವಲ್ಲಿರುವ ಲಕ್ಷ್ಮೀಕಾಂತಸ್ವಾಮಿ ವಿಗ್ರಹ ಮೂರೂವರೆ ಅಡಿ ಎತ್ತರದ ಸುಂದರ ಶಿಲ್ಪವಾಗಿದೆ. ದೊಡ್ಡ ಪ್ರಾಕಾರದ ದೇವಾಲಯ. ಪ್ರಾಕಾರದ ಮಧ್ಯೆ ಗರ್ಭಗೃಹ, ನವರಂಗ, ಮುಖ ಮುಖ ಮಂಟಪ ಇರುವ ಮೂಲಗುಡಿ ಇದೆ. ದೇವಾಲಯ ದಲ್ಲಿ ರಾಜ ಮನ್ನಾರ್ ವಿಗ್ರಹ ಗಮನ ಸೆಳೆಯುತ್ತದೆ, ಆಳ್ವಾರುಗಳ ಗುಡಿಗಳಿವೆ. ದೇವಾಲಯದಲ್ಲಿ ಸುಂದರವಾದ ರಾಮವಿಗ್ರಹವೂ ಇದೆ.

ಊರಿನ ಮಧ್ಯೆ ಚಾವಡಿ ಎಂಬ ಹಳೆಯ ಕಟ್ಟಡವಿದೆ. ಕಳಲೆಯ ಅರಸ ಲಕ್ಷ್ಮೀಕಾಂತ ಒಡೆಯ ಸತ್ತು ಹೋದಾಗ ಅವನ ಹೆಂಡತಿ ಸಹಗಮನ ಮಾಡಿದಳೆಂದೂ ಆಗ ಚಾವಡಿಯ ಮುಂಭಾಗದಲ್ಲಿ ಆಕೆಯ ನೆನಪಿಗೆ ಸತೀ ಗುಡಿಯನ್ನು ಕಟ್ಟಲಾಯಿತು. ಈ ಚಿಕ್ಕ ಕಟ್ಟಡಕ್ಕೆ ಇಟ್ಟಿಗೆ ಮಹಾಳಿಗಮ್ಮ ತನ್ನ ಪತಿಯನ್ನಪ್ಪಿಕೊಂಡಿರುವಂತಿರುವ ಶಿಲ್ಪಗಳಿರುವ ಬಾಗಿಲು ಇದೆ.

ನಂಜನಗೂಡು ತಾಲ್ಲೂಕಿನ ಹೆಡತಲೆ ಗ್ರಾಮದಲ್ಲೂ ಲಕ್ಷ್ಮೀಕಾಂತ ದೇವಾಲಯವಿದೆ. ಇದು ಹೊಯ್ಸಳ ಶೈಲಿಯ ತ್ರಿಕೂಟಾಚಲ. ಈ ದೇವಾಲಯದಲ್ಲಿ ಮೂರು ಗರ್ಭ ಗೃಹಗಳು, ತಲಾ ಒಂದು ನವರಂಗ, ಮಂಟಪ ಹಾಗೂ ಮುಖ ಮಂಟಪಗಳಿವೆ. ಮಧ್ಯದ ಗರ್ಭಗೃಹದಲ್ಲಿ ನಂಬಿನಾರಾಯಣನ ರೂಪಾದ ಲಕ್ಷ್ಮೀಕಾಂತ, ಉತ್ತರದ ಗುಡಿಯಲ್ಲಿ ಲಕ್ಷ್ಮೀ ನರಸಿಂಹ ದಕ್ಷಿಣದ ಗರ್ಭಗುಡಿಯಲ್ಲಿ ವೇಣುಗೋಪಾಲ ಮೂರ್ತಿ ಇವೆ. ನವರಂಗದ ಕಂಬಗಳು, ಭುವನೇಶ್ವರಿ ಆಕರ್ಷಕವಾಗಿವೆ.

ಗುಂಡ್ಲು ಹೊಳೆ ತೀರದ ನಾಗೇಶ್ವರ ದೇವಾಲಯವೂ ಗಮನ ಸೆಳೆಯು ತ್ತದೆ. ಆದರೆ ಇದು ಪಾಳುಬೀಳುತ್ತಿರುವ ಗುಡಿಯಾಗಿದೆ.

# ಸುತ್ತೂರು

ನಂಜನಗೂಡು ತಾಲ್ಲೂಕಿನಲ್ಲಿ ನಂಜನಗೂಡಿಗೆ 18 ಕಿ. ಮಿ. ದೂರದಲ್ಲಿರುವ ಪುಣ್ಯಕ್ಷೇತ್ರ. ಹಿಂದೆ ಈ ಊರಿಗೆ ಶ್ರೋತ್ರಿಯೂರು ಎಂಬ ಹೆಸರಿತ್ತು.

ಇಲ್ಲಿ ಸೋಮೇಶ್ವರ, ನಾರಾಯಣ, ವೀರೇಶ್ವರ ದೇವಾಲಯಗಳೂ ಪ್ರಸಿದ್ಧ ವೀರಶೈವ ಮಠವೂ ಇವೆ.

ಸೋಮೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಇದರ ಗರ್ಭಗುಡಿಯಲ್ಲಿ ಒಂದು ಲಿಂಗವೂ ಮತ್ತೊಂದು ಕೋಣೆಯಲ್ಲಿ ಹರಿಹರೇಶ್ವರ ವಿಗ್ರಹವೂ ಇದೆ. ಹರಿಹರೇಶ್ವರ ಚತುರ್ಬಾಹುವುಳ್ಳ ಸುಂದರ ಕೃತಿ. ಇದರ ಅಕ್ಕ ಪಕ್ಕಗಳಲ್ಲಿ ಪಾರ್ವತಿ, ಲಕ್ಷ್ಮಿಯರ ವಿಗ್ರಹಗಳಿವೆ. ಇಲ್ಲಿನ ಒಂದು ಸ್ವಾರಸ್ಯವೆಂದರೆ ನವರಂಗದಲ್ಲಿ ಎರಡು ಮುಂಗುಸಿಗಳ ಮೇಲೆ ನಿಂತಿರುವಂತೆ ಮೂರೂವರೆ ಅಡಿ ಎತ್ತರದ ದೇವತಾಸ್ತ್ರೀ ವಿಗ್ರಹವನ್ನು ಕೆತ್ತಿರುವುದು, ನಾರಾಯಣ ದೇವಾಲಯ ಹೊಯ್ಸಳರ ಕಾಲದ ರಚನೆ. ಇಲ್ಲಿನ ನಾರಾಯಣನ ವಿಗ್ರಹಕ್ಕೆ ನಾಗ ಕೇಶವ ಎಂದೂ ಹೆಸರಿದೆ.

ಸುತ್ತೂರು ಅಲ್ಲಿಯ ವೀರಶೈವ ಮಠದಿಂದಾಗಿ ಪ್ರಸಿದ್ಧವಾಗಿದೆ. ಸುತ್ತೂರು ಮಠ ಎಂದು ಇದು ಖ್ಯಾತವಾಗಿದೆ. ಇದೊಂದು ಹಳೆಯ ಮಠವಾಗಿದ್ದು ಕ್ರಿ. ಶ. ಹತ್ತನೆಯ ಶತಮಾನದ ಕಾಲದ್ದಿರಬಹುದು ಎಂದು ತಿಳಿಯಲಾಗಿದೆ.

ನಂಜನಗೂಡು ತಾಲ್ಲೂಕಿನ ಇಮ್ಮಾವು ಗ್ರಾಮದಲ್ಲಿ ರಾಮದೇವಾಲಯವೂ ನಗರ್ಲೆಯಲ್ಲಿ ಚೋಳರ ಕಾಲದ ದುರ್ಗಾಪರಮೇಶ್ವರಿ ದೇವಾಲಯ, ಒ ದು ಜಿನಾಲಯವೂ ಇವೆ. ಹೆಮ್ಮರಗಾಲದಲ್ಲಿ ಗೋಪಾಲಕೃಷ್ಣ ದೇವಾಲಯವಿದ್ದು ಇದು ಹೊಯ್ಸಳ ಶೈಲಿಯ ಗುಡಿ. ಇಮ್ಮಾವಿನ

ರಾಮದೇವಾಲಯದ ಲಕ್ಷಣನ ವಿಗ್ರಹ ಚತುರ್ಭುಜದಿಂದಿರುವುದು ಅಧ್ಯಯನ ಶೀಲರಿಗೆ ಆಸಕ್ತಿ ಮೂಡಿಸುತ್ತದೆ.

ಹಾಸನ ಜಿಲ್ಲೆಯಲ್ಲಿ ಕಾವೇರಿಯ ಹರಿವು ಕಡಿಮೆ. ಅದು ಅರಕಲಗೂಡು ತಾಲ್ಲೂಕಿನಲ್ಲಿ ಜಿಲ್ಲೆಯನ್ನು ಪ್ರವೇಶಿಸಿ ಕೊಣನೂರು, ರುದ್ರಪಟ್ಟಣ, ಕೇರಳಾಪುರ, ರಾಮನಾಥಪುರ, ಕಟ್ಟೇಪುರಗಳ ಮೂಲಕ ಮೈಸೂರು ಜಿಲ್ಲೆಯನ್ನು ಪ್ರವೇಶಿಸುತ್ತದೆ. ಹೇಮಾವತಿ ಎಂಬ ಕಾವೇರಿಯ ಉಪನದಿ ಈ ಜಿಲ್ಲೆಯ ಮುಖ್ಯನದಿಯೂ ಆಗಿದೆ. ಅರಕಲಗೂಡು ತಾಲ್ಲೂಕಿನ ರಾಮನಾಥಪುರ ದಕ್ಷಿಣ ಕಾಶಿ ಎಂದು ಪ್ರಸಿದ್ಧವಾಗಿದ್ದು ಇಲ್ಲಿ ಸುಬ್ರಹ್ಮಣ್ಯೇಶ್ವರ, ಪಟ್ಟಾಭಿರಾಮ, ಪ್ರಸನ್ನರಾಮೇಶ್ವರ ಮೊದಲಾದ ದೇವಾಲಯಗಳಿವೆ. ಇದೊಂದು ಪುಣ್ಯಕ್ಷೇತ್ರ. ಕೊಣನೂರಿನಲ್ಲಿ ಗೋಪಾಲ ಸ್ವಾಮಿ ದೇವಾಲಯವಿದೆ. ಕಟ್ಟೇಪುರದಲ್ಲಿ ಸೋಮಸುಂದರ ದೇವಾಲಯ ವಿದೆ. ಅರಕಲಗೂಡಿನಲ್ಲಿ ಲಕ್ಷ್ಮೀನರಸಿಂಹ, ಅಮೃತೇಶ್ವರ ಹಾಗೂ ವೀರಭದ್ರ ದೇವಾಲಯಗಳಿವೆ. ರುದ್ರಪಟ್ಟಣ, ಬಸವಾಪಟ್ಟಣಗಳಲ್ಲಿ ಒಂದೆರಡು ದೇವಸ್ಥಾನಗಳಿದ್ದು ಈ ಊರುಗಳು ಸಂಗೀತಗಾರರಿಗೆ, ಘನ ಪಾಠಿಗಳಿಗೆ ಹೆಸರಾಗಿದೆ.

ಕಾವೇರಿ ತುಂಬಿ ಹರಿಯುವ ಮೈಸೂರು, ಕೊಡಗು, ಮಂಡ್ಯ ಜಿಲ್ಲೆಗಳ ಹಾಗೂ ಕೆಲಮಟ್ಟಿಗೆ ಹರಿದು ಪುನೀತಗೊಳಿಸಿರುವ ಹಾಸನ ಜಿಲ್ಲೆಯ ದೇವಾಲಯಗಳ ಸ್ಥೂಲಪರಿಚಯ ಮಾಡಿಕೊಂಡೆವು. ಈ ಎಲ್ಲ ದೇವಾಲಯ ಗಳೂ ಉತ್ತಮ ಸ್ಥಿತಿಯಲ್ಲಿರುವುದಿಲ್ಲ. ಕೆಲವಷ್ಟೆ ಪ್ರಾಚೀನ ಸಂಸ್ಕೃತಿ, ಕಲಾ ಪ್ರೌಢಿಮೆ, ವಾಸ್ತು ವೈಭವಕ್ಕೆ ಕುರುಹಾಗಿ ಇವೆ. ಮತ್ತೆ ಕೆಲವು ಶಿಥಿಲ ಗೊಂಡು ಅಭಿವೃದ್ಧಿ ಕಾಣದೆ ಹೋಗಿವೆ. ಈ ದೇವಾಲಯಗಳನ್ನು ನೋಡಿ ದಾಗ ನಮ್ಮ ಪ್ರಾಚೀನ ಹಾಗೂ ಇತ್ತೀಚಿನ ಇತಿಹಾಸ, ಸಾಂಸ್ಕೃತಿಕ ವೈಭವ

ನೆನಪಾಗದಿರದು. ಕಲ್ಲಿನಲ್ಲಿ ಕಾವ್ಯವನ್ನು ಬರೆದು ಸಂಗೀತ ಹಾಡಿದ ನಾಡು ನಮ್ಮದು. ಸೋಮನಾಥಪುರ, ಬೇಲೂರು ಹಳೆಬೀಡು ಐಹೊಳೆ ಪಟ್ಟದ ಕಲ್ಲು ದೇವಾಲಯಗಳೇ ಸಾಕು ಈ ವರ್ಣನೆಗೆ ಸಾಕ್ಷಿ. ನಮ್ಮ ಜೀವಿತ ಕಾಲದಲ್ಲಿ ಒಮ್ಮೆಯಾದರೂ ಈ ದೇವಾಲಯಗಳನ್ನು ನೋಡುವ ಆಸೆ ಮೂಡಿದಲ್ಲಿ ಹಾಗೂ ನೋಡಿಬಂದಲ್ಲಿ ಧನ್ಯರಾದೇವು.



# ಉತ್ತರ ಕರ್ನಾಟಕದ ದೇವಾಲಯುಗಳು

ದೇವಾಲಯುಗಳು ಒಂದು ದೇಶದ, ನಾಡಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳು. ನಿರ್ಮಲ ಮನಸ್ಸನ್ನು ಪ್ರೇರಿಸಿ ಪವಿತ್ರ ವಾತಾವರಣವನ್ನು ಸೃಷ್ಟಿಸುವುದು ಇಲ್ಲಿನ ಉದ್ದೇಶ. ಬೇರೆ ಬೇರೆ ಧರ್ಮದವರು ದೇವಾಲಯುಗಳನ್ನು ಸೂಕ್ತ ಹೆಸರಿನಿಂದ ಕರೆಯುತ್ತಾರೆ. ಜೈನರು ಬಸದಿಗಳೆಂದೂ ಬೌದ್ಧರು ಚೈತ್ಯಾಲಯುಗಳೆಂದೂ ಮಹಮ್ಮದೀಯರು ಮಸೀದಿಗಳೆಂದೂ ಕ್ರೈಸ್ತರು ಚರ್ಚುಗಳೆಂದೂ ಕರೆಯುವರು.

ದೇವಾಲಯುಗಳು ಕಲಾತ್ಮಕ ಕೃತಿಗಳೂ ಹೌದು. ಕರ್ನಾಟಕ ಶಿಲ್ಪ ಕಲೆಗೆ ಹೆಸರುವಾಸಿಯಹಾಗಿದೆ. ಕಲ್ಲನ್ನು ಕೆತ್ತಿ ಬೆಣ್ಣೆಯಂತೆ ನಯುವಾದ ರೂಪುಕೊಟ್ಟು ಜೀವ ಕಳೆಯನ್ನು ತುಂಬುವ ಸಾಹಸವನ್ನು ಇಲ್ಲಿಯ ಶಿಲ್ಪಿಗಳು ಮಾಡಿದ್ದಾರೆ. ಕನ್ನಡನಾಡಿನ ಪುರಾತನ ವಾಸ್ತುವಿನಲ್ಲಿ ಮುಕ್ಕಾಲು ಭಾಗ ದೇವಾಲಯುಗಳು. ಕರ್ನಾಟಕದ ವಾಸ್ತುಶಿಲ್ಪವನ್ನು ಐದು ಭಾಗಗಳಾಗಿ ವಿಂಗಡಿಸಿ ಪರಿಶೀಲಿಸಬಹುದು. ಕ್ರಿ.ಶ. ಐದನೆಯ ಶತಮಾನದ ಚಾಲುಕ್ಯ ಪೂರ್ವಯುಗ, ಕ್ರಿ.ಶ. ಆರರಿಂದ 10ನೆಯ ಶತಮಾನದವರೆಗೆ ಚಾಳುಕ್ಯ ಯುಗ (ರಾಷ್ಟ್ರಕೂಟರೂ ಸೇರಿ), ಕ್ರಿ.ಶ. 11 ರಿಂದ 13ನೆಯ ಶತಮಾನದವರೆಗೆ ಹೊಯ್ಸಳ ಯುಗ, 14ನೇ ಶತಮಾನದ ವಿಜಯನಗರದ ವಾಸ್ತು ಶಿಲ್ಪ, ಕಡೆಗೆ ಮಹಮ್ಮದೀಯ ವಾಸ್ತುಶಿಲ್ಪ (ಮಸೀದಿ ಇತ್ಯಾದಿ), ದೇವಾಲಯುಗಳ ನಿರ್ಮಾಣದಲ್ಲಿ ನಮ್ಮ ಶಿಲ್ಪಿಗಳು ತೋರಿದ ಕೈ ಚಳಕ ಬೆರಗುಗೊಳಿಸುವಂಥದು.

ಕರ್ನಾಟಕದ ವಾಸ್ತು ವೈಭವದ ದೇವಸ್ಥಾನಗಳಲ್ಲಿ ಪ್ರತಿಯೊಂದನ್ನು ವಾಸ್ತುಶಿಲ್ಪ ದೃಷ್ಟಿಯಿಂದ ಹಂತ ಹಂತವಾಗಿ ಅಧ್ಯಯನ ಮಾಡಿ ನೋಡ ಬೇಕು. ಕರ್ನಾಟಕದ ಸಂಸ್ಕೃತಿಯು ವರ್ಧನೆಗೆ ದೇವಾಲಯಗಳ ಕೊಡುಗೆ ಅಪಾರ. ದೇವಾಲಯಗಳ ನಿರ್ಮಾಣ ಶತಮಾನಗಳಿಂದ ನಡೆಯುತ್ತಿದ್ದಂತೆ ಇಂದೂ ಆಕಾರ್ಯ ನಿಂತಿಲ್ಲ. ಪುರಾತನ ಪದ್ಧತಿಯಿಂದಲೂ ಆಧುನಿಕ ಶೈಲಿಯಲ್ಲೂ ದೇವಾಲಯಗಳು ನಿರ್ಮಾಣವಾಗುತ್ತಿವೆ. ದೇವಾಲಯವು ಒಂದು ಊರಿನಲ್ಲಿ ಇರುವುದು ಶುಭದ ಸಂಕೇತ, ಸತ್ಕಾರ್ಯ ಪ್ರೇರಕ, ಧರ್ಮ ಜಾಗೃತಿಗೆ ಸಾಧನವಲ್ಲವೆ ?

## ಉತ್ತರ ಕರ್ನಾಟಕದ ಜಿಲ್ಲೆಗಳು

ಕನ್ನಡದ ನೆಲವೆಲ್ಲ ಒಟ್ಟುಗೂಡಿ ಮೈಸೂರು ರಾಜ್ಯ ಉದಯ ವಾಗಿದ್ದು 1956ರ ನವೆಂಬರ್ ಒಂದರಂದು. ಅಂದು ವಿಶಾಲ ಕರ್ನಾಟಕ ಮೈಸೂರು ರಾಜ್ಯ ಎಂಬ ಹೆಸರಿನಿಂದ ರಚಿತವಾಯಿತು. ಕನ್ನಡನಾಡು ಬಳಿಕ ಹದಿನಾರು ವರ್ಷಗಳ ನಂತರ 1973ರ ನವೆಂಬರ್ ಒಂದರಂದು 'ಕರ್ನಾಟಕ' ಎಂದು ನಾಮಕರಣ ಪಡೆಯಿತು. ಆಡಳಿತ ಉದ್ದೇಶಗಳಿಗಾಗಿ ಕರ್ನಾಟಕವನ್ನು ಹತ್ತೊಂಬತ್ತು ಜಿಲ್ಲೆಗಳಾಗಿ ವಿಂಗಡಿಸಿದ್ದು ಈಚೆಗೆ ಬೆಂಗಳೂರು ಜಿಲ್ಲೆಯನ್ನು ನಗರ ಹಾಗೂ ಗ್ರಾಮಾಂತರ ಜಿಲ್ಲೆಗಳೆಂದು ಎರಡಾಗಿ ವಿಭಾಗಿಸಿ ಇದೀಗ ರಾಜ್ಯದಲ್ಲಿ ಒಟ್ಟು ಇಪ್ಪತ್ತು ಜಿಲ್ಲೆಗಳು ಇವೆ.

ಕರ್ನಾಟಕದ ಉತ್ತರ ಭಾಗದಲ್ಲಿರುವ ಆರು ಜಿಲ್ಲೆಗಳನ್ನು ಇಲ್ಲಿ ಆಯಾ ಜಿಲ್ಲೆಯ ದೇವಾಲಯಗಳ ಸಮೀಕ್ಷೆಗೆ ತೆಗೆದುಕೊಳ್ಳಲಾಗಿದೆ. ಇವು ಗಳಲ್ಲಿ ಐದು ಜಿಲ್ಲೆಗಳು ಪೂರ್ಣವಾಗಿ ಉತ್ತರ ಭಾಗದಲ್ಲಿಯೇ ಇರುತ್ತವೆ. ಧಾರವಾಡ ಜಿಲ್ಲೆಯ ಕೆಲವು ತಾಲ್ಲೂಕುಗಳಷ್ಟೆ ಸ್ವಲ್ಪಮಟ್ಟಿಗೆ ದಕ್ಷಿಣ ಕರ್ನಾಟಕ ಭಾಗದಲ್ಲಿವೆ. ರಾಜ್ಯದ ಉತ್ತರದ ತುದಿಯಲ್ಲಿ ಬೀದರ್ ಜಿಲ್ಲೆಯೂ ವಾಯುವ್ಯದಲ್ಲಿ ಬೆಳಗಾವಿ ಧಾರವಾಡ ಜಿಲ್ಲೆಗಳೂ ಉತ್ತರ ಭಾಗದಲ್ಲಿ ಬಿಜಾಪುರ ಗುಲ್ಬರ್ಗ ಜಿಲ್ಲೆಗಳೂ ಈಶಾನ್ಯದಲ್ಲಿ ರಾಯಚೂರು ಜಿಲ್ಲೆಯೂ ಇರುತ್ತವೆ.

# ಬಿಜಾಪುರ ಜಿಲ್ಲೆ

ಪ್ರಾಚ್ಯ ವಾಸ್ತುಶಿಲ್ಪದ ಗಣಿ ದಕ್ಷಿಣದ ಆಭರಣವೂ ಆದ ಬಿಜಾಪುರ ಜಿಲ್ಲೆ ಇತಿಹಾಸ ಪ್ರಸಿದ್ಧವಾಗಿರುತ್ತದೆ. ಒಂದು ಕಾಲದಲ್ಲಿ ಬಿಜಾಪುರ ವನ್ನು ಏಷ್ಯಾದ ಮಹಾನಗರಗಳಿಗೆ ಹೋಲಿಸಲಾಗುತ್ತಿತ್ತು. ಚಾಳುಕ್ಯರೂ, ರಾಷ್ಟ್ರಕೂಟರೂ ಕಲ್ಯಾಣದ ಚಾಳುಕ್ಯರೂ, ಕಳಚುರಿಗಳು, ದೇವಗಿರಿಯಾದ ವರು, ತುಗಲಕರೂ, ಬಹಮನಿ ಅರಸರೂ, ಆದಿಲ್ ಶಾಹಿಗಳು, ಮುಗಲರು, ಮರಾಠರು, ಕಡೆಗೆ ಬ್ರಿಟಿಷರು ಎಲ್ಲರೂ ಈ ಜಿಲ್ಲೆಯು ಮೇಲೆ ಆಳ್ವಿಕೆ ನಡೆಸಿದರು. ಈ ಜಿಲ್ಲೆಯ ಐಹೊಳೆ, ಪಟ್ಟದ ಕಲ್ಲು, ಬಾದಾಮಿ, ಬಿಜಾ ಪುರಗಳು ತನ್ನಲ್ಲಿರುವ ವಾಸ್ತು ಕಲಾಕೃತಿಗಳಿಂದಾಗಿ ಲೋಕವಿಖ್ಯಾತ ವಾಗಿವೆ. ಭಕ್ತಿ ಭಂಡಾರಿ ಬಸವಣ್ಣನವರು ಹುಟ್ಟಿದುದೆ ಈ ಜಿಲ್ಲೆಯಲ್ಲಿ.

ಇಂಡಿ, ಬಿಜಾಪುರ, ಬಾದಾಮಿ, ಬಸವನ ಬಾಗೇವಾಡಿ, ಬಾಗಲ ಕೋಟೆ, ಮುದ್ದೇಬಿಹಾಳ, ಜಮಖಂಡಿ, ಬೀಳಗಿ, ಸಿಂದಗಿ, ಮುಧೋಳ, ಹುನಗುಂದ ಇವು ಈ ಜಿಲ್ಲೆಯ ಹನ್ನೊಂದು ತಾಲ್ಲೂಕುಗಳಾಗಿವೆ.

ಬಿಜಾಪುರದಲ್ಲಿ ವಿಶ್ವದಲ್ಲೆ ಒಂದು ಅದ್ಭುತ ವಾಸ್ತುಕೃತಿ ಎಂದು ವಿಖ್ಯಾತವಾದ ಗೋಳಗುಮ್ಮಟವಿದೆ. ಇದರೊಂದಿಗೆ ನೂರಾರು ನಲವತ್ತು ಸ್ಮಾರಕಗಳಿವೆ. ಪ್ರವಾಸಿಗಳಿಗೆ ಬಿಜಾಪುರ ತುಂಬಾ ಕುತೂಹಲವನ್ನುಂಟು ಮಾಡುತ್ತದೆ. ಜುಮಾ ಮಸೀದಿ ಭಾರತದಲ್ಲಿರುವ ಅತ್ಯಂತ ಸುಂದರವಾದ ಮಸೀದಿಗಳಲ್ಲೊಂದು. ಇದನ್ನು ಒಂದನೆಯ ಅಲಿ ಆದಿಲ್ ಷಾ ಕಟ್ಟಿಸಿದ. ಇದರೊಳಗಿನ ಪ್ರಾರ್ಥನಾ ಹಜಾರದ ಗಚ್ಚಿನ ಮೇಲೆ ಪ್ರಾರ್ಥನೆ ಸಲ್ಲಿಸಲು ಬರುವ ಪ್ರತಿ ವ್ಯಕ್ತಿಯೂ ನಿಲ್ಲುವ ಸ್ಥಳವನ್ನು ನಿರ್ದೇಶಿಸಲು ಕಪ್ಪುಬಣ್ಣದ ಪಟ್ಟಿಗಳಿಂದ ಆಯಾಕಾರದ ಅಂಕಣಗಳನ್ನು ವಿಂಗಡಿಸಲಾಗಿದೆ. ಅಂಥ ಅಂಕಣಗಳು ಒಟ್ಟು 2286 ಇದ್ದು ಅಷ್ಟು ಜನ ಏಕಕಾಲದಲ್ಲಿ ನಿಂತು ಪ್ರಾರ್ಥನೆ ಸಲ್ಲಿಸಬಹುದಿತ್ತು. ಬಿಜಾಪುರದಲ್ಲಿ ಆದಿಲ್ ಶಾಹಿ ವಂಶದ ಸ್ಮಾರಕಗಳು ಕಣ್ಣುಗಳಿಗೆ ಹಬ್ಬ.

ಬಿಜಾಪುರದಲ್ಲಿ ಬಾಲಾಜಿ ಮಂದಿರ, ಮಹಾಲಕ್ಷ್ಮಿ ದೇವಾಲಯ, ನರಸಿಂಹ, ಸಿದ್ದೇಶ್ವರ ದೇವಾಲಯಗಳು ಇವೆ. ಆದಿಲ್ ಷಾಹಿ ಆಸ್ಥಾನದ

ನ್ಯಾಯಾಧಿಕಾರಿಗಳೊಬ್ಬರ ಮಗನಾಗಿ ಜನಿಸಿದ ರುಕ್ಮಾಂಗದ ಪಂಡಿತರ ಸಮಾಧಿ ಇಲ್ಲಿದ್ದು ಪ್ರತಿ ವರ್ಷ ಉತ್ಸವ ನಡೆಯುತ್ತದೆ. ರುಕ್ಮಾಂಗದರು ವಿಖ್ಯಾತ ಸಂಗೀತಗಾರರೂ ಯೋಗಿಗಳೂ ಆಗಿದ್ದರು.

ಈ ತಾಲ್ಲೂಕಿನ ಉಪ್ಪಲದಿನ್ನಿ ಎಂಬಲ್ಲಿ ಸಂಗಮನಾಥ ದೇವಾಲಯ ವಿದೆ. ಕೃಷ್ಣಾ ನದಿ ದಡದ ಜೈನಾಪುರ ಒಂದು ತೀರ್ಥ ಕ್ಷೇತ್ರ. ಬಿಜಾಪುರಕ್ಕೆ ಎಂಟು ಕಿ.ಮೀ. ದೂರದ ತೊರವಿಯಲ್ಲಿನ ನರಸಿಂಹ ದೇವಾಲಯ ಪ್ರಸಿದ್ಧವಾದುದಾಗಿದೆ. ತೊರವೆ ರಾಮಾಯಣ ರಚಿಸಿದ ನರಹರಿ ಕವಿ ಈ ಊರಿನವನೇ. ದೇವಾಲಯದಲ್ಲಿ ಹಿರಣ್ಯಕಶಿಪುವನ್ನು ವಧಿಸುವ ಭಂಗಿ ಯಲ್ಲಿರುವ ಉಗ್ರನರಸಿಂಹನ ವಿಗ್ರಹ ಭವ್ಯವಾಗಿದೆ. ಈ ತಾಲ್ಲೂಕಿನ ಮಮದಾಪುರದಲ್ಲಿ ಸಿದ್ಧೇಶ್ವರ, ಬೈಲು ಹನುಮಂತ, ಮಹಾಲಿಂಗೇಶ್ವರ ಹಾಗೂ ಮಡಿವಾಳೇಶ್ವರ ಮತ್ತಿತರ ದೇವಾಲಯಗಳಿವೆ. ಸಿದ್ಧೇಶ್ವರ ಗುಡಿಯ ಬಸವಣ್ಣನ ವಿಗ್ರಹ ಗಮನ ಸೆಳೆಯುತ್ತದೆ. ಬಿಜಾಪುರಕ್ಕೆ 35 ಕಿ.ಮೀ. ದೂರದಲ್ಲಿರುವ ಕಾಖಂಡಕಿಯಲ್ಲಿ ಸಂಗಮೇಶ್ವರ, ಕರೆವೀರಭದ್ರ ಹಾಗೂ ಮಲ್ಲಿಕಾರ್ಜುನ ದೇವಾಲಯಗಳಿವೆ. ಮಹಿಪತಿ ದಾಸರು ಈ ಹಳ್ಳಿಯವರೇ ಎನ್ನಲಾಗಿದೆ.

ಬೀಳಗಿ ತಾಲ್ಲೂಕಿನಲ್ಲಿ ಕೃಷ್ಣಾನದಿ ಬಲ ದಂಡೆಯ ಮೇಲಿರುವ ಗಲಗಲಿ ಗ್ರಾಮ. ಹಿಂದೆ ಗಾಲವ ಕ್ಷೇತ್ರವೆಂದು ಪ್ರಸಿದ್ಧವಾಗಿತ್ತು. ಇಲ್ಲಿ ಗಾಲವ ಋಷಿ ಹಾಗೂ ಮತ್ತಿತರ ಋಷಿಗಳಿಗೆ ಸಂಬಂಧಿಸಿದ ಏಳು ಗುಹೆಗಳಿವೆ. ಎಲ್ಲಮ್ಮ ದೇವಾಲಯವಿದೆ. ಬೀಳಗಿಯಲ್ಲಿ ಸಿದ್ಧೇಶ್ವರ ದೇವಾಲಯವಿದೆ.

## ಬಸವನ ಬಾಗೇವಾಡಿ

ಇದು ಹನ್ನೆರಡನೆಯ ಶತಮಾನದ ಪ್ರಸಿದ್ಧ ವಚನಕಾರರೂ ಕ್ರಾಂತಿ ಕಾರಿಗಳೂ ವೀರಶೈವ ಮತ ಸ್ಥಾಪಕರೂ ಆದ ಬಸವಣ್ಣನವರ ಜನ್ಮಸ್ಥಳ. 1968ರಲ್ಲಿ ಬಸವಣ್ಣನವರ ಎಂಟನೆಯ ಶತಮಾನೋತ್ಸವ ನಡೆದ ನಂತರ ಈ ಊರಿಗೆ ಬಸವನ ಬಾಗೇವಾಡಿ ಎಂದು ಕರೆಯಲಾಗುತ್ತಿದೆ. ಇಲ್ಲಿ ಪ್ರಸಿದ್ಧ ಬಸವೇಶ್ವರ ದೇವಾಲಯವಿದ್ದು ಒಳಗೆ ಗಣಪತಿ, ಬಸವಣ್ಣ,

ಮಲ್ಲಿಕಾರ್ಜುನ ಹಾಗೂ ಸಂಗಮೇಶ್ವರ ಇರುವ ನಾಲ್ಕು ಚಿಕ್ಕ ಗುಡಿಗಳಿವೆ. ಚಾಳುಕ್ಯ ಶೈಲಿಯ ರಾಮೇಶ್ವರ ದೇವಾಲಯ ಇತ್ತೀಚಿನ ವಿಠೋಬ ದೇವಾಲಯ ಇಲ್ಲಿನ ಇತರ ಗುಡಿಗಳು.

ಈ ತಾಲ್ಲೂಕಿನ ಚಿಮ್ಮಲಗಿ ಒಂದು ತೀರ್ಥ ಕ್ಷೇತ್ರ. ಇಂಗಳೇಶ್ವರ ಎಂಬಲ್ಲಿ ಕಲ್ಮೇಶ್ವರ, ಸೋಮೇಶ್ವರ ಮೊದಲಾದ ಶಿವ ದೇವಾಲಯಗಳೂ ಗುಹೆಯೊಂದರ (ರೇವಣ ಸಿದ್ಧರ ಗುಹೆ) ಬಳಿ ಸಂಗಮೇಶ್ವರ ಮತ್ತು ಅಕ್ಕ ನಾಗಮ್ಮನ ಗುಡಿಗಳು ಇವೆ.

ಇಂಡಿ ತಾಲ್ಲೂಕಿನ ಅಗರ ಖೇಡದಲ್ಲಿ ಪ್ರಾಚೀನ ಶಂಕರ ಲಿಂಗ ದೇವಾಲಯವಿದೆ. ಇಲ್ಲಿ ಬಿಳಿ ಅಮೃತ ಶಿಲೆಯ ಶಿವಲಿಂಗವಿದೆ. ಭೀಮಾ ನದಿ ಇಲ್ಲಿ ಹರಿದಿದೆ. ಚಡಚಣ ಎಂಬಲ್ಲಿ ಪರಮಾನಂದರ ದೇವಾಲಯ ಹೊರ್ತಿ ಗ್ರಾಮದಲ್ಲಿ ಸಿದ್ಧೇಶ್ವರ ಹಾಗೂ ಮಲ್ಲಿಕಾರ್ಜುನ ದೇವಾಲಯಗಳು ಇವೆ. ಸಾಲೊಟಗಿ ಪ್ರಸಿದ್ಧ ಶಿಕ್ಷಣ ಕೇಂದ್ರವಾಗಿದ್ದಿತು. ಇಲ್ಲಿ ಶಿವ ಯೋಗೀಶ್ವರ ದೇವಾಲಯವಿದೆ. ಇಂಡಿಯ ಶಾಂತೇಶ್ವರ ದೇವಸ್ಥಾನ ಪ್ರಸಿದ್ಧವಾದುದಾಗಿದೆ. ಇಲ್ಲಿ ಹಲವು ಸುಂದರ ಶಿಲ್ಪಗಳನ್ನು ನೋಡ ಬಹುದು. ಬಂಥನಾಳ ಗ್ರಾಮದಲ್ಲಿ ಸಂಗನ ಬಸವೇಶ್ವರ ಮಠವಿದೆ.

ಬಾಗಲಕೋಟೆ ತಾಲ್ಲೂಕಿನ ಬೇವೂರು ಹಾಗೂ ಶಿರೂರುಗಳಲ್ಲಿ ಕೆಲವು ದೇವಾಲಯಗಳಿವೆ. ಬೇವೂರಿನಲ್ಲಿ ರಾಮೇಶ್ವರ, ಕಾಳಿಕಾ ಭವಾನಿ ಗುಡಿಗಳು ಪ್ರಸಿದ್ಧವಿವೆ. ಗದ್ದನ ಕೇರಿ ಗ್ರಾಮದಲ್ಲಿ ಹನುಮಂತ ದೇವಾಲಯವೂ ಹಳ್ಳೂರಿನಲ್ಲಿ ಬಸವೇಶ್ವರ ಮಂದಿರವೂ ಇವೆ. ಈ ದೇವಾಲಯಗಳು ಇತಿಹಾಸ ಕಾಲದವೇ ಆದರೂ ವಾಸ್ತುಶಿಲ್ಪ ದೃಷ್ಟಿಯಿಂದ ಅಂಥ ಮಹತ್ವವಾದವುಗಳಲ್ಲ.

ಜಮಖಂಡಿ 1948ಕ್ಕೂ ಮೊದಲು ಒಂದು ಚಿಕ್ಕ ಸಂಸ್ಥಾನವಾಗಿದ್ದಿತು. ಈ ಪಟ್ಟಣದಲ್ಲಿ ಉಮಾರಾಮೇಶ್ವರ, ಜಂಬುಕೇಶ್ವರ, ಕಲ್ಮೇಶ್ವರ ಮತ್ತು ಬಸವಣ್ಣ ದೇವಾಲಯಗಳಿವೆ. ಜಮಖಂಡಿಗೆ ಸುಮಾರು ಹತ್ತು ಕಿ.ಮೀ. ದೂರದಲ್ಲಿಯೂ ಒಂದು ದೇವಾಲಯವಿದ್ದು ಅಲ್ಲಿ ವೆಂಕಟರಮಣನ ವಿಗ್ರಹವಿದೆ. ಜಮಖಂಡಿ ತಾಲ್ಲೂಕಿನ ರಾಮ ತೀರ್ಥದಲ್ಲಿ ತ್ರಿಪುರ ಸುಂದರಿ

ದೇವಾಲಯವಿದ್ದು ಈ ದೇವಸ್ಥಾನವನ್ನು ಅಮೃತ ಶಿಲೆಯಲ್ಲಿ ಕಟ್ಟಲಾಗಿದೆ. ವಿಗ್ರಹವೂ ಅಮೃತ ಶಿಲೆಯದೇ. ಇಲ್ಲಿನ ಇನ್ನೊಂದು ದೇವಾಲಯ ಅವಶೇಷವಿದ್ದು ಅದರ ಆವರಣದಲ್ಲಿ ವೇಣುಗೋಪಾಲನ ದೇವಾಲಯವಿದೆ· ತೇರದಾಳ ಈ ತಾಲ್ಲೂಕಿನ ಒಂದು ಐತಿಹಾಸಿಕ ಸ್ಥಳ. ಇಲ್ಲಿ ಕಲ್ಯಾಣ ಚಾಳುಕ್ಯ ಶೈಲಿಯಲ್ಲಿರುವ ಸುಂದರವಾದ ನೇಮಿನಾಥ ದೇವಾಲಯವಿದೆ. ಇಲ್ಲಿಯ ಇನ್ನೊಂದು ಗುಡಿ ಪ್ರಭುಸ್ವಾಮಿ ಎಂಬ ವೀರಶೈವ ಸಂತರ ದೇವಾಲಯ.

ಸಿಂದಗಿಯ ಸಂಗಮೇಶ್ವರ ದೇವಾಲಯ ಪ್ರಸಿದ್ಧವಾದುದು. ಇದರ ಸನಿಹದಲ್ಲಿಯೇ ಭ್ರಮರಾಂಬಿಕ ದೇವತೆಯ ಗುಡಿ ಇದೆ. ಈ ತಾಲ್ಲೂಕಿನ ಆಲಮೇಲ ಗ್ರಾಮದಲ್ಲಿ ಮೂರು ಲಿಂಗಗಳಿರುವ ರಾಮಲಿಂಗ ದೇವಾಲಯ ವಿದ್ದು ಇಲ್ಲಿ ಅಮೃತ ಶಿಲೆಯ ಸೀತಾರಾಮ ಲಕ್ಷ್ಮಣರ ವಿಗ್ರಹಗಳಿವೆ. ಹಿಪ್ಪರಗಿಯಲ್ಲಿ ಕಾಳಮೇಶ್ವರ ದೇವಾಲಯವಿದೆ. ಈ ತಾಲ್ಲೂಕಿನ ಚಟ್ಟರ್ಕಿ, ಕೊರವಾರ ಮೊದಲಾದ ಗ್ರಾಮಗಳಲ್ಲಿ ಸಹ ದೇವಾಲಯಗಳನ್ನು ನೋಡ ಬಹುದು. ಈ ಎಲ್ಲ ದೇವಾಲಯಗಳೂ ವಾಸ್ತುಶಿಲ್ಪ ದೃಷ್ಟಿಯಿಂದ ಗಮ ನಾರ್ಹ ಎನ್ನಲಾಗದಿದ್ದರೂ ಐತಿಹಾಸಿಕ ಮಹತ್ವವುಳ್ಳವೂ ಪುರಾಣ ಪ್ರಸಿದ್ಧವೂ ಆಗಿದೆ.

ಮುಧೋಳ ರನ್ನ ಮಹಾಕವಿಯ ಜನ್ಮ ಸ್ಥಳ. ಈ ತಾಲ್ಲೂಕಿನ ಮಹಾ ಲಿಂಗಪುರ ಒಂದು ಧಾರ್ಮಿಕ ಕೇಂದ್ರ. ಇಲ್ಲಿನ ಒಂದು ಬೆಟ್ಟದ ಮೇಲೆ ಮಹಾಲಿಂಗೇಶ್ವರ ಮಂದಿರವಿದೆ. ಪ್ರತಿ ವರ್ಷ ಇಲ್ಲಿ ಸೆಪ್ಟೆಂಬರ್ ಅಕ್ಟೋಬರ್ ತಿಂಗಳಲ್ಲಿ ನಡೆಯುವ ಜಾತ್ರೆಗೆ ನೂರಾರು ಯಾತ್ರಿಕರು ಬರುತ್ತಾರೆ. ಇಲ್ಲಿ ಹಿಂದೆ ಮಹಾಲಿಂಗೇಶ್ವರ ಎಂಬ ಒಬ್ಬ ಸಂತನೂ ಇದ್ದ ನೆಂದು ಹೇಳುತ್ತಾರೆ. ಮುದ್ದೇಬಿಹಾಳ ತಾಲ್ಲೂಕಿನ ಯಲಿಗೂರು ಗ್ರಾಮ ಅಲ್ಲಿಯ ಆಂಜನೇಯ ದೇವಾಲಯದಿಂದ ಹೆಸರಾಗಿದೆ. ಬಾಸರ ಕೋಡು ಗ್ರಾಮದಲ್ಲಿ ಒಂದು ಜೈನ ದೇವಾಲಯ, ಎರಡು ಶಿವಾಲಯಗಳಿವೆ.

# ಬಾದಾಮಿಯ ಗುಹಾಂತರ್ದೇವಾಲಯಗಳು

ಬಿಜಾಪುರ ಜಿಲ್ಲೆಯ ಬಾದಾಮಿ ಇತಿಹಾಸ ಪ್ರಸಿದ್ಧ ಸ್ಥಳ. ಇದು ಬಿಜಾಪುರದಿಂದ 113 ಕಿ.ಮೀ. ದೂರದಲ್ಲಿದೆ. ಹಿಂದೆ ಇದಕ್ಕೆ ವಾತಾಪಿ ಎಂಬ ಹೆಸರಿದ್ದು ಚಾಳುಕ್ಯ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ಆ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳು ಇಂದಿಗೂ ಉಳಿದುದಿವೆ.

ಇಲ್ಲಿ ನಾಲ್ಕು ಗುಹಾಂತರ ದೇವಾಲಯಗಳೂ ಅನೇಕ ಭಗ್ನ ದೇವಾಲಯಗಳೂ ಎರಡು ಶಿಥಿಲವಾದ ಕೋಟೆಗಳೂ ಇವೆ. ದಕ್ಷಿಣ ಗುಡ್ಡದ ಕಡಿದಾದ ಉತ್ತರದ ಬದಿಯಲ್ಲಿ ಮೇಣ ಬಸ್ತಿ ಎಂದು ಕರೆಯುವ ನಾಲ್ಕು ಲಯಣಗಳಿವೆ. ಇಲ್ಲಿಗೆ ಹೋಗಲು ಮೆಟ್ಟಿಲುಗಳಿವೆ. ಒಂದು ಶೈವ, ಎರಡು ವೈಷ್ಣವ ಹಾಗೂ ಒಂದು ಜೈನ ಲಯಣ ಇವು ಗಮನ ಸೆಳೆಯುತ್ತವೆ. ವೈಷ್ಣವ ಲಯಣಗಳ ಮಧ್ಯೆ ಒಂದು ನೈಸರ್ಗಿಕ ಗವಿ ಇದೆ. ಇದರಲ್ಲಿ ಬೋಧಿಸತ್ವ ಪದ್ಮ ಪಾಣಿಯ ಉಬ್ಬು ಚಿತ್ರವಿದೆ. ಈ ಲಯಣಗಳಲ್ಲಿನ ಶಿಲ್ಪಗಳು ಅಪರೂಪ ಎನಿಸುತ್ತವೆ.

ಶೈವಲಯಣದಲ್ಲಿನ ಉಬ್ಬು ಶಿಲ್ಪಗಳು ಸುಂದರ. ದ್ವಿಭುಜ ಗಣೇಶ, ಮಹಿಷ ಮರ್ದಿನಿ, ಕಾರ್ತಿಕೇಯ, ಅರ್ಧನಾರೀಶ್ವರ, ಗಿರಿಜಾ ಕಲ್ಯಾಣ, ಗಜಲಕ್ಷ್ಮಿ, ಇವು ಇಲ್ಲಿ ನೋಡಸಿಗುವ ಕೆಲವು ಶಿಲ್ಪಗಳು. ಗರ್ಭ ಗುಡಿಯಲ್ಲಿ ಕಲ್ಲಿನಲ್ಲಿಯೇ ಕೊರೆದ ಪೀಠದ ಮೇಲೆ ದೊಡ್ಡ ಲಿಂಗವಿದೆ. ಎರಡನೆಯ ಲಯಣದ ಚಾವಣಿಯಲ್ಲಿರುವ ಅಲಂಕರಣದ ಕೆತ್ತನೆ ಸುಂದರ. ಎಂದಿನಂತೆ ದ್ವಾರಪಾಲಕ ವಿಗ್ರಹಗಳು, ಭೂವರಾಹ, ತ್ರಿವಿಕ್ರಮ, ಗರುಡವಾಹನ ವಿಷ್ಣು, ನಟರಾಜ ಇವೇ ಮೊದಲಾದ ಶಿಲ್ಪಗಳಿವೆ. ಮೂರನೆಯ ಲಯಣ ದೊಡ್ಡದು. ಇದರಲ್ಲಿ ಶೇಷಶಾಯಿ ವಿಷ್ಣು (ಇದರ ಮುಂದಿನ ಕಂಬಸಾಲಿನ ಕೆತ್ತನೆ ನಯನ ಮನೋಹರ), ಭೂವರಾಹ, ನರಸಿಂಹ, ಸಮುದ್ರ ಮಥನ ಮೊದಲಾದ ಶಿಲ್ಪಗಳೂ ಎರಡನೆಯ ಲಯಣದಲ್ಲಿದ್ದಂತೆ ಚಿತ್ರಗಳು ಇವೆ. ಲಯಣದ ಮುಂದುಗಡೆ ಕಂಬದ ಮೇಲೆ ಇರುವ ದಂಪತಿ ಶಿಲ್ಪವೊಂದು

ಅಪರೂಪದ್ದಾಗಿದೆ. ಇನ್ನೂ ಹಲವು ಉಬ್ಬು ಶಿಲ್ಪಗಳು ಉದಾ ; ವರುಣ ಯಮ, ಇಂದ್ರ, ಕಾರ್ತಿಕೇಯ ಇವೆ.

ಜೈನಲಯಣದಲ್ಲಿ ಇತರ ಲಯಣಗಳಲ್ಲಿಯಂತೆ ಮೊಗಸಾಲೆ, ಗರ್ಭ ಗೃಹಗಳಿವೆ. ಮೊಗಸಾಲೆಯ ಮುಂದಿನ ಕಪೋತದ ಮಧ್ಯದಲ್ಲಿ ಕುಬ್ಜನ ಒಂದು ಉಬ್ಬು ಶಿಲ್ಪವಿದೆ. ಗೋಡೆಗಳ ಮೇಲೆ ಬಾಹುಬಲಿ, ಸುಪಾರ್ಶ್ವ ನಾಥರ ಮೂರ್ತಿಗಳಿವೆ. ಗರ್ಭಗುಡಿಯೊಳಗೆ ಸಿಂಹಪೀಠದ ಮೇಲಿರುವ ಮಹಾವೀರನ ದೊಡ್ಡ ಮೂರ್ತಿಯನ್ನು ಕಾಣಬಹುದು. ಜೈನಲಯಣ ಕ್ರಿ. ಶ. ಎಂಟನೆಯ ಶತಮಾನದ್ದೆಂದು ತಿಳಿಯಲಾಗಿದೆ. ಕೆಲವರ ಅಭಿಪ್ರಾಯದಲ್ಲಿ ಇದು ಆರನೆಯ ಶತಮಾನದ್ದಿರಬಹುದೆಂದು ತಿಳಿಯಲಾಗಿದೆ. ನೈಸರ್ಗಿಕ ಗುಹೆಯಲ್ಲಿ ಬೌದ್ಧ ಶಿಲ್ಪವೊಂದಿದ್ದು ಇದು 6 ನೆಯ ಶತಮಾನದ್ದಿರಬಹುದಾಗಿದೆ.

ಉತ್ತರ ಗುಡ್ಡದ ಮೇಲೆ ಇರುವ ಮೂರು ದೇವಾಲಯಗಳಲ್ಲಿ ಮಾಲೆಗಿತ್ತಿ ಶಿವಾಲಯ ಗಮನ ಸೆಳೆಯುತ್ತದೆ. ಕೆಳಗೆ ಹಾಗೂ ಮೇಲೆ ಒಂದೊಂದು ಶಿವಾಲಯವಿದೆ. ಕೆಳಗಿನ ಶಿವಾಲಯದ ಗರ್ಭಗುಡಿಯ ಮೇಲೆ ದ್ರಾವಿಡ ಶೈಲಿಯ ಶಿಖರವಿದೆ. ಮೇಲಿನ ಶಿವಾಲಯದ ಗರ್ಭ ಗುಡಿಯ ಮೇಲೆ ನಾಗರ ಶೈಲಿಯ ಶಿಖರವಿದೆ. ಇಲ್ಲೆಲ್ಲ ರಾಮಾಯಣ, ಕೃಷ್ಣಲೀಲೆ ಕಥೆಗಳ ಉಬ್ಬು ಶಿಲ್ಪಗಳನ್ನು ಕಾಣಬಹುದು. ಮಾಲೆಗಿತ್ತಿ ಶಿವಾಲಯದಲ್ಲಿ ಗರ್ಭಗುಡಿ, ಸಭಾಮಂಟಪ ಮತ್ತು ಮುಖ ಮಂಟಪಗಳಿವೆ. ಶಿಖರ ದ್ರಾವಿಡ ಶೈಲಿಯದಾಗಿದೆ. ಈ ದೇವಾಲಯ ಕ್ರಿ. ಶ. ಏಳನೆಯ ಶತಮಾನದ್ದೆಂದು ತಿಳಿಯಲಾಗಿದೆ. ಗರ್ಭಗುಡಿಯೊಳಗೆ ಪೀಠದ ಮೇಲೆ ಲಿಂಗವಿದೆ. ಆದರೆ ಒಳಗೆ ಬಲಬದಿಯಲ್ಲಿರುವ ಒಂದು ದೇವತೆಯ ಶಿಲ್ಪ ಇದೊಂದು ಸೂರ್ಯ ದೇವಾಲಯ ಎಂದು ಸೂಚಿಸುತ್ತದೆ. ಈ ದೇವತೆ ಕಿನ್ನರಿಯೊಬ್ಬಳನ್ನು ಥಳಿಸುತ್ತಿರುವಂತೆ ಶಿಲ್ಪಿವಿದ್ದು ಸೂರ್ಯನೇ ಆ ದೇವತೆ ಎಂಬ ಅಭಿಪ್ರಾಯವಿದೆ.

ದಕ್ಷಿಣ ಗುಡ್ಡದ ಕೆಳಗಿರುವ ವಿಸ್ತಾರವಾದ ಅಗಸ್ತ್ಯ ತೀರ್ಥದ ಪೂರ್ವ

ದಂಡೆಯ ಮೇಲೆ ಸಣ್ಣ ಹಾಗೂ ಕೆಲವು ದೊಡ್ಡ ದೇವಾಲಯಗಳಿವೆ. ಇವುಗಳಲ್ಲಿ ದೊಡ್ಡ ದೇವಾಲಯ ಮೂರ್ತಿ ಶಿಲ್ಪಗಳಿಲ್ಲದ ಕಟ್ಟಡ ಇದರ ಈಶಾನ್ಯಕ್ಕಿರುವ ದೇವಾಲಯ ರಾಷ್ಟ್ರಕೂಟರ ಕಾಲದ್ದಾಗಿದ್ದು ಒಳಗೆ ಲಕುಳೀಶನ ಮೂರ್ತಿ ಇದೆ. ಅಗಸ್ತ್ಯ ತೀರ್ಥದ ದಕ್ಷಿಣ ದಂಡೆಯ ಮೇಲೂ ಎರಡು ಸಣ್ಣ ದೇವಾಲಯ ಹಾಗೂ ಎರಡು ದೊಡ್ಡ ದೇವಾಲಯಗಳಿವೆ. ಇವುಗಳಲ್ಲಿ ಒಂದು ವಿಷ್ಣು ದೇವಾಲಯ ಮತ್ತೊಂದು ಶಿವ ದೇವಾಲಯ ವಾಗಿವೆ. ಪಶ್ಚಿಮ ದಂಡೆಯ ಮೇಲೆ ಎಲ್ಲಮ್ಮ ದೇವಾಲಯವಿದೆ. ಇದರ ಶಿಖರ ನಾಗರ ಶೈಲಿಯಲ್ಲಿದೆ. ಇದನ್ನು ಯೋಗೀಶ್ವರ ಅಥವಾ ವಿಷ್ಣು ದೇವಾಲಯವೆಂದೂ ಹೇಳುತ್ತಾರೆ. ಇದರ ಸನಿಹದಲ್ಲೇ ವಿರೂಪಾಕ್ಷ. ದತ್ತಾತ್ರೇಯ ಹಾಗೂ ಮಲ್ಲಿಕಾರ್ಜುನ ದೇವಾಲಯಗಳಿವೆ. ದತ್ತಾತ್ರೇಯ ಕಲ್ಯಾಣ ಚಾಳುಕ್ಯ ಮೂರ್ತಿ ಶಿಲ್ಪಕ್ಕೆ ಒಂದು ಉತ್ತಮ ಉದಾಹರಣೆ.

ಬಾದಾಮಿ ಊರೊಳಗೆ ಜಂಬುಲಿಂಗ ದೇವಾಲಯವಿದ್ದು ಇದೊಂದು ತ್ರಿಕೂಟಾಚಲ ದೇವಾಲಯ. ಮೂರು ಗರ್ಭಗೃಹಗಳಿವೆ. ಇವು ಸಭಾ ಮಂಟಪದ ಮೂರು ಬದಿಗಳಲ್ಲಿವೆ. ಗರ್ಭಗುಡಿಗಳ ಮೇಲೆ ಇಟ್ಟಿಗೆ ಗಾರೆಯ ಶಿಖರವಿದೆ. ಬಾಗಿಲು ಚೌಕಟ್ಟಿನಲ್ಲಿ ಕೆಲವು ಆಕರ್ಷಕ ಕೆತ್ತನೆಗಳಿರುತ್ತವೆ. ಬಾದಾಮಿಯ ಗುಡ್ಡದ ಮೇಲಿನ ಲಯಣಗಳು ದೇವಾಲಯಗಳೂ ಪ್ರವಾಸಿ ಗಳಿಗೆ ತುಂಬ ಕುತೂಹಲವನ್ನು ಹುಟ್ಟಿಸುತ್ತವೆ.

## ಪಟ್ಟದಕಲ್ಲು

ಬಾದಾಮಿಯಿಂದ 22 ಕಿ. ಮೀ. ದೂರದಲ್ಲಿ ಮಲಪ್ರಭಾನದಿ ಎಡದಡ ದಲ್ಲಿರುವ ಐತಿಹಾಸಿಕ ಸ್ಥಳ. ಬಾದಾಮಿ ಚಾಳುಕ್ಯರ ಕಾಲದ ದೇವಾಲಯ ಗಳಿಗೆ ಈ ಗ್ರಾಮ ಹೆಸರಾಗಿದೆ.

ಪಟ್ಟದ ಕಲ್ಲಿನ ದೇವಾಲಯಗಳೆಂದರೆ ವಿರೂಪಾಕ್ಷ ದೇವಾಲಯ, ಪಾಪನಾಥ ದೇವಾಲಯ, ಗಳಗನಾಥ ದೇವಾಲಯ, ಸಂಗಮೇಶ್ವರ ದೇವಾಲಯ ಜಂಬುಲಿಂಗ ದೇವಾಲಯಗಳು. ಇವುಗಳಲ್ಲಿ ವಿರೂಪಾಕ್ಷ

ದೇವಾಲಯ ದೊಡ್ಡದೂ ಸುಂದರವೂ ಆದ ಕೃತಿ, ಇದರ ಸಮೀಪದಲ್ಲೇ ಮಲ್ಲಿಕಾರ್ಜುನ ದೇವಾಲಯವಿದೆ. ರಾಣಿ ಲೋಕ ಮಹಾದೇವಿ ವಿರೂಪಾಕ್ಷ ಗುಡಿ ಕಟ್ಟಿಸಿದುದಾಗಿ ತಿಳಿಯುತ್ತದೆ. ಆಯತಾಕಾರವಾದ ಪ್ರಾಕಾರದಿಂದ ಸುತ್ತುವರಿದ ಅಂಗಳದ ನಡುವೆ ಮುಖ್ಯ ದೇವಾಲಯವಿದೆ. ನಂದಿ ಮಂಟಪ ಉಬ್ಬು ಶಿಲ್ಪಗಳು, ಸುಂದರ ಕೆತ್ತನೆಗಳಿರುವ ಕಂಬಗಳು, ಪೌರಾಣಿಕ ಕಥಾನಕಗಳ ಶಿಲ್ಪಗಳು, ಸಭಾ ಮಂಟಪ, ರಾಮಾಯಣ ಮಹಾಭಾರತ ಭಾಗವತ ಕಥಾನಕಗಳನ್ನು ನಿರೂಪಿಸುವ ಚಿತ್ರಗಳ ಕೆತ್ತನೆಗಳು, ಕರಿಶಿಲೆಯ ಲಿಂಗವಿರುವ ಗರ್ಭಗೃಹ ಇವು ಈ ದೇವಾಲಯದ ವೈಶಿಷ್ಟ್ಯಗಳು. ಪಟ್ಟದ ಕಲ್ಲಿನ ಈ ದೇವಾಲಯ ಬಾದಾಮಿ ಚಾಳುಕ್ಯರ ಕಾಲದ ದೇವಾಲಯಗಳಲ್ಲೇ ಅತಿ ದೊಡ್ಡದು. ಮಲ್ಲಿಕಾರ್ಜುನ ಗುಡಿಯ ಮುಖ ಮಂಟಪದ ಕಂಬಗಳ ಮೇಲೆ ಸುಂದರ ಸ್ತ್ರೀ ವಿಗ್ರಹಗಳು ಗರ್ಭ ಗೃಹದೊಳಗೆ ಲಿಂಗ, ಸಭಾ ಮಂಟಪದ ಮಾರ್ಗದಲ್ಲಿ ಗರುಡವಾಹನ ವಿಷ್ಣು ಶಿಲ್ಪ, ಕಂಬಗಳ ಮೇಲೆ ಪಂಚತಂತ್ರ, ಹರಿವಂಶ, ರಾಮಾಯಣ ಮಹಾಭಾರತ ಕಥಾಸನ್ನಿವೇಶಗಳ ಚಿತ್ರ ಶಿಲ್ಪಗಳೂ ಇವೆ. ಸಂಗಮೇಶ್ವರ ಗುಡಿ ದ್ರಾವಿಡ ಶೈಲಿಯ ಕೃತಿ. ಗಳಗನಾಥ ದೇವಾಲಯದ ಶಿಖರ ನಾಗರ ಶೈಲಿಯದಾಗಿದೆ. ವಿಶಾಲವಾದ ಸಭಾ ಮಂಟಪವನ್ನು ಹೊಂದಿದೆ. ಕೆಲಮಟ್ಟಿಗೆ ಈ ದೇವಾಲಯ ಹಾಳಾಗಿದೆ. ಇದರ ಹಿಂದೆ ಜಂಬುಲಿಂಗ ದೇವಾಲಯವಿದ್ದು ಇದೊಂದು ಚಿಕ್ಕ ಗುಡಿ. ವೀರಭದ್ರ, ನಂದಿ ದ್ವಾರಪಾಲಕ ಮೂರ್ತಿಗಳೂ ಗರ್ಭಗುಡಿಯಲ್ಲಿ ಶಿವ ಲಿಂಗವೂ ಇದೆ. ಅರ್ಧನಾರೀಶ್ವರ ಹಾಗೂ ವಿಷ್ಣು ಮೂರ್ತಿಗಳೂ ಇಲ್ಲಿರುತ್ತವೆ. ಈ ದೇವಾಲಯದ ಬಳಿ ಕಾಡುಸಿದ್ದೇಶ್ವರ ಎಂಬ ದೇವಾಲಯ ವಿದ್ದು ಇದರ ಗರ್ಭಗುಡಿಯ ಲಲಾಟದ ಮೇಲೆ ನಂದಿಯೇರಿ ಕುಳಿತಿರುವ ಶಿವಪಾರ್ವತಿಯರ ವಿಗ್ರಹವಿದೆ. ಕಾಶಿವಿಶ್ವೇಶ್ವರನ ಗುಡಿಯಲ್ಲಿ ನಾಗರೇಖಾ ಶಿಖರವಿದ್ದು ಗರ್ಭಗುಡಿಯಲ್ಲಿ ಶಿವಲಿಂಗವಿದೆ. ತ್ರಿಪುರಾಂತಕನ ಮೂರ್ತಿ, ಪ್ರತಿಕಂಬದ ಮೇಲೂ ಸುಂದರವಾದ ಸ್ತ್ರೀಯರ ಉಬ್ಬು ಶಿಲ್ಪಗಳೂ ಇವೆ.

ಪಟ್ಟದ ಕಲ್ಲಿನ ಒಂದು ಗಮನಾರ್ಹ ಹಾಗೂ ಸುಸ್ಥಿತಿಯಲ್ಲಿರುವ ದೇವಾಲಯ ಪಾಪನಾಥ ದೇವಾಲಯ, ಸ್ವಲ್ಪ ದೊಡ್ಡದೇವಾಲಯ ಕೂಡ

ಗರ್ಭಗುಡಿ ಚೌಕಾಕಾರವಿದ್ದು ಒಳಗೆ ಶಿವಲಿಂಗವಿದೆ. ಇಲ್ಲಿಯೂ ಹಲವು ಉಬ್ಬು ಶಿಲ್ಪಗಳನ್ನು ಕಾಣುತ್ತೇವೆ, ರಾಮಾಯಣ ಮಹಾಭಾರತ ಕಥಾನಕಗಳ ಚಿತ್ರಗಳನ್ನು ಕತ್ತಲಾಗಿದೆ. ಈ ದೇವಾಲಯ ದ್ರಾವಿಡ ಮತ್ತು ನಾಗರ ಶೈಲಿಗಳ ಸಮಿಶ್ರ. ಪಟ್ಟದ ಕಲ್ಲಿನಲ್ಲಿ ಒಂದು ದ್ರಾವಿಡ ಶೈಲಿಯ ಜೈನ ದೇವಾಲಯವೂ ಇದೆ. ಈ ದೇವಾಲಯಗಳೇ ಅಲ್ಲದೆ ಈ ಊರಿನಲ್ಲಿ ಎಷ್ಟೋ ದೇವಾಲಯಗಳ ಅವಶೇಷಗಳನ್ನೂ ಕಾಣುತ್ತೇವೆ. ವಾಸ್ತುಶಿಲ್ಪ ವಿದ್ಯಾರ್ಥಿಗಳಿಗೆ ಪಟ್ಟದ ಕಲ್ಲು ಒಂದು ಶಾಲೆಯಂತೆ. ಇಲ್ಲಿ ಅವರು ಪ್ರಾಯೋಗಿಕವಾಗಿಯೇ ಕಲಿಯಬಹುದು. ಉತ್ತಮ ಸ್ಥಿತಿಯಲ್ಲಿರುವ ಪಟ್ಟದ ಕಲ್ಲಿನ ಒಂಬತ್ತು ದೇವಾಲಯಗಳೂ ಅನುಪಮ ಸೌಂದರ್ಯವುಳ್ಳ ಕಲಾಕೃತಿಗಳಾಗಿದೆ. ಈ ಎಲ್ಲವೂ ವಾಸ್ತು ವೈಭವದಿಂದ ಕೂಡಿದ್ದು ಕಲಾ ರಸಿಕರ ಮನ ಸೆಳೆಯುತ್ತದೆ.

## ಐಹೊಳೆ

ಬಾದಾಮಿ, ಪಟ್ಟದ ಕಲ್ಲುಗಳಂತೆ ಐಹೊಳೆಯೂ ದೇವಾಲಯಗಳ ಭಂಡಾರ. ಇದು ಹುನಗುಂದ ತಾಲ್ಲೂಕಿನ ಒಂದು ಗ್ರಾಮ. ಭಾರತದ ಒಂದು ಪ್ರವಾಸೀ ಕೇಂದ್ರ. ಬಾದಾಮಿ ಚಾಳುಕ್ಯರ ಕಾಲದ ಅತ್ಯಂತ ಸುಂದರ ದೇವಾಲಯಗಳ ಸಮೂಹವೇ ಇಲ್ಲಿದೆ. ಬಾದಾಮಿಯಿಂದ 30 ಕಿ. ಮೀ. ದೂರದಲ್ಲಿ ಐಹೊಳೆ ಇದೆ. ಶಾಸನಗಳಲ್ಲಿ ಈ ಊರಿಗೆ ಆಯ್ಯಾಹೊಳೆ, ಐಯ್ಯ ಹೊಳೆ, ಆರ್ಯಪುರ ಎಂಬ ಹೆಸರುಗಳಿವೆ.

ಇಲ್ಲಿ ಸುಮಾರು 125 ದೇವಾಲಯಗಳಿವೆ. ಇವನ್ನು ಇಪ್ಪತ್ತೆರಡು ಗುಂಪುಗಳಾಗಿ ವಿಂಗಡಿಸಲಾಗಿದೆ. ಮುಖ್ಯವಾದ ಗುಡಿಗಳನ್ನು ಹೀಗೆ ಪಟ್ಟಿ ಮಾಡಬಹುದು.

| | |
|---|---|
| ದುರ್ಗಗುಡಿ | ಚಕ್ರಗುಡಿ |
| ಲಾಡಖಾನ್ ಗುಡಿ | ಬಡಿಗೇರ ಗುಡಿ (ಸೂರ್ಯದೇವಾಲಯ) |
| ಗೌಡರ ಗುಡಿ | ರಾಚಿಗುಡಿ |

ಸೂರ್ಯನಾರಾಯಣಗುಡಿ
ಹಾಲಬಸಪ್ಪನ ಗುಡಿ
ಚರಂತಿ ಮಠ ಗುಂಪು
(ಮುಖ್ಯಗುಡಿ ತ್ರಿಕೂಟಾಚಲ)
ಚಿಕ್ಕೀಗುಡಿಗಳ ಗುಂಪು
ರಾವಳಫಡಿ ಗುಹಾದೇವಾಲಯ
ಹುಚ್ಚಪ್ಪಯ್ಯನ ಗುಡಿ
ಗಳಗನಾಥ ಗುಡಿಗಳ ಗುಂಪು
ರಾಮಲಿಂಗನ ಗುಡಿ
ಹುಚ್ಚಪ್ಪಯ್ಯನಮಠ
ಕುಂತಿಗುಡಿ ಗುಂಪು
ತ್ರ್ಯಂಬಕೇಶ್ವರ ಗುಡಿಗಳ ಗುಂಪು
ಗೌರಿಗುಡಿ
ಹುಚ್ಚಿಮಲ್ಲಿ ದೇವಾಲಯ
ಮೇಗುಟಿ ದೇವಾಲಯ
ಮಲ್ಲಿಕಾರ್ಜುನಗುಡಿ
ಏಣಿಯರ್ ಗುಡಿಗಳ ಗುಂಪು
ಅಂಬಿಗೇರ ಗುಡಿಗಳ ಗುಂಪು

ಐಹೊಳೆಯ ಹೆಚ್ಚಿನ ಗುಡಿಗಳು ಪಾಳುಬಿದ್ದಿವೆ. ಇಲ್ಲಿನ ನೂರಾರು ದೇವಾಲಯಗಳು ಕಲಾವಿಲಾಸಿಗಳಿಗೆ ಚೇತೋಹಾರಿಯಾಗಿವೆ. ವಾಸ್ತು ಶಿಲ್ಪದ ದೃಷ್ಟಿಯಿಂದ ಇಲ್ಲಿನ ಎಲ್ಲ ದೇವಾಲಯಗಳೂ ಗಮನಾರ್ಹ.

ದುರ್ಗ ಗುಡಿ ಪ್ರಸಿದ್ಧವಾಗಿದೆ. ಇಲ್ಲಿ ಹಲವಾರು ದೇವ ವಿಗ್ರಹಗಳಿವೆ. ಮಹಿಷಮರ್ದಿನಿ, ವಿಷ್ಣು, ನರಸಿಂಹ, ವರಾಹ ಮೊದಲಾದ ಮೂರ್ತಿಗಳಿವೆ. ನಾನಾ ಭಂಗಿಗಳಲ್ಲಿರುವ ಅನುರಕ್ತ ದಂಪತಿಗಳ ಶಿಲ್ಪಗಳೂ ಇವೆ. ಲಾಡಖಾನ್ ಗುಡಿಯ ಗೋಡೆಗಳಲ್ಲಿ ಸುಂದರವಾಗಿ ಕೆತ್ತಿದ ಜಾಲಂಧ್ರಗಳಿವೆ. ಇದು ಶಿವದೇವಾಲಯ. ಇದು ಐಹೊಳೆಯ ಅತಿ ಪ್ರಾಚೀನ ಗುಡಿ ಎನ್ನಲಾಗಿದೆ. ಕ್ರಿ. ಶ. ಐದನೆಯ ಶತಮಾನದ್ದಿರಬಹುದೆನ್ನಲಾಗಿದೆ. ಈ ಗುಡಿಗೆ ಹತ್ತಿರದಲ್ಲಿಯೇ ಸೂರ್ಯನಾರಾಯಣ ಗುಡಿ ಇದ್ದು ಇದರ ಗರ್ಭಗುಡಿಯೊಳಗೆ ನಾಲ್ಕು ಕಂಬಗಳಿರುವುದು ಒಂದು ವೈಶಿಷ್ಟ್ಯ. ಇಲ್ಲಿಯ ಸೂರ್ಯ ವಿಗ್ರಹ ಕಮಲಪಾಣಿ; ನಿಂತ ಭಂಗಿ.

ಇಲ್ಲಿನ ಬಹು ಮಟ್ಟಿನ ದೇವಾಲಯಗಳಲ್ಲಿ ನೂರಾರು ದೇವತಾ ಮೂರ್ತಿಗಳ ಕೆತ್ತನೆಗಳನ್ನು ಕಾಣುತ್ತೇವೆ. ಮಿಥುನ ಶಿಲ್ಪಗಳೂ ಇವೆ. ಐಹೊಳೆಯ ಮೂರು ಗುಹಾದೇವಾಲಯಗಳಲ್ಲಿ ರಾವಳ ಫಡಿ (ರಾವಣ) ದೇವಾಲಯ ಪ್ರಖ್ಯಾತ. ಇದರ ಗುಹೆಗಳಲ್ಲಿ ನಟರಾಜ ಶಿಲ್ಪದ ಜೊತೆಯಲ್ಲಿ

ರುವ ಮಾತೃಕೆಯರ ಮೂರ್ತಿಗಳು ಅತ್ಯಂತ ಸುಂದರ. ಹತ್ತು ಬಾಹುಗಳ ನರ್ತನ ನಿರತ ಶಿವನ ವಿಗ್ರಹ ಬಲು ರಮಣೀಯ.

ಗುಡ್ಡದ ಮೇಲಿನ ಗುಡಿಗಳಲ್ಲಿ ಮೇಗುಟಿ ದೇವಾಲಯ ಗಮನ ಸೆಳೆಯುತ್ತದೆ. ಇದರ ಗರ್ಭಗೃಹದಲ್ಲಿ ಸಿಂಹಾಸನದ ಮೇಲೆ ಕುಳಿತ ತೀರ್ಥಕರ ವಿಗ್ರಹವಿದೆ.

ಐಹೊಳೆಯ ರಾಮಲಿಂಗ ದೇವಸ್ಥಾನ ತ್ರಿಕೂಟ ಚಲ, ಮಧ್ಯದ ಗರ್ಭ ಗುಡಿಯಲ್ಲಿ ರಾಮಲಿಂಗ ಎಂಬ ಶಿವಲಿಂಗವಿದೆ. ಇಲ್ಲಿ ಪೂಜೆ ನಡೆಯುತ್ತದೆ ಹನ್ನೊಂದನೆ ಶತಮಾನದ ದೇವಾಲಯ ಇದಾಗಿದೆ. ರಾಮಲಿಂಗಗುಡಿಗಳ ಗುಂಪಿನಲ್ಲಿ ಬ್ರಹ್ಮ ದೇವಾಲಯವೊಂದಿದೆ. ಇಲ್ಲಿಯೇ ಒಂದು ಪರಶುರಾಮನ ಚಿಕ್ಕ ಗುಡಿ ನೋಡಬಹುದು. ವಿಷ್ಣುದೇವಾಲಯವೂ ಇದೆ.

ಜೈನ ಗುಹಾದೇವಾಲಯವು ಐಹೊಳೆಯಲ್ಲಿದ್ದು ಇಲ್ಲಿನ ಶಿಲ್ಪಗಳು ಕರ್ನಾಟಕದ ಅತಿ ಪ್ರಾಚೀನ ಜೈನ ಶಿಲ್ಪಗಳ ಸಾಲಿಗೆ ಸೇರಿದವಾಗಿವೆ. ಗರ್ಭ ಗುಡಿಯಲ್ಲಿ ಮಹಾವೀರನ ಮೂರ್ತಿ ಇದೆ.

ಐಹೊಳೆಯ ಬಹುತೇಕ ದೇವಾಲಯಗಳನ್ನು ರಾಷ್ಟ್ರೀಯ ಸ್ಮಾರಕ ಗಳೆಂದು ಪರಿಗಣಿಸಲಾಗಿದೆ.

ಬಾದಾಮಿ ತಾಲ್ಲೂಕಿನ ನಂದಿಕೇಶ್ವರ ಒಂದು ಪವಿತ್ರ ಕ್ಷೇತ್ರ-ಇಲ್ಲಿಗೆ ಸಮೀಪದಲ್ಲಿ ದಕ್ಷಿಣ ಕಾಶಿ ಎನ್ನಲಾಗುವ ಮಹಾಕೂಟ ಕ್ಷೇತ್ರವಿದೆ.ಕೆರೂರಿನಲ್ಲಿ ಬನಶಂಕರಿ ದೇವಾಲಯ ನೋಡಬೇಕಾದುದು. ಬಾದಾಮಿಗೆ 13 ಕಿ.ಮೀ. ದೂರದಲ್ಲಿ ಬೇಲೂರು ಎಂಬ ಗ್ರಾಮವಿದ್ದು ಇಲ್ಲಿ ಬೇಲೂರಪ್ಪ ಹಾಗೂ ನಾರಾಯಣ ದೇವಾಲಯಗಳಿವೆ. ಬಾದಾಮಿಗೆ ಸಮೀಪದ ಚೊಳಚ ಗುಡ್ಡ ದಲ್ಲಿಯೂ ಒಂದು ಬನಶಂಕರಿ ದೇವಾಲಯವಿದೆ. ಹುನಗುಂದದಲ್ಲಿ ಕೆಲವು ಪುರಾತನ ದೇವಾಲಯಗಳೂ ಜೈನ ಬಸದಿಯ ಅವಶೇಷಗಳೂ ಇವೆ. ಇಲ್ಲಿನ ರಾಮಲಿಂಗ ದೇವಾಲಯದ ಗರ್ಭಗುಡಿ ನೆಲದಡಿ ಇರುವುದು ವಿಶೇಷ. ಸಂಗಮೇಶ್ವರ, ಮಲ್ಲಿಕಾರ್ಜುನ ಗುಡಿಗಳೂ ಇವೆ.

ಹುನಗುಂದ ತಾಲ್ಲೂಕಿನ ಕೂಡಲ ಸಂಗಮ ಒಂದು ಪುಣ್ಯ ಪವಿತ್ರ ಕ್ಷೇತ್ರ. ಇಲ್ಲಿ ಕೃಷ್ಣಾ ಮಲಪ್ರಭಾ ನದಿಗಳು ಸಂಗಮಿಸುತ್ತವೆ. ಇಲ್ಲಿ ಪ್ರಸಿದ್ಧ ಸಂಗಮೇಶ್ವರ ದೇವಾಲಯವಿದೆ. ಬಸವಣ್ಣನವರು ಕಲ್ಯಾಣ (ಬೀದರ್ ಜಿಲ್ಲೆ) ವನ್ನು ಬಿಟ್ಟ ಬಳಿಕ ಇಲ್ಲಿಯೇ ಬಂದು ಐಕ್ಯರಾದರು. ಹೀಗಾಗಿ ಇದೊಂದು ಪವಿತ್ರ ಕ್ಷೇತ್ರವಾಗಿದೆ. ವರ್ಷದಲ್ಲಿ ಒಂದು ದಿನ ಜಾತ್ರೆ ನಡೆಯುತ್ತದೆ. ಸಂಗಮೇಶ್ವರ ಚಾಳುಕ್ಯ ಶೈಲಿಯ ದೇವಾಲಯ. ಹುನಗುಂದ ತಾಲ್ಲೂಕಿನ ಕರಡಿ ಗ್ರಾಮದ ನಂದಿ ದೇವಾಲಯ ಪ್ರಸಿದ್ಧ. ಈ ದೇವಾಲಯದ ಮುಖ ಕರಡಿಯಂತಿರುವುದು ಗಮನಾರ್ಹ.

## ಬೀದರ್

ಬೀದರ್ ಪ್ರೇಕ್ಷಣೀಯಸ್ಥಳ. ಮಹಮ್ಮದಾಬಾದ್-ಬೀದರ್ ಎಂದೂ ಈ ಊರಿಗೆ ಹೇಳುತ್ತಾರೆ. ಇದು ನಳ ದಮಯಂತಿಯರ ಪ್ರಣಯದ ಉದ್ಯಾನವಾಗಿ ವಿದುರ ನಗರ (ವಿದರ್ಭ) ಎಂದೂ ಖ್ಯಾತಿವೆತ್ತಿತ್ತು. ಕಲ್ಯಾಣದ ಚಾಳುಕ್ಯರು ಆಳಿದ ಈ ಜಿಲ್ಲೆ ಮಹಮ್ಮದೀಯರ ಆಳ್ವಿಕೆಗೂ ಒಳಪಟ್ಟಿತ್ತು.

ಬೀದರಿನಲ್ಲಿ ಪಾಪನಾಶಿನಿ ಎಂಬ ಕ್ಷೇತ್ರವಿದ್ದು ಇಲ್ಲಿ ಬೃಹದಾಕಾರದ ಸ್ವಯಂಭೂಶಿವಲಿಂಗವಿದೆ. ಬೀದರ್‌ನ ನರಸಿಂಹ ಝರಣಿ ಗುಹಾಂತರ ದೇವಾಲಯವನ್ನು ಹೊಂದಿದೆ. ಇಲ್ಲಿ ಗುಹೆಯಲ್ಲಿರುವ ನರಸಿಂಹನನ್ನು ನೋಡ ಹೋಗಲು ಎದೆ ಆಳತೆಯ ಮಟ್ಟದ ನೀರಿನಲ್ಲಿಯೇ ಹೋಗಬೇಕು. ಆದರೆ ನೀರಿನ ಮಟ್ಟದಲ್ಲಿ ಏರು ಪೇರು ಕಾಣುವುದಿಲ್ಲ. ಎಲ್ಲ ಕಾಲದಲ್ಲಿಯೇ ನೀರಿನ ಮಟ್ಟ ಒಂದೇ ಪ್ರಮಾಣದಲ್ಲಿರುತ್ತದೆ. ಇದೊಂದು ವೈಶಿಷ್ಟ್ಯ.

ಬೀದರ್ ಸಿಖ್ಖರಿಗೂ ಪವಿತ್ರಸ್ಥಳವಾಗಿದೆ. ಇಲ್ಲಿಗೆ ಗುರುನಾನಕರು ಬಂದಿದ್ದರೆಂದು ಪ್ರತೀತಿ. ಅವರ ಪಾದಸ್ಪರ್ಶದಿಂದ ಚಿಮ್ಮಿದ ನೀರು ಇರುವ ಸ್ಥಳ ನಾನಕ್ ಝರಾ ಎಂದು ಪ್ರಸಿದ್ಧವಾಗಿದೆ. ಬೀದರಿನಲ್ಲಿ

ಮುಸ್ಲಿಮರ ಪವಿತ್ರ ಕ್ಷೇತ್ರಗಳಾದ ಕೆಲವು ದರ್ಗಾಗಳಿವೆ. ಬೀದರಿನಿಂದ ಎರಡು ಕಿ. ಮೀ. ದೂರದಲ್ಲಿ ಅನಂತ ಶಯನ ಮಂದಿರವಿದ್ದು ಒಳಗಿರುವ ಮೂರ್ತಿ ಅತ್ಯಂತ ಸುಂದರವಾಗಿದೆ, ಬೀದರ್ ತಾಲ್ಲೂಕಿನ ತಾದಲಾಪುರ ದಲ್ಲಿರುವ ದತ್ತಾನಂದ ಮಠ ಮತ್ತು ದೇವಸ್ಥಾನ ಹಿಂದು ಮುಸ್ಲಿಂ ಬಾಂಧವ್ಯ ಸಾಮರಸ್ಯಕ್ಕೆ ಕುರುಹಾಗಿದೆ. ಸಾದೋಘಾಟ್ ವಿಠಲ ಮಂದಿರವೂ ಪ್ರಸಿದ್ಧ.

## ಬಸವ ಕಲ್ಯಾಣ

ಬಸವ ಕಲ್ಯಾಣ ಒಂದು ಧಾರ್ಮಿಕ ಕೇಂದ್ರ. ಬೀದರ್‌ಗೆ 80 ಕಿ.ಮೀ. ದೂರದಲ್ಲಿದೆ, ಹಿಂದೆ ಇದು ಚಾಳುಕ್ಯರ ರಾಜಧಾನಿಯಾಗಿತ್ತು. ಕಳಚುರಿ ಬಿಜ್ಜಳ ಇದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಬಸವಣ್ಣ ನವರು ಇಲ್ಲಿಯೇ ಮಂತ್ರಿಗಳಾಗಿ ಇದ್ದರು. ಊರಿನ ಮಧ್ಯದಲ್ಲಿ ಬಸವೇಶ್ವರ ಗುಡಿ ಇದೆ. ಹಲವು ವೀರಶೈವ ಮಠಗಳೂ ಇಲ್ಲಿವೆ, ಇಲ್ಲಿ ವಚನಕಾರರ ಹೆಸರಿನಲ್ಲಿ ಹಲವು ಗವಿಗಳಿದ್ದು ಇಲ್ಲೆಲ್ಲ ಯಾತ್ರಿಕರು ಬಂದು ಪೂಜೆ ಸಲ್ಲಿಸುವರು. ಬಸವ ಕಲ್ಯಾಣದ ಉತ್ತರಕ್ಕಿರುವ ಹುಲಸೂರು ಗ್ರಾಮದಲ್ಲಿ ವೀರಭದ್ರೇಶ್ವರ ದೇವಾಲಯವಿದೆ.

ಬೀದರಿನ ನೈಋತ್ಯಕ್ಕೆ ಹುಮನಾಬಾದ್ ಎಂಬ ಪಟ್ಟಣವಿದ್ದು ಇಲ್ಲಿಯ ವೀರಭದ್ರ ದೇವಾಲಯ ವಿನೂತನ ಶೈಲಿಯದಾಗಿದೆ. ಇದರ ಗರ್ಭಗೃಹದ ಪಕ್ಕದಲ್ಲಿ ಭದ್ರಕಾಳಿ ಹಾಗೂ ನಂದಿಕೇಶ್ವರ ಗುಡಿಗಳಿವೆ. ಗರ್ಭಗೃಹದ ಶಿಖರದಲ್ಲಿ ಶಿವನ ಇಪ್ಪತ್ತೆಂಟು ಲೀಲೆಗಳ, ವಿಷ್ಣುವಿನ ದಶಾವತಾರದ ಕಥೆಗಳಿರುವ ಶಿಲ್ಪಗಳಿವೆ.

ಹುಮನಾ ಬಾದಿಗೆ ಎಂಟು ಕಿ. ಮೀ. ದೂರದ ಜಲಸಾಂಗ್ವಿ ಗ್ರಾಮದಲ್ಲಿ ಒಂದು ಅಪರೂಪದ ಹೊಯ್ಸಳ ದೇವಾಲಯವಿದೆ. ಆದರೆ ಇದು ಶಿಥಿಲವಾಗಿದೆ. ಇಲ್ಲಿ ಸುಂದರ ಕಲಾತ್ಮಕ ಕೆತ್ತನೆಗಳ ವಿಗ್ರಹಗಳನ್ನು

ನೋಡಬಹುದು. ಬೇಲೂರಿನ (ಹಾಸನಜಿಲ್ಲೆ) ಚೆನ್ನಕೇಶವ ಗುಡಿ ನೆನಪಿಗೆ ತರುವ ಈ ದೇಗುಲದಲ್ಲಿ ಒಂದು ಸುಂದ ಸ್ತ್ರೀರ ಶಿಲ್ಪವಿದೆ. ಇಲ್ಲಿ ಹೆಣ್ಣು ಒಂದು ಪತ್ರವನ್ನು ಬರಯುತ್ತಿರುವಂತೆ ಕೆತ್ತಲಾಗಿದೆ. ಇಲ್ಲಿ ಮಹಾದೇವನ ದೇವಾಲಯವಿದೆ. ಮಹಾಣಿಕ ಪ್ರಭುಗಳ ದೇವಾಲಯವಿರುವ ಬಡಾವಣೆ ಮಹಾಣಿಕ ನಗರ. ಹುಮನಾಬಾದಿಗೆ ಎರಡು ಕಿ. ಮಿ. ದೂರದಲ್ಲಿದೆ. ಭಾಲ್ಕಿಯ ಭಾಲ್ಕೇಶ್ವರ, ಖಾನಾಪುರದ ಖಂಡೋಬ ದೇವಾಲಯ, ಚಲ್ಕಾಪುರದ ಹನುಮಂತನ ಗುಡಿ, ಹಲಸಿ ಗ್ರಾಮದ ಲಕ್ಷ್ಮೀಗುಡಿ, ಜಾರಾದದ ಅಮರೇಶ್ವರ ದೇವಾಲಯ ಇವು ಬೀದರ್ ಜಿಲ್ಲೆಯಲ್ಲಿ ಕಂಡುಬರುವ ಇತರ ದೇವಾಲಯಗಳು. ಇಲ್ಲೆಲ್ಲ ಪ್ರತಿ ವರ್ಷ ಜಾತ್ರೆ, ಉತ್ಸವಗಳು ನಡೆದು ಭಕ್ತರನ್ನಾಕರ್ಷಿಸುತ್ತವೆ.

## ಗುಲ್ಬರ್ಗದ ಬಂದೇನವಾಜ್

ಪ್ರಾಚೀನ ಕಾಲದಿಂದಲೂ ಹಿಂದೂ ಮುಸ್ಲಿಂ ಸಂಸ್ಕೃತಿಗಳ ಸಂಗಮವನ್ನು ಕಾಣಲಾಗುತ್ತಿರುವ ಕಲಬುರುಗಿ (ಗುಲ್ಬರ್ಗಾ) ಪಟ್ಟಣ ಪ್ರವಾಸಾಕರ್ಷಣೀಯ ಸ್ಥಳವಾಗಿರುವುದು ಗಮನಾರ್ಹ. ಗುಲ್ಬರ್ಗಾವನ್ನು ಕಲುಬುರುಗಿ ಎಂದು ಕರೆಯುವುದು ವಾಡಿಕೆ. ಕಲ್ಲುಗುಂಪೆ ಎಂಬುದರಿಂದ ಈ ಹೆಸರು ಬಂದಿದೆ. ಗುಲ್ ಎಂದರೆ ಹೂವು ಬರ್ಗ ಎಂದರೆ ಎಲೆ ಎಂದು ಪರ್ಷಿಯನ್ ಭಾಷೆಯಲ್ಲಿ ಅರ್ಥವಿದ್ದು ಊರಿಗೆ ಗುಲ್‌ಬರ್ಗಾ ಎಂಬ ಹೆಸರು ಬಂದಿರಬಹುದು.

ಗುಲ್ಬರ್ಗಾದಲ್ಲಿ ಬಂದೇ ನವಾಜರ ಸಮಾಧಿಯನ್ನು ಹಿಂದೂ ಮುಸ್ಲಿಮ್ಮರಿಬ್ಬರೂ ಬಹಳ ಗೌರವದಿಂದ ಕಾಣುತ್ತಾರೆ. ಸುಮಾರು 600 ವರ್ಷಗಳ ಹಿಂದೆ ಗುಲ್ಬರ್ಗಾಕ್ಕೆ ಬಂದೇ ನವಾಜರು ಬಂದರು. ಅವರು ಸುಪ್ರಸಿದ್ಧ ಸಂತರು. ಉರ್ದು ಪಂಡಿತರು. ಕುರಾನ್ ಮತ್ತು ಇಸ್ಲಾಂ ಧರ್ಮ ಕುರಿತು ಭಾಷ್ಯ ಬರೆದಿರುತ್ತಾರೆ. ಊರ ಹೊರವಲಯದಲ್ಲಿ ಬಂದೇ ನವಾಜರ ದರ್ಗಾ ಇದೆ. ಇದರ ವಾಸ್ತು ಕುತೂಹಲ ಉಂಟು ಮಾಡುತ್ತದೆ.

ಕಮಾನುಗಳು ಸುಂದರ. ಪ್ರತಿವರ್ಷ ಜಿಕೈದಾ ತಿಂಗಳಿನಲ್ಲಿ ಮೂರುದಿನಗಳ ಕಾಲ ಉರುಸು ನಡೆಯುತ್ತದೆ.

ಕಲಬುರಗಿಯ ಕೆರೆಗೆ ಸ್ವಲ್ಪ ದೂರದಲ್ಲಿ ಶ್ರೀ ಶರಣ ಬಸವೇಶ್ವರರ ದೇವಾಲಯವಿದೆ. ಇದೂ ಒಂದು ಧಾರ್ಮಿಕ ಕೇಂದ್ರ. ಪ್ರಸಿದ್ಧ ವೀರ ಶೈವ ಸಂತರಾದ ಶರಣ ಬಸವೇಶ್ವರರ ಗೌರವಾರ್ಥ ಪ್ರತಿವರ್ಷ ಚೈತ್ರ ಬಹುಳ ಪಂಚಮಿಯಿಂದ ಹತ್ತು ದಿನಗಳ ಕಾಲ ಜಾತ್ರೆ ನಡೆಯುತ್ತದೆ. ದೇವಾಲಯದ ವಾಸ್ತು ಸುಂದರವಾಗಿದೆ.

ಗುಲ್ಬರ್ಗಾ ಜಿಲ್ಲೆಯಲ್ಲಿ ಗುಲ್ಬರ್ಗಾ, ಅಫಜಲಪುರ, ಸುರಪುರ, ಜೇವರಗಿ, ಆಳಂದ, ಚಿಂಚೋಳಿ, ಯಾದಗಿರಿ, ಚಿತ್ತಾಪುರ ಎಂಬ ಎಂಟು ತಾಲ್ಲೂಕುಗಳಿವೆ.

ಆಳಂದ ದಿಂದ 18 ಕಿ. ಮೀ. ದೂರದಲ್ಲಿರುವ ನರೋಣ ತೀರ್ಥಕ್ಷೇತ್ರ. ಇಲ್ಲಿ ಕಾರ್ತಿಕೇಯ ದೇವಾಲಯವೂ ಹೊನ್ನವಳ್ಳಿ ಎಲ್ಲಮ್ಮ ದೇವಾಲಯವೂ ಇವೆ. ಆಳಂದ ತಾಲ್ಲೂಕಿನ ಕುಣಿಸಂಗವಿಯ ಬಸವೇಶ್ವರ ದೇವಾಲಯ, ಖಜೂರಿಯ ವೆಂಕಟೇಶ್ವರ, ಮಾಟಕಿಯ ಜಾಲಂಧರನಾಥ, ರುದ್ರವಾಡಿಯ ಶಿವ ದೇವಾಲಯ ಹೆಸರಿಸಬೇಕಾದ ದೇವಾಲಯಗಳು. ಇದೇ ತಾಲ್ಲೂಕಿನ ಪಡಸಾವಳಿ ಗ್ರಾಮದಲ್ಲಿ ಕೆಲವು ದೇವಾಲಯಗಳಿದ್ದು ಭೂಮಟ್ಟದ ಕೆಳಗಿರುವ ಒಂದು ದೇವಾಲಯದಲ್ಲಿ ಚೆನ್ನಕೇಶವನ ಸುಂದರ ವಿಗ್ರಹವಿದೆ. ಆಳಂದ ದಲ್ಲಿರುವ ಲಾಡ್ಲೆ ಮುಷಾಯಿಕ್ ದರ್ಗಾ ಸುಮಾರು ಹದಿನೈದನೆಯ ಶತಮಾನದ ರಚನೆಯಾಗಿದೆ.

## ಗಾಣಗಾಪುರ

ಇದೊಂದು ಪವಿತ್ರ ಯಾತ್ರಾಸ್ಥಳ. ಭೀಮಾ ಮತ್ತು ಅಮರಜ ನದಿಗಳು ಕೂಡುವಲ್ಲಿ ಇದೆ. ಇದು ಹಿಂದೆ ಗಂಧರ್ವಪುರ ಎನಿಸಿತ್ತು. ಇಲ್ಲಿ ಸಂಗಮೇಶ್ವರ ದೇವಾಲಯ, ಹಲವು ತೀರ್ಥಗಳು, ನರಸಿಂಹ ಸರಸ್ವತಿ ಎಂಬ

ಯತಿಗಳ ಮಠ ಇವೆ. ದತ್ತ ಜಯಂತಿಯಂದು ಇಲ್ಲಿಗೆ ಅಪಾರ ಸಂಖ್ಯೆಯಲ್ಲಿ ಬರುತ್ತಾರೆ. ಅಫಜಲಪುರ ತಾಲ್ಲೂಕಿನಲ್ಲಿ ಈ ಗ್ರಾಮವಿದೆ. ಇದೇ ತಾಲ್ಲೂಕಿನ ಘಟ್ಟರ್ಗಾದಲ್ಲಿ ಭಗವತಿ ದೇವಾಲಯ ಅತ್ನೂರಿನಲ್ಲಿ ಬಸವೇಶ್ವರ ದೇವಾಲಯ ಹವಲ್ಗದಲ್ಲಿ ಸಿದ್ಧರಾಮೇಶ್ವರ ದೇವಾಲಯಗಳೂ ಇವೆ.

ಚಿತ್ತಾಪುರ ತಾಲ್ಲೂಕಿನ ಸನ್ನತಿ ಬೌದ್ಧ ನಿವೇಶನವುಳ್ಳ ಸ್ಥಳ. ಇಲ್ಲಿನ ಸ್ತೂಪಗಳ ನಿವೇಶನದ ಬಳಿ ಚಂದ್ರಲಾಂಬಾ ದೇವಾಲಯವಿದೆ. ಇಲ್ಲಿ ಹಲವು ಕೆತ್ತನೆಗಳನ್ನು ನೋಡಬಹುದು. ಇದರ ಗರ್ಭಗೃಹದ ಬಾಗಿಲುವಾಡ, ಕೆಲವು ರಾಷ್ಟ್ರಕೂಟರ ಕಾಲದ್ದೆನ್ನಲಾದ ಸುಂದರ ಕಂಬಗಳು, ಮಹಿಷಾಸುರ ಮರ್ದಿನಿ ಮೂರ್ತಿ ನೋಡಬೇಕಾದದು. ಮೊದಲಿಗೆ ಇದೊಂದು ಶಕ್ತಿ ದೇವತೆಯ ದೇವಾಲಯ ಎಂದು ನಿರ್ಮಾಣವಾಗಿತ್ತು.

ಚಿತ್ತಾಪುರಕ್ಕೆ ಸಮೀಪದಲ್ಲಿ ಚಿತಾಷಾವಲಿ ದರ್ಗಾ ಇದ್ದು ಮಹಮ್ಮದೀಯರಿಗೆ ಪವಿತ್ರ ಸ್ಥಳವಾಗಿದೆ.

ಜೇವರಗಿಯಲ್ಲಿ ಒಂದೆರಡು ಜೈನ ಬಸದಿಗಳಿದ್ದು ಜೈನರಿಗೆ ಪವಿತ್ರ ಎನಿಸಿದೆ, ಇಲ್ಲಿನ ಹೊನಗುಂಟೆ ಎಂಬಲ್ಲಿ ಚಂದ್ರಲಾಂಬಾ (ಚಂದ್ರಲಾ ಪರಮೇಶ್ವರಿ) ದೇವಸ್ಥಾನವಿದ್ದು ಸನ್ನತಿಯ ದೇವಿಯ ಒಂದು ಪಾದವೇ ಇದೆಂದು ತಿಳಿಸಲಾಗಿದೆ. ಕುಳಗೇರಿಯಲ್ಲಿ ಒಂದೆರಡು ಚಾಳುಕ್ಯರ ಕಾಲದ ದೇವಸ್ಥಾನಗಳಿವೆ. ಚಿಂಚೋಳಿಯಲ್ಲಿ ರಾಯಿಪಠಾನ್ ಗಡ ಎಂಬ ದೇವಸ್ಥಾನ ವಿದೆ. ಈ ಊರಿನಲ್ಲಿ ಮುಸಲ್ಮಾನರಿಗೆ ಪವಿತ್ರವಾದ ಒಂದು ದರ್ಗಾ ಸಹ ಇದೆ. ಈ ತಾಲ್ಲೂಕಿನ ದೇಗಲ ಮಡಿ ಎಂಬ ಊರಿನಲ್ಲಿ ಕೆಲವು ಪ್ರಾಚೀನ ಜೈನದೇವಾಲಯಗಳಿವೆ. ಯಾದಗಿರಿಯಲ್ಲಿ ಪ್ರಸಿದ್ಧವಾದ ಮೈಲಾರ ಲಿಂಗ ದೇವಾಲಯವಿದೆ. ಈ ತಾಲ್ಲೂಕಿನ ಸಂಗಮ (ಭೀಮಾ ಮತ್ತು ಕೃಷ್ಣಾ ನದಿಗಳು ಕೂಡುವ ಸ್ಥಳ) ಒಂದು ಪವಿತ್ರ ಕ್ಷೇತ್ರ. ಇಲ್ಲಿನ ಚೆನ್ನವೀರ ಬಸವೇಶ್ವರ ಜಾತ್ರೆ ಪ್ರಸಿದ್ಧ.

ಸುರಪುರದ ಗೋಪಾಲಸ್ವಾಮಿಗುಡಿ, ನಾರಾಯಣಪುರ (ಸುರಪುರ ತಾಲ್ಲೂಕು) ಸಮೀಪದ ಛಾಯಾ ಭಗವತಿ ದೇವಾಲಯ, ಮುದನೂರಿನ

ರಾಮನಾಥ ದೇವಾಲಯ. ಕೊಡಕಲ್ಲಿನ ಚನ್ನಬಸವೇಶ್ವರ ದೇವಾಲಯ, ಕಿಕ್ಕೇರಿಯ ಸೋಮನಾಥ ದೇವಾಲಯ, ತಿಂತಿಣಿಯ ಮೌನೇಶ್ವರ ದೇವಾಲಯ ಅಥವಾ ಮೌನಪ್ಪಯ್ಯ ದರ್ಗಾ ಇವು ಸುರಪುರ ತಾಲ್ಲೂಕಿನ ದೇವಾಲಯಗಳು. ತಿಂತಿಣಿ ಹಿಂದೂ ಮುಸ್ಲಿಮರಿಬ್ಬರೂ ಪವಿತ್ರ ಎನಿಸಿದೆ. ಛಾಯಾ ಭಗವತಿ ದೇವಾಲಯದಲ್ಲಿ ಬೆಳಗಿನ ವೇಳೆ ದೇವಿಯ ಪಾದಗಳ ಮೇಲೆ ಸೂರ್ಯನ ಕಿರಣಗಳು ಬೀಳುವುದು ಒಂದು ವಿಶೇಷ.

## ಬೆಳಗಾವಿ

ಬೆಳಗಾವಿ ಜಿಲ್ಲಾಕೇಂದ್ರ. ಬೆಂಗಳೂರು ಮಿರಜ್ ರೈಲುಮಾರ್ಗದಲ್ಲಿ ಸಿಗುತ್ತದೆ. ಧಾರವಾಡದ ವಾಯುವ್ಯಕ್ಕೆ 77 ಕಿ. ಮಿ ದೂರದಲ್ಲಿದೆ. ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು ಇಲ್ಲಿ ಆಡಳಿತ ನಡೆಸಿದರು. ದೇವಗಿರಿ ಯಾದವರ ನಂತರ ಮಹಮದ್ ಬಿನ್ ತೊಘಲಕ್ ಇಲ್ಲಿ ಆಳ್ವಿಕೆ ನಡೆಸಿದ ಮರಾಠ ಪೇಶವೆಗಳೂ ಇಲ್ಲಿ ಆಳಿದರು. ಕಡೆಗೆ ಬ್ರಿಟಿಷರು ಈ ಜಿಲ್ಲೆಯ ಕಿತ್ತೂರನ್ನು ವಶಪಡಿಸಿಕೊಂಡು ಆಳಿದರು. ಕಿತ್ತೂರನ್ನು ದೇಸಾಯಿ ಮನೆತನದವರು ಆಳುತ್ತಿದ್ದರು.

ಈ ಜಿಲ್ಲೆಯಲ್ಲಿ ಅಥಣಿ, ರಾಯಬಾಗ, ಚಿಕ್ಕೋಡಿ, ಗೋಕಾಕ, ಬೆಳಗಾವಿ ಬೈಲ ಹೊಂಗಲ, ಸವದತ್ತಿ, ಖಾನಾಪುರ ಹಾಗೂ ಹುಕ್ಕೇರಿ, ರಾಮದುರ್ಗ ಎಂದು ಹತ್ತು ತಾಲ್ಲೂಕುಗಳಿವೆ.

ಬೆಳಗಾವಿಗೆ ಹಿಂದೆ ವೇಣು ಗ್ರಾಮ ಎಂಬ ಹೆಸರಿತ್ತು. ಇಲ್ಲಿ ಶನಿ ದೇವರು, ಮಾರುತಿ ದೇವರ ಹಳೆ ದೇವಾಲಯಗಳೂ ಮಿಲಿಟರಿ ಮಹಾ ದೇವ ಎಂಬ ಆಧುನಿಕ ಶೈಲಿಯ ದೇವಾಲಯ, ರಾಜಾರಾಮ ಮಹಾ ರಾಜರ ಮಠ ಇವೆ. ಇಲ್ಲಿನ ಕೋಟೆಯೊಳರುವ ಕಮಲ ಬಸದಿ ಅತ್ಯಂತ ಸುಂದರವಾದ ರಚನೆ. ಬೆಳಗಾವಿಗೆ ಸ್ವಲ್ಪ ದೂರದಲ್ಲಿರುವ ಕಣಬರಗಿ ಹಳ್ಳಿಯಲ್ಲಿ ರಾಮ ತೀರ್ಥವಿದ್ದು ಇಲ್ಲಿನ ಬೆಟ್ಟದ ಬುಡದಲ್ಲಿ ದೇವಾಲಯ

ಗಳಿವೆ. ಸಾಂಬ್ರ ಎಂಬಲ್ಲಿಗೆ ಸಮೀಪದ ಬಾಳೆ ಕುಂದ್ರಿಯಲ್ಲಿ ಪಂತ ಮಹಾ ರಾಜರ ಮಠವಿದೆ.

ಬೈಲ ಹೊಂಗಲದಲ್ಲಿ ವಚನಕಾರ ಚೆನ್ನಬಸವಣ್ಣನವರು ಸ್ಥಾಪಿಸಿದ್ದೆನ್ನಲಾದ ಮರಡಿ ಬಸವೇಶ್ವರ ಗುಡಿ ಇದೆ. ಬಸವೇಶ್ವರ ದೇವಾಲಯವೂ ಒಂದಿದೆ. ಈ ತಾಲ್ಲೂಕಿನ ಬೆಳವಡಿ ಇತಿಹಾಸ ಪ್ರಸಿದ್ಧ. ಇಲ್ಲಿ ವೀರಭದ್ರನ ಗುಡಿ ಇದೆ. ದೇಗಾಂವಿ ಬೈಲ ಹೊಂಗಲಕ್ಕೆ 34 ಕಿ.ಮೀ. ದೂರದಲ್ಲಿರುತ್ತದೆ. ಇಲ್ಲಿನ ಕಲ್ಲಗುಡಿ ಎಂಬ ಬಸ್ತಿ ಒಂದು ಸುಂದರ ವಾಸ್ತು ಕೃತಿ. ಗೋವೆಯ ಕದಂಬರ ಕಾಲದ ಒಂದು ವಾಸ್ತು ರಚನೆ. ಈ ಬಸ್ತಿಗೆ ಸೇರಿದಂತೆ ಮೂರು ಗರ್ಭಗುಡಿಗಳಿವೆ. ಇಲ್ಲಿನ ಹಜಾರದ ಕಂಬಗಳು ಸುಂದರ ವಿನ್ಯಾಸದಿಂದ ಕೂಡಿವೆ. ಭುವನೇಶ್ವರಿಗಳ ಕೆತ್ತನೆಗಳು ಸುಂದರದಾಗಿವೆ. ಉತ್ತರದ ಗರ್ಭಗುಡಿಯಲ್ಲಿ ಮಹಾಕಾಳಿ, ಮಧ್ಯದಲ್ಲಿ ಲಕ್ಷ್ಮಿ ನಾರಾಯಣ ಹಾಗೂ ದಕ್ಷಿಣದ ಗುಡಿಯಲ್ಲಿ ಸರಸ್ವತಿ ವಿಗ್ರಹಗಳಿವೆ. ಕಮಲನಾರಾಯಣ, ಮಹಾಲಕ್ಷ್ಮಿ ಇನ್ನಿತರ ಗುಡಿಗಳು, ಇದೇ ತಾಲ್ಲೂಕಿನ ಹಣ್ಣಿಕೇರಿ ಗ್ರಾಮದಲ್ಲಿ ಜೈನ ಸಂಪ್ರದಾಯದ ಬ್ರಹ್ಮದೇವನ ಗುಡಿಯೂ ವಕ್ಕುಂದದಲ್ಲಿ ಚಾಳುಕ್ಯ ಶೈಲಿಯ ತ್ರಿಕೂಟೇಶ್ವರ ದೇವಾಲಯವೂ ಇವೆ. ಹಿರೇ ನಂದಿಹಳ್ಳಿಯ ಬಸವೇಶ್ವರ ದೇವಾಲಯ, ಮುಗುಟ ಖಾನ ಹುಬ್ಬಳ್ಳಿಯ ನರಸಿಂಹ ದೇವಾಲಯಗಳೂ ಈ ತಾಲ್ಲೂಕಿನ ಇತರ ದೇವಾಲಯಗಳಾಗಿವೆ.

ಚಿಕ್ಕೋಡಿ ತಾಲ್ಲೂಕಿನ ನಿಪ್ಪಾಣಿ ಒಂದು ವ್ಯಾಪಾರ ಕೇಂದ್ರ. ಇಲ್ಲಿಗೆ ಸಮೀಪದ ರಾಸೂಬಾಯಿ ಬೆಟ್ಟದ ಮೇಲೆ ರಾಸೂಬಾಯಿ ದೇವಾಲಯವಿದೆ. ಕರೋಸಿ ಎಂಬಲ್ಲಿ ಘಂಟಿ ಬಸವಣ್ಣ ದೇವಾಲಯವಿದೆ.

ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರದಲ್ಲಿ ಶಂಕರ ಲಿಂಗೇಶ್ವರ ದೇವಾಲಯ ಪ್ರಸಿದ್ಧವಾದುದಾಗಿದೆ. ನಾರಾಯಣಸ್ವಾಮಿ ಗುಡಿ ಇಲ್ಲಿನ ಇನ್ನೊಂದು ದೇವಾಲಯ ಇಲ್ಲಿಗೆ ಹತ್ತು ಕಿ.ಮೀ. ದೂರದ ಅಮ್ಮಣಗಿ ಮಲ್ಲೇಶ್ವರ ದೇವಾಲಯದಿಂದ ಪ್ರಸಿದ್ಧವಾಗಿದೆ. ನಿಡುಸೋಸಿಯದುರು ದುಂಡೀಶ್ವರ ಮಠ,/ಯಮಕನ ಮರಡಿಯ ವೇಣುಗೋಪಾಲ ಸ್ವಾಮಿ ದೇವಸ್ಥಾನ ಹುಕ್ಕೇರಿ ತಾಲ್ಲೂಕಿನಲ್ಲಿ ಕಂಡು ಬರುವ ಇತರ ಪ್ರಮುಖ ದೇವಳಗಳು ಗೋಕಾಕ

ತಾಲ್ಲೂಕಿನ ಅಂಕಲಗಿಯು ಲಕ್ಷ್ಮೀ ಗುಡಿ, ಕೌಜಲಗಿಯ ಹನುಮಂತ ದೇವರ ದೇವಾಲಯ, ಕಾಲಗೋಡದ ಬಲಭೀಮನಗುಡಿ (ಭೀಮನ ಗುಡಿಗಳು ಅಪ ರೂಪ ಕೂಡ), ಕಲ್ಲೋಳಿಯ ಮಾರುತಿ ದೇವಾಲಯ, ಯಾದವಾಡದ ಬಸವಣ್ಣನ ದೇವಾಲಯ, ಗೋಕಾಕದ ವೆಂಕಟೇಶ್ವರ ಹಾಗೂ ಶಂಕರಾ ಚಾರ್ಯರ ಗುಡಿಗಳು ಹೆಸರಿಸಬೇಕಾದವಾಗಿವೆ. ಈ ದೇವಾಲಯಗಳು ವಾಸ್ತುಶಿಲ್ಪ ದೃಷ್ಟಿಯಿಂದ ಮಹತ್ವವಲ್ಲವಾದರೂ ಭಕ್ತರಿಗೆ ನೆಮ್ಮದಿಯನ್ನು ಧಾರ್ಮಿಕ ಭಾವನೆಗಳನ್ನೂ ಮೂಡಿಸುವಲ್ಲಿ ಗಮನಾರ್ಹವಾಗಿದೆ.

ಸವದತ್ತಿ ತಾಲ್ಲೂಕಿನ ಎಲ್ಲಮ್ಮನ ಗುಡ್ಡ ಒಂದು ಯಾತ್ರಾಸ್ಥಳ, ಇಲ್ಲಿ ಪ್ರಖ್ಯಾತ ರೇಣುಕಾಂಬೆಯ ಗುಡಿಯಿದೆ. ಇದು ಎಲ್ಲಮ್ಮನ ಕ್ಷೇತ್ರ ವೆಂದೂ ಪ್ರಸಿದ್ಧ, ಧಾರವಾಡಕ್ಕೆ ಸಲವತ್ತು ಕಿ.ಮೀ. ದೂರದಲ್ಲಿದೆ. ಸವದತ್ತಿಯಿಂದ ಐದು ಕಿ.ಮೀ. ದೂರದ ಎಲ್ಲವ್ವನ ಗುಡ್ಡವನ್ನು ಸೇರುವ ಮೊದಲು ಜೋಗುಳ ಬಾವಿ ಎಂಬಲ್ಲಿ ಸ್ನಾನ ಮಾಡಿ ಅಲ್ಲಿ ಸತ್ಯಮ್ಮನಿಗೆ ಭಕ್ತಾದಿಗಳು ಪೂಜೆ ಸಲ್ಲಿಸುತ್ತಾರೆ. ಎಲ್ಲವ್ವನ ಗುಡ್ಡ ರೇಣುಕಾದೇವಿಯ ಪುಣ್ಯಸ್ಥಳ. ರೇಣುಕೆ ಜಮದಗ್ನಿ ಮಹರ್ಷಿಗಳ ಪತ್ನಿ, ಪರಶುರಾಮನ ತಾಯಿ. ಜಮದಗ್ನಿ ತಪಸ್ಸು ಮಾಡಿದ ತಾಣ ಈ ಗುಡ್ಡ ಎನ್ನುತ್ತಾರೆ. ಇಲ್ಲಿನ ಎಲ್ಲಮ್ಮನ ದೇವಾಲಯ ಎರಡು ಸಾವಿರ ವರುಷಕ್ಕಿಂತಲೂ ಹಿಂದಿನ ದೆಂದು ಪ್ರತೀತಿ ಇದೆ. ಇಲ್ಲಿನ ಇತರ ಗುಡಿಗಳು ಪರಶುರಾಮ ಮಂದಿರ, ಮಾತಂಗಿ ಹಾಗೂ ಭೈರವೇಶ್ವರ ದೇವಾಲಯ. ಸುತ್ತಲ ಬೆಟ್ಟದ ಮೇಲೊಂದು ಕಡೆ ಜಮದಗ್ನಿಯ ಸಣ್ಣ ಗುಡಿ ಇದೆ. ಇಲ್ಲಿ ಕಾಣಬರುವ ಎಣ್ಣೆ ಹೊಂಡ ದಲ್ಲಿ ಸ್ನಾನ ಮಾಡಿದ ಬಳಿಕವೇ ದೇವಿಯ ದರ್ಶನ, ಈ ಸ್ನಾನದಿಂದ ಚರ್ಮ ರೋಗಗಳು ನಾಶವಾಗುತ್ತವೆ ಎಂದು ನಂಬಿಕೆ ಇದೆ.

ಸವದತ್ತಿ ತಾಲ್ಲೂಕಿನ ಮುರಗೋಡಿನ ಮಲ್ಲಿಕಾರ್ಜುನ ದೇವಾಲಯ, ಮನೋಳಿ (ಮುನವಳ್ಳಿ)ಯ ಪಂಚಲಿಂಗ ಮಂದಿರ, ಹನುಮಂತ ಗುಡಿಗಳು, ನವಿಲು ತೀರ್ಥ (ಅಣೆಕಟ್ಟು ಪ್ರದೇಶ–ಮಲಪ್ರಭಾ)ದಲ್ಲಿ ಚಿದಂಬರೇಶ್ವರ (ಇದು ಗುರ್ಲ ಹೊಸೂರಿನಲ್ಲಿದ್ದು ದೇಗುಲ ಮುಳುಗಡೆಯಾದುದರಿಂದ ಪುನ ರ್ನಿರ್ಮಾಣವಾಯಿತು) ಗುಡಿ, ಹೂಲಿಯಲ್ಲಿನ ಪಂಚಲಿಂಗದೇವರ ಮಂದಿರ

ಮತ್ತಿತರ ಒಂದೆರಡು ಗುಡಿಗಳು, ಶಿರಸಂಗಿ ಕಾಳಮ್ಮನ ಗುಡಿ, ಸುಂದರ ಜಲಪಾತವಿರುವ ಸೊಗಲದಲ್ಲಿನ ಸೋಮೇಶ್ವರ ದೇವಾಲಯ ತಾಲ್ಲೂಕಿನ ಇನ್ನಿತರ ದೇವಾಲಯಗಳು. ಸವದತ್ತಿಯಲ್ಲಿ ಮಲ್ಲಿಕಾರ್ಜುನ, ಶಂಕರಲಿಂಗ ದೇವ ಹಾಗೂ ಪುರಂದರೇಶ್ವರ ದೇವಾಲಯಗಳಿವೆ.

ಖಾನಾಪುರ ತಾಲ್ಲೂಕಿನ ಹಲಶಿ ಇತಿಹಾಸ ಪ್ರಸಿದ್ಧ. ಹಿಂದೆ ಇದು ಹಲಶಿಗೆ. ಬನವಾಸಿ ಕದಂಬರ ಕಾಲದಲ್ಲಿ ಅವರ ಎರಡನೆಯ ರಾಜಧಾನಿಯಾಗಿದ್ದಿತು. ಖಾನಾಪುರಕ್ಕೆ 14 ಕಿ.ಮೀ. ದೂರದಲ್ಲಿದೆ. ಇಲ್ಲಿ ವರಾಹ ನರಸಿಂಹ, ಲಕ್ಷ್ಮೀನಾರಾಯಣ, ಕಲ್ಲೇಶ್ವರ, ಹಾಟಕೇಶ್ವರ, ರಾಮಲಿಂಗೇಶ್ವರ, ಸೂರ್ಯ, ಸುವರ್ಣೇಶ್ವರ ಮೊದಲಾದ ದೇವಾಲಯಗಳಿವೆ. ವರಾಹ ನರಸಿಂಹ ಒಂದು ಅಪರೂಪದ ದೇವಾಲಯ. ಹೀಗೆ ವರಾಹ ಸ್ವಾಮಿ ಹಾಗೂ ನರಸಿಂಹರ (ಹಿರಣ್ಯಾಕ್ಷ ಹಿರಣ್ಯಕಶಿಪು ಎಂಬ ರಾಕ್ಷಸರನ್ನು ವಧಿಸಲು ಎತ್ತಿದ ವಿಷ್ಣುವಿನ ಅವತಾರಗಳು) ಜೋಡಿ ದೇವಾಲಯಗಳು ಬೇರೆಲ್ಲಿಯೂ ಕಾಣುವುದಿಲ್ಲ. ಇದೊಂದು ದ್ವಿಕೂಟ ದೇವಾಲಯ. ಆದರೆ ಒಂದೇ ಗರ್ಭ. ಗೃಹದಲ್ಲಿ ನರಸಿಂಹ ಮತ್ತು ಭೂವರಾಹ ಸ್ವಾಮಿ ವಿಗ್ರಹಗಳನ್ನಿರಿಸಲಾಗಿದೆ. ಇನ್ನೊಂದು ಗರ್ಭಗೃಹದಲ್ಲಿ ಯೋಗಿ ನಾರಾಯಣರ ವಿಗ್ರಹವಿದೆ. ಭೂವರಾಹಸ್ವಾಮಿವಿಗ್ರಹ ಹಲಶಿಯನ್ನು ಪ್ರಮುಖ ಸ್ಥಳವಾಗಿರಿಸಿಕೊಂಡಿದ್ದ ಗೋಪಿಯ ಕದಂಬರ ಕೊಡುಗೆಯಾಗಿದೆ. ದ್ವಿಕೂಟ ದೇವಾಲಯದ ಶಿಖರಗಳು ನಾಗರ ಶೈಲಿಯದಾಗಿವೆ. ಇಲ್ಲಿ ಇನ್ನಿತರ ಶಿಲ್ಪಗಳನ್ನೂ ಕಾಣಬಹುದು. ಖಾನಾಪುರ ತಾಲ್ಲೂಕಿನ ಕಣಕುಂಬಿಯಲ್ಲಿ ಕಣಕುಂಬೇಶ್ವರ ಹಾಗೂ ವಹಾಹುಲಿ ದೇವಿಯ ದೇವಾಲಯಗಳಿವೆ. ಇದೇ ತಾಲ್ಲೂಕಿನ ಡೋಂಗರಗಾವ ಬೆಟ್ಟದ ಮೇಲೆ ಮತ್ಸ್ಯೇಂದ್ರನಾಥ ಗುಡಿ ಇದ್ದು ಪ್ರೇಕ್ಷಣೀಯ ಎನಿಸಿದೆ. ರಾಯಬಾಗ ತಾಲ್ಲೂಕಿನ ಚಿಂಚಲಿ ಗ್ರಾಮದ ಮಹಾಯಮ್ಮ ಮಂದಿರ ಸುತ್ತಮುತ್ತಲಿನ ಗ್ರಾಮದ ಜನರ ಧಾರ್ಮಿಕ ಕೇಂದ್ರದಂತಿದೆ.

ಅಥಣಿ ತಾಲ್ಲೂಕಿನ ರಾಮತೀರ್ಥ ಕ್ಷೇತ್ರವಾಗಿದೆ. ಈ ಊರಿಗೆ ಹತ್ತಿರದ ಆನಂದ ಪರ್ವತ ಎಂಬ ಬೆಟ್ಟದ ಮೇಲಿನ ಗುಹೆಯಲ್ಲಿ ಆನಂದ ನಾಯಕಿ ಎಂಬ ದೇವತಾ ವಿಗ್ರಹವೂ ಸನಿಹದಲ್ಲಿ ರಾಮೇಶ್ವರ ದೇವಾಲಯವೂ

ಇದೆ. ಈ ದೇವಾಲಯದ ಪ್ರಾಕಾರದಲ್ಲಿ ನರಸಿಂಹ, ಆಂಜನೇಯ, ಬ್ರಹ್ಮದೇವ, ಅಮೃತೇಶ್ವರ ಗುಡಿಗಳಿವೆ. ದೇವಾಲಯದ ಮುಖ್ಯದ್ವಾರದ ಮೇಲೆ ಸುಂದರವಾದ ನಟರಾಜನ ವಿಗ್ರಹವಿದೆ. ಈ ದೇವಳ ಪುರಾಣ ಪ್ರಸಿದ್ಧವಾಗಿದೆ. ಕಹೋಳ ಎಂಬ ಗ್ರಾಮದಲ್ಲಿ ಕಹೋಳನೆಂಬ ಋಷಿ ವಾಸಿಸುತ್ತಿದ್ದು ಶ್ರೀ ರಾಮ ತನ್ನ ವನವಾಸ ಕಾಲದಲ್ಲಿ ಇಲ್ಲಿಗೆ ಬಂದು ಮುನಿಗಳ ದರ್ಶನ ಮಾಡಿ ಓಂಕಾರೇಶ್ವರನನ್ನು ಪೂಜಿಸಿದನೆಂದು ಹರನಿಂದ ಪಾಶುಪತಾಸ್ತ್ರ ಪಡೆದು ಹಾಗೂ ಅಂದಿನಿಂದ (ರಾಮತೀರ್ಥ ಪ್ರದೇಶ) ಈ ಸ್ಥಳಕ್ಕೆ ರಾಮೇಶ್ವರ ಎಂಬ ಹೆಸರಿಟ್ಟನೆಂದೂ ಹೇಳುತ್ತಾರೆ. ಕಹೋಳ ಗ್ರಾಮವು ಅಥಣಿಗೆ 30 ಕಿ.ಮೀ. ದೂರದಲ್ಲಿದೆ. ಇಂದು ಅದು ಕೋಹಳ್ಳಿ ಎಂದು ಹೆಸರಾಗಿದೆ.

ಅಥಣಿಯಲ್ಲಿ ಸಿದ್ಧೇಶ್ವರ ಹಾಗೂ ಅಮೃತೇಶ್ವರ ದೇವಾಲಯಗಳೂ ಮುರುಘೇಂದ್ರ ಸ್ವಾಮಿಗಳ ಮಠವೂ ಇವೆ. ಈ ತಾಲ್ಲೂಕಿನ ಕಾಗವಾಡ ಗ್ರಾಮದಲ್ಲಿ ಬ್ರಹ್ಮನಾಥ ಹಾಗೂ ಸತವಾಯಿ ಗುಡಿಗಳಿವೆ. ಬ್ರಹ್ಮನಾಥನಿಗೆ ಕಗ್ಗದ ರಾಮನೆಂದೂ ಹೆಸರಿದೆ. ಶೇಡ ಬಾಳ ಅಥಣಿಗೆ 32 ಕಿ.ಮೀ. ದೂರದಲ್ಲಿದ್ದು ಇಲ್ಲಿ ಪ್ರಾಚೀನ ಕಾಲದ ಬಸವಣ್ಣನ ಗುಡಿ ಇದ್ದು ಗುಡಿಯಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇನ್ನಿತರ ಮೂರು ಮೂರ್ತಿಗಳೂ ಇವೆ. ಐನಾಪುರದ ಪೀರ್‌ಕಾಜಿಯವರ ಸಮಾಧಿ ಮಹಮ್ಮದೀಯರಿಗೆ ಪವಿತ್ರವಾಗಿದೆ. ಕೊಕಟ ನೂರು ಎಲ್ಲಮ್ಮನ ಗುಡಿ ಪ್ರಸಿದ್ಧವಾಗಿದ್ದು ವರ್ಷಂಪ್ರತಿ ಎಲ್ಲಮ್ಮನ ಜಾತ್ರೆ ನಡೆಯುತ್ತದೆ. ಕೃಷ್ಣಾನದಿಯ ಬಲದಂಡೆಯ ಮೇಲಿನ ಸಪ್ತಸಾಗರ ತೀರ್ಥಕ್ಷೇತ್ರ ಪುನೀತ ಮಾಡುವ ಕ್ಷೇತ್ರ ಎನಿಸಿದೆ. ಪಣ್ಣಾಳ ಬೆಟ್ಟ ಎಂದು ಹೆಸರಾಗಿರುವ ಗಿರಿ ಬೆಳವಂಕಿ ಗ್ರಾಮದಲ್ಲಿದ್ದು ಬೆಟ್ಟದ ಮೇಲೆ ಸಿದ್ಧೇಶ್ವರ ಗುಹೆ ಇದೆ. ಅಥಣಿ ತಾಲ್ಲೂಕಿನ ಇಂಗಳ ಗಾವಿ ಅಲ್ಲಿ ಜನಿಸಿದ ಪ್ರಸಿದ್ಧ ಸಂತರೂ ಅಥಣಿಯ ಶಿವಯೋಗಿಗಳೆಂದು ಹೆಸರಾದ ಗುರುಲಿಂಗಯ್ಯನವರಿಂದಾಗಿ ಹೆಸರಾಗಿದೆ.

## ನಾರದಗಡ್ಡೆ ಕ್ಷೇತ್ರ

ನಾರದಗಡ್ಡೆ ಕೃಷ್ಣಾನದಿಯ ನಡುವಿನ ಒಂದು ದ್ವೀಪ. ರಾಯ

ಚೂರು ತಾಲ್ಲೂಕಿನಲ್ಲಿದೆ. ಇಲ್ಲಿ ನಾರದರು ತಪಸ್ಸನ್ನಾಚರಿಸಿದರೆಂದು ಪ್ರತೀತಿ ಇದೆ. ಹಾಗೆಯೇ ಇಲ್ಲಿ ನಾರದ ದೇವಾಲಯವಿದೆ. ಬ್ರಹ್ಮನಿಗೆ ದೇವಾಲಯ ಇರುವುದು ಅಪರೂಪವಿದ್ದಂತೆ ಇದೊಂದು ಅಪರೂಪದ ಗುಡಿ. ಇಲ್ಲಿ ಬಸವಣ್ಣನ ಗುಡಿ, ದತ್ತಾತ್ರೇಯ ಹಾಗೂ ಶಿವ ಯೋಗ ಪೀಠ, ಶ್ರೀ ಪಾದವಲ್ಲಭ ಸ್ವಾಮಿಗಳ ಸಮಾಧಿ ಇವೆ. ನಾರದ ಗಡ್ಡೆಯಂತೆ ರಾಮ ಗಡ್ಡೆ ಇನ್ನೊಂದು ದ್ವೀಪ. ಇಲ್ಲಿ ಶ್ರೀರಾಮ ಲಿಂಗವನ್ನು ಪ್ರತಿಷ್ಠಾಪಿಸಿ ಶಿವನನ್ನು ಪೂಜಿಸಿದನೆಂದು ಹೇಳುತ್ತಾರೆ.

ರಾಯಚೂರಿನಲ್ಲಿ ರಾಮಲಿಂಗೇಶ್ವರ, ನಗರೇಶ್ವರ ಹಾಗೂ ಮಾಣಿಕ ಪ್ರಭುಗಳ ದೇವಾಲಯ ಇವು ನೋಡಬೇಕಾದವು. ಇಲ್ಲಿಗೆ 30 ಕಿ.ಮೀ. ದೂರದಲ್ಲಿ ಗಾಣಧಾಳ ಗ್ರಾಮವಿದ್ದು ಅಲ್ಲಿಯ ಗುಡ್ಡದ ಮೇಲೆ ಪಂಚ ಮುಖಿ ಹನುಮಂತನ ದೇವಾಲಯವಿದೆ. ಮಟ್ಮರಿ ಗ್ರಾಮದಲ್ಲಿ ವೀರಭದ್ರ ದೇವಾಲಯ ಪ್ರಸಿದ್ಧವಾದುದಾಗಿದೆ.

ರಾಯಚೂರು ಜಿಲ್ಲೆ ಇತಿಹಾಸ ಹಾಗೂ ಪುರಾಣ ಪ್ರಸಿದ್ಧಿಯಾದ ಜಿಲ್ಲೆಯಾಗಿದೆ. ಮೌರ್ಯರು, ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ಸಾತವಾಹನರು, ಕಲ್ಯಾಣದ ಚಾಳುಕ್ಯರು, ಕಳಚುರಿಗಳು, ಸೇವುಣರು ಮೊದಲಾದವರು ಈ ಜಿಲ್ಲೆಯನ್ನಾಳಿರುತ್ತಾರೆ. ಕೃಷ್ಣಾ ಮತ್ತು ತುಂಗ ಭದ್ರಾ ಇವು ಈ ಜಿಲೆಯ ಮುಖ್ಯ ನದಿಗಳು. ರಾಯಚೂರು, ಮಾನ್ವಿ, ಸಿಂಧನೂರು, ಗಂಗಾವತಿ, ಕುಷ್ಟಗಿ, ಯಲಬುರ್ಗ, ಕೊಪ್ಪಳ, ಲಿಂಗಸುಗೂರು ದೇವದುರ್ಗ ಈ ಜಿಲ್ಲೆಯ ತಾಲ್ಲೂಕುಗಳು. ಈ ಜಿಲ್ಲೆಯ ದೇವಾಲಯಗಳ ಸಮೀಕ್ಷೆ ಮಾಡೋಣ.

ಯಲಬುರ್ಗ ತಾಲ್ಲೂಕಿನ ಇಟಗಿಯ ಮಹಾದೇವ ದೇವಾಲಯ ಒಂದು ಸುಂದರ ವಾಸ್ತು ಕೃತಿ. ಇದು ಚಾಳುಕ್ಯ (ಕಲ್ಯಾಣ) ಶೈಲಿಯದಾಗಿದ್ದು ಕ್ರಿ.ಶ. 12ನೇ ಶತಮಾನದಲ್ಲಿ ಆರನೆಯ ವಿಕ್ರಮಾದಿತ್ಯನ ದಂಡನಾಯಕ ಮಹಾದೇವನಿಂದ ಕಟ್ಟಿಸಲ್ಪಟ್ಟುದಾಗಿದೆ. ಇವನೇ ಕಟ್ಟಿಸಿದ ಇನ್ನೊಂದು ದೇವಾಲಯ ನಾರಾಯಣ ಗುಡಿ. ಮಹಾದೇವ ದೇವಾಲಯವನ್ನು ದೇವಾಲಯಗಳ ರಾಜ ಎಂದು ಕರೆದಿದ್ದೂ ಉಂಟು. ಇದೊಂದು ಕರ್ನಾಟಕದ

ಅತ್ಯಂತ ಸುಂದರವಾದ ದೇವಾಲಯ. ಗರ್ಭಗುಡಿಯಲ್ಲಿ ಮಹಾದೇದೇಶ್ವರ ಲಿಂಗವಿದೆ. ನವರಂಗ ಮಂಟಪಕ್ಕೆ ನಾಲ್ಕು ಕಡೆ ದ್ವಾರಗಳಿವೆ. ಇಲ್ಲಿಯ ಭುವನೇಶ್ವರಿಗಳ ಮೇಲಿನ ಕೆತ್ತನೆಗಳು ಸಾಲಂಕೃತವಾಗಿವೆ. ಇಲ್ಲಿ ಹಲವಾರು ಉತ್ತಮ ಶಿಲ್ಪಗಳನ್ನು ನೋಡಬಹುದಾಗಿದೆ.

ಯಲಬುರ್ಗ ತಾಲ್ಲೂಕಿನ ಕುಕ್ಕನೂರು ಹಲವು ಪ್ರಾಚೀನ ದೇವಾಲಯಗಳಿರುವ ಊರಾಗಿದೆ. ಮಹಾಮಾಯಾ ದೇವಾಲಯ ಪ್ರಸಿದ್ಧವಾದುದು. ಇಲ್ಲಿನ ಆವರಣದಲ್ಲಿರುವ ನವಲಿಂಗಗುಡಿ ನೋಡಬೇಕಾದುದು. ಕಲ್ಲೇಶ್ವರ ದೇವಾಲಯದೊಳಗೆ ಶಿವ ಮತ್ತು ಬ್ರಹ್ಮನ ಶಿಲ್ಪಗಳಿವೆ.

ಸಿಂಧನೂರು ತಾಲ್ಲೂಕಿನ ಮುಕ್ಕುಂದ ಗ್ರಾಮದ ಮುರಾರಿ ದೇವಾಲಯ, ಸೋಮಲಾಪುರ ಬೆಟ್ಟದ ತಪ್ಪಲಿನಲ್ಲಿರುವ ಅಂಬಾದೇವಿ ದೇವಾಲಯಗಳು, ಲಿಂಗಸುಗೂರಿನ ಕಪ್ಪೇಯನ ದೇವಾಲಯ, ದೇವರ ಭೂಪುರದ ಅಮರೇಶ್ವರ ದೇವಾಲಯ, ಕೊಪ್ಪರದ ನರಸಿಂಹಸ್ವಾಮಿ ದೇವಾಲಯ ( ದೇವದುರ್ಗ ತಾಲ್ಲೂಕು ), ಕವಿತಾಳದ ತ್ರ್ಯಂಬಕೇಶ್ವರ ದೇವಸ್ಥಾನ (ಮಾನ್ವಿ ತಾಲ್ಲೂಕು), ಗಬ್ಬೂರಿನ (ದೇವದುರ್ಗ ತಾಲ್ಲೂಕು) ಬಂಗಾರ ಬಸಪ್ಪನಗುಡಿ, ಗಂಗಾವತಿಯ ನಗರೇಶ್ವರ, ವೆಂಕಟೇಶ್ವರ ದೇವಾಲಯಗಳೂ, ಆನೆಗೊಂದಿಯ ಶೇಷಶಾಯಿ ದೇವಾಲಯ ಹಾಗೂ ಮಾಧ್ವ ಗುರುಗಳ ನವವೃಂದಾವನಗಳು, ಹಾಗೂ ಕನಕಗಿರಿ ( ಗಂಗಾವತಿ ತಾಲ್ಲೂಕು ) ಯ ಕನಕಾಚಲಸ್ವಾಮಿ ದೇವಾಲಯಗಳು ರಾಯಚೂರು ಜಿಲ್ಲೆಯ ಇನ್ನಿತರ ದೇವಾಲಯಗಳಾಗಿವೆ.

ಕನಕಾಚಲಸ್ವಾಮಿ ದೇವಸ್ಥಾನದಲ್ಲಿ ಹರಿಜನರಿಗಾಗಿಯೇ ದೇವರು ನೆಲಸಿದನೆಂದು ಹೇಳುವರು. ಹಿಂದೆ ಇಲ್ಲಿ ಜಾತ್ರೆಯ ದಿನಗಳಲ್ಲಿ ಹರಿಜನರನ್ನು ದೇವರ ದರ್ಶನಕ್ಕೆ ಬಿಡುವ ರೂಢಿ ಇತ್ತು. ಕಲ್ಲೂರಿನಲ್ಲಿ (ಮಾನ್ವಿ) ಮಾರ್ಕಂಡೇಶ್ವರ, ಮಾರುತೀಶ್ವರ ದೇವಾಲಯಗಳಿವೆ.

# ಗದಗಿನ ವೀರನಾರಾಯಣ ದೇವಸ್ಥಾನ

ಗದಗ ಧಾರವಾಡ ಜಿಲ್ಲೆಯ ಒಂದು ತಾಲ್ಲೂಕು. ಧಾರವಾಡ ಜಿಲ್ಲೆ ಪುರಾಣೇತಿಹಾಸ ಕಾಲದಿಂದಲೂ ಪ್ರಸಿದ್ಧವಾಗಿದೆ. ಈ ಜಿಲ್ಲೆಯನ್ನು ಮೌರ್ಯರು, ಸಾತವಾಹನರು, ಬನವಾಸಿ ಕದಂಬರು. ಬಾದಾಮಿಯ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಕಳುಚುರಿಗಳು. ವಿಜಯನಗರದರಸರು ಆಳಿದರು. ಹೈದರಾಲಿ ಟಿಪ್ಪು ಸುಲ್ತಾನರು ಧಾರವಾಡ ಪ್ರಾಂತ್ಯದ ಮೇಲೆ ದಾಳಿ ನಡೆಸಿದ್ದರು. ಈ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ನವಾಬರು, ದೇಸಾಯರು ಆಳ್ವಿಕೆ ನಡೆಸಿದುದುಂಟು. ಧಾರವಾಡ, ಹುಬ್ಬಳ್ಳಿ, ಹಿರೇಕೆರೂರು, ಗದಗ, ಹಾನಗಲ್ಲ, ಹಾವೇರಿ, ಕಲಘಟಗಿ, ರೋಣ, ರಾಣೆಬೆನ್ನೂರು, ಶಿರಹಟ್ಟಿ, ಮುಂಡರಗಿ, ಬ್ಯಾಡಗಿ, ನರಗುಂದ, ನವಲುಗುಂದ, ಕುಂದಗೋಳ, ಶಿಗ್ಗಾಂವಿ ಮತ್ತು ಸವಣೂರು ಇವು ಈ ಜಿಲ್ಲೆಯ ಹದಿನೇಳು ತಾಲ್ಲೂಕುಗಳು. ಈ ಜಿಲ್ಲೆಯನ್ನು ಗುಡ್ಡಗಾಡು ಹಾಗೂ ಪೂರ್ವದ ಬಯಲು ಪ್ರದೇಶಗಳೆಂದು ವಿಂಗಡಿಸಬಹುದು.

ಗದಗಿನಲ್ಲಿ ಕಲ್ಯಾಣ ಚಾಳುಕ್ಯ ಶೈಲಿಯ ಮೂರು ದೇವಾಲಯಗಳಿವೆ. ತ್ರಿಕೂಟೇಶ್ವರ ದೇವಾಲಯ ಮುಖ್ಯವಾದುದು. ಗರ್ಭಗುಡಿಯಲ್ಲಿ ಪಾಣಿ ಪೀಠಸ್ಥ ಮೂರು ಲಿಂಗಗಳಿವೆ. ಈ ಗುಡಿಯ ಕಂಬಗಳು ಸುಂದರವಾಗಿವೆ. ಇಲ್ಲಿ ಹಲವು ಅಲಂಕರಣ ಶಿಲ್ಪಗಳನ್ನು ಕಾಣಬಹುದು. ಈ ಗುಡಿಯ ಆವರಣದಲ್ಲಿ ಸರಸ್ವತೀ ಗುಡಿ ಇದ್ದು ಒಳಗೆ ಕುಳಿತ ಭಂಗಿಯ ಸರಸ್ವತೀ ವಿಗ್ರಹ ಸಂದರವಾಗಿದೆ. ಸೋಮೇಶ್ವರ ದೇವಾಲಯ, ವೀರನಾರಾಯಣ ಸ್ವಾಮಿ ದೇವಾಲಯ ಗದಗಿನ ಇನ್ನೆರಡು ಗುಡಿಗಳು. ಸೋಮೇಶ್ವರ ಚಾಳುಕ್ಯ ಶೈಲಿಯ ಗುಡಿ.

ಕನ್ನಡದಲ್ಲಿ ಮಹಾಭಾರತ ಕಾವ್ಯರಚಿಸಿದ ಕುಮಾರ ವ್ಯಾಸನ ಆರಾಧ್ಯ ದೈವ ವೀರನಾರಾಯಣಸ್ವಾಮಿ, ಗದಗಿನ ವೀರನಾರಾಯಣ ದೇವಾಲಯವನ್ನು ಕ್ರಿ.ಶ. 1117ರಲ್ಲಿ ಹೊಯ್ಸಳ ವಿಷ್ಣುವರ್ಧನ ಕಟ್ಟಿಸಿದನೆನ್ನಲಾಗಿದೆ. ಪುರಾಣದ ಪ್ರಕಾರ ಬದರಿಯಿಂದ ನಾರಾಯಣ ಇಲ್ಲಿ ಬಂದು ನೆಲಸಿದ

ಕಮಾನುಗಳು ಸುಂದರ. ಪ್ರತಿವರ್ಷ ಜಿಕ್ರೈದಾ ತಿಂಗಳಿನಲ್ಲಿ ಮೂರುದಿನಗಳ ಕಾಲ ಉರುಸು ನಡೆಯುತ್ತದೆ.

ಕಲಬುರಗಿಯ ಕೆರೆಗೆ ಸ್ವಲ್ಪ ದೂರದಲ್ಲಿ ಶ್ರೀ ಶರಣ ಬಸವೇಶ್ವರರ ದೇವಾಲಯವಿದೆ. ಇದೂ ಒಂದು ಧಾರ್ಮಿಕ ಕೇಂದ್ರ. ಪ್ರಸಿದ್ಧ ವೀರ ಶೈವ ಸಂತರಾದ ಶರಣ ಬಸವೇಶ್ವರರ ಗೌರವಾರ್ಥ ಪ್ರತಿವರ್ಷ ಚೈತ್ರ ಬಹುಳ ಪಂಚಮಿಯಿಂದ ಹತ್ತು ದಿನಗಳ ಕಾಲ ಜಾತ್ರೆ ನಡೆಯುತ್ತದೆ. ದೇವಾಲಯದ ವಾಸ್ತು ಸುಂದರವಾಗಿದೆ.

ಗುಲ್ಬರ್ಗಾ ಜಿಲ್ಲೆಯಲ್ಲಿ ಗುಲ್ಬರ್ಗಾ, ಅಫಜಲಪುರ, ಸುರಪುರ, ಜೇವರಗಿ, ಅಳಂದ, ಚಿಂಚೋಳಿ, ಯಾದಗಿರಿ, ಚಿತ್ತಾಪುರ ಎಂಬ ಎಂಟು ತಾಲ್ಲೂಕುಗಳಿವೆ.

ಅಳಂದ ದಿಂದ 18 ಕಿ. ಮೀ. ದೂರದಲ್ಲಿರುವ ನರೋಣ ತೀರ್ಥಕ್ಷೇತ್ರ. ಇಲ್ಲಿ ಕಾರ್ತಿಕೇಯ ದೇವಾಲಯವೂ ಹೊನ್ನವಳ್ಳಿ ಎಲ್ಲಮ್ಮ ದೇವಾಲಯವೂ ಇವೆ. ಅಳಂದ ತಾಲ್ಲೂಕಿನ ಕುಣಿಸಂಗವಿಯ ಬಸವೇಶ್ವರ ದೇವಾಲಯ, ಖಜೂರಿಯ ವೆಂಕಟೇಶ್ವರ, ಮಟಕಿಯ ಜಾಲಂಧರನಾಥ, ರುದ್ರವಾಡಿಯ ಶಿವ ದೇವಾಲಯ ಹೆಸರಿಸಬೇಕಾದ ದೇವಾಲಯಗಳು. ಇದೇ ತಾಲ್ಲೂಕಿನ ಪಡಸಾವಳಿ ಗ್ರಾಮದಲ್ಲಿ ಕೆಲವು ದೇವಾಲಯಗಳಿದ್ದು ಭೂಮಟ್ಟದ ಕೆಳಗಿರುವ ಒಂದು ದೇವಾಲಯದಲ್ಲಿ ಚೆನ್ನಕೇಶವನ ಸುಂದರ ವಿಗ್ರಹವಿದೆ. ಅಳಂದ ದಲ್ಲಿರುವ ಲಾಡ್ಲೆ ಮುಷಾಯಿಕ್ ದರ್ಗಾ ಸುಮಾರು ಹದಿನೈದನೆಯ ಶತಮಾನದ ರಚನೆಯಾಗಿದೆ.

## ಗಾಣಗಾಪುರ

ಇದೊಂದು ಪವಿತ್ರ ಯಾತ್ರಾಸ್ಥಳ. ಭೀಮಾ ಮತ್ತು ಅಮರಜ ನದಿಗಳು ಕೂಡುವಲ್ಲಿ ಇದೆ. ಇದು ಹಿಂದೆ ಗಂಧರ್ವಪುರ ಎನಿಸಿತ್ತು. ಇಲ್ಲಿ ಸಂಗಮೇಶ್ವರ ದೇವಾಲಯ, ಹಲವು ತೀರ್ಥಗಳು, ನರಸಿಂಹ ಸರಸ್ವತಿ ಎಂಬ

ಯತಿಗಳ ಮಠ ಇವೆ. ದತ್ತ ಜಯಂತಿಯಂದು ಇಲ್ಲಿಗೆ ಅಪಾರ ಸಂಖ್ಯೆಯಲ್ಲಿ ಬರುತ್ತಾರೆ. ಅಫಜಲಪುರ ತಾಲ್ಲೂಕಿನಲ್ಲಿ ಈ ಗ್ರಾಮವಿದೆ. ಇದೇ ತಾಲ್ಲೂಕಿನ ಘಟ್ಟರ್ಗದಲ್ಲಿ ಭಗವತಿ ದೇವಾಲಯ ಅತ್ನೂರಿನಲ್ಲಿ ಬಸವೇಶ್ವರ ದೇವಾಲಯ ಹವಲ್ಗದಲ್ಲಿ ಸಿದ್ಧರಾಮೇಶ್ವರ ದೇವಾಲಯಗಳೂ ಇವೆ.

ಚಿತ್ತಾಪುರ ತಾಲ್ಲೂಕಿನ ಸನ್ನತಿ ಬೌದ್ಧ ನಿವೇಶನವುಳ್ಳ ಸ್ಥಳ. ಇಲ್ಲಿನ ಸ್ತೂಪಗಳ ನಿವೇಶನದ ಬಳಿ ಚಂದ್ರಲಾಂಬಾ ದೇವಾಲಯವಿದೆ. ಇಲ್ಲಿ ಹಲವು ಕೆತ್ತನೆಗಳನ್ನು ನೋಡಬಹುದು. ಇದರ ಗರ್ಭಗೃಹದ ಬಾಗಿಲುವಾಡ, ಕೆಲವು ರಾಷ್ಟ್ರಕೂಟರ ಕಾಲದ್ದೆನ್ನಲಾದ ಸುಂದರ ಕಂಬಗಳು, ಮಹಿಷಾಸುರ ಮರ್ದಿನಿ ಮೂರ್ತಿ ನೋಡಬೇಕಾದದು. ಮೊದಲಿಗೆ ಇದೊಂದು ಶಕ್ತಿ ದೇವತೆಯ ದೇವಾಲಯ ಎಂದು ನಿರ್ಧಾರವಾಗಿತ್ತು.

ಚಿತ್ತಾಪುರಕ್ಕೆ ಸಮೀಪದಲ್ಲಿ ಚಿತಾಷಾವಲಿ ದರ್ಗಾ ಇದ್ದು ಮಹಮ್ಮದೀಯರಿಗೆ ಪವಿತ್ರ ಸ್ಥಳವಾಗಿದೆ.

ಜೇವರಗಿಯಲ್ಲಿ ಒಂದೆರಡು ಜೈನ ಬಸದಿಗಳಿದ್ದು ಜೈನರಿಗೆ ಪವಿತ್ರ ಎನಿಸಿದೆ, ಇಲ್ಲಿನ ಹೊನಗುಂಟೆ ಎಂಬಲ್ಲಿ ಚಂದ್ರಲಾಂಬಾ (ಚಂದ್ರಲಾ ಪರಮೇಶ್ವರಿ) ದೇವಸ್ಥಾನವಿದ್ದು ಸನ್ನತಿಯ ದೇವಿಯ ಒಂದು ಪಾದವೇ ಇದೆಂದು ತಿಳಿಸಲಾಗಿದೆ. ಕುಳಗೇರಿಯಲ್ಲಿ ಒಂದೆರಡು ಚಾಳುಕ್ಯರ ಕಾಲದ ದೇವಸ್ಥಾನಗಳಿವೆ. ಚಿಂಚೋಳಿಯಲ್ಲಿ ರಾಯಿವಹಾನ್ ಗಡ ಎಂಬ ದೇವಸ್ಥಾನ ವಿದೆ. ಈ ಊರಿನಲ್ಲಿ ಮುಸಲ್ಮಾನರಿಗೆ ಪವಿತ್ರವಾದ ಒಂದು ದರ್ಗಾ ಸಹ ಇದೆ. ಈ ತಾಲ್ಲೂಕಿನ ದೇಗಲ ಮಡಿ ಎಂಬ ಊರಿನಲ್ಲಿ ಕೆಲವು ಪ್ರಾಚೀನ ಜೈನದೇವಾಲಯಗಳಿವೆ. ಯಾದಗಿರಿಯಲ್ಲಿ ಪ್ರಸಿದ್ಧವಾದ ಮೈಲಾರ ಲಿಂಗ ದೇವಾಲಯವಿದೆ. ಈ ತಾಲ್ಲೂಕಿನ ಸಂಗಮ (ಭೀಮಾ ಮತ್ತು ಕೃಷ್ಣಾ ನದಿಗಳು ಕೂಡುವ ಸ್ಥಳ) ಒಂದು ಪವಿತ್ರ ಕ್ಷೇತ್ರ. ಇಲ್ಲಿನ ಚೆನ್ನವೀರ ಬಸವೇಶ್ವರ ಜಾತ್ರೆ ಪ್ರಸಿದ್ಧ.

ಸುರಪುರದ ಗೋಪಾಲಸ್ವಾಮಿಗುಡಿ, ನಾರಾಯಣಪುರ (ಸುರಪುರ ತಾಲ್ಲೂಕು) ಸಮೀಪದ ಛಾಯಾ ಭಗವತಿ ದೇವಾಲಯ, ಮುದನೂರಿನ

ರಾಮನಾಥ ದೇವಾಲಯ. ಕೊಡಕಲ್ಲಿನ ಚನ್ನಬಸವೇಶ್ವರ ದೇವಾಲಯ, ಕಿಕ್ಕೇರಿಯ ಸೋಮನಾಥ ದೇವಾಲಯ, ತಿಂತಿಣಿಯ ಮೌನೇಶ್ವರ ದೇವಾಲಯ ಅಥವಾ ಮೌನಪ್ಪಯ್ಯ ದರ್ಗಾ ಇವು ಸುರಪುರ ತಾಲ್ಲೂಕಿನ ದೇವಾಲಯಗಳು. ತಿಂತಿಣಿ ಹಿಂದೂ ಮುಸ್ಲಿಮರಿಬ್ಬರೂ ಪವಿತ್ರ ಎನಿಸಿದೆ. ಛಾಯಾ ಭಗವತಿ ದೇವಾಲಯದಲ್ಲಿ ಬೆಳಗಿನ ವೇಳೆ ದೇವಿಯ ಪಾದಗಳ ಮೇಲೆ ಸೂರ್ಯನ ಕಿರಣಗಳು ಬೀಳುವುದು ಒಂದು ವಿಶೇಷ.

## ಬೆಳಗಾವಿ

ಬೆಳಗಾವಿ ಜಿಲ್ಲಾಕೇಂದ್ರ. ಬೆಂಗಳೂರು ಮಿರಜ್ ರೈಲುಮಾರ್ಗದಲ್ಲಿ ಸಿಗುತ್ತದೆ. ಧಾರವಾಡವ ವಾಯುವ್ಯಕ್ಕೆ 77 ಕಿ. ಮಿ ದೂರದಲ್ಲಿದೆ. ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು ಇಲ್ಲಿ ಆಡಳಿತ ನಡೆಸಿದರು. ದೇವಗಿರಿ ಯಾದವರ ನಂತರ ಮಹಮದ್ ಬಿನ್ ತೊಘಲಕ್ ಇಲ್ಲಿ ಆಳ್ವಿಕೆ ನಡೆಸಿದ ಮರಾಠ ಪೇಶವೆಗಳೂ ಇಲ್ಲಿ ಆಳಿದರು. ಕಡೆಗೆ ಬ್ರಿಟಿಷರು ಈ ಜಿಲ್ಲೆಯ ಕಿತ್ತೂರನ್ನು ವಶಪಡಿಸಿಕೊಂಡು ಆಳಿದರು. ಕಿತ್ತೂರನ್ನು ದೇಸಾಯಿ ಮನೆತನದವರು ಆಳುತ್ತಿದ್ದರು.

ಈ ಜಿಲ್ಲೆಯಲ್ಲಿ ಅಥಣಿ, ರಾಯಬಾಗ, ಚಿಕ್ಕೋಡಿ, ಗೋಕಾಕ, ಬೆಳಗಾವಿ ಬೈಲ ಹೊಂಗಲ, ಸವದತ್ತಿ, ಖಾನಾಪುರ ಹಾಗೂ ಹುಕ್ಕೇರಿ, ರಾಮದುರ್ಗ ಎಂದು ಹತ್ತು ತಾಲ್ಲೂಕುಗಳಿವೆ.

ಬೆಳಗಾವಿಗೆ ಹಿಂದೆ ವೇಣು ಗ್ರಾಮ ಎಂಬ ಹೆಸರಿತ್ತು. ಇಲ್ಲಿ ಶನಿ ದೇವರು, ಮಾರುತಿ ದೇವರ ಹಳೆ ದೇವಾಲಯಗಳೂ ಮಿಲಿಟರಿ ಮಹಾ ದೇವ ಎಂಬ ಆಧುನಿಕ ಶೈಲಿಯ ದೇವಾಲಯ, ರಾಜಾರಾಮ ಮಹಾ ರಾಜರ ಮಠ ಇವೆ. ಇಲ್ಲಿನ ಕೋಟೆಯೊಳರುವ ಕಮಲ ಬಸದಿ ಅತ್ಯಂತ ಸುಂದರವಾದ ರಚನೆ. ಬೆಳಗಾವಿಗೆ ಸ್ವಲ್ಪ ದೂರದಲ್ಲಿರುವ ಕಣಬರಗಿ ಹಳ್ಳಿಯಲ್ಲಿ ರಾಮ ತೀರ್ಥವಿದ್ದು ಇಲ್ಲಿನ ಬೆಟ್ಟದ ಬುಡದಲ್ಲಿ ದೇವಾಲಯ

ಗಳಿವೆ. ಸಾಂಬ್ರ ಎಂಬಲ್ಲಿಗೆ ಸಮೀಪದ ಬಾಳೆ ಕುಂದ್ರಿಯಲ್ಲಿ ಪಂತ ಮಹಾರಾಜರ ಮಠವಿದೆ.

ಬೈಲ ಹೊಂಗಲದಲ್ಲಿ ವಚನಕಾರ ಚೆನ್ನಬಸವಣ್ಣನವರು ಸ್ಥಾಪಿಸಿದ್ದೆನ್ನಲಾದ ಮರಡಿ ಬಸವೇಶ್ವರ ಗುಡಿ ಇದೆ. ಬಸವೇಶ್ವರ ದೇವಾಲಯವೂ ಬಂದಿದೆ. ಈ ತಾಲ್ಲೂಕಿನ ಬೆಳವಡಿ ಇತಿಹಾಸ ಪ್ರಸಿದ್ಧ. ಇಲ್ಲಿ ವೀರಭದ್ರನ ಗುಡಿ ಇದೆ. ದೇಗಾಂವಿ ಬೈಲ ಹೊಂಗಲಕ್ಕೆ 34 ಕಿ.ಮೀ. ದೂರದಲ್ಲಿರುತ್ತದೆ. ಇಲ್ಲಿನ ಕಲ್ಲಗುಡಿ ಎಂಬ ಬಸ್ತಿ ಒಂದು ಸುಂದರ ವಾಸ್ತು ಕೃತಿ. ಗೋವೆಯ ಕದಂಬರ ಕಾಲದ ಒಂದು ವಾಸ್ತು ರಚನೆ. ಈ ಬಸ್ತಿಗೆ ಸೇರಿದಂತೆ ಮೂರು ಗರ್ಭಗುಡಿಗಳಿವೆ. ಇಲ್ಲಿನ ಹಜಾರದ ಕಂಬಗಳು ಸುಂದರ ವಿನ್ಯಾಸದಿಂದ ಕೂಡಿವೆ. ಭುವನೇಶ್ವರಿಗಳ ಕೆತ್ತನೆಗಳು ಸುಂದರದಾಗಿವೆ. ಉತ್ತರದ ಗರ್ಭಗುಡಿಯಲ್ಲಿ ಮಹಾಕಾಳಿ, ಮಧ್ಯದಲ್ಲಿ ಲಕ್ಷ್ಮಿ ನಾರಾಯಣ ಹಾಗೂ ದಕ್ಷಿಣದ ಗುಡಿಯಲ್ಲಿ ಸರಸ್ವತಿ ವಿಗ್ರಹಗಳಿವೆ. ಕಮಲನಾರಾಯಣ, ಮಹಾಲಕ್ಷ್ಮಿ ಇನ್ನಿತರ ಗುಡಿಗಳು, ಇದೇ ತಾಲ್ಲೂಕಿನ ಹಣ್ಣಿಕೇರಿ ಗ್ರಾಮದಲ್ಲಿ ಜೈನ ಸಂಪ್ರದಾಯದ ಬ್ರಹ್ಮದೇವನ ಗುಡಿಯೂ ವಕ್ಕುಂದದಲ್ಲಿ ಚಾಳುಕ್ಯ ಶೈಲಿಯ ತ್ರಿಕೂಟೇಶ್ವರ ದೇವಾಲಯವೂ ಇವೆ. ಹಿರೇ ನಂದಿಹಳ್ಳಿಯ ಬಸವೇಶ್ವರ ದೇವಾಲಯ, ಮುಗುಟ ಖಾನ ಹುಬ್ಬಳ್ಳಿಯ ನರಸಿಂಹ ದೇವಾಲಯಗಳೂ ಈ ತಾಲ್ಲೂಕಿನ ಇತರ ದೇವಾಲಯಗಳಾಗಿವೆ.

ಚಿಕ್ಕೋಡಿ ತಾಲ್ಲೂಕಿನ ನಿಪ್ಪಾಣಿ ಒಂದು ವ್ಯಾಪಾರ ಕೇಂದ್ರ. ಇಲ್ಲಿಗೆ ಸಮೀಪದ ರಾಸೂಬಾಯಿ ಬೆಟ್ಟದ ಮೇಲೆ ರಾಸೂಬಾಯಿ ದೇವಾಲಯವಿದೆ. ಕರೋಸಿ ಎಂಬಲ್ಲಿ ಘಂಟಿ ಬಸವಣ್ಣ ದೇವಾಲಯವಿದೆ.

ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರದಲ್ಲಿ ಶಂಕರ ಲಿಂಗೇಶ್ವರ ದೇವಾಲಯ ಪ್ರಸಿದ್ಧವಾದುದಾಗಿದೆ. ನಾರಾಯಣಸ್ವಾಮಿ ಗುಡಿ ಇಲ್ಲಿನ ಇನ್ನೊಂದು ದೇವಾಲಯ ಇಲ್ಲಿಗೆ ಹತ್ತು ಕಿ.ಮೀ. ದೂರದ ಅಮ್ಮಣಗಿ ಮಲ್ಲೇಶ್ವರ ದೇವಾಲಯದಿಂದ ಪ್ರಸಿದ್ಧವಾಗಿದೆ. ನಿಡುಸೋಸಿಯದುರು ದುಂಡೀಶ್ವರ ಮಠ, ಯಮಕನ ಮರಡಿಯ ವೇಣುಗೋಪಾಲ ಸ್ವಾಮಿ ದೇವಸ್ಥಾನ ಹುಕ್ಕೇರಿ ತಾಲ್ಲೂಕಿನಲ್ಲಿ ಕಂಡು ಬರುವ ಇತರ ಪ್ರಮುಖ ದೇವಳಗಳು ಗೋಕಾಕ

ತಾಲ್ಲೂಕಿನ ಅಂಕಲಗಿಯ ಲಕ್ಷ್ಮೀ ಗುಡಿ, ಕೌಜಲಗಿಯ ಹನುಮಂತ ದೇವರ ದೇವಾಲಯ, ಕಾಲಗೋಡದ ಬಲಭೀಮನಗುಡಿ (ಭೀಮನ ಗುಡಿಗಳು ಅಪ ರೂಪ ಕೂಡ), ಕಲ್ಲೋಳಿಯ ಮಾರುತಿ ದೇವಾಲಯ, ಯಾದವಾಡದ ಬಸವಣ್ಣನ ದೇವಾಲಯ, ಗೋಕಾಕದ ವೆಂಕಟೇಶ್ವರ ಹಾಗೂ ಶಂಕರಾ ಚಾರ್ಯರ ಗುಡಿಗಳು ಹೆಸರಿಸಬೇಕಾದವಾಗಿವೆ. ಈ ದೇವಾಲಯಗಳು ವಾಸ್ತುಶಿಲ್ಪ ದೃಷ್ಟಿಯಿಂದ ಮಹತ್ವವಲ್ಲವಾದರೂ ಭಕ್ತರಿಗೆ ನೆಮ್ಮದಿಯನ್ನು ಧಾರ್ಮಿಕ ಭಾವನೆಗಳನ್ನೂ ಮೂಡಿಸುವಲ್ಲಿ ಗಮನಾರ್ಹವಾಗಿದೆ.

ಸವದತ್ತಿ ತಾಲ್ಲೂಕಿನ ಎಲ್ಲಮ್ಮನ ಗುಡ್ಡ ಒಂದು ಯಾತ್ರಾಸ್ಥಳ, ಇಲ್ಲಿ ಪ್ರಖ್ಯಾತ ರೇಣುಕಾಂಬೆಯ ಗುಡಿಯಿದೆ. ಇದು ಎಲ್ಲಮ್ಮನ ಕ್ಷೇತ್ರ ವೆಂದೂ ಪ್ರಸಿದ್ಧ. ಧಾರವಾಡಕ್ಕೆ ನಲವತ್ತು ಕಿ.ಮೀ. ದೂರದಲ್ಲಿದೆ. ಸವದತ್ತಿಯಿಂದ ಐದು ಕಿ.ಮೀ. ದೂರದ ಎಲ್ಲಪ್ಪನ ಗುಡ್ಡವನ್ನು ಸೇರುವ ಮೊದಲು ಜೋಗುಳ ಬಾವಿ ಎಂಬಲ್ಲಿ ಸ್ನಾನ ಮಾಡಿ ಅಲ್ಲಿ ಸತ್ಯಮ್ಮನಿಗೆ ಭಕ್ತಾದಿಗಳು ಪೂಜೆ ಸಲ್ಲಿಸುತ್ತಾರೆ. ಎಲ್ಲವ್ವನ ಗುಡ್ಡ ರೇಣುಕಾದೇವಿಯ ಪುಣ್ಯಸ್ಥಳ. ರೇಣುಕೆ ಜಮದಗ್ನಿ ಮಹರ್ಷಿಗಳ ಪತ್ನಿ, ಪರಶುರಾಮನ ತಾಯಿ. ಜಮದಗ್ನಿ ತಪಸ್ಸು ಮಾಡಿದ ತಾಣ ಈ ಗುಡ್ಡ ಎನ್ನುತ್ತಾರೆ. ಇಲ್ಲಿನ ಎಲ್ಲಮ್ಮನ ದೇವಾಲಯ ಎರಡು ಸಾವಿರ ವರುಷಕ್ಕಿಂತಲೂ ಹಿಂದಿನ ದೆಂದು ಪ್ರತೀತಿ ಇದೆ. ಇಲ್ಲಿನ ಇತರ ಗುಡಿಗಳು ಪರಶುರಾಮ ಮಂದಿರ, ಮಾತಂಗಿ ಹಾಗೂ ಭೈರವೇಶ್ವರ ದೇವಾಲಯ. ಸುತ್ತಲ ಬೆಟ್ಟದ ಮೇಲೊಂದು ಕಡೆ ಜಮದಗ್ನಿಯ ಸಣ್ಣ ಗುಡಿ ಇದೆ. ಇಲ್ಲಿ ಕಾಣಬರುವ ಎಣ್ಣೆ ಹೊಂಡ ದಲ್ಲಿ ಸ್ನಾನ ಮಾಡಿದ ಬಳಿಕವೇ ದೇವಿಯ ದರ್ಶನ. ಈ ಸ್ನಾನದಿಂದ ಚರ್ಮ ರೋಗಗಳು ನಾಶವಾಗುತ್ತವೆ ಎಂದು ನಂಬಿಕೆ ಇದೆ.

ಸವದತ್ತಿ ತಾಲ್ಲೂಕಿನ ಮುರಗೋಡಿನ ಮಲ್ಲಿಕಾರ್ಜುನ ದೇವಾಲಯ, ಮನೋಳಿ (ಮನವಳ್ಳಿ)ಯ ಪಂಚಲಿಂಗ ಮಂದಿರ, ಹನುಮಂತ ಗುಡಿಗಳು, ನವಿಲು ತೀರ್ಥ (ಅಣೆಕಟ್ಟು ಪ್ರದೇಶ-ಮಲಪ್ರಭಾ)ದಲ್ಲಿ ಚಿದಂಬರೇಶ್ವರ (ಇದು ಗುರ್ಲ ಹೊಸೂರಿನಲ್ಲಿದ್ದ ದೇಗುಲ ಮುಳುಗಡೆಯಾದುದರಿಂದ ಪುನ ರ್ನಿರ್ಮಾಣವಾಯಿತು) ಗುಡಿ, ಹೂಲಿಯಲ್ಲಿನ ಪಂಚಲಿಂಗದೇವರ ಮಂದಿರ

ಮತ್ತಿತರ ಒಂದೆರಡು ಗುಡಿಗಳು, ಶಿರಸಂಗಿ ಕಾಳಮ್ಮನ ಗುಡಿ, ಸುಂದರ ಜಲಪಾತವಿರುವ ಸೊಗಲದಲ್ಲಿನ ಸೋಮೇಶ್ವರ ದೇವಾಲಯ ತಾಲ್ಲೂಕಿನ ಇನ್ನಿತರ ದೇವಾಲಯಗಳು. ಸವದತ್ತಿಯಲ್ಲಿ ಮಲ್ಲಿಕಾರ್ಜುನ, ಶಂಕರಲಿಂಗ ದೇವ ಹಾಗೂ ಪುರಂದರೇಶ್ವರ ದೇವಾಲಯಗಳಿವೆ.

ಖಾನಾಪುರ ತಾಲ್ಲೂಕಿನ ಹಲಶಿ ಇತಿಹಾಸ ಪ್ರಸಿದ್ಧ. ಹಿಂದೆ ಇದು ಹಲಶಿಗೆ. ಬನವಾಸಿ ಕದಂಬರ ಕಾಲದಲ್ಲಿ ಅವರ ಎರಡನೆಯ ರಾಜಧಾನಿಯಾಗಿದ್ದಿತು. ಖಾನಾಪುರಕ್ಕೆ 14 ಕಿ.ಮೀ. ದೂರದಲ್ಲಿದೆ. ಇಲ್ಲಿ ವರಾಹ ನರಸಿಂಹ, ಲಕ್ಷ್ಮೀನಾರಾಯಣ, ಕಲ್ಲೇಶ್ವರ, ಹಾಟಕೇಶ್ವರ, ರಾಮಲಿಂಗೇಶ್ವರ, ಸೂರ್ಯ, ಸುವರ್ಣೇಶ್ವರ ಮೊದಲಾದ ದೇವಾಲಯಗಳಿವೆ. ವರಾಹ ನರಸಿಂಹ ಒಂದು ಅಪರೂಪದ ದೇವಾಲಯ, ಹೀಗೆ ವರಾಹ ಸ್ವಾಮಿ ಹಾಗೂ ನರಸಿಂಹರ (ಹಿರಣ್ಯಾಕ್ಷ ಹಿರಣ್ಯಕಶಿಪು ಎಂಬ ರಾಕ್ಷಸರನ್ನು ವಧಿಸಲು ಎತ್ತಿದ ವಿಷ್ಣುವಿನ ಅವತಾರಗಳು) ಜೋಡಿ ದೇವಾಲಯಗಳು ಬೇರೆಲ್ಲಿಯೂ ಕಾಣುವುದಿಲ್ಲ. ಇದೊಂದು ದ್ವಿಕೂಟ ದೇವಾಲಯ. ಆದರೆ ಒಂದೇ ಗರ್ಭಗೃಹದಲ್ಲಿ ನರಸಿಂಹ ಮತ್ತು ಭೂವರಾಹ ಸ್ವಾಮಿ ವಿಗ್ರಹಗಳನ್ನಿರಿಸಲಾಗಿದೆ. ಇನ್ನೊಂದು ಗರ್ಭಗೃಹದಲ್ಲಿ ಯೋಗಿ ನಾರಾಯಣರ ವಿಗ್ರಹವಿದೆ. ಭೂವರಾಹಸ್ವಾಮಿವಿಗ್ರಹ ಹಲಶಿಯನ್ನು ಪ್ರಮುಖ ಸ್ಥಳವಾಗಿರಿಸಿಕೊಂಡಿದ್ದ ಗೋಪಿಯ ಕದಂಬರ ಕೊಡುಗೆಯಾಗಿದೆ. ದ್ವಿಕೂಟ ದೇವಾಲಯದ ಶಿಖರಗಳು ನಾಗರ ಶೈಲಿಯದಾಗಿವೆ. ಇಲ್ಲಿ ಇನ್ನಿತರ ಶಿಲ್ಪಗಳನ್ನೂ ಕಾಣಬಹುದು. ಖಾನಾಪುರ ತಾಲ್ಲೂಕಿನ ಕಣಕುಂಬಿಯಲ್ಲಿ ಕಣಕುಂಬೇಶ್ವರ ಹಾಗೂ ಮಹಾಮಲಿ ದೇವಿಯ ದೇವಾಲಯಗಳಿವೆ. ಇದೇ ತಾಲ್ಲೂಕಿನ ಡೋಂಗರಗಾವ ಬೆಟ್ಟದ ಮೇಲೆ ಮತ್ಸ್ಯೇಂದ್ರನಾಥ ಗುಡಿ ಇದ್ದು ಪ್ರೇಕ್ಷಣೀಯ ಎನಿಸಿದೆ. ರಾಯಬಾಗ ತಾಲ್ಲೂಕಿನ ಚಿಂಚಲಿ ಗ್ರಾಮದ ಮಾಯಮ್ಮ ಮಂದಿರ ಸುತ್ತಮುತ್ತಲಿನ ಗ್ರಾಮದ ಜನರ ಧಾರ್ಮಿಕ ಕೇಂದ್ರದಂತಿದೆ.

ಅಥಣಿ ತಾಲ್ಲೂಕಿನ ರಾಮತೀರ್ಥ ಕ್ಷೇತ್ರವಾಗಿದೆ. ಈ ಊರಿಗೆ ಹತ್ತಿರದ ಆನಂದ ಪರ್ವತ ಎಂಬ ಬೆಟ್ಟದ ಮೇಲಿನ ಗುಹೆಯಲ್ಲಿ ಆನಂದ ನಾಯಕಿ ಎಂಬ ದೇವತಾ ವಿಗ್ರಹವೂ ಸನಿಹದಲ್ಲಿ ರಾಮೇಶ್ವರ ದೇವಾಲಯವೂ

ಇದೆ. ಈ ದೇವಾಲಯದ ಪ್ರಾಕಾರದಲ್ಲಿ ನರಸಿಂಹ, ಆಂಜನೇಯ, ಬ್ರಹ್ಮ ದೇವ, ಅಮೃತೇಶ್ವರ ಗುಡಿಗಳಿವೆ. ದೇವಾಲಯದ ಮುಖ್ಯದ್ವಾರದ ಮೇಲೆ ಸುಂದರವಾದ ನಟರಾಜನ ವಿಗ್ರಹವಿದೆ. ಈ ದೇವಳ ಪುರಾಣ ಪ್ರಸಿದ್ಧವಾಗಿದೆ. ಕಹೋಳ ಎಂಬ ಗ್ರಾಮದಲ್ಲಿ ಕಹೋಳನೆಂಬ ಋಷಿ ವಾಸಿಸುತ್ತಿದ್ದು ಶ್ರೀ ರಾಮ ತನ್ನ ವನವಾಸ ಕಾಲದಲ್ಲಿ ಇಲ್ಲಿಗೆ ಬಂದು ಮುನಿಗಳ ದರ್ಶನ ಮಾಡಿ ಓಂಕಾರೇಶ್ವರನನ್ನು ಪೂಜಿಸಿದನೆಂದು ಹರನಿಂದ ಪಾಶುಪತಾಸ್ತ್ರ ಪಡೆದು ಹಾಗೂ ಅಂದಿನಿಂದ (ರಾಮತೀರ್ಥ ಪ್ರದೇಶ) ಈ ಸ್ಥಳಕ್ಕೆ ರಾಮೇಶ್ವರ ಎಂಬ ಹೆಸರಿಟ್ಟನೆಂದೂ ಹೇಳುತ್ತಾರೆ. ಕಹೋಳ ಗ್ರಾಮವು ಅಥಣಿಗೆ 30 ಕಿ.ಮೀ. ದೂರದಲ್ಲಿದೆ. ಇಂದು ಅದು ಕೋಹಳ್ಳಿ ಎಂದು ಹೆಸರಾಗಿದೆ.

ಅಥಣಿಯಲ್ಲಿ ಸಿದ್ಧೇಶ್ವರ ಹಾಗೂ ಅಮೃತೇಶ್ವರ ದೇವಾಲಯಗಳೂ ಮುರುಘೇಂದ್ರ ಸ್ವಾಮಿಗಳ ಮಠವೂ ಇವೆ. ಈ ತಾಲ್ಲೂಕಿನ ಕಾಗವಾಡ ಗ್ರಾಮದಲ್ಲಿ ಬ್ರಹ್ಮನಾಥ ಹಾಗೂ ಸತವಾಯಿ ಗುಡಿಗಳಿವೆ. ಬ್ರಹ್ಮನಾಥ ನಿಗೆ ಕಗ್ಗದ ರಾಮನೆಂದೂ ಹೆಸರಿದೆ. ಶೇಡ ಬಾಳ ಅಥಣಿಗೆ 32 ಕಿ.ಮೀ. ದೂರದಲ್ಲಿದ್ದು ಇಲ್ಲಿ ಪ್ರಾಚೀನ ಕಾಲದ ಬಸವಣ್ಣನ ಗುಡಿ ಇದ್ದು ಗುಡಿ ಯಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇನ್ನಿತರ ಮೂರು ಮೂರ್ತಿ ಗಳೂ ಇವೆ. ಐನಾಪುರದ ಪೀರ್‌ಕಾಜಿಯುವರ ಸಮಾಧಿ ಮಹಮ್ಮದೀಯ ರಿಗೆ ಪವಿತ್ರವಾಗಿದೆ. ಕೊಕಟ ನೂರು ಎಲ್ಲಮ್ಮನ ಗುಡಿ ಪ್ರಸಿದ್ಧವಾಗಿದ್ದು ವರ್ಷಂಪ್ರತಿ ಎಲ್ಲಮ್ಮನ ಜಾತ್ರೆ ನಡೆಯುತ್ತದೆ. ಕೃಷ್ಣಾನದಿಯ ಬಲದಂಡೆಯ ಮೇಲಿನ ಸಪ್ತಸಾಗರ ತೀರ್ಥಕ್ಷೇತ್ರ ಪುನೀತ ಮಾಡುವ ಕ್ಷೇತ್ರ ಎನಿಸಿದೆ. ಪಣ್ಣಾಳ ಬೆಟ್ಟ ಎಂದು ಹೆಸರಾಗಿರುವ ಗಿರಿ ಬೆಳವಂಕಿ ಗ್ರಾಮದಲ್ಲಿದ್ದು ಬೆಟ್ಟದ ಮೇಲೆ ಸಿದ್ಧೇಶ್ವರ ಗುಹೆ ಇದೆ. ಅಥಣಿ ತಾಲ್ಲೂಕಿನ ಇಂಗಳ ಗಾವಿ ಅಲ್ಲಿ ಜನಿಸಿದ ಪ್ರಸಿದ್ಧ ಸಂತರೂ ಅಥಣಿಯ ಶಿವ ಯೋಗಿಗಳೆಂದು ಹೆಸರಾದ ಗುರುಲಿಂಗಯ್ಯನವರಿಂದಾಗಿ ಹೆಸರಾಗಿದ.

## ನಾರದಗಡ್ಡೆ ಕ್ಷೇತ್ರ

ನಾರದಗಡ್ಡೆ ಕೃಷ್ಣಾನದಿಯ ನಡುವಿನ ಒಂದು ದ್ವೀಪ. ರಾಯ

ಚೂರು ತಾಲ್ಲೂಕಿನಲ್ಲಿದೆ. ಇಲ್ಲಿ ನಾರದರು ತಪಸ್ಸನ್ನಾಚರಿಸಿವರೆಂದು ಪ್ರತೀತಿ ಇದೆ. ಹಾಗೆಯೇ ಇಲ್ಲಿ ನಾರದ ದೇವಾಲಯವಿದೆ. ಬ್ರಹ್ಮನಿಗೆ ದೇವಾಲಯ ಇರುವುದು ಅಪರೂಪವಿದ್ದಂತೆ ಇದೊಂದು ಅಪರೂಪದ ಗುಡಿ. ಇಲ್ಲಿ ಬಸವಣ್ಣನ ಗುಡಿ, ದತ್ತಾತ್ರೇಯ ಹಾಗೂ ಶಿವ ಯೋಗ ಪೀಠ, ಶ್ರೀ ಪಾದವಲ್ಲಭ ಸ್ವಾಮಿಗಳ ಸಮಾಧಿ ಇವೆ. ನಾರದ ಗಡ್ಡೆಯಂತೆ ರಾಮ ಗಡ್ಡೆ ಇನ್ನೊಂದು ದ್ವೀಪ. ಇಲ್ಲಿ ಶ್ರೀರಾಮ ಲಿಂಗವನ್ನು ಪ್ರತಿಷ್ಠಾಪಿಸಿ ಶಿವನನ್ನು ಪೂಜಿಸಿದನೆಂದು ಹೇಳುತ್ತಾರೆ.

ರಾಯಚೂರಿನಲ್ಲಿ ರಾಮಲಿಂಗೇಶ್ವರ, ನಗರೇಶ್ವರ ಹಾಗೂ ಮಾಣಿಕ ಪ್ರಭುಗಳ ದೇವಾಲಯ ಇವು ನೋಡಬೇಕಾದವು. ಇಲ್ಲಿಗೆ 30 ಕಿ.ಮೀ. ದೂರದಲ್ಲಿ ಗಾಣಧಾಳ ಗ್ರಾಮವಿದ್ದು ಅಲ್ಲಿಯ ಗುಡ್ಡದ ಮೇಲೆ ಪಂಚಮುಖಿ ಹನುಮಂತನ ದೇವಾಲಯವಿದೆ. ಮಟ್ಮರಿ ಗ್ರಾಮದಲ್ಲಿ ವೀರಭದ್ರ ದೇವಾಲಯ ಪ್ರಸಿದ್ಧವಾದುದಾಗಿದೆ.

ರಾಯಚೂರು ಜಿಲ್ಲೆ ಇತಿಹಾಸ ಹಾಗೂ ಪುರಾಣ ಪ್ರಸಿದ್ಧಿಯಾದ ಜಿಲ್ಲೆಯಾಗಿದೆ. ಮೌರ್ಯರು, ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ಸಾತವಾಹನರು, ಕಲ್ಯಾಣದ ಚಾಳುಕ್ಯರು, ಕಳಚುರಿಗಳು, ಸೇವುಣರು ಮೊದಲಾದವರು ಈ ಜಿಲ್ಲೆಯನ್ನಾಳಿರುತ್ತಾರೆ. ಕೃಷ್ಣಾ ಮತ್ತು ತುಂಗಭದ್ರಾ ಇವು ಈ ಜಿಲೆಯ ಮುಖ್ಯ ನದಿಗಳು. ರಾಯಚೂರು, ಮಾನ್ವಿ, ಸಿಂಧನೂರು, ಗಂಗಾವತಿ, ಕುಷ್ಟಗಿ, ಯಲಬುರ್ಗ, ಕೊಪ್ಪಳ, ಲಿಂಗಸುಗೂರು ದೇವದುರ್ಗ ಈ ಜಿಲ್ಲೆಯ ತಾಲ್ಲೂಕುಗಳು. ಈ ಜಿಲ್ಲೆಯ ದೇವಾಲಯಗಳ ಸಮೀಕ್ಷೆ ಮಾಡೋಣ.

ಯಲಬರ್ಗ ತಾಲ್ಲೂಕಿನ ಇಟಗಿಯ ಮಹಾದೇವ ದೇವಾಲಯ ಒಂದು ಸುಂದರ ವಾಸ್ತು ಕೃತಿ. ಇದು ಚಾಳುಕ್ಯ (ಕಲ್ಯಾಣ) ಶೈಲಿಯದಾಗಿದ್ದು ಕ್ರಿ.ಶ. 12ನೇ ಶತಮಾನದಲ್ಲಿ ಆರನೆಯ ವಿಕ್ರಮಾದಿತ್ಯನ ದಂಡನಾಯಕ ಮಹಾದೇವನಿಂದ ಕಟ್ಟಿಸಲ್ಪಟ್ಟುದಾಗಿದೆ. ಇವನೇ ಕಟ್ಟಿಸಿದ ಇನ್ನೊಂದು ದೇವಾಲಯ ನಾರಾಯಣ ಗುಡಿ. ಮಹಾದೇವ ದೇವಾಲಯವನ್ನು ದೇವಾಲಯಗಳ ರಾಜ ಎಂಡು ಕರೆದಿದ್ದೂ ಉಂಟು. ಇದೊಂದು ಕರ್ನಾಟಕದ

ಅತ್ಯಂತ ಸುಂದರವಾದ ದೇವಾಲಯ. ಗರ್ಭಗುಡಿಯಲ್ಲಿ ಮಹಾದೇವೇಶ್ವರ ಲಿಂಗವಿದೆ. ನವರಂಗ ಮಂಟಪಕ್ಕೆ ನಾಲ್ಕು ಕಡೆ ದ್ವಾರಗಳಿವೆ. ಇಲ್ಲಿಯ ಭುವನೇಶ್ವರಿಗಳ ಮೇಲಿನ ಕೆತ್ತನೆಗಳು ಸಾಲಂಕೃತವಾಗಿವೆ. ಇಲ್ಲಿ ಹಲವಾರು ಉತ್ತಮ ಶಿಲ್ಪಗಳನ್ನು ನೋಡಬಹುದಾಗಿದೆ.

ಯಲಬುರ್ಗ ತಾಲ್ಲೂಕಿನ ಕುಕ್ಕನೂರು ಹಲವು ಪ್ರಾಚೀನ ದೇವಾಲಯಗಳಿರುವ ಊರಾಗಿದೆ. ಮಹಾಮಾಯಾ ದೇವಾಲಯ ಪ್ರಸಿದ್ಧವಾದುದು. ಇಲ್ಲಿನ ಆವರಣದಲ್ಲಿರುವ ನವಲಿಂಗಗುಡಿ ನೋಡಬೇಕಾದುದು. ಕಲ್ಲೇಶ್ವರ ದೇವಾಲಯದೊಳಗೆ ಶಿವ ಮತ್ತು ಬ್ರಹ್ಮನ ಶಿಲ್ಪಗಳಿವೆ.

ಸಿಂಧನೂರು ತಾಲ್ಲೂಕಿನ ಮುಕ್ಕುಂದ ಗ್ರಾಮದ ಮುರಾರಿ ದೇವಾಲಯ, ಸೋಮಲಾಪುರ ಬೆಟ್ಟದ ತಪ್ಪಲಿನಲ್ಲಿರುವ ಅಂಬಾದೇವಿ ದೇವಾಲಯಗಳು, ಲಿಂಗಸುಗೂರಿನ ಕಪ್ಪೇಯನ ದೇವಾಲಯ, ದೇವರ ಭೂಪುರದ ಅಮರೇಶ್ವರ ದೇವಾಲಯ, ಕೊಪ್ಪರದ ನರಸಿಂಹಸ್ವಾಮಿ ದೇವಾಲಯ ( ದೇವದುರ್ಗ ತಾಲ್ಲೂಕು ), ಕವಿತಾಳದ ತ್ರ್ಯಂಬಕೇಶ್ವರ ದೇವಸ್ಥಾನ (ಮಾನ್ವಿ ತಾಲ್ಲೂಕು), ಗಬ್ಬೂರಿನ (ದೇವದುರ್ಗ ತಾಲ್ಲೂಕು) ಬಂಗಾರ ಬಸಪ್ಪನಗುಡಿ, ಗಂಗಾವತಿಯ ನಗರೇಶ್ವರ, ವೆಂಕಟೇಶ್ವರ ದೇವಾಲಯಗಳೂ, ಆನೆಗೊಂದಿಯ ಶೇಷಶಾಯಿ ದೇವಾಲಯ ಹಾಗೂ ಮಾಧ್ವ ಗುರುಗಳ ನವವೃಂದಾವನಗಳು, ಹಾಗೂ ಕನಕಗಿರಿ ( ಗಂಗಾವತಿ ತಾಲ್ಲೂಕು ) ಯ ಕನಕಾಚಲಸ್ವಾಮಿ ದೇವಾಲಯಗಳು ರಾಯಚೂರು ಜಿಲ್ಲೆಯ ಇನ್ನಿತರ ದೇವಾಲಯಗಳಾಗಿವೆ.

ಕನಕಾಚಲಸ್ವಾಮಿ ದೇವಸ್ಥಾನದಲ್ಲಿ ಹರಿಜನರಿಗಾಗಿಯೇ ದೇವರು ನೆಲಸಿದನೆಂದು ಹೇಳುವರು. ಹಿಂದೆ ಇಲ್ಲಿ ಜಾತ್ರೆಯ ದಿನಗಳಲ್ಲಿ ಹರಿಜನರನ್ನು ದೇವರ ದರ್ಶನಕ್ಕೆ ಬಿಡುವ ರೂಢಿ ಇತ್ತು. ಕಲ್ಲೂರಿನಲ್ಲಿ (ಮಾನ್ವಿ) ಮಾರ್ಕಂಡೇಶ್ವರ, ಮಾರುತೀಶ್ವರ ದೇವಾಲಯಗಳಿವೆ.

# ಗದಗಿನ ವೀರನಾರಾಯಣ ದೇವಸ್ಥಾನ

ಗದಗ ಧಾರವಾಡ ಜಿಲ್ಲೆಯ ಒಂದು ತಾಲ್ಲೂಕು. ಧಾರವಾಡ ಜಿಲ್ಲೆ ಪುರಾಣೇತಿಹಾಸ ಕಾಲದಿಂದಲೂ ಪ್ರಸಿದ್ಧವಾಗಿದೆ. ಈ ಜಿಲ್ಲೆಯನ್ನು ಮೌರ್ಯರು, ಸಾತವಾಹನರು, ಬನವಾಸಿ ಕದಂಬರು. ಬಾದಾಮಿಯ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಕಳಚುರಿಗಳು. ವಿಜಯನಗರದರಸರು ಆಳಿದರು. ಹೈದರಾಲಿ ಟಿಪ್ಪು ಸುಲ್ತಾನರು ಧಾರವಾಡ ಪ್ರಾಂತ್ಯದ ಮೇಲೆ ದಾಳಿ ನಡೆಸಿದ್ದರು. ಈ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ನವಾಬರು, ದೇಸಾಯರು ಆಳ್ವಿಕೆ ನಡೆಸಿದುದುಂಟು. ಧಾರವಾಡ, ಹುಬ್ಬಳ್ಳಿ, ಹಿರೇಕೆರೂರು, ಗದಗ, ಹಾನಗಲ್ಲ, ಹಾವೇರಿ, ಕಲಘಟಗಿ, ರೋಣ, ರಾಣೆಬೆನ್ನೂರು, ಶಿರಹಟ್ಟಿ, ಮುಂಡರಗಿ, ಬ್ಯಾಡಗಿ, ನರಗುಂದ, ನವಲುಗುಂದ, ಕುಂದಗೋಳ, ಶಿಗ್ಗಾಂವಿ ಮತ್ತು ಸವಣೂರು ಇವು ಈ ಜಿಲ್ಲೆಯ ಹದಿನೇಳು ತಾಲ್ಲೂಕುಗಳು. ಈ ಜಿಲ್ಲೆಯನ್ನು ಗುಡ್ಡಗಾಡು ಹಾಗೂ ಪೂರ್ವದ ಬಯಲು ಪ್ರದೇಶಗಳೆಂದು ವಿಂಗಡಿಸಬಹುದು.

ಗದಗಿನಲ್ಲಿ ಕಲ್ಯಾಣ ಚಾಳುಕ್ಯ ಶೈಲಿಯ ಮೂರು ದೇವಾಲಯಗಳಿವೆ. ತ್ರಿಕೂಟೇಶ್ವರ ದೇವಾಲಯ ಮುಖ್ಯವಾದುದು. ಗರ್ಭಗುಡಿಯಲ್ಲಿ ಪಾಣಿ ಪೀಠಸ್ಥ ಮೂರು ಲಿಂಗಗಳಿವೆ. ಈ ಗುಡಿಯ ಕಂಬಗಳು ಸುಂದರವಾಗಿವೆ. ಇಲ್ಲಿ ಹಲವು ಅಲಂಕರಣ ಶಿಲ್ಪಗಳನ್ನು ಕಾಣಬಹುದು. ಈ ಗುಡಿಯ ಆವರಣದಲ್ಲಿ ಸರಸ್ವತೀ ಗುಡಿ ಇದ್ದು ಒಳಗೆ ಕುಳಿತ ಭಂಗಿಯ ಸರಸ್ವತೀ ವಿಗ್ರಹ ಸಂದರವಾಗಿದೆ. ಸೋಮೇಶ್ವರ ದೇವಾಲಯ, ವೀರನಾರಾಯಣ ಸ್ವಾಮಿ ದೇವಾಲಯ ಗದಗಿನ ಇನ್ನೆರಡು ಗುಡಿಗಳು. ಸೋಮೇಶ್ವರ ಚಾಳುಕ್ಯ ಶೈಲಿಯ ಗುಡಿ.

ಕನ್ನಡದಲ್ಲಿ ಮಹಾಭಾರತ ಕಾವ್ಯರಚಿಸಿದ ಕುಮಾರ ವ್ಯಾಸನ ಆರಾಧ್ಯ ದೈವ ವೀರನಾರಾಯಣಸ್ವಾಮಿ, ಗದಗಿನ ವೀರನಾರಾಯಣ ದೇವಾಲಯವನ್ನು ಕ್ರಿ.ಶ. 1117ರಲ್ಲಿ ಹೊಯ್ಸಳ ವಿಷ್ಣುವರ್ಧನ ಕಟ್ಟಿಸಿದನೆನ್ನಲಾಗಿದೆ. ಪುರಾಣದ ಪ್ರಕಾರ ಬದರಿಯಿಂದ ನಾರಾಯಣ ಇಲ್ಲಿ ಬಂದು ನೆಲಸಿದ

ನೆನ್ನುತ್ತಾರೆ. ದೇವಸ್ಥಾನ ಬಹುದೊಡ್ಡದಾಗಿದೆ. ಗರ್ಭಗುಡಿಯ ಮೇಲಿನ ವಿಮಾನ ಇಪ್ಪತ್ತು ಅಡಿ ಎತ್ತರವಿದ್ದು ಹನ್ನೊಂದು ಹಂತಗಳಿಂದ ಕೂಡಿದೆ. ಗರ್ಭಗುಡಿಯಲ್ಲಿ ಎಂಟು ಅಡಿ ಎತ್ತರದ ವೀರನಾರಾಯಣಸ್ವಾಮಿ ಮೂರ್ತಿ ಇದೆ. ಮೂರ್ತಿಯ ಎತ್ತರವೇ ಐದೂಕಾಲು ಅಡಿ. ಪ್ರಭಾವಳಿಯೂ ಕರಿ ಶಿಲೆಯದು. ಇದರಲ್ಲಿ ದಶಾವತಾರದ ಚಿತ್ರಗಳನ್ನು ಕೆತ್ತಲಾಗಿದೆ. ಮೂರ್ತಿಯ ಬಲಗೈಯಲ್ಲಿ ಚಕ್ರ, ಎಡಗೈಯಲ್ಲಿ ಶಂಖ ಇದ್ದು ಅಭಯ ಹಸ್ತ ಇದೆ. ಈ ದೇವಾಲಯದ ಮಧ್ಯದ ನಾಲ್ಕು ಕಂಬಗಳಲ್ಲಿ ದಶಾವತಾರ ಚಿತ್ರಗಳಿರುವುದು ವಿಶೇಷ. ನರಸಿಂಹ ವಿಗ್ರಹವಿರುವ ಎರಡನೆಯ ಕಂಬ ಕುಮಾರ ವ್ಯಾಸನ ಕಂಬವೆಂದು ಹೆಸರಾಗಿದೆ. ಕವಿ ಕುಮಾರವ್ಯಾಸ ಇಲ್ಲಿಯೇ ಕುಳಿತು ಕನ್ನಡ ಮಹಾಭಾರತವನ್ನು ರಚಿಸಿದನೆಂದು ಪ್ರತೀತಿ ಇದೆ.

ಶ್ರೀವನಿತೆಯರಸನೆ ವಿಮಲ
ರಾಜೀವ ಪೀಠನ ಪಿತನೆ ಸನಕಾದಿ
ಸಜ್ಜನ ನಿಕರ ದಾತಾರ
ರಾವಣಾಸುರ ಮಥನ
ಕಥನ ಶ್ರವಣಸು ಧಾವಿನೂತನ
ಕಾರಣಕಾವುದಾನತ ಜನರ ಗದಗಿನ ವೀರನಾರಯಣ

ಎಂದು ಕವಿ ಮೊದಲ ಪದ್ಯದಲ್ಲಿಯೇ ವೀರನಾರಯಣನನ್ನು ಸ್ತುತಿಸಿದ್ದಾನೆ. ಈ ದೇವಾಲಯದ ಮಗ್ಗುಲಿಗೆ ರಾಘವೇದ್ರ ಸ್ವಾಮಿಗಳ ಬೃಂದಾವನ, ಕುಮಾರ ವ್ಯಾಸಮಂಟಪ, ಲಕ್ಷ್ಮೀನರಸಿಂಹ, ಈಶ್ವರ ಹಾಗೂ ಹನುಮಂತ ದೇವಾಲಯಗಳಿವೆ. ಗದಗಿನ ತೋಂಟದ ಸಿದ್ಧಲಿಂಗೇಶ್ವರ ಯತಿಗಳ ಮಠ ವಿದೆ. ಇಲ್ಲಿ ಜೋಡು ಹನುಮಾನ್, ಶಂಕರ ಲಿಂಗ, ದುರ್ಗಾ, ವೀರಭದ್ರ ಹಾಗೂ ವಿಠೋಬ ದೇವಾಲಯಗಳಿವೆ. ಈ ತಾಲ್ಲೂಕಿನ ನೀಲಗುಂದದಲ್ಲಿ ನಾರಾಯಣ ದೇವಾಲಯ, ಹೊಂಬಳದಲ್ಲಿ ಶಂಕರಲಿಂಗ ದೇವಾಲಯವಿದೆ.

## ಲಕ್ಕುಂಡಿ

ಗದಗ ತಾಲ್ಲೂಕಿನ ಐತಿಹಾಸಿಕ ಸ್ಥಳ. ಇಲ್ಲಿ ಇಪ್ಪತ್ತಕ್ಕೂ ಹೆಚ್ಚು

ದೇವಾಲಯುಗಳೂ. ಜಿನ ಬಸದಿಗಳೂ ಇವೆ. ಗದಗಕ್ಕೆ 11 ಕಿ. ಮಿೂ. ದೂರವಲ್ಲಿದೆ. ಹಿಂದೆ ಇದು ಲೊಕ್ಕಿ ಗುಂಡಿ ಎಂದು ಹೆಸರಾಗಿತ್ತು.

ಇಲ್ಲಿನ ಕಾಶೀ ವಿಶ್ವನಾಥ ದೇವಾಲಯು ಹೊಯ್ಸಳರ ಕಲೆಯುದಾಗಿದೆ. ಇದು ಮೊದಲಿಗೆ ಚಾಳುಕ್ಯರ ಕಾಲದ ಕಟ್ಟಡ ಎಂದು ತೋರುತ್ತದೆ. ಕವತಾಳೇಶ್ವರಾಲಯು ಎಂದೂ ಇದಕ್ಕೆ ಹೆಸರಿತ್ತು. ಈ ದೇವಾಲಯುದ ಹೊರ ಗೋಡೆಯು ಮೇಲೆ ರಾವಣಾಯುಣದ ಚಿತ್ರಗಳ ಕೆತ್ತನೆ ಇದೆ.

ಲಕ್ಕುಂಡಿಯಲ್ಲಿ ಮಲ್ಲಿಕಾರ್ಜುನ, ಸೋಮೇಶ್ವರ, ನನ್ನೇಶ್ವರ, ಮಣಿಕೇಶ್ವರ ಮೊದಲಾದ ದೇವಾಲಯುಗಳಿವೆ. ಜಿನ ಬಸದಿಗಳಲ್ಲಿ ಬ್ರಹ್ಮ ಜಿನಾಲಯು ಪ್ರಸಿದ್ಧವಾದುದು ಹಾಗೂ ಪ್ರಾಚೀನವಾದುದು. ಕಲ್ಯಾಣದ ಚಾಳುಕ್ಯರ ವಾಸ್ತು ಶೈಲಿಗೆ ಇದೊಂದು ಉತ್ತಮ ಉದಾಹರಣೆ. ಗರ್ಭ ಗುಡಿಯಲ್ಲಿ ಕರಿ ಶಿಲೆಯು ಮಹಾವೀರನ ವಿಗ್ರಹವಿದ್ದು ಅದು ಭಗ್ನಗೊಂಡಿದೆ. ಇಲ್ಲಿ ಬ್ರಹ್ಮ, ಸರಸ್ವತಿಯುರ ವಿಗ್ರಹಗಳಿವೆ. ಆದರೆ ಸರಸ್ವತಿ ವಿಗ್ರಹ ಜೀರ್ಣಾವಸ್ಥೆಯಲ್ಲಿದೆ. ನಾಗನಾಥಾಲಯು ಅಥವಾ ಪಾರ್ಶ್ವನಾಥ ಬಸದಿಯಲ್ಲಿ ಪಾರ್ಶ್ವನಾಥನ ಶಿಲ್ಪದ ಮೇಲಿರಬೇಕಾದ ಹೆಡೆಯುಳ್ಳ ಸರ್ಪ ಇದೆ. ಬಸದಿಯು ಹಿಂದೆ ಗೋಪುರದ ಬಳಿಯುಷ್ಟೆ ಪಾರ್ಶ್ವನಾಥನ ಶಿಲ್ಪವಿದೆ.

**ಕುಂದಗೋಳ :** ಕುಂದಗೋಳ ಹುಬ್ಬಳ್ಳಿಗೆ ಹತ್ತಿರವಿದ್ದು ಇಲ್ಲಿ ಶಂಭುಲಿಂಗ ದೇವಾಲಯುವಿದೆ. ಚಾಳುಕ್ಯ ಶೈಲಿಯು ಈ ದೇವಾಲಯುದ ಗರ್ಭಗುಡಿಯುಲ್ಲಿ ಶಿವಲಿಂಗವೂ ಮುಂದಿನ ಕೋಣೆಯು ಎಡಬಲಗಳಲ್ಲಿ ಪಾರ್ವತಿ ವಿಘ್ನೇಶ್ವರ ಮೂರ್ತಿಗಳೂ ಇವೆ. ಈ ಊರಿನಲ್ಲಿನ ಇತರ ದೇವಾಲಯುಗಳೆಂದರೆ ದತ್ತಾತ್ರೇಯು, ಬ್ರಹ್ಮದೇವರ ಗುಡಿಗಳು, ಶಂಕರಾಚಾರ್ಯ ಹಾಗೂ ಮಲ್ಲಿಕಾರ್ಜುನ ಗುಡಿಗಳು.

**ಕಲಘಟಗಿ :** ಇಲ್ಲಿಗೆ ಹತ್ತು ಕಿ. ಮೀ ದೂರದಲ್ಲಿರುವ ಕಾಮಧೇನು ಹಳ್ಳಿಯಲ್ಲಿ ಕಲಮೇಶ್ವರ ದೇವಾಲಯುವಿವೆ. ಇಲ್ಲಿ ಕೆಲವು ಪೌರಾಣಿಕ ಶಿಲ್ಪಗಳನ್ನು ಕಾಣಬಹುದು. ದೇವಾಲಯು ಕರಿಕಣ ಶಿಲೆಯುಲ್ಲಿ ಕಟ್ಟಲ್ಪಟ್ಟಿದ್ದಾಗಿವೆ. ಮಿಶ್ರಿಕೋಟಿ ಎಂಬಲ್ಲಿ ರಾಮೇಶ್ವರ ದೇವಾಲಯುವಿದೆ.

**ಹುಬ್ಬಳ್ಳಿ :** ಹುಬ್ಬಳ್ಳಿಯಲ್ಲಿ ಭವಾನಿಶಂಕರ ದೇವಾಲಯ ಎಂಬ ಪ್ರಾಚೀನ ದೇವಾಲಯವಿದೆ. ಇದೊಂದು ದೊಡ್ಡ ನಗರವಾಗಿದ್ದು ಹಲವು ಆಧುನಿಕ ಶೈಲಿಯ ದೇವಸ್ಥಾನಗಳೂ ಇರುತ್ತವೆ. ಅಂಬಾಭವಾನಿ, ದತ್ತಾತ್ರೇಯ, ದುರ್ಗಿ. ಈಶ್ವರ, ಮಾರುತಿ, ವಿಠೋಬ, ವೆಂಕಟರಮಣ ಮೊದಲಾದ ದೇವಾಲಯಗಳಿವೆ. ಈ ನಗರದ ಮೂರು ಸಾವಿರ ಮಠ ಪ್ರೇಕ್ಷಣೀಯ ತಾಣ. ಇಲ್ಲೊಂದು ದೇವಸ್ಥಾನವೂ ಇದ್ದು ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಸಿದ್ಧಾರೂಢ ಮಠವಿದ್ದು ಸಿದ್ಧಾರೂಢ ಸ್ವಾಮಿ ಜಾತ್ರೆ ನಡೆಯುತ್ತದೆ. ಹುಬ್ಬಳ್ಳಿ ಧಾರವಾಡಕ್ಕೆ 19 ಕಿ. ಮಿ. ದೂರದಲ್ಲಿದೆ.

ಹುಬ್ಬಳ್ಳಿ ತಾಲ್ಲೂಕಿನ ಅಮರ ಗೋಳದಲ್ಲಿ ಜಕಣಾಚಾರಿ ಎಂಬ ಶಿಲ್ಪಿ ನಿರ್ಮಿಸಿದ್ದೆನ್ನಲಾದ ಶಂಕರಲಿಂಗ ದೇವಾಲಯವಿದೆ. ಹತ್ತಿರವಿರುವ ಬನಶಂಕರಿ ದೇವಾಲಯವೂ ಪ್ರಸಿದ್ಧವಾಗಿದೆ. ಉಣಕಲ್ಲಿನಲ್ಲಿ ಚಂದ್ರಮೌಳೀಶ್ವರ, ವೀರಭದ್ರ ದೇವಾಲಯಗಳಿವೆ. ಕೋಳಿವಾಡ ಕುಮಾರವ್ಯಾಸನ ಜನ್ಮಸ್ಥಳ. ಇಲ್ಲಿಯೂ ಸಹ ವೀರನಾರಾಯಣ ದೇವಾಲಯವಿದೆ. ಊರಹೊರಗೆ ಕಾಳಮೇಶ್ವರ ದೇವಾಲಯವಿದ್ದು ಇಲ್ಲಿ ಬೌದ್ಧರ ದೇವತಾ ವಿಗ್ರಹ ತಾರಾ ವಿಗ್ರಹವಿದೆ, ಬ್ಯಾಹಟ್ಟಿ ಗ್ರಾಮದಲ್ಲಿ ವೀರಭದ್ರ ಮತ್ತು ರಾಮಲಿಂಗ ದೇವಾಲಯಗಳೂ ಧಬ್ಬಿ ಎಂಬಲ್ಲಿ ಒಂದು ಜೈನದೇವಾಲಯವೂ ಇದೆ. ಈ ಯಾವ ದೇವಾಲಯಗಳೂ ವಾಸ್ತು ಶಿಲ್ಪದ ದೃಷ್ಟಿಯಿಂದಲಾಗಲೀ ಐತಿಹಾಸಿಕವಾಗಿಯಾಗಲೀ ಮಹತ್ವವಾದವುಗಳಲ್ಲ. ದೇವತಾ ಪೂಜಾ ಕೈಂಕರ್ಯಗಳು ನಡೆಯುತ್ತಿದ್ದು ಭಕ್ತಜನರಿಗೆ ಧಾರ್ಮಿಕ ನೆಲೆಯಾಗಿವೆ.

**ಹಾವೇರಿ :** ಈ ಊರು ಹಿಂದೆ ನಳಪುರಿ, ಹಾವರಿ ಎಂದೆಲ್ಲ ಪ್ರಸಿದ್ಧವಾಗಿತ್ತು. ಇಲ್ಲಿ ಸಿದ್ಧೇಶ್ವರ ಎಂಬ ದೇವಾಲಯ ಕಲ್ಯಾಣ ಚಾಳುಕ್ಯರ ಕಾಲದ ವಾಸ್ತು ಶೈಲಿಯಲ್ಲಿನ ಕಲಾಕೃತಿಯಾಗಿದೆ. ಇಲ್ಲಿನ ಕೆತ್ತನೆ ಕೆಲಸಗಳು ಮನಸೆಳೆಯುತ್ತವೆ. ಉಮಾಮಹೇಶ್ವರ, ಮಹಾಲಕ್ಷ್ಮಿ, ನಾಗನಾಗಿಣಿಯರು ಸೂರ್ಯ ಮೊದಲಾದ ವಿಗ್ರಹಗಳಿದ್ದು ಯಾತ್ರಿಕರಿಗೆ ಭಕ್ತರಿಗೆ ಪವಿತ್ರ ತಾಣ

ಎನಿಸಿದೆ ಕೂಡ, ನರಸಿಂಹ, ವೀರಭದ್ರ ಹಾಗೂ ಕಲ್ಮೇಶ್ವರ ಇಲ್ಲಿನ ಇತರ ದೇವಳಗಳು.

ಹಾವೇರಿ ತಾಲ್ಲೂಕಿನ ಸಂಗೂರಿನಲ್ಲಿ ವೀರಭದ್ರ ದೇವಾಲಯುವಿದೆ. ದೇವೀ ಹೊಸೂರು ಎಂಬ ಗ್ರಾಮದಲ್ಲಿ ಎಲ್ಲಮ್ಮನ ದೇವಸ್ಥಾನವೊಂದನ್ನು ಕಾಣುತ್ತೇವೆ. ಹನುಮಂತ, ಬಸವಣ್ಣ ದೇವಾಲಯಗಳು ಈ ಗ್ರಾಮದ ಇನ್ನೆರಡು ದೇವಾಲಯಗಳಾಗಿವೆ, ಗಳಗನಾಥ ಒಂದು ಪುಣ್ಯಕ್ಷೇತ್ರ. ವರದಾ ಮತ್ತು ತುಂಗಭದ್ರಾ ನದಿಗಳು ಕೂಡುವೆಡೆಯಲ್ಲಿ ಇದೆ. ಇಲ್ಲಿರುವ ಗಳಗೇಶ್ವರ ದೇವಾಲಯವನ್ನು ಗಳಗೇಶ್ವರ ಮುನಿಗಳು ಸ್ಥಾಪಿಸಿದರೆಂದು ಪ್ರತೀತಿ ಇದೆ. ನಾಲ್ಕು ಸುಂದರವಾದ ಕಂಬಗಳು ಇಲ್ಲಿದ್ದು ಈ ದೇವಾಲಯದ ಆಡಿಪಾಯ ಪಿರಮಿಡ್‌ನ ಆಕಾರದಲ್ಲಿ ಕಾಣುವುದು ಒಂದು ವೈಶಿಷ್ಟ್ಯ. ಹನುಮಂತ ದೇವಾಲಯವೊಂದೂ ಇಲ್ಲಿದೆ.

**ಹೀರೇಕೆರೂರು :** ಹಿಂದೆ ಈ ಊರಿಗೆ ಪಿರಿಯ ಕೆರೆಯೂರು ಎಂಬ ಹೆಸರಿದ್ದಿತು. ಹೀಗೆಂದರೆ ದೊಡ್ಡ ಕೆರೆಯುಳ್ಳ ಊರು ಎಂದು ಅರ್ಥವಿದೆ. ಇಲ್ಲಿ ಜನಾರ್ಧನ, ಆಂಜನೇಯ, ತೋಟದ ವೀರಣ್ಣ ಎಂಬೀ ಮೊದಲಾದ ದೇವಾಲಯಗಳಿವೆ.

ಇದೇ ತಾಲ್ಲೂಕಿನ ವರಾಹ ಗ್ರಾಮದ ವೀರಬ್ರಹ್ಮ ದೇವಾಲಯ, ಬಾಳಂ ಬೀಡ ಗ್ರಾಮದ ವಿಷ ಪರಿಹಾರೇಶ್ವರ ಹಾಗೂ ಬಸವನ ದೇವಾಲಯ ಗಳು, ಚಿನ್ನ ಮುಳಗುಂದ ಹಳ್ಳಿಯ ಚಿಕ್ಕೇಶ್ವರ ದೇವಾಲಯ ರಟ್ಟೀಹಳ್ಳಿಯ ಕದಂಬೇಶ್ವರ ದೇವಾಲಯ, ನಾಗ ವಂದದ ನಾಗಾರ್ಜುನ ದೇವಾಲಯ, ಅಬ್ಬಲೂರಿನ ಬ್ರಹ್ಮೇಶ್ವರ ಮತ್ತು ಸೋಮೇಶ್ವರ ದೇವಾಲಯಗಳು ಪ್ರಸಿದ್ಧ ಎನಿಸಿವೆ.

**ಹಾನಗಲ್ಲು :** ಹಿಂದೆ ಈ ಊರಿಗೆ ಪಾನಂಗಲ್ಲ, ವಿರಾಟನಗರ, ಪಾಂತಿ ಪುರ ಎಂಬ ಹೆಸರುಗಳಿದ್ದವು. ಇದು ಧಾರವಾಡಕ್ಕೆ 90 ಕಿ.ಮೀ. ದೂರ ದಲ್ಲಿದೆ. ಇಲ್ಲಿರುವ ತಾರಕೇಶ್ವರಗುಡಿ ತನ್ನ ಕಲಾತ್ಮಕ ವಾಸ್ತುವಿನಿಂದ

ಪ್ರಸಿದ್ಧಿಯಾಗಿದೆ. ದೊಡ್ಡ ದೇವಾಲಯವೂ ಹೌದು. ಕಲ್ಯಾಣದ ಚಾಳುಕ್ಯರ ಕಾಲದ ಒಂದು ಉತ್ತಮ ದೇವಸ್ಥಾನ ಇದಾಗಿದೆ. ರಾಮಾಯಣ ಮಹಾ ಭಾರತ ಭಾಗವತದ ಕೆಲವು ಕಥೆಗಳ ಚಿತ್ರಗಳನ್ನು ಇಲ್ಲಿ ಕೆತ್ತಲಾಗಿದೆ. ಇಲ್ಲಿರುವ ಮಂಟಪದಲ್ಲಿ ಎರಡು ದೊಡ್ಡ ಶೈವ ದ್ವಾರಪಾಲಕರ ವಿಗ್ರಹ ಗಳನ್ನಿರಿಸಲಾಗಿದೆ. ಈ ಗುಡಿಯ ಆವರಣದಲ್ಲಿ ಗಣಪತಿ ಗುಡಿಯೊಂದಿದೆ.

ಹಾನಗಲ್ಲು ಇತಿಹಾಸ ಪ್ರಸಿದ್ಧವಿರುವ ಊರೂ ಆಗಿದೆ. ಇಲ್ಲಿನ ಒಂದು ಹಳೆಕೋಟೆಯಲ್ಲಿ ವೀರಭದ್ರನ ಗುಡಿ ಇದೆ. ಪಟ್ಟಣದಲ್ಲಿ ದುರ್ಗಾ, ಈಶ್ವರ ಮೊದಲಾದ ಏಳೆಂಟು ಗುಡಿಗಳಿವೆ.

## ಹಾನಗಲ್ಲು ತಾಲ್ಲೂಕಿನ ದೇವಾಲಯಗಳು

| | | | |
|---|---|---|---|
| 1. | ಅರಳೇಶ್ವರ ಗ್ರಾಮ | — | ಕದಂಬೇಶ್ವರ ದೇವಾಲಯ |
| 2. | ಬಾಳಂಬೀಡ | — | ರಾಮೇಶ್ವರ, ಕಮಲೇಶ್ವರ ಗುಡಿಗಳು |
| 3. | ಹಿರೇ ಬಾಸೂರು | — | ವಿಶ್ವೇಶ್ವರ, ಹನುಮಂತ |
| 4. | ಹೊಂಕಣ | — | ರಾಮಲಿಂಗೇಶ್ವರ ಗುಡಿ |
| 5. | ಜಕ್ಕನಾಯಕನಕೊಪ್ಪ | — | ಸರ್ವೇಶ್ವರ ದೇವ ದೇವಾಲಯ |
| 6. | ಯಳವಟ್ಟಿ | — | ರಾಮಲಿಂಗೇಶ್ವರ ದೇವಾಲಯ |
| 7. | ಬೆಳವತ್ತಿ | — | ಗೋಕುಲೇಶ್ವರ ದೇವಸ್ಥಾನ |
| 8. | ಹಳ್ಳಿ ಬೈಲು | — | ಸಿದ್ಧರಾಮೇಶ್ವರ |
| 9. | ಕೂಡಲು (ಧರ್ಮಾ ಮತ್ತು ವರದಾ ನದಿಗಳ ಸಂಗಮ) | — | ಸಂಗಮೇಶ್ವರ ದೇವಾಲಯ |
| 10. | ಬೊಮ್ಮನ ಹಳ್ಳಿ | — | ಈಶ್ವರ ದೇವಾಲಯ |
| 11. | ನರೇಗಲ್ | — | ಬಸಪ್ಪ ದೇವಾಲಯ |

**ರೋಣ :** ದ್ರೋಣಾಚಾರ್ಯರಿಂದಾಗಿ ಊರಿಗೆ ರೋಣ ಎಂಬ ಹೆಸರಿದೆ. ಇಲ್ಲಿ ದ್ರೋಣಾಚಾರ್ಯರ ಗುಡಿಯೂ ಇದೆ. ಇದೊಂದು ಅಪರೂಪದ ಗುಡಿ. ಒಳಗೆ ದ್ರೋಣಾಚಾರ್ಯರ ಮೂರ್ತಿ ಹಾಗೂ ದೇವಳದಲ್ಲಿ ನಂದಿ ವಿಗ್ರಹವೂ ಇದೆ. ಬಸ್ತಿ ಗುಡಿ (ಪಾರ್ಶ್ವನಾಥನ ಮೂರ್ತಿ ಇದೆ) ಸಂಗಮೇಶ್ವರ, ಲೋಕನಾಥ, ಅನಂತಶಯನ ದೇವಾಲಯಗಳು ಇಲ್ಲಿ ಪ್ರೇಕ್ಷಣೀಯ ಎನಿಸಿವೆ. ದ್ರೋಣಾಚಾರ್ಯರ ಗುಡಿ ಪುರಾಣ ಕಾಲದಿಂದ ಪ್ರಸಿದ್ಧ.

ಈ ತಾಲ್ಲೂಕಿನ ಗಜೇಂದ್ರ ಗಡ ಇತಿಹಾಸ ಪ್ರಸಿದ್ಧ. ಈ ಊರಿನ ವಿರೂಪಾಕ್ಷ ದೇವಾಲಯ ಶಿಥಿಲವಾಗಿದೆ. ದೇವಾಲಯದ ಪ್ರವೇಶದಲ್ಲಿ ಕಾಣುವ ಸರಸ್ವತಿ ವಿಗ್ರಹ ನೋಡತಕ್ಕುದಾಗಿದೆ. ಇಲ್ಲಿ ದುರ್ಗಾದೇವಿ, ರಾಮಲಿಂಗ ದೇವಾಲಯಗಳು, ರಾಮ ದೇವಾಲಯ ಇವೆ. ಊರಿಗೆ ಸಮೀಪದ ದೊಡ್ಡ ಗವಿಯ ಬಳಿ ವೀರಭದ್ರ ಗುಡಿ ಇದ್ದು ಇದೊಂದು ಯಾತ್ರಾಸ್ಥಳವೆನಿಸಿದೆ. ಗುಡಿಯ ಮುಂದೆ ಅಂತರ ಗಂಗೆ ಇದೆ. ಇದೊಂದು ಸಣ್ಣ ಕೊಳ. ಕೆಲವು ತೀರ್ಥಗಳೂ ಇಲ್ಲಿವೆ. ಕಲ್ಲೇಶ್ವರ, ಕಾಲಕಾಲೇಶ್ವರ ದೇವಸ್ಥಾನಗಳು ಇಲ್ಲಿನ ಇತರ ದೇವಾಲಯಗಳು.

ರೋಣಕ್ಕೆ 20 ಕಿ.ಮೀ. ದೂರದ ನರೇಗಲ್ಲ ದೇವಾಲಯಗಳ ಊರೇ ಆಗಿದೆ. ಅಲ್ಲದೆ ಹಲವು ವೀರಶೈವ ಮಠಗಳೂ ಇವೆ. ತ್ರಿಪುರಾಂತಕೇಶ್ವರ, ಚಂದ್ರಮೌಳೇಶ್ವರ, ಸೋಮೇಶ್ವರ, ಕಲ್ಮೇಶ್ವರ, ಮಲ್ಲಿ ಬ್ರಹ್ಮದೇವ, ಹಾಗೂ ವೀರಭದ್ರ, ದುರ್ಗಾ, ಆಂಜನೇಯ, ಮಲ್ಲಿಕಾರ್ಜುನ ದೇವಾಲಯಗಳಿವೆ. ಸೋಮೇಶ್ವರ ದೇವಾಲಯ ಬಹಳ ಸುಂದರವಾಗಿರುವ ದೇವಸ್ಥಾನ, ಇಲ್ಲಿ ಸುಂದರವಾದ ಕಂಬಗಳಿವೆ. ಈಶ್ವರ ಲಿಂಗವಿದ್ದು ಇಲ್ಲಿ ಇನ್ನೂ ಅನೇಕ ಪ್ರತಿಮೆಗಳನ್ನು ನೋಡಬಹುದು. ತ್ರಿಪುರಾಂತಕೇಶ್ವರ ಕಲ್ಯಾಣ ಚಾಳುಕ್ಯ ಶೈಲಿಯದಾಗಿದೆ.

ರೋಣ ತಾಲ್ಲೂಕಿನ ಸವಡಿ ಗ್ರಾಮದಲ್ಲಿ ಬ್ರಹ್ಮದೇವ, ನಾರಾಯಣ ದೇವಾಲಯಗಳು ಇವೆ.

**ರಾಣಿ ಬೆನ್ನೂರು :** ಧಾರವಾಡಕ್ಕೆ 125 ಕಿ.ಮೀ. ದೂರದಲ್ಲಿದೆ. ಇಲ್ಲಿನ ಸಿದ್ಧೇಶ್ವರ ದೇವಾಲಯ ಪ್ರಾಚೀನ ಕಾಲದ್ದೆನ್ನಲಾಗಿದೆ. ಹಜರತ್

ಜಮಾಲ್ ಷಾವಲೋ ಎಂಬ ಮಹಮ್ಮದೀಯ ಸಂತರ ಸಮಾಧಿ ಇಲ್ಲಿದ್ದು ಮುಸಲ್ಮಾನರಿಗೆ ಪವಿತ್ರ ಕ್ಷೇತ್ರ ಎನಿಸಿದೆ.

## ರಾಣೆಬೆನ್ನೂರು ತಾಲ್ಲೂಕಿನ ದೇವಾಲಯಗಳು

1. ಚೌಡದಾನಪುರ—ಮುಕ್ತೇಶ್ವರ ದೇವಾಲಯ (ಚಾಳುಕ್ಯ ಶೈಲಿ) ಗುಹ ಮುನಿ ದೇವಾಲಯ, ರುದ್ರಮುನಿ ದೇವಾಲಯ, ವೀರಭದ್ರ ದೇವಾಲಯ. ಇದು ಅವಿಮುಕ್ತ ಕ್ಷೇತ್ರ. ವಚನಕಾರ ಅಂಬಿಗರ, ಚೌಡಯ್ಯ ಈ ಊರಿನವನು.
2. ಗುಡ್ಡ ಗುಡ್ಡಾಪುರ (ದೇವರ ಗುಡ್ಡ)—ಮಲ್ಲಾರಿ ದೇವಾಲಯ
3. ಹುಲಿಹಳ್ಳಿ—ರಾಮೇಶ್ವರ ದೇವಾಲಯ.
4. ಐರಣಿ—ಐರಾವತ ಕ್ಷೇತ್ರ ; ಕೊಟ್ಟೂರೇಶ್ವರ ಮಠ, ಕೊಟ್ಟೂರೇಶ್ವರ ದೇವಾಲಯ, ಮಲ್ಲಿಕಾರ್ಜುನ, ಮುಂಡ ಬಸವ, ಮಳೆಮಲ್ಲಪ್ಪ ಆಲಯಗಳು.

**ಶಿಗ್ಗಾಂವಿ :** ಧಾರವಾಡಕ್ಕೆ 65 ಕಿ.ಮೀ. ದೂರದಲ್ಲಿದೆ. ಕಲಮೇಶ್ವರ, ಬಸವೇಶ್ವರ ದೇವಾಲಯಗಳಿವೆ. ಈ ತಾಲ್ಲೂಕಿನ ಬಂಕಾಪುರ ಇತಿಹಾಸ ಪ್ರಸಿದ್ಧ ಸ್ಥಳ, ಬಂಕಾಪುರದಲ್ಲಿ ರಂಗಸ್ವಾಮಿ ನಗರೇಶ್ವರ, ಸಿದ್ಧೇಶ್ವರ ದೇವಾಲಯಗಳಿವೆ. ರಂಗಸ್ವಾಮಿ ದೇವಾಲಯವನ್ನು ಅರವತ್ತು ಕಂಬದ ಗುಡಿ ಎಂದೂ ಕರೆಯುತ್ತಾರೆ. ಇದು ಕಲ್ಯಾಣ ಚಾಳುಕ್ಯರ ಕಾಲದ ಕಟ್ಟಡ ಸಿದ್ದೇಶ್ವರ ದೇವಾಲಯ ಹಲವು ಸುಂದರ ಕೆತ್ತನೆಗಳಿಂದ ಕೂಡಿದೆ. ಹುಲಗೂರಿನ ಸಿದ್ಧಲಿಂಗ ದೇವಾಲಯ, ಹಿರೇ ಬೆಂಡಿಗೇರಿಯ ಕಾಳಪ್ಪನ ದೇವಾಲಯ ಈ ತಾಲ್ಲೂಕಿನ ಇನ್ನಿತರ ದೇವಾಲಯಗಳು.

**ಶಿರಹಟ್ಟಿ :** ಧಾರವಾಡಕ್ಕೆ 89 ಕಿ.ಮೀ. ದೂರದಲ್ಲಿದೆ. ಇಲ್ಲಿ ಅವ್ವಲಿಂಗವ್ವನವರ ಮಠ ಎಂದು ಪ್ರಸಿದ್ಧವಾದ ಮಠವಿದೆ. ಮಠದ ಕಟ್ಟಡ ಸುಂದರ ಶಿಲ್ಪ. ಇಲ್ಲಿನ ಮುಖ ಮಂಟಪದ ಎದುರು ನಾಲ್ಕು ಕಲ್ಲಿನ ಆನೆಗಳೂ ಹಾಗೂ ಮಂಟಪದಲ್ಲಿ ಒಟ್ಟು ನಾಲ್ಕು ಸಾಲುಗಳಲ್ಲಿ 151 ಅಡಿ

ಎತ್ತರದ ಇಪ್ಪತ್ತು ವಿಗ್ರಹಗಳಿವೆ. ಈ ವಿಗ್ರಹಗಳು ವಿವಿಧ ಭಂಗಿಗಳಲ್ಲಿವೆ, ಈ ಮಠ 18ನೆಯ ಶತಮಾನದ ರಚನೆಯಾಗಿದೆ. ಲಕ್ಷ್ಮೇಶ್ವರ ದೇಸಗತಿ ಸ್ಥಾಪಕಳಾದ ಅವ್ವಲಿಂಗವ್ವನವರು ಕಟ್ಟಿಸಿದ್ದೆನ್ನಲಾಗಿದೆ.

## ಶಿರಹಟ್ಟಿ ತಾಲ್ಲೂಕಿನ ದೇವಾಲಯಗಳು

1. ಬೆಳ್ಳಟ್ಟಿ–ರಾಮಲಿಂಗ ದೇವಾಲಯ
2. ಯಳವತ್ತಿ–ಗುಂಡೇಶ್ವರ ಗುಡಿ
3. ಅಡರಕಟ್ಟಿ–ಬಸವೇಶ್ವರ ದೇವಾಲಯ
4. ವರವಿ–ಮೌನೇಶ್ವರ
5. ಶ್ರೀಮಂತಗಡ–ವಳ್ಳಮ್ಮ ದೇವಾಲಯ
6. ದೇವಿಹಾಳ–ಹೊಳಲಮ್ಮ ದೇವಾಲಯ ಆರು ಅಡಿ ಎತ್ತರದ ಅಷ್ಟಭುಜಗಳುಳ್ಳ ದೇವತಾಮೂರ್ತಿ ಇದೆ,
7. ಲಕ್ಷ್ಮೇಶ್ವರ–ಶಿರಹಟ್ಟಿಗೆ 21 ಕಿ.ಮೀ. ದೂರದಲ್ಲಿದೆ. ಇಲ್ಲಿ ಪ್ರಸಿದ್ಧವಾದ ಹೋಜೇಶ್ವರ ದೇವಾಲಯ, ಲಕ್ಷ್ಮೀನಾರಾಯಣ, ರಾಮಚಂದ್ರ ದೇವಾಲಯಗಳಿವೆ. ಶಂಖ ಬಸದಿ ಬಹು ಹಳೆಯ ಬಸದಿ. ಸೋಮೇಶ್ವರ ದೇವಾಲಯವೂ ಪ್ರಸಿದ್ಧವೆನಿಸಿದ್ದ ದೇವಳ.

**ಬ್ಯಾಡಗಿ :** ಧಾರವಾಡ ಜಿಲ್ಲೆಯಲ್ಲಿ ಮೆಣಸಿನಕಾಯಿ ಕೃಷಿಗೆ ಪ್ರಸಿದ್ಧವಾದ ಊರು. ಈ ತಾಲ್ಲೂಕಿನ ಕಾಗಿನೆಲೆ ಹರಿದಾಸ ಶ್ರೇಷ್ಠ ಕನಕದಾಸರಿಗೆ ಪವಿತ್ರ ಸ್ಥಳವಾಗಿತ್ತು. ಇಲ್ಲಿ ಅವರೇ ಕಟ್ಟಿಸಿದ ಆದಿಕೇಶವನ ಗುಡಿ ಇದೆ. ಲಕ್ಷ್ಮೀನರಸಿಂಹ, ಕಾಳಿ ಹಸ್ತೀಶ್ವರ, ವೀರಭದ್ರ, ಸೋಮೇಶ್ವರ, ಬಸವಣ್ಣ, ಆದಿಶಕ್ತಿ ಇತರ ದೇವಾಲಯಗಳು. ಮೋಟೆ ಬೆನ್ನೂರಿನಲ್ಲಿ ಮಲ್ಲಿಕಾರ್ಜುನ ದೇವಾಲಯವಿದೆ. ಇದೇ ತಾಲ್ಲೂಕಿನ ಕದರ ಮಂಡಲಗಿಯಲ್ಲಿ ಪುರಾಣ ಪ್ರಸಿದ್ಧವಾದ ಹನುಮಂತನ ಗುಡಿ ಇದೆ.

**ಮುಂಡರಗಿ :** ಧಾರವಾಡ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರ ಭೀಮರಾಯನು ಇಲ್ಲಿಯವನೇ. ಇಲ್ಲಿ ಕನಕ ನರಸಿಂಹ ದೇವಾಲಯವಿದೆ. ಈ ತಾಲ್ಲೂಕಿನ ಡಂಬಳ ಇತಿಹಾಸ ಪ್ರಸಿದ್ಧ. ಇಲ್ಲಿ ಒಂದು ಜೈನ

ದೇವಾಲಯ, ದೊಡ್ಡ ಬಸವಣ್ಣ ದೇವಾಲಯ ಇವೆ. ದೊಡ್ಡ ಬಸಪ್ಪ ಗುಡಿ ಗರ್ಭಗುಡಿ, ಸಭಾ ಮಂಟಪ, ಎರಡು ಮಂಟಪ, ಅರ್ಧ ಮಂಟಪ, ಇವುಗಳನ್ನೊಳಗೊಂಡಿದೆ. ಇದೊಂದು ವಿಶಿಷ್ಟವೆನಿಸಿದ ದೇವಾಲಯ ಗೋಪುರ ವಿನ್ಯಾಸ ವಿಶಿಷ್ಟವಾಗಿದ್ದು ದೇವಾಲಯ ಅಪೂರ್ವ ಎನಿಸುವಂತೆ ಮಾಡಿದೆ. ಉಬ್ಬು ಶಿಲ್ಪಗಳು ಹಲವನ್ನು ಇಲ್ಲಿ ನೋಡಬಹುದು. ಇದೇ ತಾಲ್ಲೂಕಿನ ಗುಮ್ಮಗೋಳ ಎಂಬಲ್ಲಿ ಬಸವಣ್ಣ ದೇವಾಲಯವಿದೆ.

**ನರಗುಂದ :** ಧಾರವಾಡ ಜಿಲ್ಲೆಯ ನವಲಗುಂದಕ್ಕೆ 20 ಕಿ.ಮೀ. ದೂರದಲ್ಲಿದೆ. ಬಾಬಾಸಾಹೇಬ (ಭಾಸ್ಕರರಾವ್ ಅಪ್ಪಾಸಾಹೇಬ್) ಎಂಬುವನು ಬ್ರಿಟಿಷರ ವಿರುದ್ಧ ಯುದ್ಧ ಮಾಡಿದ ವೀರ. ಇವನು ಈ ಊರಿನವನೇ, ಇಲ್ಲಿ ಶಂಕರ ಲಿಂಗ, ಹನುಮಂತ, ಮಹಾಬಲೇಶ್ವರ, ವೆಂಕಟೇಶ ದೇವಾಲಯಗಳಿವೆ.

**ನವಲ ಗುಂದ :** ಹೇಳಿಕೊಳ್ಳುವಂಥ ದೇವಾಲಯಗಳು ಈ ತಾಲ್ಲೂಕಿನಲ್ಲಿ ಅಷ್ಟಾಗಿಲ್ಲ. ಚಿಕ್ಕ ತಾಲ್ಲೂಕು ಸಹ ಈ ತಾಲ್ಲೂಕಿನ ಅಣ್ಣಿಗೇರಿಯಲ್ಲಿ ಅಮೃತೇಶ್ವರ ದೇವಾಲಯ, ನವಲಗುಂದದ ಗವಿಮಠದಲ್ಲಿ ಎಡೆಯೂರು ಸಿದ್ಧ ಲಿಂಗೇಶ್ವರ ಜಾತ್ರೆ ವರ್ಷಂಪ್ರತಿ ನಡೆಯುತ್ತದೆ.

**ಸವಣೂರು :** ಹಿಂದೆ ಇದು ಶ್ರಾವಣೂರು ಎಂದು ಹೆಸರಾಗಿತ್ತು. ಇಲ್ಲಿ ಸತ್ಯಬೋಧ ಸ್ವಾಮಿಗಳ ಮಠ ಹೆಸರಾಗಿದೆ. ಕೆಲವು ದೇವಸ್ಥಾನಗಳಿವೆ. ವೈಭವದ ವಾಸ್ತು ಕೃತಿಗಳೇನಲ್ಲ, ಈ ತಾಲ್ಲೂಕಿನ ಮಂತ್ರೋಡಿಯಲ್ಲಿ ಸಿದ್ಧೇಶ್ವರ ಮಠ ಪ್ರಸಿದ್ಧವಾದುದು. ಕರಡಗಿಯಲ್ಲಿರುವ ವೀರಭದ್ರ ದೇವಾಲಯ ಹೆಸರಾಗಿದೆ. ಸವಣೂರನ್ನು ಔರಂಗ ಜೇಬನ ಕಾಲದಲ್ಲಿ ನವಾಬರು ಕೆಲವರು ಆಳಿದ್ದರು. ಬ್ರಿಟಿಷರ ಆಧಿಪತ್ಯಕ್ಕೂ ಈ ಊರು ಒಳಗಾಗಿತ್ತು.

**ಧಾರವಾಡ :** ಹುಬ್ಬಳ್ಳಿ-ಧಾರವಾಡ ನಗರ ಸಭೆಯ ಪ್ರಮುಖ ಪಟ್ಟಣಗಳಲ್ಲೊಂದು ಈ ಊರಿನಲ್ಲಿ ಮುರುಘಾ ಮಠ ಒಂದು ಪ್ರಸಿದ್ಧ

ವೀರಶೈವ ಮಠವಾಗಿದೆ, ಕೆಲವು ದೇವಾಲಯಗಳೂ ಇಲ್ಲಿವೆ. ಉಳವಿ ಬಸಪ್ಪ ದೇವಾಲಯಹೆಸರಾಗಿದ.

ಧಾರವಾಡ ತಾಲ್ಲೂಕಿನ ಅಮ್ಮಿನಭಾವಿ ಒಂದು ದೊಡ್ಡ ಹಳ್ಳಿ, ಇಲ್ಲಿ ನೇಮಿನಾಥ ಜೈನ ದೇವಾಲಯವಿದೆ. ಕಲಮೇಶ್ವರ, ಮಲ್ಲಿಕಾರ್ಜುನ ಇತರ ದೇವಾಲಯಗಳು. ಹೆಬ್ಬಳ್ಳಿ ಎಂಬಲ್ಲಿ ಶಂಭುಲಿಂಗ ದೇವಾಲಯವೂ ನರೇಂದ್ರ ಎಂಬಲ್ಲಿ ಶಂಕರಲಿಂಗ ದೇವಾಲಯವೂ ಇದೆ.



## ಹೊಸಪೇಟೆ

1. ಹಂಪೆ—ವಿಜಯನಗರ ಸಾಮ್ರಾಜ್ಯವಿದ್ದ ಸ್ಥಳ. ಇತಿಹಾಸ ಪ್ರಸಿದ್ಧವೂ ಪುರಾಣ ಪ್ರಸಿದ್ಧವೂ ಆದ ಪಂಪಾಕ್ಷೇತ್ರ. ಹಿಂದಿನ ಕಿಷ್ಕಿಂಧ ಪ್ರದೇಶ.

ವಿರೂಪಾಕ್ಷ ದೇವಾಲಯ
ಅಚ್ಯುತರಾಯ ದೇವಾಲಯ
ಗಾಣಿಗಿತ್ತಿ ಜಿನಾಲಯ
ವಿಠಲರಾಯ ಗುಡಿ
ಪಟ್ಟಾಭಿರಾಮ ಗುಡಿ
ಹಜಾರ ರಾಮಸ್ವಾಮಿ ದೇವಾಲಯ
ಪಂಪಾಪತಿ ದೇವಾಲಯ
ಹೇಮಕೂಟದ ಗುಡಿಗಳ ಸಮೂಹ
ಚಂದ್ರಶೇಖರ ದೇವಾಲಯ

ತುಂಗಭದ್ರಾನದಿ ಬಳಿ ಬೆಟ್ಟದ ಇಳಿಜಾರಿನಲ್ಲಿರುವ ವೈಷ್ಣವ ದೇವಾಲಯಗಳ ಸಮೂಹ ಹಾಗೂ ಇತರ ಹಲವು ಜೈನ ದೇವಾಲಯಗಳು.

2. ತಿಮ್ಮಲಾಪುರ—ಗೋಪಾಲ ಕೃಷ್ಣ ದೇವಾಲಯ

## ಸಂಡೂರು

1. ಸಂಡೂರು—ನರಸಿಂಹಸ್ವಾಮಿ ದೇವಾಲಯ, ವಿಠೋಬ ಗುಡಿ, ಕುಮಾರಸ್ವಾಮಿ ದೇವಾಲಯ, ಪಾರ್ವತಿ ದೇವಾಲಯ, ಹರಿಶಂಕರ ದೇವಾಲಯ.

ಕುಮಾರಸ್ವಾಮಿ ಮತ್ತು ಪಾರ್ವತಿ ದೇವಾಲಯಗಳು ವಾಸ್ತುಶಿಲ್ಪ ದೃಷ್ಟಿಯಿಂದ ಗಮನಾರ್ಹವಾಗಿವೆ.

## ಹರಪನಹಳ್ಳಿ

1. ಹರಪನಹಳ್ಳಿ—ಹನುಮಂತನ ಗುಡಿ, ಬೋಗಾರ ಬಸದಿ (ಜೈನ ದೇವಾಲಯ )

2. ಬಗಲಿ—ಕಲ್ಲೇಶ್ವರ ದೇವಾಲಯ (ಚಾಳುಕ್ಯ ಶೈಲಿ, ಅಲಂಕಾರ ಕೆತ್ತನೆಗಳಿವೆ)

3. ತಿಮ್ಮಲಾಪುರ—ವೆಂಕಟೇಶ್ವರ ದೇವಾಲಯ

4. ನೀಲಗುಂದ—ಭೀಮೇಶ್ವರ ದೇವಾಲಯ

5. ಉಚ್ಚಂಗಿದುರ್ಗ—ಉಚ್ಚಂಗಿಯಮ್ಮನ ದೇವಾಲಯ

## ಹಗರಿ ಬೊಮ್ಮನಹಳ್ಳಿ

1. ಕೋಗಳಿ—ಜೈನ ದೇವಾಲಯ

2. ತಾಂಬ್ರಹಳ್ಳಿ—ರಂಗನಾಥ ದೇವಾಲಯ

## ಹೂವಿನ ಹಡಗಲಿ

1. ಹಡಗಲಿ—ಕಲ್ಲೇಶ್ವರ, ಕೇಶವಸ್ವಾಮಿ ದೇವಾಲಯಗಳು.

2. ಸೋಗಿ—ಕಲ್ಲೇಶ್ವರ ದೇವಾಲಯ

3. ಮಾಗಳ—ವೇಣುಗೋಪಾಲಸ್ವಾಮಿಗುಡಿ (ಚಾಳುಕ್ಯ ಶೈಲಿ)
ಸೂರ್ಯನಾರಾಯಣ ದೇವಸ್ಥಾನ

4. ಮೈಲಾರ—ಮೈಲಾರಲಿಂಗ–ಜಾತ್ರೆಗೆ ಹೆಸರಾಗಿದೆ.

5. ಹೊಳಲು—ಅನಂತಶಯನ ಗುಡಿ

## ಹೊಸಪೇಟೆ

1. ಹಂಪೆ—ವಿಜಯನಗರ ಸಾಮ್ರಾಜ್ಯವಿದ್ದ ಸ್ಥಳ. ಇತಿಹಾಸ ಪ್ರಸಿದ್ಧವೂ ಪುರಾಣ ಪ್ರಸಿದ್ಧವೂ ಆದ ಪಂಪಾಕ್ಷೇತ್ರ. ಹಿಂದಿನ ಕಿಷ್ಕಿಂಧ ಪ್ರದೇಶ.

ವಿರೂಪಾಕ್ಷ ದೇವಾಲಯ
ಅಚ್ಯುತರಾಯ ದೇವಾಲಯ
ಗಾಣಗಿತ್ತಿ ಜಿನಾಲಯ
ವಿಠಲರಾಯ ಗುಡಿ
ಪಟ್ಟಾಭಿರಾಮ ಗುಡಿ
ಹಜಾರ ರಾಮಸ್ವಾಮಿ ದೇವಾಲಯ
ಪಂಪಾಪತಿ ದೇವಾಲಯ
ಹೇಮಕೂಟದ ಗುಡಿಗಳ ಸಮೂಹ
ಚಂದ್ರಶೇಖರ ದೇವಾಲಯ

ತುಂಗಭದ್ರಾನದಿ ಬಳಿ ಬೆಟ್ಟದ ಇಳಿಜಾರಿನಲ್ಲಿರುವ ವೈಷ್ಣವ ದೇವಾಲಯಗಳ ಸಮೂಹ ಹಾಗೂ ಇತರ ಹಲವು ಜೈನ ದೇವಾಲಯಗಳು.

2. ತಿಮ್ಮಲಾಪುರ—ಗೋಪಾಲ ಕೃಷ್ಣ ದೇವಾಲಯ

## ಸಂಡೂರು

1. ಸಂಡೂರು—ನರಸಿಂಹಸ್ವಾಮಿ ದೇವಾಲಯ, ವಿಠೋಬ ಗುಡಿ, ಕುಮಾರಸ್ವಾಮಿ ದೇವಾಲಯ, ಪಾರ್ವತಿ ದೇವಾಲಯ, ಹರಿಶಂಕರ ದೇವಾಲಯ.

ಕುಮಾರಸ್ವಾಮಿ ಮತ್ತು ಪಾರ್ವತಿ ದೇವಾಲಯಗಳು ವಾಸ್ತುಶಿಲ್ಪ ದೃಷ್ಟಿಯಿಂದ ಗಮನಾರ್ಹವಾಗಿವೆ.

2. ಬೊಮ್ಮಗಟ್ಟ—ಹುಲಿಕುಂಟಿರಾಯ (ಆಂಜನೇಯ) ದೇವಾಲಯ

## ಸಿರಗುಪ್ಪ

1. ಸಿರಗುಪ್ಪ—ಕೊಟ್ಟೂರು ಬಸವಣ್ಣ ದೇವಾಲಯ, ಶಂಭುಲಿಂಗ ದೇವಾಲಯ, ಶ್ರೀವಸುಧೇಂದ್ರಸ್ವಾಮಿಗಳ ಬೃಂದಾವನ.

2. ದರೂರು—ವೀರಭದ್ರಸ್ವಾಮಿ ದೇವಳ

3. ಕೆಂಚನ ಗುಡ್ಡ—ಗಂಗಾಧರ ದೇವಾಲಯ, ಬೃಂದಾವನ (ರಾಘವೇಂದ್ರ ಸ್ವಾಮಿಗಳ ಶಿಷ್ಯರೊಬ್ಬರದಾಗಿದೆ)

## ಕೂಡ್ಲಿಗಿ

1. ಕೂಡ್ಲಿಗಿ—ಸಿದ್ಧೇಶ್ವರ ದೇವಾಲಯ

2. ಅಂಬಲಿ—ಕಲ್ಲೇಶ್ವರ (ಚಾಳುಕ್ಯಶೈಲಿ) ದೇವಾಲಯ

3. ಗುಣಸಾಗರ—ಗೋಪಾಲಕೃಷ್ಣ ದೇವಾಲಯ

4. ಉಜ್ಜನಿ—ಉಜ್ಜಯಿನಿ ಸದ್ಧರ್ಮಪೀಠ–ವೀರಶೈವ ಮಠ

5. ಕಾನಮಡುವು—ಶರಣಾರ್ಯರ ಸಮಾಧಿ, ವೀರಶೈವ ಮಠ

—※—

# ಅನುಬಂಧ

## ''ಕಾಮಧೇನುಹಳ್ಳಿ ಗ್ರಾಮದ ದೇವಾಲಯಗಳ ಮಾಹಿತಿ''

---

ಕೋಲಾರಕ್ಕೆ 4 ಕಿ.ಮೀ. ಸಮೀಪದಲ್ಲಿ ಕಾಮಧೇನುಹಳ್ಳಿ ಎಂಬ ಗ್ರಾಮವಿದ್ದು ಗ್ರಾಮದ ಪೂರ್ವಕ್ಕೆ ಗ್ರಾಮಕ್ಕೆ ಅಂಟಿಕೊಂಡಂತೆ ಇರುವ ಕಾಮಧೇನು ಪುಣ್ಯಕ್ಷೇತ್ರವಿದೆ. ಇಲ್ಲಿ ಕಾಮಧೇನುಮಾತೆ ದೇವಾಲಯ ಮತ್ತು ಕಾಶಿ ವಿಶ್ವನಾಥ ದೇವಾಲಯ ನವಗ್ರಹಗಳ ಮಂದಿರ ಮತ್ತು ನಾಗ ದೇವತೆಗಳು ಮುಂತಾದ ದೇವಾಲಯಗಳಿದ್ದು ಇದೊಂದು ಪುಣ್ಯಕ್ಷೇತ್ರ ವೆನಿಸಿದೆ. ಈ ದೇವಾಲಯಗಳು ಸಾವಿರಾರು ವರ್ಷಗಳ ಹಿಂದಿದ್ದು ಸ್ಥಾಪನೆಯ ವಿವರಗಳು ಗೊತ್ತಿಲ್ಲ. ಶಿಲಾಶಾಸನಗಳಿದ್ದು ಅವು ಸಹ ಬೆಳಕಿಗೆ ಬಂದಿಲ್ಲ.

ಗ್ರಾಮದ ಪಶ್ಚಿಮಕ್ಕೆ ಚೌಡೇಶ್ವರೀ ದೇವರ ಪ್ರಾಚೀನ ಮಂದಿರ ಮತ್ತು ವಿಶ್ವಾಮಿತ್ರ, ವಸಿಷ್ಠ, ರಾಮಸೀತೆಯರ ಸ್ಮಾರಕ ಮಂದಿರಗಳೂ ಮತ್ತು ಅರ್ಧ ಕಿ.ಮೀ. ದೂರದಲ್ಲಿ ಸತ್ಯಮ್ಮ ದೇವತೆಯ ಪುರಾತನ ಆಲಯ ವನ್ನು ಇತ್ತೀಚೆಗೆ ಪುನರುದ್ಧಾರ ಮಾಡಿರುತ್ತಾರೆ. ಇದೇ ದಾರಿಯಲ್ಲಿ ರಾಜ್ಯ ಯುವಜನ ಇಲಾಖೆಯ ವತಿಯಿಂದ ಒಂದು ಯೋಗ ಮಂದಿರ ನಿರ್ಮಿಸಿದ್ದು ಅನೇಕ ಅಭ್ಯರ್ಥಿಗಳು ಅಭ್ಯಸಿಸುತ್ತಿದ್ದಾರೆ. ಗ್ರಾಮದ ಮಧ್ಯಭಾಗದಲ್ಲಿ ಲಕ್ಷ್ಮೀವೆಂಕಟರಮಣಸ್ವಾಮಿ ದೇವಾಲಯ ಪ್ರಾಚೀನದ್ದಾದರೂ ಒಂದೆರಡು ಶತಮಾನಗಳ ಹಿಂದೆ ಪುನರುದ್ಧಾರ ಮಾಡಿರುವ ಕುರುಹುಗಳಿವೆ.

ಇವಲ್ಲದೇ ಮಾರಮ್ಮ, ಗಂಗಮ್ಮ, ಯಲ್ಲಮ್ಮ ದೇವತೆಗಳ ದೇವಾಲಯ ಗಳಿವೆ. ಮೂರು ಕಡೆ ಪುಷ್ಕರಣಿಗಳಿದ್ದರೂ ಶಿಥಿಲವಾಗಿವೆ. ದೇವಾಲಯಗಳು ಉತ್ತಮ ಸ್ಥಿತಿಯಲ್ಲಿದ್ದು ಗ್ರಾಮಸ್ಥರ ಆದರಣೆಯಿಂದ ಕೆಲವು ಕಡೆ ನಿತ್ಯ ಪೂಜೆ ನಡೆಯುತ್ತಿದೆ.

ಕೆ.ಎಂ.ಜೆ. ಮೌನಿ

# ಇಟಗಿ ಮಹದೇವ ದೇವಸ್ಥಾನ

ಹನ್ನೊಂದನೆಯ ಶತಮಾನದ ಆರನೆಯ ವಿಕ್ರಮಾದಿತ್ಯನ ಕಾಲ. ಕರ್ನಾಟಕದ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆಯುವ ಕಾಲ. ನರ್ಮದಾ ನದಿಯಿಂದ, ದಕ್ಷಿಣದ ಈಗಿನ ಮೈಸೂರನ್ನೊಳಗೊಂಡ ದಕ್ಷಿಣ ಭಾರತದ ಉದ್ದಗಲಕ್ಕೂ ತನ್ನ ಸಾಮ್ರಾಜ್ಯವನ್ನು ಕಟ್ಟಿ, ಕನ್ನಡದ ಕೀರ್ತಿ ಎತ್ತಿ ಹಿಡಿದಾತ. "ಧರೆಯಂ ವಾರಶಿಪರ್ಯನ್ತಮನವಯ ವದಿಂದುರ್ವಿನೀತಾವನೀಪಾಳರ ಬೇರಂ ಕೀಳ್ತು ನೀರೊಳ್ಗಲಗನ ರದೀಡಾಡಿ" (ಸಾಗರದವರೆಗಿನ ಭೂಮಿಯಲ್ಲಿನ ಬಂಡೆದ್ದ ದೊರೆಗಳ ಬೇರನ್ನು ಕಿತ್ತು ಅರೆದು ಕುಡಿದು ಭೂಮಿಯನ್ನು ಕಂಟಕದಿಂದ ದೂರ ಮಾಡಿದಎಂದರ್ಥ)ಎಂದು ಲಕ್ಷ್ಮೇಶ್ವರದ ಶಾಸನವು ಈತನ ವೀರಗುಣಗಳನ್ನು ವರ್ಣಿಸುತ್ತದೆ.

ಇಂತಹ ಅಮೋಘ ದೊರೆಗೆ ಕಿರೀಟವಿಟ್ಟಂತೆ, ಸೇನಾಧಿಪತಿಯೊಬ್ಬನಿದ್ದ. ಆತನ ಹೆಸರೇ ಮಹಾದೇವ ದಂಡನಾಯಕ. ಕೇವಲ ಸೇನಾಧಿಪತಿಯಾಗಿ ರಾಜ್ಯ ವಿಸ್ತರಣೆಯಲ್ಲಿ ರಕ್ತ ಹರಿಸಲು ಹೋರಾಡಿದ್ದರೆ, ಈತನು ಹತ್ತರೊಳಗೊಬ್ಬನಾಗಿ ಹೋಗಿರುತ್ತಿದ್ದ. ಸಾಮಾಜಿಕ ಕಳಕಳಿ, ದೂರದೃಷ್ಟಿ, ಜನಸೇವೆ, ಕಲಾಪ್ರೇಮಿಯಾಗಿದ್ದ ಮಹಾದೇವ ದಂಡನಾಯಕ, ರಣರಂಗದಿಂದಾಚೆ ದೃಷ್ಟಿ ಹರಿಸಿದ. ತನ್ನ ಹೆಸರಿನ, ತನ್ನ ಹುಟ್ಟೂರಿನ ವ್ಯಾಮೋಹಕ್ಕೆ ಅಮೋಘ ಕೊಡುಗೆ ನೀಡಿದ.

## ದೇವಾಲಯ ಚಕ್ರವರ್ತಿ

ಈತನ ಹುಟ್ಟೂರು ರಾಯಚೂರು ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಇಟಗಿ. ಏನಿದರ ವೈಶಿಷ್ಟ್ಯ ಎಂದಿರಾ....? ಮಹದೇವ ದಂಡನಾಯಕ ಸೇನಾಧಿಪತ್ಯದ ಜೊತೆಗೆ, ಇಲ್ಲೊಂದು ಮಹದೇವ ದೇಗುಲವನ್ನು ನಿರ್ಮಿಸಿದ. ೧೧೧೨ರಲ್ಲಿ ನಿರ್ಮಿಸಿದ. ಶಿಲ್ಪಸೌಂದರ್ಯ, ಕುಸುರಿ ಕೆಲಸಗಳಿಂದ ಈ ದೇವಸ್ಥಾನ ವಿಶ್ವದಲ್ಲಿ "ದೇವಾಲಯ ಚಕ್ರವರ್ತಿ" ಎಂಬ ಹೆಗ್ಗಳಿಕೆ ಉಳಿಸಿಕೊಂಡಿದೆ. "ವಿಶ್ವವನ್ನೇ ಸೃಷ್ಟಿಸಿದ ವಿಶ್ವಕರ್ಮ ದೇವಲೋಕ ಸೃಷ್ಟಿಸಲು ಈ ದೇವಾಲಯದಿಂದ ಸ್ಫೂರ್ತಿಗೊಂಡನೆಂಬ ವರ್ಣನೆ" ಇಲ್ಲಿಯ ಶಾಸನ ಸಾರುತ್ತಿದೆ.

ವಿಶ್ವದ ಶಿಲ್ಪ ಪ್ರೇಮಿಗಳಿಂದ ಮುಕ್ತಕಂಠದಿಂದ ಹೊಗಳಿಸಿಕೊಂಡಿರುವ ಈ ಶಿಲ್ಪ ಕುರಿತು, ಕರ್ನಾಟಕದ ಖ್ಯಾತ ಸಾಹಿತಿ ಡಾ. ಶಿವರಾಮ ಕಾರಂತರು "ಕಠಿಣ ಶಿಲ್ಪ ಪ್ರಕಾರಗಳಲ್ಲಿ ಈ ದೇವಾಲಯು ಅನನ್ಯ ಮತ್ತು ಅಮರ. ಸರಳ ಕೃತಿಗಳಲ್ಲಿ ಹುದುಗಿದ್ದ ನನ್ನ ಮನಸ್ಸಿಗೆ ಈ ಶಿಲ್ಪ ಸೌಂದರ್ಯ ವಿಸ್ಮಯ ವನ್ನುಂಟುಮಾಡಿದೆ" ಎಂದಿದ್ದಾರೆ.

ಹಳೇಬೀಡು, ಬೇಲೂರು ದೇವಸ್ಥಾನಗಳ ಸುಂದರ ಶಿಲ್ಪಗಳಿಂದ ಸ್ಫೂರ್ತಿಗೊಂಡು ಈ ದೇವಸ್ಥಾನವನ್ನು ನಿರ್ಮಿಸಲಾಗಿದೆ ಎಂದು ಅನೇಕ ಇತಿಹಾಸಕಾರರು ವ್ಯಾಖ್ಯಾನಿಸುತ್ತಾರೆ. ಕ್ರಮವಾಗಿ ಇಟಗಿ ಮಹಾದೇವ ದೇವಾಲಯ ೧೧೧೨ರಲ್ಲಿ, ಬೇಲೂರು ೧೧೧೬ರಲ್ಲಿ, ಹಳೇಬೀಡು ೧೧೨೧ರಲ್ಲಿ ನಿರ್ಮಿಸಲ್ಪಟ್ಟಿದೆ. ಆದರೂ ಈ ದೇವಾಲಯುವನ್ನು ಹೊಯ್ಸಳರ ಛಾಯೆ ಎಂದೇ ಗುರುತಿಸಲ್ಪಟ್ಟಿರುವುದು ಸೋಜಿಗವೇ ಸರಿ.

ಅತ್ಯಂತ ವಿಶಾಲವಾದ ಎತ್ತರ ಪ್ರದೇಶದ ಮೇಲೆ ನಿರ್ಮಿಸಲ್ಪಟ್ಟ ಈ ದೇವಸ್ಥಾನದ ಭವ್ಯತೆ ನೋಡಿಯೇ ಅನುಭವಿಸಬೇಕು. ಸುಮಾರು ಹತ್ತು ಎಕರೆ ವಿಶಾಲ ಪ್ರದೇಶವನ್ನು ದೇವಸ್ಥಾನದ ವಿವಿಧ ಪ್ರಕಾರಗಳಿಗೆ ಮೀಸಲಾಗಿರಿಸಿ, ದೇವಸ್ಥಾನದ ನಿರ್ಮಾಣಕ್ಕೆ ಬಳಸಿಕೊಂಡ ವಿಧಾನ ಗಮನಾರ್ಹ. ೬೮ ಸ್ಥಂಭಗಳ ಮೇಲೆ ನಿಂತಿರುವ ತೆರೆದ ಮಂಟಪದ ಸೌಂದರ್ಯ ಅನನ್ಯ ವಾದುದು. ಇವುಗಳಲ್ಲಿ ೨೬ ಸ್ಥಂಭಗಳಲ್ಲಿ ವೈವಿಧ್ಯಮಯ ಚಿತ್ತಾರದ ಸೂಕ್ಷ್ಮ ಕೆತ್ತನೆ ಗಮನ ಸೆಳೆದು, ಇಡೀ ಮಂಟಪದ ಸೌಂದರ್ಯಕ್ಕೆ ಆಕರ್ಷಣೆ ನೀಡಿದೆ.

## ಅದ್ವಿತೀಯ ಕೆತ್ತನೆಗಳು

ಮಹದೇವ ದಂಡನಾಯಕನ ಶಿಲ್ಪ ಪ್ರೇಮದ ಪ್ರತೀಕವಾದ ಈ ದೇವಸ್ಥಾನದ ಮೂರು ಪ್ರವೇಶ ದ್ವಾರಗಳನ್ನು ದಾಟಿ ಒಳಗೆ ಹೋದರೆ ಒಂದು ಮಂಟಪ, ಮಂಟಪದ ಎದುರು ಗರ್ಭಗುಡಿ ಪ್ರವೇಶವಿದೆ. ಪ್ರವೇಶಕ್ಕೆ ಮುನ್ನ ಮುಚ್ಚುಗತ್ತಲೆ ಇದ್ದು, ಗರ್ಭಗುಡಿಯು ಮಂದ ಬೆಳಕಿನಲ್ಲಿ ಶಿವಲಿಂಗ ನಿಚ್ಚಳವಾಗಿ ಕಾಣಸುವಂತೆ ಶಿಲ್ಪಿ ತನ್ನ ಕೈ ಚಳಕ ತೋರಿಸಿದ್ದಾನೆ. ಭಕ್ತಿಯು ಕೇಂದ್ರ ಸ್ಥಾನದೆಡೆ ಮನಸ್ಸಾಕರ್ಷಿಸಲು ಪ್ರೇರಣೆ ನೀಡುವ ಈ ಸಾಧನೆ ಬೇರೆ ದೇವಸ್ಥಾನಗಳಲ್ಲಿ ಇಲ್ಲ. ಗರ್ಭಗುಡಿಯ ಪ್ರವೇಶದ ಕಮಾನಿನ ಮೇಲೆ,

ಸುಮಾರು ಎಂಟು ಅಡಿ ಅಗಲ, ನಾಲ್ಕಡಿ ಎತ್ತರದ ಸುಂದರ ಶಿಲ್ಪಗಳ ಕೆತ್ತನೆ ಅದ್ವಿತೀಯವಾದದ್ದು.

ಗರ್ಭಗುಡಿ ಬೃಹದಾಕಾರವಾಗಿವೆ. ಪಂಚ ಕೋನಗಳಿಂದ ಗಮನ ಸೆಳೆಯುವ ಈ ಗರ್ಭಗುಡಿಯ ಹೊರಭಾಗ, ಸಂಪೂರ್ಣವಾಗಿ ಅನೇಕ ಶಿಲ್ಪ ಸೌಂದರ್ಯದ ಸಾಗರಗಳನ್ನೇ ಹೊತ್ತಿದೆ. ನೆಲದಿಂದ ಸುಮಾರು ಹದಿನೈದು ಅಡಿ ಎತ್ತರದ ಕೆತ್ತನೆಗಳಿಂದ ಕೂಡಿದ ಗೋಡೆ, ಅದರ ಮೇಲೆ ಮತ್ತೆ ಹದಿನೈದಡಿ ಗೋಪುರದ ಶಿಲ್ಪ ವೈಭವದಲ್ಲಿ, ನಮ್ಮ ಕೋಟಿ ಕೋಟಿ ದೇವತೆಗಳು. ವಿವಿಧ ಆಕಾರದಲ್ಲಿ ನೆಲೆ ನಿಂತಿದ್ದಾರೆ. ಅನೇಕ ಲೈಂಗಿಕ ಕುಚೇಷ್ಟೆಯ ಕೆತ್ತನೆಗಳೂ ದೇವಸ್ಥಾನದ ಮೇಲೆ ದೃಷ್ಟಿ ಆಗದಂತೆ ಕಾಪಾಡುತ್ತಿವೆ. ಒಂದೊಂದು ಚಿತ್ರವೂ ಒಂದೊಂದು ವಿಧವಾಗಿರುವುದರಿಂದ ನೋಡುಗರು ದೇವಸ್ಥಾನದ ಪ್ರಾಂಗಣದಲ್ಲಿ ಮೈ ಮರೆಯುವುದರಲ್ಲಿ ಸಂಶಯವೇ ಇಲ್ಲ. ಉತ್ತರ ಭಾಗದಲ್ಲಿ ದೇವಸ್ಥಾನದ ಅನತಿ ದೂರದಲ್ಲಿ ಒಟ್ಟು ಐದು ದೇವಸ್ಥಾನಗಳಿವೆ. ಇವುಗಳೆಲ್ಲ ಸಾಮಾನ್ಯ ಕಲ್ಲಿನಲ್ಲಿ ಒರಟು ಕೆತ್ತನೆಗಳಿಂದ ನಿರ್ಮಿಸಲ್ಪಟ್ಟಿವೆ. ಈ ದೇವಸ್ಥಾನಗಳು ನಾನಾ ಕಾರಣದಿಂದ ಭಗ್ನಗೊಂಡಿವೆ. ಇವುಗಳಲ್ಲಿ ಮಹದೇವ ದಂಡನಾಯಕನ ತಂದೆ ಮೂರ್ತಿನಾರಾಯಣ ದೇವಸ್ಥಾನ, ತಾಯಿ ಚಂದ್ರಲೇಶ್ವರಿ ದೇವಾಲಯ, ಸರಸ್ವತಿಯ ಮಂದಿರಗಳಿರಬಹುದು. ಮೂಲ ದೇವಸ್ಥಾನದ ಘನತೆಗೆ ಮುತ್ತು ಪೋಣಿಸಿದಂತೆ ದೇವಸ್ಥಾನದ ಸುತ್ತ ಒಟ್ಟು ಹದಿಮೂರು ಶಿವಲಿಂಗ ದೇವಾಲಯಗಳಿವೆ.

**ಶಿಲಾಶಾಸನ**

ಈ ದೇವಸ್ಥಾನದ ಮಹತ್ವ ಸಾರುವ ಒಂದು ಶಿಲಾಶಾಸನ ಇಲ್ಲಿದೆ, ಅದನ್ನು ರಕ್ಷಿಸಲು ಒಂದು ದೇವಸ್ಥಾನದ ಹಜಾರವನ್ನು ಬಳಸಿ, ಅದಕ್ಕೆ ಕಬ್ಬಿಣದ ಪ್ರವೇಶದ್ವಾರವನ್ನು ದೂರದೃಷ್ಟಿಯಿಂದ ನಿರ್ಮಿಸಲಾಗಿದೆ. ಇಲ್ಲಿರುವ ಶಾಸನ ಸುಮಾರು ಹತ್ತಡಿ ಎತ್ತರದ ಕಲ್ಲೊಂದರ ಮೇಲೆ ಕೆತ್ತಲಾಗಿದೆ.

ಆರನೆಯ ವಿಕ್ರಮಾದಿತ್ಯನ ರಾಜ್ಯಭಾರದ ವರ್ಣನೆ, ಮಹದೇವ ದಂಡನಾಯಕ ನಿರ್ಮಿಸಿದ ದೇವಸ್ಥಾನದ ಸಕಲ ವಿವರಗಳನ್ನು ಪರಿಚಯಿಸುವ ಈ ಶಿಲಾಶಾಸನ ಸುಲಭವಾಗಿ ಓದಬಹುದಾದಷ್ಟು ಸುಂದರವಾಗಿದೆ. ಇದರ

ಕನ್ನಡಾನುವಾದ ಪ್ರಸ್ತುತ ಲಭ್ಯವಿಲ್ಲ (ಸ್ಥಳದಲ್ಲಿ) ಆದರೂ ಇತಿಹಾಸಕಾರರ ವ್ಯಾಖ್ಯಾನವನ್ನು ಗಮನಿಸಿದರೆ, ಈ ಶಾಸನ ಅತ್ಯದ್ಭುತ ಅಂಶಗಳ ಮೇಲೆ, ಈ ದೇವಸ್ಥಾನದ ಐತಿಹ್ಯಗಳ ಮೇಲೆ ಬೆಳಕು ಚೆಲ್ಲುತ್ತದೆ.

ಈ ಶಾಸನದ ಪ್ರಕಾರ ಮಹದೇವ ದಂಡನಾಯಕನ ತಂದೆ ಮೂರ್ತಿ ನಾರಾಯಣ ತಾಯಿ ಚಂದಲಬ್ಬೆ ಎಂದು ಗುರುತಿಸಬಹುದಾಗಿದೆ. ಇವರಿಬ್ಬರ ಹೆಸರಿನ ದೇವಸ್ಥಾನಗಳನ್ನು ನಿರ್ಮಿಸಿದ ಐತಿಹ್ಯವನ್ನು ಈ ಶಾಸನಸಾರುತ್ತದೆ. ಆದರೆ ಶಾಸನದ ಹೊರತಾಗಿ ನೋಡಿದರೆ ದೇವಸ್ಥಾನಗಳ ಒಳಗೆ ಕೇವಲ ಶಿವ ಲಿಂಗಗಳನ್ನೇ ಪ್ರತಿಷ್ಠಾಪಿಸಲಾಗಿದೆ. ಇಷ್ಟೊಂದು ಭವ್ಯವಾದ ದೇವಾಲಯ ಉಪ ದೇವಾಲಯಗಳಲ್ಲಿ ಸಣ್ಣ ಸಣ್ಣ ಶಿವಲಿಂಗ ಸ್ಥಾಪನೆ ಇಂದಿಗೂ ನಿಗೂಢ.

ಸ್ವಾತಂತ್ರಪೂರ್ವದಲ್ಲಿ ರಜಾಕಾರರ ಹಾವಳಿಗೆ ಈ ದೇವಸ್ಥಾನ ತುತ್ತಾಗಿದೆ. ದಾಳಿಗೊಳಗಾಗಿದ್ದರೂ ಹೆಚ್ಚು ಭಗ್ನಗೊಳ್ಳದೆ ಧೀಮಂತಿಕೆಯಿಂದ ತಲೆ ಎತ್ತಿ ನಿಂತ ಈ ತಟಾಕ ದೇವಾಲಯ ಮತ್ತು ಪರಿಸರ, ಬೇರೆ ದೇವಸ್ಥಾನದಲ್ಲಿ ಅಲಭ್ಯ. ದೇವಸ್ಥಾನದ ಕೆಳ ಹಂತಕ್ಕಿಳಿದರೆ ಸುಮಾರು ಹನ್ನೆರಡು ಫರ್ಲಾಂಗ್ ವಿಸ್ತೀರ್ಣವನ್ನೊಳಗೊಂಡ ಕಲ್ಯಾಣಿ ಇದೆ. ಮಳೆಗಾಲದಲ್ಲಿ ತುಂಬಿಕೊಂಡು ಊರಿನ ದನಕರುಗಳಿಗೆ, ಮನೆ ನಿರ್ಮಾಣದ ಕೆಲಸಗಳಿಗೆ, ಬಟ್ಟೆ ಒಗೆಯಲು, ರಾತ್ರಿ ಬಹಿರ್ದೆಶೆಗೆ ಬಳಕೆಯಾಗುವ ಈ ಕಲ್ಯಾಣಿ, ಅಂದು ಮಡಿ ಸ್ನಾನ ಕರ್ಮಗಳಿಗೆ ಉಪಯೋಗಿಸುತ್ತಿರಬಹುದಾದ ಕಲ್ಪನೆ ಮೂಡಿಸುತ್ತದೆ.

ದೇವಸ್ಥಾನದ ಹಿಂದೆ ಕಲ್ಲಿನ ಐವತ್ತಕ್ಕೂ ಹೆಚ್ಚು ಮೆಟ್ಟಿಲುಗಳ ಪುಷ್ಕರಣಿ (ಬಾವಿ) ಇದೆ. ಇದರಿಂದಲೇ ಪೂಜೆ ಹಾಗೂ ಕುಡಿಯಲು ನೀರು ಬಳಸುವ ಪದ್ಧತಿ ಇತ್ತೆಂದು ತೋರುತ್ತದೆ. ಜಿಲ್ಲಾ ಪರಿಷತ್ ಬಂದು, ಕುಡಿಯುವ ನೀರಿನ ಯೋಜನೆ ಬಂದ ಮೇಲೆ ಇವರ ಬಳಕೆ ನಿಂತಿದೆ. ಅರ್ಧ ಊರಿನ ಜನತೆಗೆ ನೀರಿನ ದಾಹ ತಣಿಸುತ್ತಿದ್ದ ಈ ಬಾವಿ, ನಳಗಳಿಂದ ನೆನೆಗುದಿಗೆ ಬಿದ್ದು ಪಾಚಿ ಕಟ್ಟುತ್ತಿದೆ. ಅತ್ಯಂತ ಆಳವೂ, ಅಗಲವೂ ಆದ ಈ ಬಾವಿಯ ನೀರು ಬತ್ತಿದ್ದು ಅಪರೂಪ. ಅತ್ಯಂತ ಸಮೃದ್ಧ ಜಲರಾಶಿ ಇವರಲ್ಲಿದೆ. ಇದೇ ನೀರನ್ನು ಬಳಸಿ ದೇವಸ್ಥಾನದ ಹೊರ ಪ್ರಾಂಗಣದಲ್ಲಿ ತೋಟ ನಿರ್ಮಿಸುವ ಯೋಜನೆಯು ನೆನೆಗುದಿಗೆ ಬಿದ್ದಿದೆ.

## ದಿವ್ಯ ನಿರ್ಲಕ್ಷ್ಯ

ಶಿಲ್ಪ ಸೌಂದರ್ಯದ ಅನೇಕ ಆಕರ್ಷಕ ಕೆತ್ತನೆಗಳ ಆವಾಸ ಸ್ಥಾನವಾಗಿರುವ ಈ ಮಹದೇವ ದೇಗುಲ, ಚಾಲುಕ್ಯರು ನೀಡಿದ ಅಮೋಘ ಕೊಡುಗೆ. ಬಹುಶಃ ಬೇಲೂರು, ಹಳೇಬೀಡು, ಬಾದಾಮಿ, ಬಿಜಾಪುರಗಳಿಗೆ ತೋರಿಸಿದ ಆಸ್ಥೆ, ಅವಕಾಶ ಸಿಕ್ಕಿದ್ದರೆ, ಅಭಿವೃದ್ಧಿಯ ಕೈ ಸೋಂಕಿದ್ದರೆ, ಈ ದೇವಸ್ಥಾನ ಪ್ರವಾಸಿಗರ ಮೊದಲ ಆಯ್ಕೆಯಲ್ಲಿರುತ್ತಿತ್ತು.

ಅರವತ್ತರ ದಶಕದಲ್ಲಿ ಇದರ ಬಗ್ಗೆ ಉತ್ಖನನ ಪ್ರಾರಂಭಿಸಿದ ಸಂಬಂಧಿಸಿದ ಇಲಾಖೆ, ಅರ್ಧಂಬರ್ಧ ಕೆಲಸ ಮಾಡಿಸಿ ಕೈ ತೊಳೆದುಕೊಂಡು, ೨೦ ವರ್ಷಗಳೇ ಉರುಳಿವೆ. ಎಲ್ಲೆಂದರಲ್ಲಿ ಬಿಟ್ಟುಹೋದ ಕಾಮಗಾರಿಗಳು, ದೇವಸ್ಥಾನದ ಪ್ರಾಂಗಣದಲ್ಲಿ ಬಿದ್ದಿವೆ. ಇಲ್ಲಿಗೆ ಭೇಟಿ ನೀಡಿದ ಗಣ್ಯರ ಗಮನ ಸೆಳೆದರೂ ಫಲ ನೀಡದೆ ಇದ್ದುದರಿಂದ, ಊರಿನವರು ಮೌನ ತಾಳಿದ್ದಾರೆ.

ಕನಿಷ್ಠ ಬಸ್ ಸೌಲಭ್ಯದ ವಿಸ್ತರಣೆಯಿಂದಲಾದರೂ ಈ ದೇವಸ್ಥಾನಕ್ಕೆ ಜನರನ್ನು ಆಕರ್ಷಿಸಬಹುದಾಗಿದೆ. ಅತ್ಯುತ್ತಮ ರಸ್ತೆ ಇದ್ದರೂ ಸುತ್ತಲಿನ ಡಿಪೋಗಳ ಬಸ್ಸುಗಳು ಇಲ್ಲಿ ತಂಗುವ ವ್ಯವಸ್ಥೆ ಮಾಡಿದರೆ, ಕೆಲ ಪ್ರವಾಸಿಗರು ಭೇಟಿ ನೀಡಬಹುದಾಗಿದೆ. ಸುತ್ತಲಿನ ಫಾಸಲೆಯಲ್ಲಿ ಅನೇಕ ಸುಂದರ ಸ್ಮಾರಕಗಳಿವೆ. ಕೊಪ್ಪಳದ ಅಶೋಕ ಶಿಲಾಶಾಸನ, ಕೋಟೆ, ಜೈನರ ಅನೇಕ ಇಮಾರತುಗಳು, ಕುಕನೂರಿನ ಮಹಾಮಾಯಿ ದೇವಸ್ಥಾನ ಲಕ್ಕುಂಡಿಯ ಅನೇಕ ದೇವಸ್ಥಾನಗಳು, ಕಲ್ಲೂರಿನ ಕಲ್ಲೇಶ್ವರ ದೇವಸ್ಥಾನ, ಇಟಗಿಯಿಂದ ಹತ್ತಾರು ಕಿ.ಮೀ. ದೂರದಲ್ಲಿವೆ. ಇವೆಲ್ಲವುಗಳನ್ನು ಒಂದುಗೂಡಿಸಿ ಒಂದೇ ದಿನದಲ್ಲಿ ನೋಡುವ ವ್ಯವಸ್ಥೆಯಾದರೆ ಚೆನ್ನ.

—ರಮೇಶ ಸುರ್ವೆ

# ಒರಟು ಕಲ್ಲಿನಲ್ಲಿ ಅರಳಿದ ನವಿರು ಕಲೆ

ಹಿಂದೆ ರಾಜ್ಯವಾಳುತ್ತಿದ್ದ ಅರಸರುಗಳು ನಿಷ್ಠಾವಂತ ವೈದಿಕ ಬ್ರಾಹ್ಮಣರಿಗೆ ಗ್ರಹಸ್ಥಾಶ್ರಮ, ಯಜ್ಞ-ಯಾಗಾದಿ ವೇದ ಅಧ್ಯಯನ, ವೇದ ಶಿಕ್ಷಣದ ಗುರುಕುಲ ಇತ್ಯಾದಿ ಸ್ಮೃತಿ ಸಿದ್ಧವಾದ ಕಾರ್ಯಗಳನ್ನು ನೆರವೇರಿಸಿಕೊಂಡು ಹೋಗಲು ಅನುಕೂಲವಾಗುವಂತೆ ವಿಶೇಷ ಗ್ರಾಮಗಳನ್ನು ನಿರ್ಮಿಸಿ ಸಾಮೂಹಿಕವಾಗಿ ದಾನ ಕೊಡುತ್ತಿದ್ದರು. ಇಂತಹ ಗ್ರಾಮಗಳಿಗೆ 'ಅಗ್ರಹಾರ' ವೆಂದು ಕರೆಯಲಾಗುತ್ತಿತ್ತು.

ಚಿಕ್ಕಮಗಳೂರು ಜಿಲ್ಲೆಯ ತುಂಗಾನದಿ ದಡದಲ್ಲಿ ಹಿಂದೆ ಅನೇಕ ರಾಜರುಗಳು ಅಗ್ರಹಾರ ನಿರ್ಮಿಸಿ ದಾನ ಕೊಟ್ಟ ಉದಾಹರಣೆಗಳು ಇತಿಹಾಸದಲ್ಲಿವೆ. ಈಗಲೂ ಅನೇಕ 'ಅಗ್ರಹಾರಗಳಿವೆ' ಆದರೆ ಹಿಂದಿನ ವೈಭವ ಈಗಿಲ್ಲ. ಗತಕಾಲದ ವೈಭವ ಮಾತ್ರ ಆದರೆ ವಿಶೇಷ ಶೈಲಿಯ ಕಲಾತ್ಮಕ ಮನೆಗಳು ದೇವಾಲಯದ ಗ್ರಾಮಗಳನ್ನು ನೋಡಬಹುದು.

ತುಂಗಾನದಿಯ ದಡದಲ್ಲಿರುವ ಅಗ್ರಹಾರಗಳಲ್ಲಿ 'ಜಂಬಿಟ್ಟಿಗೆ ಅಗ್ರಹಾರ' ಮಹತ್ವವಾದುದು, ಅಲ್ಲಿಯ ನೀಲಕಂಠೇಶ್ವರ ದೇವಾಲಯ, ಅಗ್ರಹಾರದ ಕೇಂದ್ರಬಿಂದು. ನಾಲ್ಕು ಬ್ರಾಹ್ಮಣ ಕುಟುಂಬಗಳ ಆಡಳಿತಕ್ಕೆ ಇದು ಒಳಪಟ್ಟಿದೆ.

ಪೂರ್ವ-ಉತ್ತರಾಭಿಮುಖವಾಗಿ ಹರಿಯುವ ತುಂಗೆಯ ಹಸಿರು ಸಿರಿಯ ನಡುವಿರುದ ಜಂಬಿಟ್ಟಿಗೆ ಅಗ್ರಹಾರ ಹರಿಹರಪುರ ಗ್ರಾಮಕ್ಕೆ ಹೊಂದಿಕೊಂಡಿದೆ. "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಎಂಬ ನಾಣ್ಣುಡಿಯಂತೆ ಈ ಅಗ್ರಹಾರ ದೇವಾಲಯ ಕಿರಿದಾದರೂ ಹಲವು ವೈಶಿಷ್ಟ್ಯದಿಂದ ಕೂಡಿದೆ. ಸಂಪೂರ್ಣ ಒರಟು ಕಲ್ಲಿನಿಂದ 1733 ರಲ್ಲಿ ನಿರ್ಮಿತಗೊಂಡ ಇದು ಕೇವಲ 10 ಅಡಿ ಉದ್ದ, 8 ಅಡಿ ಅಗಲವಿದ್ದು ದ್ರಾವಿಡ ಶೈಲಿಯಲ್ಲಿದೆ. ಉತ್ತರಾಭಿಮುಖವಾದ ದೇವಾಲಯ ಗರ್ಭಗುಡಿ, ಸುಕನಾಸಿ, ಎರಡು ಕಂಬಗಳ ಮುಖಮಂಟಪ, ಒಂದು ಚಿಕ್ಕ ಗೋಪುರ ಹೊಂದಿದೆ. ದೇವಾಲಯದ ಗೋಡೆಯು

ಸಂಪೂರ್ಣ ಶಿಲ್ಪ ಕೆತ್ತನೆಯಿಂದ ಕೂಡಿರುವುದು ವಿಶೇಷ. ಅದರಲ್ಲೂ ಒರಟಾದ ಕಲ್ಲಿನ ಮೇಲೆ ಶಿಲ್ಪ ಕೆತ್ತನೆ ಕತ್ತಿರುವುದು ನೋಡಬಹುದು.

**ರಾಮಾಯಣ–ಮಹಾಭಾರತ**

ದೇವಾಲಯದ ಗೋಡೆಯ ಶಿಲ್ಪಗಳು ಮಹಾಭಾರತ, ರಾಮಾಯಣ ಹಾಗೂ ಭಾಗವತದ ಸಂಪೂರ್ಣ ಸಂಕ್ಷಿಪ್ತ ಕಥೆಗಳನ್ನು ಸಾರಿ ಹೇಳುತ್ತಿವೆ. ರಾಮನ ಜನ್ಮ, ಅಹಲ್ಯೆಯ ಶಾಪ–ವಿಮೋಚನೆ, ಸೀತಾ ಸ್ವಯಂವರ, ರಾಮ ಲಕ್ಷ್ಮಣ–ಸೀತೆಯ ವನವಾಸ ದಿನಗಳು, ಲಂಕೆಯ ದಹನ, ರಾಮೇಶ್ವರದಲ್ಲಿ ರಾಮನು ಮರಳಿನ ಲಿಂಗನ ಪ್ರತಿಷ್ಠಾಪಿಸಿದ ದೃಶ್ಯ. ರಾಮ ಪಟ್ಟಾಭಿಷೇಕ ಇತ್ಯಾದಿ ವಿಶೇಷ ಕಥಾ ದೃಶ್ಯಾವಳಿಗಳನ್ನು ಇಲ್ಲಿ ನೋಡಬಹುದು. ತ್ರಿಪುರಾ ಸಂಹಾರ ನರಸಿಂಹ ಅವತಾರದ ಶಿಲ್ಪ ಕಲೆಗಳು ಇಲ್ಲಿವೆ.

ವಿಷ್ಣುವಿನ "ಕೃಷ್ಣ"ನ ಅವತಾರದ ಕಥೆಯನ್ನು ಸಾರಿ ಹೇಳುವ ಭಾಗವತದ ದೃಶ್ಯಾವಳಿಗಳು ಇಲ್ಲಿವೆ. ಅದರಲ್ಲೂ ಮುಖ್ಯವಾಗಿ 'ಕಾರ್ಯವಾಸಿ ಕತ್ತೆ ಕಾಲುಹಿಡಿ' ಎಂಬ ಕನ್ನಡ ಗಾದೆಯ ಮಾತಿಗೆ ಅನುಗುಣವಾಗಿರುವಂತೆ ವಸುದೇವ (ಕೃಷ್ಣನ ತಂದೆ) ಕತ್ತೆಯ ಕಾಲು ಹಿಡಿದ ಸಂದರ್ಭದ ಶಿಲ್ಪ ಚಿತ್ರ ದೇವಾಲಯದ ಪಶ್ಚಿಮ ದಿಕ್ಕಿನ ಗೋಡೆಯಲ್ಲಿದೆ. ಕೈಲಾಸ, ನರಕ, ಸ್ವರ್ಗ ದೇವಲೋಕದ ಕಾರ್ಯವಿಧಿಗಳನ್ನು ವಿವರಿಸುವ ಚಿತ್ರಗಳೂ ಸಹ ಇದೇ ಗೋಡೆಯಲ್ಲಿ ಕೆತ್ತಲಾಗಿದೆ. "ಪಂಚಮುಖಿ" ಕಾಮಧೇನುವಿನ ಶಿಲ್ಪ ಈ ಅಗ್ರಹಾರದ ವಿಶೇಷ.

ಗೋಕರ್ಣ ಮಹಾತ್ಮೆ, ಪಂಚಮುಖ ಬ್ರಹ್ಮ, ಸಪ್ತಋಷಿಗಳ ಚರಿತ್ರೆ ಆದಿಶೇಷ, ಆದಿತ್ಯ, ಆನೆ-ಇಲಿಯ ಮೇಲೆ ಸವಾರಿ ಹೊರಟಿರುವ ಗಣಪತಿ ಶಿಲ್ಪಗಳನ್ನು ಇಲ್ಲಿ ವಿಶೇಷವಾಗಿ ನೋಡಬಹುದು. ವಾಲ್ಮೀಕಿ ಜೀವನ ಚರಿತ್ರೆಯನ್ನು ಪ್ರತಿಬಿಂಬಿಸುವ ಚಿತ್ರವಿದೆ.

ಮಹಾಭಾರತದ ಪಾಂಡವ-ಕೌರವರ ಜನ್ಮ, ಅರಗಿನ ಮನೆ ಪಗಡೆಯಾಟ, ದ್ರೌಪದಿಯ ಮಾನಭಂಗ, ಕುರುಕ್ಷೇತ್ರದ ಯುದ್ಧ, ಚಕ್ರವ್ಯೂಹದ ನಡುವೆ ಅಭಿಮನ್ಯು, ಹೀಗೆ ಅನೇಕ ಚಿತ್ರಗಳು ಮಹಾಭಾರತದ ಕಥೆಗಳನ್ನು ವಿವರಿಸುತ್ತಿವೆ.

ದೇವಾಲಯದ ಚಿಕ್ಕಗೋಪುರದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ, ವೀರಭದ್ರರ ಕಲ್ಲಿನ ಮೂರ್ತಿಗಳಿವೆ. ನಾಲ್ಕು ದಿಕ್ಕಿಗೆ ನಾಲ್ಕು 'ಬಸವ' ಶಿಲ್ಪಗಳು ದೇವಾಲಯ ಶಿಖರಕ್ಕೆ ಮೆರಗು ನೀಡಿವೆ. ದೇವಾಲಯಕ್ಕೆ ಪ್ರದಕ್ಷಿಣೆ ಬಂದರೆ ರಾಮಾಯಣ, ಮಹಾಭಾರತ, ಭಾಗವತ ಇತ್ಯಾದಿ ಕಥೆಗಳನ್ನು ಚಿತ್ರ ಸಹಿತ ತಿಳಿಯಬಹುದು. ಇದು ಇಲ್ಲಿಯ ವಾಸ್ತು ಶಿಲ್ಪದ ವಿಶೇಷ.

ಈ ಅಗ್ರಹಾರದ ದೇವಾಲಯದ ಶಿಲ್ಪಿ 'ಕಳಸದ ಕೊಲ್ಲುರದ ಮಾಗ ಕಾಳಣ್ಣ' ನೆಂದು ಇಲ್ಲಿಯ ಶಿಲಾಶಾಸನದ ಮೂಲಕ ತಿಳಿದು ಬರುತ್ತದೆ. ಶ್ರೀ ನೀಲಕಂಠೇಶ್ವರ ಲಿಂಗವೂ ಕಪ್ಪುಕಲ್ಲಿನ ಲಿಂಗವಾಗಿದೆ.

1989 ರ ಮಳೆಗಾಲದಲ್ಲಿ ಬಿದ್ದ ಭಾರೀ ಮಳೆಯ ಪರಿಣಾಮವಾಗಿ ದೇವಾಲಯದ ಶಿಖರವು ಮುರಿದುಬಿದ್ದಿತ್ತು. 1990 ರಲ್ಲಿ ಹರಿಹರಪುರದ ಮಠಾಧೀಶರಾದ ಶ್ರೀ ಸ್ವಯಂಪ್ರಕಾಶ ಶ್ರೀ ರಾಮನಾಥ ಸರಸ್ವತಿ ಸ್ವಾಮೀಜಿಯವರ ಸಮ್ಮುಖದಲ್ಲಿ ಧಾರ್ಮಿಕ ವಿಧಿ ವಿಧಾನಗಳೊಂದಿಗೆ ನೂತನ ಶಿಖರವನ್ನು ಪ್ರತಿಷ್ಠಾಪಿಸಲಾಯಿತು. ದಿನನಿತ್ಯವೂ ಚಾಚೂ ತಪ್ಪದೇ ದೇವಾಲಯದಲ್ಲಿ ಪೂಜೆಗಳು ನೆರವೇರುತ್ತವೆ.

ಈ ದೇವಾಲಯದ ವಾಸ್ತು ಶಿಲ್ಪವನ್ನು ಇತಿಹಾಸಕಾರರು ಗುರುತಿಸಿ ಇದು ಹದಿನೇಟನೇ ಶತಮಾನದಲ್ಲಿ ನಮ್ಮ ನಾಡಿನಲ್ಲಿದ್ದ ಶಿಲ್ಪಕಲೆಗೆ ಶಿಲ್ಪಿಯ ಅಪಾರ ಶ್ರಮ ಕುಶಲತೆಗಳಿಗೆ ಸಾಕ್ಷಿಯಾಗಿ ನಿಂತಿದೆ ಎಂದು ಬಣ್ಣಿಸಿದ್ದಾರೆ.

ಆದರೆ ಈ ಚಿಕ್ಕ ಪ್ರಾಚೀನ ದೇವಾಲಯ ಅನೇಕ ವಾಸ್ತುಶಿಲ್ಪದ ಮಹತ್ವ ಹೊಂದಿದ್ದರೂ ಪ್ರವಾಸಿಗರಿಂದ ದೂರವಾಗಿ ಉಳಿದಿದೆ. ಹೆಚ್ಚಿನ ಪ್ರಚಾರವಿಲ್ಲದಿರುವುದೇ ಕಾರಣ. ಇಲ್ಲಿಗೆ ಬರುವ ಪ್ರವಾಸಿಗರ ಸಂಖ್ಯೆ ಅತಿ ವಿರಳ.

ಕೊಪ್ಪ ಮತ್ತು ಶೃಂಗೇರಿಯಿಂದ ಹರಿಹರಪುರಕ್ಕೆ ನೇರ ಬಸ್ ಸೌಕರ್ಯವಿದೆ. ಹರಿಹರಪುರದಿಂದ 2 ಕಿ.ಮೀ. ದಾರಿಯನ್ನು ಕಾಲುನಡಿಗೆಯಲ್ಲಿ ಕ್ರಮಿಸಿದರೆ ಈ ಕಲಾತ್ಮಕ ದೇವಾಲಯ ತಲುಪಬಹುದು. ಅಲ್ಲಿನ ಅಗ್ರಹಾರದ ನಿವಾಸಿಯಾದ ಕೃಷ್ಣಭಟ್ಟರು (ಸ್ವಾಮಿಭಟ್ಟರು) ದೇವಾಲಯದ ವಾಸ್ತು ವಿಶೇಷ ಹಾಗೂ ಇತಿಹಾಸವನ್ನು ಬರುವ ಪ್ರವಾಸಿಗರಿಗೆ ವಿವರವಾಗಿ ಪರಿಚಯ ಮಾಡಿ ಕೊಡುತ್ತಾರೆ.

—ಬಿ. ಎನ್. ಶಾಂತಿಪ್ರಿಯ

## ಬೇವೂರು ಶ್ರೀನಿವಾಸ, ಚನ್ನಪಟ್ಟಣ ತಾಲ್ಲೂಕು

ಬೇವೂರು ಚನ್ನಪಟ್ಟಣಕ್ಕೆ ಸುಮಾರು ಏಳು ಮೈಲಿಗಳ ದೂರದಲ್ಲಿ ಬೇವೂರು ಮಂಡ್ಯಕ್ಕೆ ಹೋಗುವ ಮಾರ್ಗದಲ್ಲಿದೆ. ಈ ಗ್ರಾಮದ ಸಮೀಪ ದಲ್ಲಿರುವ ಬೆಟ್ಟದ ಮೇಲೆ ಶ್ರೀನಿವಾಸ ದೇವರ ದೇವಸ್ಥಾನವಿದೆ. ಈ ಬೆಟ್ಟಕ್ಕೆ ಕರಿ ತಿಮ್ಮಪ್ಪನ ಬೆಟ್ಟ ಎಂದು ಕರೆಯುವುದು ರೂಢಿನಾಮವಾಗಿದೆ. ಈ ದೇವಸ್ಥಾನಕ್ಕೆ ಸಂಬಂಧಪಟ್ಟ ಸ್ಥಳ ಮಹಾತ್ಮೆ ಹೀಗಿದೆ.

ಈ ಬೆಟ್ಟದ ಸಮೀಪದಲ್ಲಿಯೇ ಇರುವ ಸಿದ್ಧರಾಮೇಶ್ವರ ಬೆಟ್ಟ ಎಂಬಲ್ಲಿ ಶ್ರೀನಿವಾಸ ದೇವರ ವಿಗ್ರಹವಿತ್ತೆಂದೂ ಆ ಬೆಟ್ಟದ ಮೇಲಿರುವ ಸಿದ್ಧ ರಾಮೇಶ್ವರನನ್ನು ಪೂಜಿಸಲು ಬರುತ್ತಿದ್ದ ಒಬ್ಬ ಸನ್ಯಾಸಿಗೆ ಪುಷ್ಕರಣಿಯ ಬದಿಯಲ್ಲಿ ಬಿದ್ದಿದ್ದ ಈ ಶ್ರೀನಿವಾಸ ದೇವರ ವಿಗ್ರಹವನ್ನು ಪಕ್ಕದಲ್ಲಿರುವ ಬೆಟ್ಟದ ತುದಿಯಲ್ಲಿ ಪ್ರತಿಷ್ಠಾಪಿಸಬೇಕೆಂದು ಅನುಜ್ಞೆಯಾಯಿತೆಂದು ಅದರ ಪ್ರಕಾರ ಆ ಸಿದ್ಧರು ಆ ವಿಗ್ರಹವನ್ನು ಈಗಿರುವ ಬೆಟ್ಟಕ್ಕೆ ತಂದು ಅಲ್ಲಿ ಪ್ರತಿಷ್ಠಾಪಿಸಿದರೆಂದೂ ಈ ವಿಗ್ರಹವನ್ನು ತರುವಾಗ ಇದು ಬಹು ಭಾರವಾದ್ದ ರಿಂದ ದೇವರ ಕೃಪೆಯಂತೆ ಹೂವಿನಷ್ಟು ಹಗುರವಾಗಿ ಹೂವಿನ ಬುಟ್ಟಿಯಲ್ಲಿ ತರಲಾಯಿತೆಂದು ತಿಳಿದು ಬರುತ್ತದೆ. ಈ ದೇವರಿಗೆ ಕರಿತಿಮ್ಮಪ್ಪನೆಂದು ಕೂಗಲಾಗಿ ತಿರುಪತಿಯ ಶ್ರೀನಿವಾಸ ದೇವರಿಗೆ ಸಲ್ಲಿಸುವ ಕಾಣಿಕೆಯನ್ನು ಇಲ್ಲಿಯೇ ಸಲ್ಲಿಸಿ ಭಕ್ತಾದಿಗಳು ಕೃತಾರ್ಥರಾಗುತ್ತಾರೆ. ಆದ್ದರಿಂದ ಇದಕ್ಕೆ ದಕ್ಷಿಣ ತಿರುಪತಿ ಎಂದು ಕರೆಯುತ್ತಾರೆ.

### ದೇವಾಲಯ ವಿಶೇಷ

ದೇವಸ್ಥಾನವನ್ನು ಬಹು ಸುಭದ್ರವಾಗಿ ಕಟ್ಟಲಾಗಿದೆ. ಅತಿ ದೊಡ್ಡ ಪ್ರಾಕಾರವು ಇದ್ದು ಆ ಪ್ರಾಕಾರದಲ್ಲಿ ನವರಂಗ ಸುಖನಾಸಿ ಗರ್ಭಗುಡಿ

ಯಿಂದ ಕೂಡಿದ ದೇವಸ್ಥಾನವನ್ನು ಕಟ್ಟಲಾಗಿದೆ. ಮೊದಲು ಈ ದೇವಸ್ಥಾನದಲ್ಲಿ ಗರ್ಭಗುಡಿ ಮಾತ್ರವಿದ್ದು ನಂತರ ಬುದ್ಧತಿಮ್ಮೇಗೌಡ ಎಂಬ ಆ ಊರಿನ ಗ್ರಾಮಸ್ಥನಿಂದ ಈ ದೇವಸ್ಥಾನದ ಸುಖನಾಸಿಯು ಕಟ್ಟಲ್ಪಟ್ಟಿತ್ತು. ಸುಮಾರು ಎರಡೂವರೆ ಅಡಿ ಎತ್ತರದ ಈತನ ವಿಗ್ರಹವೆಂದು ಹೇಳಲಾದ ಒಂದು ಮೂರ್ತಿಯನ್ನು ಸುಖನಾಸಿಯ ಒಂದು ಕಂಬದಲ್ಲಿ ಕಡೆಯಲಾಗಿದೆ.

ಈ ದೇವಸ್ಥಾನವನ್ನು ಮತ್ತೊಮ್ಮೆ ಜೀರ್ಣೋದ್ಧಾರ ಮಾಡಲು ಹಣಕಾಸಿನ ತೊಂದರೆಯಿದ್ದಾಗ, ಕೆಲವು ಕಳ್ಳಕಾಕರು ಸುತ್ತಮುತ್ತಲಿನ ಗ್ರಾಮದಿಂದ ಕುರಿಗಳನ್ನು ಅಪಹರಿಸಿದರು. ಈ ಚೋರರನ್ನು ಹಿಡಿಯಲು ಬಂದ ಗ್ರಾಮರಕ್ಷಕರಿಂದ ತಪ್ಪಿಸಿಕೊಳ್ಳಲು ಈ ಚೋರರು ಬೆಟ್ಟದ ಶ್ರೀನಿವಾಸನನ್ನು ಮೊರೆಹೊಕ್ಕರಂತೆ. ತಮ್ಮ ತಪ್ಪಿನ ಅರಿವಾಗಿ ಅದಕ್ಕಾಗಿ ಕ್ಷಮೆಯಾಚಿಸಿ ಶರಣಾಗತರಾಗಿ ಬಂದ ಈ ಚೋರರನ್ನು ಶರಣಾಗತ ರಕ್ಷಕನಾದ ಶ್ರೀನಿವಾಸನು ಉದ್ಧರಿಸಿದನಂತೆ. ಕುರಿಯ ಬಣ್ಣಗಳೇ ಬದಲಾವಣೆಯಾಗಿ ಗ್ರಾಮರಕ್ಷಕರಿಗೆ ಕುರಿಗಳ ಗುರುತು ಹಿಡಿಯಲಾಗದೆ ಈ ಚೋರರನ್ನು ಬಿಟ್ಟುಬಿಟ್ಟರಂತೆ. ಈ ಕುರಿಗಳನ್ನು ಮಾರಿದ್ದರಿಂದ ಬಂದ ಎಲ್ಲಾ ಹಣವನ್ನೂ ಶ್ರೀನಿವಾಸ ದೇವರಿಗೆ ಸಮರ್ಪಿಸಿ ದೇವಸ್ಥಾನದ ಅಭಿವೃದ್ಧಿ ಕಾರ್ಯವನ್ನು ನಡೆಸಿ ಸತ್ಪ್ರಜೆಗಳಾಗಿ ಶ್ರೀನಿವಾಸನ ಭಕ್ತರಾಗುತ್ತಾರೆ. ಇದಿಷ್ಟೂ ಆ ದೇವಸ್ಥಾನಕ್ಕೆ ಸಂಬಂಧ ಪಟ್ಟ ಸ್ಥಳ ಪುರಾಣವಾಗಿದೆ.

ದೇವಸ್ಥಾನದ ಪಕ್ಕದಲ್ಲಿ ಒಂದು ಪುಟ್ಟಕೊಳವಿದೆ. ಅದರಿಂದ ಇನ್ನೂ ಸ್ವಲ್ಪ ಮುಂಭಾಗಕ್ಕೆ ಒಂದು ದೊಡ್ಡ ಪುಷ್ಕರಿಣಿ ಇದೆ. ಈ ಪುಷ್ಕರಣಿಯ ನಾಲ್ಕು ಕಡೆಗೂ ಕಲ್ಲಿನ ಸೋಪಾನವೊಂದನ್ನು ಸುಂದರವಾಗಿ ಕಟ್ಟಲಾಗಿದೆ.

ದೇವಸ್ಥಾನದ ಮಹಾದ್ವಾರದ ಮೇಲೆ ಸಣ್ಣ ಪ್ರಮಾಣದ ಒಂದು ಗೋಪುರವನ್ನು ಸುಂದರವಾಗಿ ನಿರ್ಮಿಸಲಾಗಿದೆ. ಮುಂಭಾಗದಲ್ಲಿ ಗರುಡ ಗಂಬವಿದೆ.

## ಹೇರಿನ ದಾಸೇಗೌಡನ ಕಥೆ

ದೇವಸ್ಥಾನದ ನವರಂಗದಲ್ಲಿ ಬಲಭಾಗದ ಕಂಬದಲ್ಲಿ ಮೂರು ಅಡಿ

ಎತ್ತರದ ಒಂದು ವಿಗ್ರಹವಿದೆ. ಇದನ್ನು ಹೇರಿನ ದಾಸೇಗೌಡನ ವಿಗ್ರಹ ವೆಂದು ಹೇಳುತ್ತಾರೆ. ಹಾಗೂ ಈ ವಿಗ್ರಹದ ಕೆಳಭಾಗದಲ್ಲಿ ಶಾಸನವೂ ಸಹಾ ಇದೆ. ಹೇರಿನ ದಾಸೇಗೌಡನ ಎಂಬುವವನು ಭತ್ತದ ವ್ಯಾಪಾರ ಮಾಡುವ ಸಲುವಾಗಿ ಹೇರಿನ ಮೇಲೆ ಭತ್ತವನ್ನು ಹೇರಿಕೊಂಡು ಸಂತೆಗೆ ಹೋಗುತ್ತಿದ್ದನೆಂದೂ ಬೇವೂರಿನ ಸಮೀಪಕ್ಕೆ ಬರಲು ಆತನು ಕಳ್ಳಕಾಕರಿಂದ ಸುತ್ತುವರಿಯಲ್ಪಟ್ಟನೆಂದೂ ಆಗ ದೇವರನ್ನು ಪ್ರಾರ್ಥನೆ ಮಾಡಿಕೊಳ್ಳ ಲಾಗಿ ಹಠಾತ್ತಾನೆ ಬಂದ ಕೆಲವು ಸೈನಿಕರ ತಂಡವು ಈ ದರೋಡೆಕೋರರಿಂದ ಈತನನ್ನು ಪಾರುಮಾಡಿ ಹೊರಟುಹೋದರೆಂದು ದೇವರ ಈ ಪವಾಡ ದಿಂದ ಪ್ರಭಾವಿತನಾದ ಹೇರಿನ ದಾಸೇಗೌಡನು ಈ ದೇವರ ಭಕ್ತನಾಗಿ ದೇವಸ್ಥಾನವನ್ನು ಊರ್ಜಿತಗೊಳಿಸಿದನೆಂದೂ ಇದಕ್ಕೆ ಬುಡ್ಡತಿಮ್ಮೇಗೌಡ ಎಂಬ ಈತನ ಬಂಧುವೊಬ್ಬನು ಸಹಕರಿಸಿದನೆಂದೂ ಈತನ ವಂಶಸ್ಥರಿಂದ ತಿಳಿದು ಬರುತ್ತದೆ. ಈತನ ವಂಶಸ್ಥರೂ ಈಗಲೂ ಬೇವೂರಿನಲ್ಲಿದ್ದಾರೆ.

ಸುಖನಾಸಿಯ ಮತ್ತೊಂದು ಕಂಬದಲ್ಲಿ ಮೂರು ಅಡಿ ಎತ್ತರವಿರುವ ಮತ್ತೊಂದು ವಿಗ್ರಹವಿದೆ. ಐದುನೂರು ವರ್ಷಗಳ ಹಿಂದೆ ಇದ್ದ ಶ್ರೀನಿವಾಸ ದೇವರ ಭಕ್ತನಾದ ರಾಮದಾಸನ ವಿಗ್ರಹವಿದೆಂದು ಹೇಳುತ್ತಾರೆ.

## ಚೋಳರ ಕಾಲದ ಶಿಲ್ಪದ ನೆನಪು

ಕಂಬಗಳಲ್ಲಿ ಶಂಕ, ಚಕ್ರ ಹಾಗೂ ಅನೇಕ ನರ್ತಕಿಯರ ವಿಗ್ರಹ ಇತ್ಯಾದಿಗಳನ್ನು ಕಡೆಯಲಾಗಿದೆ. ದೇವಸ್ಥಾನದ ಈ ವಾಸ್ತುಶಿಲ್ಪವನ್ನು ಗಮನಿಸಿದಾಗ ಇದು ಚೋಳರ ಕಾಲದ ಶಿಲ್ಪವನ್ನು ನೆನಪಿಗೆ ತರುತ್ತದೆ. ನವರಂಗದ ಬಲಭಾಗದಲ್ಲಿ ಹನುಮಂತರಾಯನ ವಿಗ್ರಹವಿದೆ. ಕಿರೀಟದ ಬದಲಾಗಿ ಜುಟ್ಟುಗಳನ್ನು ಕಟ್ಟಿಕೊಂಡಿರುವಂತೆಯೂ ಅಕ್ಕಪಕ್ಕದಲ್ಲಿ ಶಂಖ ಚಕ್ರಗಳ ಚಿನ್ಹೆಯೂ ಬಾಲದಲ್ಲಿ ಗಂಟೆ ಮತ್ತು ಕೈಯಲ್ಲಿ ಮಾವಿನಕಾಯಿ ಗೊಂಚಲು ಇವುಗಳನ್ನು ಗಮನಿಸಿದಾಗ ಈ ಪ್ರಾಣ ದೇವರನ್ನು ಶ್ರೀ ಬ್ರಹ್ಮಣ್ಯ ತೀರ್ಥರ ಮಠದ ಶ್ರೀ ವ್ಯಾಸರಾಯ ಸ್ವಾಮಿಗಳು ಪ್ರತಿಷ್ಠಾಪಿಸಿರಬಹುದೆಂದು ಊಹಿಸಬಹುದು. ಕಾರಣ ಮೇಲೆ ಹೇಳಲಾದ ಚಿಹ್ನೆಗಳು ಶ್ರೀ ವ್ಯಾಸ ರಾಯರಿಂದ ಪ್ರತಿಷ್ಠಾಪಿಸಲ್ಪಟ್ಟ ಪ್ರಾಣದೇವರಿಗೆ ಮಾತ್ರ ಇರುತ್ತದೆಂದು

ಶ್ರೀ ಮಠದದಲ್ಲಿ ದೊರಕ ಬಹುದಾದ ಕೆಲವು ದಾಖಲೆಗಳಿಂದ ತಿಳಿದು ಬರುತ್ತದೆ.

ಗರ್ಭಗುಡಿಯಲ್ಲಿರುವ ಶ್ರೀನಿವಾಸನ ವಿಗ್ರಹವು ಸುಮಾರು ಎರಡೂವರೆ ಅಡಿ ಎತ್ತರದ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಈ ದೇವರಿಗೆ ಅನೇಕ ಒಕ್ಕಲು ಮನೆತನದವರಿದ್ದು ಈ ದೇವಸ್ಥಾನದ ಪೂಜೆ ಉತ್ಸವ ಇತ್ಯಾದಿ ವ್ಯವಸ್ಥೆಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ.

ಬೆಟ್ಟವನ್ನು ಹತ್ತಲು ಮೆಟ್ಟಲುಗಳನ್ನು ಕಟ್ಟಲಾಗಿದೆ. ಕೆಲವು ವಿಶೇಷ ಸಂದರ್ಭಗಳಲ್ಲಿ ದೇವರ ಉತ್ಸವವು ಬೆಟ್ಟದ ಮೇಲಿಂದ ಊರ ಒಳಕ್ಕೆ ಬಂದು ಪೂಜಾದಿಗಳನ್ನು ಸ್ವೀಕರಿಸುತ್ತದೆ. ಇಲ್ಲಿ ಜಾತ್ರೆಯು ನವರಾತ್ರಿಯ ಸಂದರ್ಭದಲ್ಲಿ ಮಹಾ ನವಮಿಯಂದು ನಡೆಯುತ್ತದೆ. ನವರಾತ್ರಿಯ ಒಂಬತ್ತು ದಿನದಲ್ಲಿ ವಿಶೇಷ ಪೂಜಾದಿಗಳು ನಡೆಯುತ್ತದೆ.

## ಬಿಡದಿ ದೇವಸ್ಥಾನ

ಈ ಊರಿನಲ್ಲಿ ಕುಡಿಕೆ ಮಡಿಕೆ ಇತ್ಯಾದಿ ಮಣ್ಣಿನ ವಸ್ತುಗಳನು ತಯಾರಿಸುವುದು. ರೇಷ್ಮೆ ಸಾಕಾಣಿಕೆ ಮತ್ತು ವ್ಯವಸಾಯ ಇತ್ಯಾದಿ ಕಸುಬು ಗಳನ್ನು ಕಾಣಬಹುದು. ಊರಿನ ಮಧ್ಯಭಾಗದಲ್ಲಿ ಸಮೀಪದಲ್ಲಿರುವ ಸಿದ್ಧ ರಾಮೇಶ್ವರ ಬೆಟ್ಟದಲ್ಲಿ ಉತ್ಸವ ಮೂರ್ತಿಯನ್ನು ಇಡಲಾಗಿದೆ. ಇದಕ್ಕೆ ಬಿಡದಿ ದೇವಸ್ಥಾನ ಎಂದು ಹೇಳುತ್ತಾರೆ. ಕಾರಣ ಸಿದ್ಧರಾಮೇಶ್ವರನ ಉತ್ಸವ ಮೂರ್ತಿ ಇಲ್ಲಿ ಬೀಡು ಬಿಟ್ಟಿರುವುದರಿಂದ ಇದಕ್ಕೆ ಬಿಡದಿ ದೇವಸ್ಥಾನ ಎಂದು ಹೆಸರು ಬಂದಿದೆ.

ನೀರಿನ ಸೌಕರ್ಯವಿರುವ ಬೆಟ್ಟದ ಮೇಲಿನ ಮರದ ನೆರಳಿನ ತಂಪಾದ ಆಶ್ರಯದ ಪ್ರಶಾಂತ ಹಾಗೂ ಭಕ್ತಿರಸವನ್ನು ಕರುಣಿಸುವ ಈ ಸ್ಥಳವು ಒಂದು ಸೊಗಸಾದ ವಿಶ್ರಾಂತಿ ಧಾಮವಾಗಬಲ್ಲುದು. ರಜಾದಿನಗಳಲ್ಲಿ ವಿಹಾರಕ್ಕಾಗಿಯೂ ಯಾತ್ರಾರ್ಥಿಗಳಾಗಿಯೂ ಹೋಗಿರಬಹುದಾದಂತಹ ಬೆಂಗಳೂರು ಜಿಲ್ಲೆಯ ಅನೇಕ ಸ್ಥಳಗಳಲ್ಲಿ ಇದೂ ಒಂದು ಎಂದರೆ ಅತಿಶಯೋಕ್ತಿಯಾಗಲಾರದು.

—o—

## ಶ್ರೀಸಿದ್ಧರಾಮೇಶ್ವರ ಬೆಟ್ಟ–ಚನ್ನಪಟ್ಟಣ ತಾಲ್ಲೂಕು

ಶ್ರೀ ಸಿದ್ಧರಾಮೇಶ್ವರ ಬೆಟ್ಟ ಬೇವೂರಿನ ಸಮೀಪದಲ್ಲಿದ್ದು ಬೆಂಗಳೂರು ಜಿಲ್ಲೆಯ ಪುಣ್ಯ ಕ್ಷೇತ್ರಗಳಲ್ಲಿ ಇದೂ ಒಂದಾಗಿದೆ. ಈ ಬೆಟ್ಟ ಹತ್ತಲು ಮೆಟ್ಟಲುಗಳಲ್ಲಿ ಕಡಿದಾದ ರಸ್ತೆಯಲಿ ಹತ್ತಬೇಕು. ಬೆಟ್ಟದ ಮೇಲೆ ಕೊಳ ವೊಂದಿದ್ದು ವರ್ಷದ ಎಲ್ಲಾ ಕಾಲದಲ್ಲಿಯೂ ಅತಿ ಸ್ವಚ್ಛವಾದ ನೀರು ದೊರಕುತ್ತದೆ. ದೇವಸ್ಥಾನವು ತುಂಬಾ ಶಿಥಿಲವಾಗಿದ್ದು ಹೊರಭಾಗದ ಪ್ರಾಕಾರವೆಲ್ಲವೂ ನಾಮಾವಶೇಷವಾಗಿದೆ. ದೇವಸ್ಥಾನದ ಬಲಭಾಗದಲ್ಲಿ ಕಲ್ಯಾಣ ಮಂಟಪವೆಂದು ಹೇಳಲಾದ ಒಂದು ಸುಂದರವಾದ ಆದರೆ ಶಿಥಿಲ ವಾದ ಮಂಟಪವಿದೆ. ದೇವಸ್ಥಾನದ ವಾಸ್ತು ಶಿಲ್ಪವನ್ನು ಗಮನಿಸಿದಾಗ ಇದು ಚೋಳರ ಕಾಲದ ದೇವಸ್ಥಾನವೆಂದು ಊಹಿಸಬಹುದು.

## ರಾಮ ಪ್ರತಿಷ್ಠಿತ ರುದ್ರದೇವರ ಲಿಂಗ

ದೇವಸ್ಥಾನದ ಮುಂಭಾಗದಲ್ಲಿ ಗೋಳಾಕಾರವಾಗಿ ಮನೋಹರವಾಗಿ ಕೆತ್ತಿರುವ ನಾಲ್ಕು ಕಂಬಗಳ ಒಂದು ಮಂಟಪದಲ್ಲಿ ಕಪ್ಪು ಶಿಲೆಯ ಸುಂದರ ವಾದ ನಂದಿಯ ವಿಗ್ರಹವಿದೆ, ಅತಿ ಚಿಕ್ಕದಾದ ಗರ್ಭಗುಡಿಯಲ್ಲಿ ಕಪ್ಪು ಶಿಲೆಯ ಸುಮಾರು ಎರಡು ಅಡಿ ಚದುರದ ಪೀಠದ ಮೇಲೆ ಮುಕ್ಕಾಲು ಅಡಿ ಎತ್ತರವಿರುವ ಲಿಂಗವಿದೆ. ಈ ರುದ್ರದೇವರನ್ನು ತ್ರೇತಾಯುಗದಲ್ಲಿ ಶ್ರೀರಾಮಚಂದ್ರದೇವರು ಪ್ರತಿಷ್ಠಾಪಿಸಿದರೆಂದು ಹೇಳುತ್ತಾರೆ. ರಾಮಚಂದ್ರ ದೇವರಿಂದ ಪ್ರತಿಷ್ಠಾಪಿಸಲ್ಪಟ್ಟ ದ್ವಾದಶ ಲಿಂಗಗಳಲ್ಲಿ ಮೊದಲನೆಯದು ಈ ರುದ್ರದೇವರೆಂದು ಕೊನೆಯದು ರಾಮೇಶ್ವರದ ರಾಮಲಿಂಗವೆಂದು ಸ್ಥಳ ಪುರಾಣದಿಂದ ತಿಳಿದು ಬರುತ್ತದೆ.

ಮಹಂತ ಮಲ್ಲಿಕಾರ್ಜುನಸ್ವಾಮಿ ಎಂಬ ಸಿದ್ಧರು ಹಾಗೂ ಇತರ

ಸಿದ್ಧರುಗಳಿಂದ ಪೂಜಿಸಲ್ಪಟ್ಟು ರಾಮದೇವರಿಂದ ಪ್ರತಿಷ್ಠಾಪಿತವಾದ ಈ ಈಶ್ವರನನ್ನು ಸಿದ್ಧರಾಮೇಶ್ವರ ಎಂಬ ರೂಢಿನಾಮದಿಂದ ಕೂಗುತ್ತಾರೆ.

ದೇವಸ್ಥಾನವು ಚಿಕ್ಕದಾಗಿದ್ದರೂ ಚೊಕ್ಕಟವಾಗಿದೆ. ನವರಂಗದಲ್ಲಿ ಅತಿ ನಯವಾದ ಕಲ್ಲಿನ ಕೆಲಸವನ್ನು ಕಾಣಬಹುದು. ಮೇಲ್ಛಾವಣಿಯನ್ನು ಶಟ್ ಕೋಣಾಕೃತಿಯ ಕಲ್ಲಿನಿಂದ ಮುಚ್ಚಲಾಗಿದೆ. ಮಧ್ಯದಲ್ಲಿ ಒಂದು ಕಮಲದ ಮೊಗ್ಗಿದೆ. ಸುಮಾರು ಒಂದೂವರೆ ಅಡಿ ಎತ್ತರವಿರುವ ಎರಡು ಗಣಪತಿಯ ವಿಗ್ರಹಗಳು ಬಲ ಭಾಗದಲ್ಲಿವೆ. ನೆಲದ ಚಪ್ಪಡಿಯ ಮೇಲೆ ಒಂದು ಕಡೆ ಸುಮಾರು ನಾಲ್ಕೈದು ಸಾಲಿನ ಒಂದು ಶಿಲಾ ಶಾಸನವನ್ನು ಕಾಣಬಹುದು.

## ರಾಮದೇವರ ಹೆಜ್ಜೆ

ಈ ಬೆಟ್ಟದಲ್ಲಿ ಒಂದು ಗವಿ ಇದ್ದು ಇದನ್ನು "ಸಿದ್ಧಲಿಂಗನ ಗವಿ" ಎಂದು ಕರೆಯುತ್ತಾರೆ. ಬೆಟ್ಟದ ಬಂಡೆಯ ಮೇಲೆ ಹೆಜ್ಜೆಯ ಆಕೃತಿ ಇದೆ. ಅದನ್ನು ರಾಮದೇವರ ಹೆಜ್ಜೆ ಎಂದು ಹೇಳುತ್ತಾರೆ.

ಪ್ರತಿ ಸೋಮವಾರ ದೇವರಿಗೆ ವಿಶೇಷ ಪೂಜಾದಿಗಳು ನಡೆಯುತ್ತದೆ. ಬೇವೂರಿನಲ್ಲಿರುವ ಬಿಡದಿ ದೇವಸ್ಥಾನದಲ್ಲಿ ಇಲ್ಲಿಯ ಉತ್ಸವ ಮೂರ್ತಿಯನ್ನು ಇಡಲಾಗಿದೆ. ಉತ್ಸವಾದಿಗಳನ್ನು ಊರಿನಲ್ಲಿಯೇ ನಡೆಸುತ್ತಾರೆ.

ರಾಮಾಯಣ ಕಾಲದ ಐತಿಹ್ಯವನ್ನುಳ್ಳ ಈ ಸ್ಥಳವು ವಿಶ್ರಾಂತಿ ಧಾಮ ವಲ್ಲದೆ ಯಾತ್ರಾಸ್ಥಳವೂ ಆಗಿದೆ.

## ಬೇವೂರು ಮಂಡ್ಯದ ಬೆಟ್ಟದ ನರಸಿಂಹ

ಬೇವೂರಿಗೆ ಸುಮಾರು ಎರಡೂವರೆ ಮೈಲಿಗಳ ದೂರದಲ್ಲಿದೆ ಬೇವೂರು ಮಂಡ್ಯ. ಇದಕ್ಕೆ ಬೇವೂರು ಮಂಡ್ಯ ಎಂದು ಹೆಸರು ಬರಲು ಬಹುಶಃ

ದೊಡ್ಡ ಮಾಂಡ್ಯದಿಂದ ಇದನ್ನು ಬೇರ್ಪಡಿಸುವ ಸಲುವಾಗಿ ಇದಕ್ಕೆ ಬೇವೂರು ಮಾಂಡ್ಯ ಎಂದು ನಾಮಕರಣ ಮಾಡಿದ್ದಿರಬಹುದು.

ಇಲ್ಲಿನ ಯೋಗಾನರಸಿಂಹದೇವರು ಮೂರು ಅಡಿ ಎತ್ತರವಿದ್ದು ಯೋಗಾಸನದಲ್ಲಿ ತಪಸ್ಸಿಗೆ ಕುಳಿತಿರುವಂತಿದೆ. ದೇವಸ್ಥಾನವು ಗರ್ಭಗುಡಿ ನವರಂಗದಿಂದ ಕೂಡಿದೆ. ದೇವಸ್ಥಾನದ ಪಕ್ಕದಲ್ಲಿ ತಪಸೀ ಮಾರವೆಂಬ ಒಂದು ವೃಕ್ಷವಿದೆ. ಈ ವೃಕ್ಷಕ್ಕೆ ಮುಪ್ಪೆ ಇಲ್ಲವೆಂದು ಇದು ಯಾವಾಗಲೂ ಚಿರ ನೂತನವಾಗಿಯೇ ಇರುತ್ತದೆಂದು ಇಲ್ಲಿಯ ಜನ ಹೇಳುತ್ತಾರೆ.

## ಕಂಬದ ಬಸವ

ಅಬ್ಬೂರು ಬೇವೂರು ರಸ್ತೆಯಲ್ಲಿ ಅಬ್ಬೂರಿನಿಂದ ಸುಮಾರು 2 ಮೈಲಿ ದೂರದಲ್ಲಿರುವ ನಾಗವಾರ ಎಂಬ ಗ್ರಾಮದಲ್ಲಿ ಕಂಬದ ಬಸವನ ವಿಗ್ರಹವಿದೆ. ಬೃಹದಾಕಾರದ ಪೀಠದ ಮಧ್ಯದಲ್ಲಿ ನುಣಪಾದ ಸುಮಾರು ಇಪ್ಪತ್ತೆರಡು ಅಡಿ ಎತ್ತರವಿರುವ ಕಂಬದ ತುದಿಯಲ್ಲಿ ಸುಂದರವಾದ ವಿಗ್ರಹವನ್ನು ಕೆತ್ತಲಾಗಿದೆ. ಐತಿಹ್ಯವು ತಿಳಿದು ಬರುವುದಿಲ್ಲವಾದರೂ ಇದಕ್ಕೆ ಕೆಲವು ಸಂದರ್ಭದಲ್ಲಿ ವಿಶೇಷ ಉತ್ಸವಾದಿಗಳು ನಡೆಯುತ್ತವೆ. ಪ್ರಾಕಾರವಾಗಲಿ ದೇವಸ್ಥಾನವಾಗಲಿ ಇದಕ್ಕಿಲ್ಲ, ಬೈಲಿನಲ್ಲಿರುವ ಈ ವಿಗ್ರಹವು ವೀಕ್ಷಣಾರ್ಹ.

## ಚಿಕ್ಕೇನಹಳ್ಳಿ

ಇದು ಅಬ್ಬೂರಿಗೆ ಸುಮಾರು ಒಂದು ಮೈಲಿ ದೂರದಲ್ಲಿದೆ. ಅತಿ ದೊಡ್ಡದಾದ ಶ್ರೀ ಆಂಜನೇಯ ಸ್ವಾಮಿ ದೇವಸ್ಥಾನವು ವೀಕ್ಷಣಾರ್ಹ. ಇಲ್ಲಿರುವ ಆಂಜನೇಯಸ್ವಾಮಿ ವಿಗ್ರಹವು ಸುಮಾರು ಐದು ಅಡಿ ಎತ್ತರವಿದೆ. ಈ ದೇವರನ್ನು ಶ್ರೀ ಬ್ರಹ್ಮಣ್ಯ ತೀರ್ಥರ ಶಿಷ್ಯರಾದ ಶ್ರೀ ವ್ಯಾಸರಾಯ ಸ್ವಾಮಿಗಳು ಪ್ರತಿಷ್ಠಾಪಿಸಿದರೆಂದು ಶ್ರೀಮಠದ ವಲಯಗಳಿಂದ ತಿಳಿದು ಬರುತ್ತದೆ.

ಪ್ರತಿ ವರ್ಷದ ನವರಾತ್ರಿ ಸಂದರ್ಭದಲ್ಲಿ ಮತ್ತು ರಥಸಪ್ತಮಿಯಂದು ವಿಶೇಷ ಉತ್ಸವಾದಿಗಳು ನಡೆಯುತ್ತವೆ.

ದೇವಸ್ಥಾನದ ಮುಂಭಾಗದಲ್ಲಿ ಗರುಡ ಗಂಬವಿದೆ. ಊರಿನ ಮಧ್ಯೆ ಎತ್ತರವಾದ ಸ್ಥಳದಲ್ಲಿ ನಿರ್ಮಿತವಾಗಿರುವ ಈ ದೇವಸ್ಥಾನವು ಯಾತ್ರಿಕರ ಮನ ತಣಿಸುವುದರಲ್ಲಿ ಸಂದೇಹವಿಲ್ಲ.



# ರಾ ಮ ಗಿ ರಿ

ಬೆಂಗಳೂರು-ಮೈಸೂರು ರಸ್ತೆಯಲ್ಲಿ ಬೆಂಗಳೂರಿಗೆ ಸುಮಾರು ಇಪ್ಪತ್ತೆಂಟು ಮೈಲಿಗಳ ದೂರದಲ್ಲಿ ರಾಮನಗರಕ್ಕೆ ಉತ್ತರ ದಿಕ್ಕಿನಲ್ಲಿದೆ ರಾಮಗಿರಿ.

ಅರ್ಕಾವತಿಯ ಎಡಭಾಗದ ದಂಡೆಯ ಮೇಲಿರುವ ಈ ಬೆಟ್ಟದ ಬುಡದಲ್ಲಿ ರಾಮಗಿರಿ ಎಂಬ ಎಂಬ ಗ್ರಾಮವಿದ್ದಿತೆಂದು ತಿಳಿದು ಬಂದಿದ್ದು ಕ್ಲೋಸ್‌ಪೇಟೆ ಅಥವಾ ರಾಮನಗರ ಸ್ಥಾಪನೆಯಾದ ಮೇಲೆ ಇಲ್ಲಿಯ ಜನರು ರಾಮನಗರದಲ್ಲಿ ನೆಲೆಸಿದರು. ಹಿಂದೆ ಇಲ್ಲಿ ಕಬ್ಬಿಣದ ಅದುರು ಹೇರಳವಾಗಿ ಸಿಗುತ್ತಿದ್ದು ಅದು ಬಹಳ ಉತ್ತಮ ದರ್ಜೆಯದಾಗಿದ್ದು ಯುದ್ಧೋಪ ಕರಣಗಳ ಬಳಕೆಗೆ ಉಪಯೋಗಿಸಲಾಗುತ್ತಿತ್ತು.

ರಾಮಗಿರಿ ಬೆಟ್ಟದ ಶಿಖರವನ್ನು ತಲುಪಲು ಮೂರು ದ್ವಾರಗಳನ್ನು ದಾಟಬೇಕು. ಈ ಬೆಟ್ಟದ ಬಂಡೆಗೆ ಕಾರ್ಖಾನೆ ಬಂಡೆ ಎಂದು ಹೆಸರು.

ಬೆಂಗಳೂರಿನ ನಿರ್ಮಾಪಕ ಕೆಂಪೇಗೌಡನ ಕಾಲದಲ್ಲಿ ಈ ಸ್ಥಳವಲ್ಲಿ ಮದ್ದು ಗುಂಡುಗಳನ್ನು ತಯಾರು ಮಾಡಿ ಅಲ್ಲಿಯೇ ಶೇಖರಿಸುತ್ತಿದ್ದರಿಂದ ಈ ಹೆಸರು ಬಂದಿದೆ.

ಕೆಂಪೇಗೌಡನಿಗೆ ಭೂಮಿಯಲ್ಲಿ ಅಗಾಧವಾಗಿ ನಿಧಿ ದೊರಕಿದ ಸ್ಥಳವೆಂದು ಒಂದು ಸ್ಥಳವನ್ನು ಇಲ್ಲಿ ತೋರಿಸುತ್ತಾರೆ. ಬೆಟ್ಟದ ಮೇಲೆ ಶ್ರೀರಾಮ ಮತ್ತು ಶ್ರೀರಾಮೇಶ್ವರ ದೇವಸ್ಥಾನಗಳಿವೆ. ಶ್ರೀರಾಮ ದೇವಸ್ಥಾನದ ರಂಗ ಮಂಟಪ ಕೆಂಪೇಗೌಡನಿಂದ ಕಟ್ಟಲ್ಪಟ್ಟದ್ದಾಗಿದೆ. ಇಲ್ಲಿನ ಶ್ರೀರಾಮ ಚಂದ್ರ ಮೂರ್ತಿಯನ್ನು ಸುಗ್ರೀವನು ಪ್ರತಿಷ್ಠೆ ಮಾಡಿದ ನೆಂದು ಸ್ಥಳ ಪುರಾಣದಿಂದ ತಿಳಿದು ಬರುತ್ತದೆ.

ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಪಿತೃವಾಕ್ಯ ಪರಿಪಾಲನೆಗಾಗಿ ವನವಾಸವನ್ನು ಕೈಗೊಂಡು ಲಂಕಾಭಿಮುಖವಾಗಿ ಸಂಚರಿಸುತ್ತಿರುವಾಗ ಈಗಿನ ರಾಮನಗರದ ಬಳಿ ರಾಮಗಿರಿ ಎಂಬ ವನಪ್ರದೇಶದಲ್ಲಿ ಪರ್ಣ ಕುಟಿಯನ್ನು ರಚಿಸಿಕೊಂಡು ವಾಸಮಾಡುತ್ತಿದ್ದ ಐತಿಹ್ಯವಿದೆ.

ರಾಮಗಿರಿಯು ಸರಹದ್ದಿನಲ್ಲಿ ಕಾಗೆಗಳು ಇಂದಿಗೂ ಸಂಚರಿಸದೇ ಇರುವುದಕ್ಕೆ ಈ ಸಂದರ್ಭದ ಮಡಿಲಿನಲ್ಲಿ ಸಕಲ ಗುಣ ಪೂರ್ಣರಾದ ಸೀತಾ ದೇವಿಯವರು ವನವಾಸದ ಪ್ರಯುಕ್ತ ನಾರು ಮುಡಿ ಮತ್ತು ಪ್ರಕೃತಿದತ್ತ ವಾದ ಹೂವಿನಿಂದಲೇ ವಿಶೇಷವಾದ ಅಲಂಕಾರಾದಿಗಳನ್ನು ಮಾಡಿಕೊಂಡು ಶ್ರೀರಾಮಚಂದ್ರ ದೇವರ ತೃಪ್ತ್ಯರ್ಥವಾಗಿ ಸೇವಾದಿಗಳನ್ನು ಮಾಡಿಕೊಂಡು ಲಕ್ಷ್ಮಣ ದೇವರ ಸೇವೆಯಿಂದಲೂ ವನವಾಸ ಕಾಲವನ್ನು ವ್ಯಯಿಸುತ್ತಿದ್ದರು.

ಹೀಗಿರುವಲ್ಲಿ ಒಂದಾನೊಂದು ದಿನ ಶ್ರೀ ಸೀತಾರಾಮಚಂದ್ರರು ಏಕಾಂತ ದಲ್ಲಿರುವಾಗ ಇಂದ್ರನ ಮಗನಾದ ಜಯಂತನು ಸೀತಾದೇವಿಯ ಅಪೂರ್ವ ವಾದ ರೂಪರಾಶಿಯನ್ನು ನೋಡಿ ಮಂತ್ರಮುಗ್ಧನಾದನು. ಆ ಕ್ಷಣವೇ ಅವನಲ್ಲಿ ಅಸುರೀಭಾವವು ತಲೆದೋರಿ ತಾನು ಇಂದ್ರನ ಮಗನೆಂಬುವುದನ್ನು ಮರೆತು ಜಗನ್ಮಾತೆಯಾದ ಸೀತಾದೇವಿಯಲ್ಲಿ ಮೋಹಗೊಂಡನು. ಆದರೆ ತನ್ನ ಅವಿವೇಕದಿಂದ ಅವರು ಶಾಪಕೊಟ್ಟಾರೆಂದು ಹೆದರಿ ಕಾಗೆಯ ರೂಪ ದಲ್ಲಾದರೂ ಸರಿ ಅವರ ಮೈಯನ್ನು ಸ್ಪರ್ಶಿಸಬೇಕೆಂದು ಆಶಿಸಿ ಸೀತಾದೇವಿಯ ತೊಡೆಯ ಮೇಲೆ ರಾಮಚಂದ್ರದೇವರು ನಿದ್ರಿಸುತ್ತಿದ್ದಾಗ ಸೀತಾಮಾತೆಯ ಕಾಲನ್ನು ಕೊಕ್ಕಿನಿಂದ ಕುಕ್ಕಿದನು. ಶ್ರೀರಾಮಚಂದ್ರ ದೇವರ ನಿದ್ರೆಗೆ ಭಂಗ ತಾರದಂತೆ ಸೀತಾದೇವಿಯು ಸುಮ್ಮನಿದ್ದರೂ ಶ್ರೀರಾಮಚಂದ್ರದೇವರಿಗೆ ಎಚ್ಚರವಾಗಿ ಕುಪಿತಗೊಂಡು ಆತನ ಮೇಲೆ ರಾಮಬಾಣವನ್ನು ಪ್ರಯೋಗಿಸಿದನೆಂದು ಮತ್ತು ಇದೇ ಸ್ಥಳದಲ್ಲಿ ಶ್ರೀರಾಮ ಚಂದ್ರನು ಶುಕ್ರಾಸುರ ಎಂಬ ರಾಕ್ಷಸನನ್ನು ಕೊಂದ ಸ್ಥಳವಿದೆಂದು ಸ್ಥಳ ಪುರಾಣವಲ್ಲಿ ಉಲ್ಲೇಖವಿದೆ.

ರಾಮೇಶ್ವರ ದೇವಸ್ಥಾನದ ಮುಂಭಾಗದಲ್ಲಿರುವ ಬಂಡೆಗೆ ಮಾರ್ಕಂಡೇಯ ಬಂಡೆ ಎಂದು ಶ್ರೀರಾಮದೇವಸ್ಥಾನದ ಎಡಭಾಗದಲ್ಲಿರುವ ಇತರ ಬಂಡೆಗಳಿಗೆ

ಸಪ್ತಋಷಿಗಳ ಬಂಡೆ ಎಂದೂ ಹೆಸರಿವೆ. ಎರಡು ಬೃಹತ್ ಬಂಡೆಗಳ ಮಧ್ಯೆ ಅತಿ ಸುಂದರವಾದ ಕೊಳವೊಂದಿದೆ. ಇಷ್ಟೆಲ್ಲಾ ಇದ್ದರೂ ದೇವಸ್ಥಾನದ ಯಾವಭಾಗದಲ್ಲಿಯೋ ಆಗಲಿ ಯಾವುದೇ ಬಗೆಯ ಶಿಲಾಶಾಸನಗಳು ಕಾಣ ಬರುವುದಿಲ್ಲ.

ಸೋಮಶೇಖರರಾಯ ಮತ್ತು ಚಿತ್ರಶೇಖರರಾಯ ಎಂಬುವರಿಂದ ಆಳಲ್ಪಟ್ಟ ಚೌಡೇಶ್ವರಿ ಹಳ್ಳಿ ಇದರ ಸಮೀಪವಲ್ಲಿದ್ದು ಕೆಲವು ಶಿಥಿಲವಾದ ದೇವಾಲಯಗಳಿವೆ. ಅನೇಕ ವೀರಗಲ್ಲುಗಳು ಹಾಗೂ ಮಾಸ್ತಿ ಕಲ್ಲುಗಳನ್ನು ಈ ಊರ ಬಳಿ ಕಾಣಬಹುದು.

ರಾಮಾಯಣದ ವಿಶೇಷ ಘಟನೆಯು ನಡೆದಿರುವ ಈ ಸ್ಥಳವು ಪುರಾಣ ಕ್ಷೇತ್ರವು ಪುರಾಣ ಪ್ರಸಿದ್ಧವೂ ಆಗಿದೆ.

ಕಾಕಾಸುರನ ರೂಪದಲ್ಲಿದ್ದ ಜಯಂತನು ಇಂದ್ರಾದಿ ಸಮಸ್ತದೇವತೆ ಗಳನ್ನು ಮೊರೆಹೊಕ್ಕು ಅವರಿಂದ ಪರಿತ್ಯಜಿಸಲ್ಪಟ್ಟಾಗ ಬ್ರಹ್ಮದೇವರ ಬಳಿಗೆ ಬಂದನು, ಆಗ ಬ್ರಹ್ಮದೇವರು ಜಯಂತನಿಗೆ ಶರಣಾಗತ ವತ್ಸಲನಾದ ರಾಮಚಂದ್ರನ ಬಳಿಗೆ ಹೋಗಿ ಕ್ಷಮೆಯಾಚಿಸುವಂತೆ ತಿಳಿಸಿದನು.

ಹೀಗೆ ಶರಣಾಗತನಾಗಿ ಬಂದ ಜಯಂತನನ್ನು ರಾಮಬಾಣವು ವ್ಯರ್ಥವಾಗಬಾರದೆಂದು ಒಂದು ಕಣ್ಣನ್ನು ಮಾತ್ರ ಕಿತ್ತು ಆತನನ್ನು ಜೀವ ಸಹಿತ ಬಿಟ್ಟರು. ಈ ಕಾರಣದಿಂದಲೇ ಕಾಗೆಗಳಿಗೆ ಒಂದು ಕಣ್ಣು ಮಾತ್ರವಿದ್ದು ಈಗಿನ ರಾಮಗಿರಿಯ ಸರಹದ್ದಿನಲ್ಲಿ ಈ ಜಯಂತನ ವಂಶವಾದ ಕಾಗೆಗಳು ಇಂದಿಗೂ ಸುಳಿಯುವುದಿಲ್ಲ. ಇಲ್ಲಿಯ ರಾಮೇಶ್ವರ ಸ್ವಾಮಿಯನ್ನು ಶ್ರೀರಾಮ ಚಂದ್ರನು ಪ್ರತಿಷ್ಠಾಪಿಸಿದನೆಂದು ಪ್ರತೀತಿ.

—※—

# ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನ

—ಮಲ್ಲೇಶ್ವರ

ಬೆಂಗಳೂರು ಬೆಳೆದಂತೆಲ್ಲಾ ಹೊಸ ಬಡಾವಣೆಗಳು ನಿರ್ಮಾಣಗೊಂಡವು ಬಸವನಗುಡಿ, ಅಲಸೂರು, ಚಾಮರಾಜಪೇಟೆಗಳಂತೆ ೧೮೯೫ ರ ಸುಮಾರಿನಲ್ಲಿ ಮಲ್ಲೇಶ್ವರ ಬಡಾವಣೆಯೂ ರೂಪುಗೊಂಡಿತು. ಆಗ್ಗೆ ಈ ಬಡಾವಣೆಯಲ್ಲಿ ನೆಲೆಸಿದ್ದ ಪ್ರಮುಖರಾದ ಸರ್ವಶ್ರೀ ಎಸ್. ವೆಂಕಟ ರಂಗಯ್ಯಂಗಾರ್, ರಾವ್ ಬಹದ್ದೂರ್ ಆರ್. ನಾರಾಯಣಾಚಾರ್, ಎಂ. ಟಿ. ನಾರಾಯಣ ಅಯ್ಯಂಗಾರ್ ಮುಂತಾದವರುಗಳ ಶ್ರಮದ ಫಲವಾಗಿ ೧೯೦೨ರಲ್ಲಿ ಮಲ್ಲೇಶ್ವರ ಬಡಾವಣೆಯ ಮಧ್ಯಭಾಗದಲ್ಲಿ ಶ್ರೀ ವೇಣು ಗೋಪಾಲಸ್ವಾಮಿ ದೇವಸ್ಥಾನವು ನಿರ್ಮಾಣಗೊಂಡಿತು.

ಮೈಸೂರು ಅರಮನೆಯ ಮುಖ್ಯಸ್ಥರಾಗಿದ್ದ ಕಾಂತರಾಜೇ ಅರಸ್ ರವರ ವಿಶೇಷ ಕೃಪೆಯಿಂದಾಗಿ ತೆರಕಣಾಂಬಿಯ ದೇವಸ್ಥಾನದ ಅತಿ ಪುರಾತನ ವಾದ ಉತ್ಸವ ಮೂರ್ತಿಯನ್ನು ಈ ದೇವಸ್ಥಾನಕ್ಕೆ ತರಲಾಯಿತು. ಇಲ್ಲಿಯ ಮೂಲ ದೇವರಾದ ಶ್ರೀ ವೇಣುಗೋಪಾಲಸ್ವಾಮಿ ವಿಗ್ರಹವು ನಾಲ್ಕು ಅಡಿಗಳಿದ್ದು ಶೋಭಕೃತನಾಮ ಸಂವತ್ಸರದ ಶ್ರಾವಣ ಬಹುಳ ದ್ವಿತೀಯ ಉತ್ತರಾಭಾದ್ರ ನಕ್ಷತ್ರದಲ್ಲಿ ಅಂದರೆ ನಾಲ್ಮಡಿ ಕೃಷ್ಣರಾಜ ಒಡೆಯರ್‌ರವರ ಪಟ್ಟಾಭಿಷೇಕ ಮಹೋತ್ಸವದಂದು ಪ್ರತಿಷ್ಠಾಪಿಸಲಾಯಿತು.

ಈ ದೇವಸ್ಥಾನದ ಪೂಜೆ ಪುರಸ್ಕಾರ ಇತ್ಯಾದಿಗಳು ಮೇಲುಕೋಟೆಯ ದೇವಸ್ಥಾನದ ಮೇಲ್ಪಂಕ್ತಿಯಲ್ಲಿ ಪಂಚರಾತ್ರಾಗಮ ರೀತ್ಯ ಅನೂಚಾನವಾಗಿ ನಡೆದುಕೊಂಡು ಬರುತ್ತಿದೆ.

೧೯೦೪ರಲ್ಲಿ ಶ್ರೀ ಆಳ್ವಾರುಗಳ ಪ್ರತಿಮೆಗಳನ್ನು ಹಾಗೂ ಮುಖ್ಯ ಪ್ರಾಣದ ವಿಗ್ರಹವನ್ನು ಪ್ರತಿಷ್ಠಾಪಿಸಲಾಯಿತು.

ಶ್ರೀ ವೇಣುಗೋಪಾಲಸ್ವಾಮಿಯು ಪ್ರತಿಷ್ಠಾಪನಾ ಮಹೋತ್ಸವವು ಮೇಲುಕೋಟೆಯು ಯತಿರಾಜ ಮಠಾಧೀಶ್ವರರಿಂದ ನೆರವೇರಲ್ಪಟ್ಟಿದ್ದು ಶ್ರೀ ವೈಷ್ಣವ ಸಿದ್ಧಾಂತದ ಎರಡೂ ಸಂಪ್ರದಾಯಗಳು ಸಮನ್ವಯವಾಗಿ ನಡೆದುಕೊಂಡು ಬರುತ್ತಿದೆ. ಈ ಬಗ್ಗೆ ಒಂದು ಶಾಸನವನ್ನೂ ಸಹಾ ಈ ದೇವಸ್ಥಾನದ ಆವರಣದಲ್ಲಿ ನೋಡಬಹುದಾಗಿದೆ,

೧೯೪೯ರ ಸುಮಾರಿಗೆ ಪುಟ್ಟಗುಡಿಯೊಂದನ್ನು ಕಟ್ಟಿ ಅದರಲ್ಲಿ ಶ್ರೀ ಆಂಡಾಳ್ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಯಿತು.

ಶ್ರೀ ವೈಷ್ಣವ ಆಚಾರ್ಯರುಗಳ ಪುಣ್ಯದಿನಗಳಂದು ಇಲ್ಲಿ ವಿಶೇಷ ಪೂಜೆ ಉತ್ಸವಾದಿಗಳು ನಡೆಯುತ್ತವೆ. ಪ್ರತಿನಿತ್ಯ ಪೂಜಾಸಮಯದಲ್ಲಿ ತಿರುಪ್ಪಾವೈ ಶಾತ್ತು ಮರೆ ನಡೆಯುತ್ತದೆ. ರಾತ್ರಿ ಪೂಜೆ ನಂತರ ಪ್ರಬಂಧ ಪಾರಾಯಣದ ಜೊತೆಯಲ್ಲಿ ಆಳ್ವಾರ್‌ರೊಬ್ಬರು ರಚಿಸಿದ ಅಮರನಾದ ಪಿರನ್ ಇತ್ಯಾದಿ ಸ್ತೋತ್ರ ಪಾರಾಯಣಾದಿಗಳು ಹಾಗೂ ವಿಶೇಷ ಉತ್ಸವಗಳಲ್ಲಿ ನಮ್ಮಾಳ್ವಾರ್ ರಚಿಸಿದ ತಿರುವಾಯಿಮುಳಿ ಅನುಸಂಧಾನವು ನಡೆಯುತ್ತದೆ.

ಶ್ರೀ ಕೃಷ್ಣಜನ್ಮಾಷ್ಟಮಿಯಂದು ಇಲ್ಲಿ ವಿಶೇಷ ಪೂಜೆ ಅಲಂಕಾರಾದಿಗಳು ನಡೆಯುತ್ತಿದ್ದು ಆ ಸಮಯದಲ್ಲಿ ಸಾವಿರಾರು ಭಕ್ತಾದಿಗಳು ಕೃಷ್ಣದರ್ಶನ ಭಾಗ್ಯ ಪಡೆಯುವರು.

ನಲವತ್ತು ದಿನಗಳ ಸಂಗೀತೋತ್ಸವ ಕಾರ್ಯಕ್ರಮಗಳು ಜನ್ಮಾಷ್ಟಮಿ ಪ್ರಯುಕ್ತ ಈ ದೇವಳದಲ್ಲಿ ನಡೆಯುತ್ತಿದ್ದು ಆ ಸಮಯದಲ್ಲಿ ನಾಡಿನ ಹಾಗೂ ಹೊರನಾಡಿನ ಸಂಗೀತಗಾರರು ಬಂದು ತಮ್ಮ ಅಮೋಘವಾದ ಸಂಗೀತ ರಸದೌತಣವನ್ನು ಸಭಿಕರಿಗೆ ನೀಡುತ್ತಿದ್ದಾರೆ. ಬೆಂಗಳೂರಿನಲ್ಲಿ ನಡೆಯುವ ಸಂಗೀತೋತ್ಸವಗಳಲ್ಲಿ ಮಲ್ಲೇಶ್ವರದ ಶ್ರೀ ವೇಣುಗೋಪಾಲ ಸ್ವಾಮಿ ದೇವಸ್ಥಾನದಲ್ಲಿ ನಡೆಯುವ ಉತ್ಸವ ಅತ್ಯಂತ ಪ್ರಮುಖ ವಾದದ್ದಾಗಿದೆ.

—★—

# ಶ್ರೀ ಮೈಲಾರೇಶ್ವರ ದೇವಸ್ಥಾನ

ಶಿವಮೊಗ್ಗ ನಗರದ ಬಿ. ಹೆಚ್. ರಸ್ತೆಯಲ್ಲಿರುವ ಶ್ರೀ ಮೈಲಾರೇಶ್ವರ ದೇವಾಲಯವು ಬಹಳ ಪುರಾತನದ್ದಾಗಿದ್ದು. ದೇವಾಲಯದ ಸ್ಥಾಪನೆಯ ಹಿನ್ನೆಲೆಯಲ್ಲಿ ಇತಿಹಾಸವೇ ಇದೆ.

ಶಿವಮೊಗ್ಗ ನಗರದ ಪೂರ್ವಿಕರು ಮೈಲಾರದಲ್ಲಿ ಮತ್ತು ದೇವರಗುಡ್ಡದಲ್ಲಿರುವ ಗುಡ್ಡದಯ್ಯನ ಸನ್ನಿಧಿಗೆ ಹೋಗಿದ್ದಾಗ ಸದಾ ನಿಮ್ಮ ದರ್ಶನಕ್ಕಾಗಿ ಶಿವಮೊಗ್ಗದಲ್ಲೇ ಇದ್ದೇನೆ. ಇದರ ಕುರುಹಾಗಿ ಬನ್ನೀ, ಔದುಂಬರ, ಅಶ್ವಥ ಈ ವೃಕ್ಷಗಳ ಮಧ್ಯೆ ಇರುವ ಹುತ್ತದಲ್ಲಿ ನಾನು ನೆಲಸಿದ್ದೇನೆ. ಈ ಸ್ಥಳದಲ್ಲಿ ದೇವಾಲಯ ಕಟ್ಟಿ ನನ್ನನ್ನು ಆರಾಧಿಸಿ ಸದಾ ದರ್ಶನವನ್ನು ಪಡೆಯಿರಿ ಎಂಬ ವಾಣಿಯಿಂದ ಪುಳಕಿತರಾದ ಪೂರ್ವಿಕರು ಹಿಂದಿರುಗಿ ಬಂದು ಈ ಸ್ಥಳವನ್ನು ನೋಡಿದಾಗ ಸ್ವಾಮಿಯ ವಾಣಿ ನಿಜವಾಗಿತ್ತು.

ಪೂರ್ವಿಕರು ಈ ಸ್ಥಳದಲ್ಲಿ ಸಣ್ಣ ದೇವಾಲಯವನ್ನು ಕಟ್ಟಿಸಿ ಶ್ರೀ ಸ್ವಾಮಿಯನ್ನು ಪೂಜೆಗೆಯ್ಯುತ್ತಾ ಬಂದಿರುವುದು ಇತಿಹಾಸದ ಪರಂಪರೆಯಾಗಿರುತ್ತದೆ. ಈ ಸ್ಥಳದಲ್ಲಿ ಸರಪಳಿ ಪವಾಡ ಮತ್ತು ಕಾರ್ಣೀಕ ಪವಾಡಗಳು ಇತಿಹಾಸವನ್ನು ನಿರ್ಮಿಸಿರುತ್ತದೆ.

ಈ ಸ್ಥಳದಲ್ಲಿ ಭಕ್ತಾದಿಗಳ ಉದಾರವಾದ ತನು, ಮನ, ಧನ-ಸಹಾಯದಿಂದ ಸುಂದರವಾದ ದೇವಾಲಯ ನಿರ್ಮಾಣವಾಗಿದ್ದು, ಮಹಾದ್ವಾರ ನಿರ್ಮಾಣ ಹಂತದಲ್ಲಿದೆ.

# ವಿಶ್ವದ ಪ್ರಪ್ರಥಮ ಹಿಂದೂ ಸುವರ್ಣ ದೇವಳ

ಕರ್ನಾಟಕ ಶಿಲ್ಪ ಕಲೆಗಳ ತೌರೂರು ಎಂಬ ಖ್ಯಾತಿ ಪಡೆದಿರುವುದು ಹೆಮ್ಮೆಯ ವಿಷಯ. ಕರ್ನಾಟಕದ ರಾಜಧಾನಿ ಬೆಂಗಳೂರು ಗುಹಾಂತರ ದೇವಾಲಯಗಳಿಗೆ ಪ್ರಸಿದ್ಧಿ ಹೊಂದಿದಂತೆ ಅನೇಕ ಗುಡ್ಡಗಳ ದೇವಾಲಯ ಗಳಿಗೂ ಪ್ರಖ್ಯಾತಿ ಪಡೆದಿದೆ.

ಬೆಂಗಳೂರಿನ ದಕ್ಷಿಣಕ್ಕಿರುವ ರಾಗಿ ಗುಡ್ಡ, ಪಶ್ಚಿಮಕ್ಕಿರುವ ರಾಮಾಂಜನೇಯರ ಗುಡ್ಡ, ನೈರುತ್ಯ ದಿಕ್ಕಿನಲ್ಲಿರುವ ನರಹರಿ ರಾಯರ ಗುಡ್ಡ ಉತ್ತರಕ್ಕಿರುವ ಕಾಡುಮಲ್ಲೇಶ್ವರಗಳಂತೆ, ವಾಯುವ್ಯ ದಿಕ್ಕಿನಲ್ಲಿರುವ ಮಹಾಲಕ್ಷ್ಮಿ ಗುಡ್ಡವು ಇಂದು ವಿಶ್ವಖ್ಯಾತಿ ಗಳಿಸಿದೆ.

ಕೆಲವು ವರ್ಷಗಳ ಹಿಂದೆ ಮಹಾಲಕ್ಷ್ಮಿ ಬಡಾವಣೆ ಅಷ್ಟೇನೂ ಅಭಿವೃದ್ಧಿ ಹೊಂದಿರಲಿಲ್ಲ. ಗುಡ್ಡದ ಮೇಲಿದ್ದ ದೈತ್ಯಾಕಾರದ ಬಂಡೆ ಹಾಗೂ ಹಳ್ಳ ಕೊಳ್ಳಗಳಿಂದಾಗಿ ಜನ ಈ ಪ್ರದೇಶದಲ್ಲಿ ಓಡಾಡಲು ಹಿಂಜರಿಯುತ್ತಿದ್ದರು. ಹೀಗಿರಲು ಒಮ್ಮೆ ಕಲೆಗಾರನೊಬ್ಬ ಬೃಹತ್ತಾದ ಬಂಡೆಯ ಮೇಲೆ ಒಂದು ಆಂಜನೇಯನ ಚಿತ್ರವನ್ನು ಸೀಮೆಸುಣ್ಣದಿಂದ ಚಿತ್ರಿಸಿ ಅದಕ್ಕೆ ಬಣ್ಣ ತುಂಬಿದ. ಈ ಚಿತ್ರ ದಾರಿ ಹೋಕರನ್ನು ಆಕರ್ಷಿಸಿತು. ಸೀಮೆಸುಣ್ಣದಿಂದ ಬರೆದ ಚಿತ್ರ ನಂತರ ತೈಲವರ್ಣಕ್ಕೆ ಬದಲಾಯಿಸಲ್ಪಟ್ಟು ಭಕ್ತರನ್ನು ಆಕರ್ಷಿಸಿತು ಬಡಾವಣೆಯ ಭಕ್ತಾದಿಗಳು ಇಲ್ಲಿ ಒಂದು ದೇಗುಲ ನಿರ್ಮಾಣ ಮಾಡಲು ನಿರ್ಧರಿಸಿ ಸಮಿತಿಯೊಂದನ್ನು ರಚಿಸಿದರು.

1974ರಲ್ಲಿ ನಗರ ಪಾಲಿಕೆಯವರಿಂದ ಆಜ್ಞೆ ಪಡೆದು ಈ ಬೃಹತ್ತಾದ ಶಿಲೆಯಲ್ಲಿ ಮಾರುತಿಯ ಸುಂದರವಾದ ಕೆತ್ತನೆ ಕೆಲಸ ಪ್ರಾರಂಭವಾಯಿತು. ಕೆತ್ತನೆ ಕೆಲಸದ ಜವಾಬ್ದಾರಿ ಹೊತ್ತವರು ತಂಜಾವೂರಿನ ಶ್ರೀ ಷಣ್ಮುಗಾನಂದ ರವರು.

ನಾಲ್ಕು ಅಡಿ ದಪ್ಪದ ಅಖಂಡ ಉದ್ಭವ ಶಿಲೆಯಲ್ಲಿ ಬಲಗೈಲಿ ಸಂಜೀವಿನಿ ಪರ್ವತವನ್ನೂ. ಎಡಗೈಲಿ ಗದೆಯನ್ನೂ, ಹಿಡಿದು ನಿಂತ ವೀರಾಂಜನೇಯ ಸ್ವಾಮಿಯ ದಿವ್ಯ ನಯನ ಮನೋಹರ ವಿಗ್ರಹವು ಸ್ಥಪತಿಗಳ ಕೈ ಚಳಕದಿಂದ ರೂಪುಗೊಂಡಿತು. ಬಂಡೆ ಉದ್ಭವಗೊಂಡ ಸ್ಥಳದಲ್ಲೇ ಕೆತ್ತಿದ ಏಕ ಶಿಲಾಮೂರ್ತಿಗಳಲ್ಲಿ ಇದು ಎರಡನೆಯದೆಂದು ಖ್ಯಾತಿ ಗಳಿಸಿದೆ.

ಆಂಜನೇಯ ಸ್ವಾಮಿ ಮೂಡಿ ಬಂದ ಈ ಗುಡ್ಡ ಹಳ್ಳಕೊಳ್ಳಗಳಿಂದ ತುಂಬಿದ್ದವು. ನಗರ ಸಭೆ ಅಧಿಕಾರಿಗಳಾಗಿದ್ದ ಶ್ರೀಮಾನ್ ಲಕ್ಷ್ಮಣರಾಯರ ದೈವಭಕ್ತಿ ಹಾಗೂ ಕಾರ್ಯಶ್ರದ್ಧೆಯಿಂದಾಗಿ ಹಳ್ಳಗಳು ಸಮಗೊಂಡು ಸುಂದರ ಉದ್ಯಾನವನವಾಗಿ ಪರಿವರ್ತನೆಗೊಂಡಿತು.

ಇಪ್ಪತ್ತೆರಡು ಅಡಿ ಎತ್ತರದ ವಾಯುಪುತ್ರನಿಗೆ ಕ್ರೈನ್ ಬಳಸಿ ಅಭಿಷೇಕ ಮಾಡುವುದರೊಂದಿಗೆ ಪ್ರಾಣಪ್ರತಿಷ್ಠಾಪನೆ ಕಾರ್ಯನೆರವೇರಿಸಲ್ಪಟ್ಟಿತು.

ಕಾಲಕ್ರಮೇಣ ದೇವಸ್ಥಾನ ನಿರ್ಮಾಣ ಕಾರ್ಯ ಪ್ರಾರಂಭವಾಗಿ ಅನೇಕ ತಂತ್ರಜ್ಞರ ಸಲಹೆಯನ್ನು ಪಡೆಯಲಾಯಿತು. ಇಡೀ ದೇವಸ್ಥಾನದ ವಿಸ್ತೀರ್ಣ 45x45 ಅಡಿ ಹಾಗೂ ಎತ್ತರ 78 ಅಡಿಗಳು. ವಿಗ್ರಹದ ವೀಕ್ಷಣೆ ದೂರದಿಂದಲೂ ಮಾಡಲು ಅನುಕೂಲವಾಗುವಂತೆ ನಾಲ್ಕು ಕಡೆಗಳಲ್ಲೂ 27x23 ಅಡಿಗಳ ಕಮಾನು ನಿರ್ಮಿಸಲಾಗಿದೆ. ಮೇಲ್ಛಾವಣಿ 12x2 ಅಡಿ, 24 ಅಡಿಗಳ ಎತ್ತರ ನಾಲ್ಕು ಭಾರಿ ಕಂಬಗಳ ಆಧಾರದ ಮೇಲೆ ನಿಂತಿದೆ. ಅಲ್ಲಿಂದ ನಾಲ್ಕು ತೊಲೆಗಳು ಅರ್ಧ ಗೋಲಾಕಾರದಲ್ಲಿ ಹೊರಟು ನಲವತ್ತು ಅಡಿಗಳ ಎತ್ತರದಲ್ಲಿ ಸೇರಿಕೊಂಡಿದೆ. ಇದರಿಂದ ದೇವಾಲಯ ಮಳೆ ಬಿಸಿಲುಗಳಿಂದ ರಕ್ಷಣೆ ಪಡೆದು ಇಲ್ಲಿಯ ಹವೆ ತಂಪಾಗಿರಲು ಸಾಧ್ಯವಾಗಿದೆ.

ಅರ್ಧ ಗೋಲಾಕಾರದ ತೊಲೆಯ ಆಧಾರದ ಮೇಲೆ 38 ಅಡಿಗಳ ಎತ್ತರದ ಗೋಪುರವಿದ್ದು ಅದರ ತುದಿಯಲ್ಲಿ 7½ ಅಡಿಗಳ ಕಲಶವಿದೆ. 1985ರಲ್ಲಿ ಸುವರ್ಣಕಲಶ ಸ್ಥಾಪಿಸಿ ಶ್ರೀ ಮಹಾಲಕ್ಷ್ಮಿದೇವಿಯ ಅಮೃತ ಶಿಲಾ ಮೂರ್ತಿಯ ಪ್ರತಿಷ್ಠಾಪನೆ ಹಾಗೂ ಕುಂಭಾಭಿಷೇಕವು ನೇರವೇರಲ್ಪಟ್ಟಿತು. ಶ್ರೀ ಸ್ವಾಮಿಯ ಮುಂಭಾಗದಲ್ಲಿ ಅಷ್ಟ ಗಣಪತಿ ಹಾಗೂ ಅಷ್ಟ ಲಕ್ಷ್ಮಿಯರ ಸುಂದರ ಬೃಂದಾವನಗಳು ಪ್ರತಿಷ್ಠಾಪನೆಗೊಂಡಿವೆ.

ಮೂಲ ವಿಗ್ರಹದ ಹಿಂಭಾಗಕ್ಕೆ ಬಿಳಿ ಅಮೃತ ಶಿಲೆಯ ಶ್ರೀ ಪ್ರಸನ್ನ ಗಣಪತಿ ಸೀತಾಲಕ್ಷ್ಮಣ ಹನುಮಂತ ಸಮೇತನಾದ ಕೋದಂಡರಾಮರ ಮೂರ್ತಿಗಳನ್ನೂ 1982ರಲ್ಲಿ ಪ್ರತಿಷ್ಠಾಪನೆ ಮಾಡಲಾಯಿತು.

ಕನ್ಯಾಕುಮಾರಿಯಲ್ಲಿರುವಂತೆ ವಿಶಾಲವಾದ ಧ್ಯಾನ ಮಂದಿರವೂ ಸ್ವಾಮಿಯ ಬಲ ಪಾರ್ಶ್ವದಲ್ಲಿ ರೂಪುಗೊಂಡಿದ್ದು ಇಲ್ಲಿ ಭಜನೆ ಹಾಗೂ ಧ್ಯಾನ ಮಾಡಲು ಸೂಕ್ತವಾಗಿದ್ದು ಮನಶ್ಯಾಂತಿಯನ್ನು ನೀಡುವ ಶಾಂತಿ ಧಾಮ

ವಾಗಿದೆ. ಅನೇಕ ಸಂತರ ಮಠಾಚಾರ್ಯರ ಮೂರ್ತಿ ಫಲಕಗಳೂ ಹಾಗೂ ಗೀತೋಪದೇಶದ ಅಮೃತ ಶಿಲೆಯ ಫಲಕವೂ ಇಲ್ಲಿದ್ದು ದೇವಳಕ್ಕೆ ವಿಶಿಷ್ಟ ಕಳೆ ತಂದಿದೆ.

ಶ್ರಾವಣ ಮಾಸದ ಕಡೆಯ ಶನಿವಾರ ಸ್ವಾಮಿಯ ವಿಗ್ರಹಕ್ಕೆ ನವನೀತ (ಬೆಣ್ಣೆ) ಅಲಂಕಾರ ಜರುಗುತ್ತಿದ್ದು ಈ ಸೇವೆ ಒಂದು ಅಪೂರ್ವ ಅನುಪಮ ಹಾಗೂ ನಯನ ಮನೋಹರವಾದದ್ದಾಗಿದೆ. ಈ ಸೇವೆಗೆ 450 ಕೆ.ಜಿ. ಗಳಷ್ಟು ಬೆಣ್ಣೆಯನ್ನು ಬಳಸಲಾಗುತ್ತದೆ. ಈ ಸಮಯದಲ್ಲಿ ಸಾವಿರಾರು ಭಕ್ತಾದಿಗಳು ನೆರೆದು ಸ್ವಾಮಿಯನ್ನು ಕೊಂಡಾಡುತ್ತಾರೆ.

ಮಾರ್ಗಶಿರ ಮಾಸದಲ್ಲಿ ಹನುಮಜ್ಜಯಂತಿಯ ದಿನ ಬೆಂಗಳೂರಿನ ಸುತ್ತಮುತ್ತಲ 100 ಕಿ.ಮೀ. ಒಳಗೆ ವಾಸಿಸುವ ಎಲ್ಲಾ ವಾನರುಗಳಿಗೆ ಬಾಳೆ ಹಣ್ಣನ್ನು ಹಂಚುವ ಕಾರ್ಯಕ್ರಮವನ್ನು ದೇವಸ್ಥಾನದ ಆಡಳಿತ ವರ್ಗವು ಹಮ್ಮಿಕೊಂಡಿರುವುದೂ ಸ್ತುತ್ಯವಾದ ಕಾರ್ಯವಾಗಿದೆ.

ಇದೀಗ ದೇವಸ್ಥಾನದ ಟ್ರಸ್ಟ್‌ನವರು ಈ ದೇಗುಲವನ್ನೂ ವಿಶ್ವದ ಪ್ರಪ್ರಥಮ ಸುವರ್ಣ ದೇಗುಲವನ್ನಾಗಿ ನಿರ್ಮಾಣ ಮಾಡಲು ತೀರ್ಮಾನಿಸಿ ಅವರತ್ತ ಕಾರ್ಯೋನ್ಮುಖರಾಗಿದ್ದು ಅದು ಇಷ್ಟರಲ್ಲೇ ಪೂರ್ಣಗೊಳ್ಳಲಿದೆ.

ಒಟ್ಟಿನಲ್ಲಿ ಭಕ್ತರ ಅಪಾರ ಶ್ರದ್ಧೆ ಭಕ್ತಿ ಕಾಣಿಕೆಗಳು ಹಾಗೂ ಟ್ರಸ್ಟ್‌ನವರ ಹುಮ್ಮಸ್ಸಿನಿಂದಾಗಿ ಈ ಕ್ಷೇತ್ರ ಸುವರ್ಣ ದೇಗುಲವಾಗಿ ಪವಿತ್ರ ಕ್ಷೇತ್ರವಾಗಲಿದೆ ಎಂಬ ಹೆಮ್ಮೆ ನಮ್ಮದಾಗಿದೆ.

—ಕಾಕೋಳು ರಾಘವೇಂದ್ರ

## ವಾಸವಿ ದೇವಸ್ಥಾನ

ಆರ್ಯ ವೈಶ್ಯ ಸೇವಾ ಸಮಿತಿ (ರಿ) 358, 10ನೇ ಕ್ರಾಸ್, ಬಿ ಮೈನ್, ಎರಡನೇ ಹಂತ, ವೆಸ್ಟ್ ಆಫ್ ಕಾರ್ಡ್ ರಸ್ತೆ, ಮಂಜುನಾಥ ನಗರ,
ಬೆಂಗಳೂರು.

ಮಂಗಳವಾರ-ಶುಕ್ರವಾರಗಳಂದು ನಿಂಬೆ ಹಣ್ಣು ದೀಪ ಹಚ್ಚಿ ಭಕ್ತಾದಿಗಳು ಪೂಜೆ ಸಲ್ಲಿಸುತ್ತಾರೆ. ಇಷ್ಟಾರ್ಥಸಿದ್ಧಿಸುವುದೆಂಬ ನಂಬಿಕೆ, ದೇವಾಲಯದ ಕಟ್ಟಡ ಸುಂದರವಾಗಿ ರೂಪುಗೊಳ್ಳುತ್ತಿದೆ.

# ಶ್ರೀ ಸುಕ್ಷೇತ್ರ ಸಿಂಗಟಾಲೂರ ಶ್ರೀ ವೀರಭದ್ರಸ್ವಾಮಿ

ಧಾರವಾಡ ಜಿಲ್ಲೆಯ ಮುಂಡರಗಿ ತಾಲ್ಲೂಕ್ ಪೈಕಿ "ಸಿಂಗಟಾಲೂರ್" ಕ್ಷೇತ್ರ ಜಾಗ್ರತ ಕ್ಷೇತ್ರವೆಂದೇ ಪ್ರಸಿದ್ಧಿ. ಶ್ರೀ ವೀರಭದ್ರಸ್ವಾಮಿಯ ಉದ್ಭವ ಮೂರ್ತಿ ಇಲ್ಲಿರುವದೇ ಇದಕ್ಕೆ ಕಾರಣ ! ಅದಕ್ಕೆಂದೇ "ವೀರೇಶ ದೊರೆಯೇ ನಿನಗಾರು ಸರಿಯೇ ; ಸರಿ ಎಂದವರ ಹಲ್ಲು ಮುರಿಯೇ" ಅಂತಾ ಇಲ್ಲಿ ಮನೆ ಮಾತಾಗಿದೆ.

ತುಂಗಭದ್ರೆಯ ದಡದಲ್ಲಿರುವ ಶ್ರೀ ಕ್ಷೇತ್ರದಲ್ಲಿ ವಿರಾಜಮಾನನಾಗಿ ಬಸವಳಿದು ಬಂದ ಭಕ್ತ ಜನಕೆ ಆಶೀರ್ವಾದಿಸುತ್ತಾ, ಅವರ ಇಷ್ಟಾರ್ಥಗಳನ್ನೆಲ್ಲ ಈಡೇರಿಸುವ ಜಾಗ್ರತಸ್ವಾಮಿಯಾದ ಶ್ರೀ ವೀರಭದ್ರೇಶ್ವರ ಸ್ವಾಮಿಯ ಪವಾಡ ಮಹಿಮೆ ಅಗಾಧವಾದದು. ಪರಮಾತ್ಮನ ಲೀಲೆ ಅಮೋಘ ! ಸೃಷ್ಟಿಯ ಸಮಸ್ತ ಜೀವಿಗಳ ಕಲ್ಯಾಣಕ್ಕೆ ಕಾರಣೀಭೂತನೂ ಅವನೇ ! ವೈಜ್ಞಾನಿಕ ಜಗತ್ತು ಎಷ್ಟೇ ಮುಂದುವರೆದರೂ ಪರಮಾತ್ಮನ ಆಜ್ಞೆ ಮೀರಿ ನಡೆಯಲಾಗದು. ಸುಖವೇ ಬರಲಿ ; ದುಃಖವೇ ಬರಲಿ ; ಅವನೇ ಕಾರಣ. ಅದಕ್ಕೇ "ಪರಮಾತ್ಮನ ಲೀಲೆ" ಎನ್ನುವರು. ಅಂತಹ ಲೀಲಾ ಕ್ಷೇತ್ರಗಳಲ್ಲಿ ಶ್ರೀ ಸಿಂಗಟಾಲೂರ ಶ್ರೀ ವೀರಭದ್ರಸ್ವಾಮಿಯ ಕ್ಷೇತ್ರವೂ ಒಂದು.

ವೀರಶೈವ ಧರ್ಮದ ಪಂಚಪೀಠಗಳಲ್ಲಿ ಒಂದಾದ ಶ್ರೀ ರಂಭಾಪುರಿ ಪೀಠದ ಗೋತ್ರ ಪುರುಷನೂ ಆದ ಶ್ರೀ ವೀರಭದ್ರಸ್ವಾಮಿಯು ಕಪ್ಪತ ಗಿರಿಯ ತುದಿಯಲ್ಲಿ ತುಂಗಭದ್ರೆಯ ದಡದಲ್ಲಿ ಕಂಗೊಳಿಸುತ್ತಿದ್ದಾನೆ. ಶ್ರೀ ಕ್ಷೇತ್ರವು ಸೃಷ್ಟಿ ಸೌಂದರ್ಯಕ್ಕೆ ಕೊರತೆಯಿಲ್ಲದ ತಾಣವಾಗಿದೆ. ನಿಷ್ಕಾಮ ಕರ್ಮಯೋಗಿಗಳಿಗೆ ಆತ್ಮಕಲ್ಯಾಣಕ್ಕೆ ಪವಿತ್ರ ಸ್ಥಾನ ಇದೆಂದರೆ ತಪ್ಪಾಗದು. ಹಿಂದಿನ ಕಾಲದಿಂದಲೂ ಅನೇಕ ಸಾಧು–ಸಂತರು ನೆಲೆಸಿದ ಜಾಗೆ ಇದು, ಶ್ರೀ ಸ್ವಾಮಿಯು ತನ್ನ ಸಮಸ್ತ ಭಕ್ತರ ಇಷ್ಟ ದೈವವಾಗಿದ್ದು ಸದಾಕಾಲ ಜಾಗ್ರತನಾಗಿ ಭಕ್ತರನ್ನು ಸಂರಕ್ಷಿಸುತ್ತಿದ್ದಾನೆ. ನಿತ್ಯ ಸಾವಿರಾರು ಭಕ್ತರು ಆಗಮಿಸಿ ಪುನೀತರಾಗುತ್ತಿದ್ದಾರೆ.

ಪ್ರತಿವರ್ಷ ಚೈತ್ರ ಶುದ್ಧ ಪ್ರತಿಪದೆಯಿಂದ ಜಾತ್ರಾ ಮಹೋತ್ಸವ ಜರಗುತ್ತವೆ. ಪ್ರತಿಪದ ಶುದ್ಧ ಪಂಚಮಿ ದಿನ ಮಹಾರಥೋತ್ಸವ ಜರಗುತ್ತದೆ. ಮರುದಿನ ಷಷ್ಟಿ ತಿಥಿಯಂದು "ಅಗ್ನಿ" ಕಾರ್ಯ ನಡೆಯುತ್ತದೆ.

ಅದನ್ನು ನೋಡುವದೇ ಮಹಾ ಪುಣ್ಯ! ನಮಗೆಲ್ಲ ಕೈಗೆ ಸೂಜಿ ಚುಚ್ಚಿದರೆ, ಕಾಲಿಗೆ ಸಣ್ಣ ಮುಳ್ಳು ಚುಚ್ಚಿದರೆ ಹಾಯ್ ಎನ್ನುತ್ತೇವೆ. ಅದು ಮನುಷ್ಯರಾದ ನಮ್ಮ ಸ್ವಭಾವ ತಾನೇ! ಇಲ್ಲಿ ರುದ್ರಸ್ವರೂಪಿಗಳಾದ ಶ್ರೀ ವೀರೇಶನ ಭಕ್ತರು ಸ್ವಾಮಿಯನ್ನು ಭಜಿಸಿ ರಕ್ತಗಳನ್ನು ತಮ್ಮ ಶರೀರದ ಸೂಕ್ಷ್ಮಭಾಗಗಳಿಗೆ ಚುಚ್ಚಿಕೊಂಡು ಅವುಗಳನ್ನು ಹೊರ ತೆಗೆಯುವಾಗ, ಕೆಂಡವುಳ್ಳ ಅಗ್ನಿಯನ್ನು ದಾಟುವಾಗ, ಶ್ರೀ ಸ್ವಾಮಿಯ ಪ್ರಭಾವ ಎದ್ದು ಕಾಣುತ್ತದೆ. ಸ್ತ್ರೀ-ಪುರುಷ-ಮಕ್ಕಳು ಎಂಬ ಬೇಧವಿಲ್ಲದೇ ಜ್ಯಾತಿ ಬೇಧವಿಲ್ಲದೇ ಸೇವೆ ಸಲ್ಲಿಸುತ್ತಾರೆ. ಅವನ್ನೆಲ್ಲ ಕೇಳುವದಕ್ಕಿಂತ ನೋಡಿ ಪುನೀತರಾಗುವದು ಮಹಾ ಪುಣ್ಯವೇ ಸರಿ!

ತಾಲ್ಲೂಕು ಪ್ರದೇಶದಿಂದ 18-20 ಕಿ.ಮೀಟರ್ ಇರುವ ಈ ಕ್ಷೇತ್ರಕ್ಕೆ ಬಳ್ಳಾರಿ, ಧಾರವಾಡ, ಬೆಳಗಾಂವ ಜಿಲ್ಲೆಗಳ ಬಸ್ ಸೌಕರ್ಯ ಇದೆ. ಪ್ರವಾಸಿಕರಿಗೆಂದೇ ಇಲ್ಲಿ ಸರಕಾರದ ಸಹಾಯದಿಂದ ಪ್ರವಾಸಿ ಮಂದಿರ ಇದೆ. ದೇವಸ್ಥಾನ ಕಮಿಟಿಯವರು ರೂಮ್‌ಗಳ ವ್ಯವಸ್ಥೆ ಮಾಡಿದ್ದಾರೆ. ಘನ ಸರಕಾರದ ಸಹಾಯದಿಂದ ಭಕ್ತ ಜನತೆಯ ಸಹಾಯದಿಂದ ಕಲ್ಯಾಣ ಮಂಟಪದ ಕಾರ್ಯ ತೀವ್ರಗತಿಯಿಂದ ಸಾಗಿದೆ. ಸರಕಾರದ ವತಿಯಿಂದ ಪ್ರೌಢಶಾಲೆ, ಪದವಿ ಪೂರ್ವ ಕಾಲೇಜ್ ಬಡ ಮಕ್ಕಳಿಗೆ ಉಚಿತ ಹಾಸ್ಟೆಲ್ ವ್ಯವಸ್ಥೆ ಇದೆ. ಶ್ರೀ ಕ್ಷೇತ್ರದಲ್ಲಿ ಆಧುನಿಕತೆಯ ಸೋಂಕಿಲ್ಲ. ಪ್ರಶಾಂತ ಮಡಿಲಾಗಿದೆ.

ಸಿಂಗಟಾಲೂರ, ಹಮ್ಮಿಗಿ ನವಲಿ ಈ ಮೂರು ಗ್ರಾಮದ ವತಿಯಿಂದ ಕಮಿಟಿಯವರು ದೇವಸ್ಥಾನದ ಉಸ್ತುವಾರಿ ನೋಡಿಕೊಂಡು ಹೋಗುತ್ತಾರೆ.

ಎಪ್ಪತ್ತು ಗಿರಿ ನೋಡುವದಕ್ಕಿಂತ ಕಪ್ಪತ್ತಗಿರಿಯಲ್ಲಿರುವ ಶ್ರೀ ಸ್ವಾಮಿಯನ್ನು ನೋಡಿ ಪುನೀತರಾಗುವದು ಮೇಲು ಅಂದಾಗಲೇ ದೇವರ ಮಹಿಮೆ ಅರ್ಥವಾಗುವದು.

ಅಂದಾನಯ್ಯ ಪ. ಕಣ್ಣೆಮಠ

—o—